ಕರ್ಣಾಟಕ ಕಾವ್ಯಕಲಾನಿಧಿ- ನಂ ॥೧೪.

ಶ್ರೀಮನ್ಮಹೀಶೂರ ಮಹಾಸಂಸ್ಥಾನಾಧೀಶ

ಶ್ರೀಮದ್ರಾಜಾಧಿರಾಜ

ಶ್ರೀ ಚಿಕದೇವ ಮಹಾರಾಜ ವಿರಚಿತಮಪ್ಪ

ದಿವ್ಯಪ್ರಬಂಧಂಗಳೊಳ್

# ಶ್ರೀ ಗೀತಗೋಪಾಲಂ.






ಎಸ್. ಜಿ. ನರಸಿಂಹಾಚಾರ್ಯರ್

ಗೌರ್ನಮೆಂಟ್ ಕನ್ನಡ ಟ್ರಾನ್ಸ್ಲೇಟರ್, ಎಜುಕೇಷನ್ ಡಿಪಾರ್ಟ್‌ಮೆಂಟ್
ಮೈಸೂರು,

ಮತ್ತು

ಎಂ. ಎ. ರಾಮಾನುಜೈಯಂಗಾರ್

ಅಸಿಸ್ಟೆಂಟ್ ಮಾಸ್ಟರ್ ವೆಸ್ಲಿಯನ್ ಮಿಷನ್ ಹೈಸ್ಕೂಲ್, ಮೈಸೂರು-

ಇವರುಗಳಿಂದ ಪರಿಶೋಧಿಸಲ್ಪಟ್ಟು

ಮೈಸೂರು:

ಜಿ. ಟಿ. ಎ. ಪ್ರೆಸ್ಸಿನಲ್ಲಿ ಮುದ್ರಿತವಾಯಿತು.

1915.



# ಶ್ರೀ ಗೀತಗೋಪಾಲಂ.



## ಪೀಠಿಕೆ.

ಕರ್ಣಾಟಕ ಮಂಡಲಾಧೀಶ್ವರ ಶ್ರೀಚಿಕದೇವ ಮಹಾರಾಜ ವಿರಚಿತವಾದ "ದಿವ್ಯಪ್ರಬಂಧಗಳಲ್ಲಿ" ಈ ಗ್ರಂಥವು ಒಂದಾಗಿದೆ. ಈ ಗ್ರಂಥದ ರಚನೆಯ ವಿಷಯವಾಗಿ ಕವಿಯು ತನ್ನ ಉದ್ದೇಶವನ್ನು ಗ್ರಂಥಾದಿಯಲ್ಲಿ ಈರೀತಿ ಹೇಳಿಕೊಳ್ಳುತ್ತಾನೆ:—

ಕಂ॥ ಅನವಧಿದಯದಿಂದೀಪರಿ।
ಜನಮನಿತುಮನರಸುಗೆಯ್ತುದಿಂ ಪೊರೆದಿಹದೊಳ್॥
ನೆನೆದಂ ಪರಸುಖಮನವ।
ರ್ಗನುಗೊಳಿಪರವಾವುದೆಂದು ಚಿಕದೇವೇಂದ್ರಂ॥

ಪರಿಕಿಸೆ ಪರಿಕಿಸೆ ಕಿವಿಯೊಳ್।
ಪರಾಶರವ್ಯಾಸಮುಖ್ಯಮುನಿಸಮ್ಮತದಿಂ॥
ಹರಿಸಂಕೀರ್ತನವೊಂದೇ।
ಪರಗತಿಗನುಕೂಲಮೆಂದು ನಿರವಿಸಿ ನೆಗಳ್ದಂ॥

ಪಾಲಂ ಬಯಸಿದ ರೋಗಿಗೆ।
ಪಾಲಿಂದೌಷಧಮನೀವ ವೈದ್ಯನ ತೆಱದಿಂ॥
ದೀಲೋಗರೊಲ್ವ ಗೀತದ।
ಮೂಲದೊಳೇ ಮುಕ್ತಿಗತಿಯ ಮೊಗದೋಱಿಸಿದಂ॥

ತೊಡರ್ದಿರೆ ನುಡಿನುಣ್ಣರಗಳ।
ಬೆಡಂಗು ಮನವೊಲ್ದು ಗೀತಗೋಪಾಲವೆಸ॥
ರ್ವಡೆದೊಳ್ಗನ್ನಡಗಬ್ಬಮ।
ನೊಡರಿಸಿ ಚಿಕದೇವರಾಯನುನ್ನತಿವೆತ್ತಂ॥

"ಗೀತಗೋಪಾಲ ಮಹಾಪ್ರಬಂಧಂ" ಎಂದು ಕವಿಯು ತಾನೇ ಹೇಳುವುದ ಱಿಂದ ಈ ಗ್ರಂಥವನ್ನು ಮಹಾ ಪ್ರಬಂಧಗಳ ಗಣನೆಯಲ್ಲಿ ಸೇರಿಸುತ್ತಾನೆಂದು ತೋರುತ್ತದೆ. ಕವಿಯು ಈ ಗ್ರಂಥದಲ್ಲಿ ಪ್ರಸಿದ್ಧವಾದ ಜಯದೇವನ ಗೀತಗೋವಿಂದಕಾವ್ಯದ ಕ್ರಮವನ್ನು ಅನುಸರಿಸಿ, "ಗೋಪಿಕಾವೃತ್ತಾಂತನಿರೂಪಣವ್ಯಾ

ಜದಿಂ ಭಗವದ್ಗುಣಂಗಳಂ," "ಮೋಕ್ಷೋಪಾಯಮಂ ಸಾಧಿಸುವುದರ್ಕೆ ಉಪಾಯಮಾದ ಪ್ರಪತ್ತಿಸ್ವರೂಪಮಂ" ಕೀರ್ತನೆಗಳ ದ್ವಾರಾ ನಿರೂಪಿಸಿ, ತನ್ಮೂಲಕ ವೇದಾಂತತಾತ್ಪರ್ಯಾರ್ಥವನ್ನು ಸಂಗ್ರಹಿಸಿ ಹೇಳಿರುತ್ತಾನೆ.

ಈ ಗ್ರಂಥದಲ್ಲಿ ಪೂರ್ವ ಉತ್ತರ ಎಂಬದಾಗಿ ಎರಡು ಭಾಗಗಳಿವೆ. ಪ್ರತಿ ಭಾಗದಲ್ಲಿಯೂ ಏಳೇಳು ಖಂಡಗಳಿವೆ. ಆ ಪ್ರತಿಯೊಂದು ಖಂಡದಲ್ಲಿಯೂ ಏಳೇಳು ಪದಗಳಿವೆ. ಹೀಗಿರುವುದರಿಂದ ಪ್ರತಿ ಖಂಡಕ್ಕೂ "ಸಪ್ತಪದಿ" ಎಂಬ ಹೆಸರನ್ನು ಕವಿಯು ಕೊಟ್ಟಿರುತ್ತಾನೆ. ಒಂದೊಂದು ಸಪ್ತಪದಿಯಲ್ಲಿ ಒಂದೊಂದು ವಿಷಯವು ಹೇಳಲ್ಪಟ್ಟಿದೆ. ಆಯಾ ವಿಷಯಗಳ ಸಾರಾಂಶವು ಆಯಾ ಸಪ್ತಪದಿಗಳ ಆದಿಯಲ್ಲಿ ವಚನರೂಪವಾಗಿ ಬರೆಯಲ್ಪಟ್ಟಿದೆ. ಈ ಗ್ರಂಥದ ಕೀರ್ತನೆಗಳಲ್ಲಿ ಇತಿಹಾಸ ಪುರಾಣಾದಿಗಳಲ್ಲಿ ಕಂಗೊಳಿಸುವ ಭಾಗವತೋತ್ತಮರ ಸೂಕ್ತ್ಯಭಿಪ್ರಾಯಗಳೂ, "ಆಳ್ವಾರ್" ಎಂಬ ನಾಮದಿಂದ ಪ್ರಸಿದ್ಧರಾದ ಭಕ್ತಾಗ್ರಗಣ್ಯರ ಶ್ರೇಷ್ಠವಾದ ಅಭಿಪ್ರಾಯಗಳೂ ಸಹ ಅಡಕವಾಗಿ ಇವೆ.

ಪ್ರತಿಯೊಂದು ಕೀರ್ತನೆಯಲ್ಲಿಯೂ ಪಲ್ಲವಿ ಚರಣಗಳು ಇವೆ. ಕೀರ್ತನೆಗಳನ್ನು ಹಾಡಲು ಅನುಕೂಲಿಸುವುದಕ್ಕೆ ಆಯಾ ಕೀರ್ತನೆಗಳ ಮೇಲೆ ತಾಳರಾಗಗಳನ್ನು ಕವಿಯು ಕೊಟ್ಟಿರುತ್ತಾನೆ. ಅಲ್ಲದೆ ಆ ಕೀರ್ತನೆಗಳ ತಾತ್ಪರ್ಯವು ಸುಗಮವಾಗುವುದಕ್ಕೆ ಆಯಾ ಕೀರ್ತನೆಗಳ ಆದಿಯಲ್ಲಿ ಒಂದೊಂದು ಕಂದಗಳನ್ನು ಬರೆದಿರುತ್ತಾನೆ. ಈ ಗ್ರಂಥದ ಪದ್ಯಗಳು ಹಳಗನ್ನಡದ ಶೈಲಿಯನ್ನು ಅನುಸರಿಸಿದ್ದರೂ ಕೀರ್ತನೆಗಳು ಮಾತ್ರ ಹೊಸಗನ್ನಡದ ಶೈಲಿಯನ್ನನುಸರಿಸಿವೆ. ಇದರಿಂದ ಸ್ತ್ರೀಬಾಲ ಸಾಮಾನ್ಯವಾಗಿ ಪಂಡಿತ ಪಾಮರರೆಲ್ಲರಿಗೂ ಉಪಯೋಗವಾಗಬೇಕೆಂಬುದೇ ಕವಿಯ ಉದ್ದೇಶವೆಂದು ತೋರುತ್ತದೆ.

ಈ ಗ್ರಂಥದಲ್ಲಿರುವ ಅನೇಕ ಪದ್ಯಗಳು ತಿರುಮಲೆಯಾರ್ಯಕೃತವಾದ "ಅಪ್ರತಿಮವೀರಚರಿತ" "ಚಿಕದೇವರಾಜವಿಜಯ" ಇವೇ ಮೊದಲಾದ ಗ್ರಂಥಗಳಲ್ಲಿ ಸಿಕ್ಕುತ್ತವೆಯಾದುದರಿಂದ, ಧಾವಕಕವಿಯಂತೆ ತಿರುಮಲೆಯಾರ್ಯನೂ ಕೂಡ ಈ ಗ್ರಂಥವನ್ನು ಬರೆದು ಚಿಕದೇವಮಹಾರಾಜರ ಹೆಸರಲ್ಲಿ ಪ್ರಸಿದ್ಧಿಪಡಿಸಿದನೆಂದು ಊಹಿಸಲು ಅವಕಾಶವುಂಟು.

ಮತಾಭಿಪ್ರಾಯಗಳನ್ನು ತಿಳಿಯಲಾಸಕ್ತಿಯುಳ್ಳವರಿಗೆ ಅತ್ಯಾದರಣೀಯವಾಗಿರುವುದರಿಂದಲೂ, ಭಜನೆ ಮಾಡಲು ಅಪೇಕ್ಷೆಯುಳ್ಳ ಭಕ್ತರಿಗೆ ಉಪಯೋಗವಾಗುವುದರಿಂದಲೂ, ಸುಲಭವಾದ ಮಾತುಗಳಿಂದ ಮಹತ್ತಾದ ವಿಷಯಗಳು ಸಂಗೀತಸರಣಿಯಲ್ಲಿ ಹೇಳಲ್ಪಟ್ಟಿರುವ ಕಾರಣ ಹೆಣ್ಣುಮಕ್ಕಳ ಸಂಗೀತ ವಿದ್ಯೆಯಲ್ಲಿ ಅಭಿಮಾನವುಳ್ಳ ಹಿತೈಷಿಗಳಿಗೆ ಸಹಾಯವಾಗಬಹುದಾದುದರಿಂದಲೂ, ಈ ಗ್ರಂಥವನ್ನು ಮುದ್ರಿಸಿರುತ್ತೇವೆ.

# ವಿಷಯ ವಿವರಣ.

---

## ಪೂರ್ವ ಭಾಗ.



## ಉತ್ತರ ಭಾಗ.



---

|| ಶ್ರೀರಸ್ತು. ||

# ಶ್ರೀ ಗೀತಗೋಪಾಲಂ.



ರಾಗ || ಭೈರವಿ ||

ಕಂದ || ಶ್ರೀಯಂ ತನ್ನೆರ್ದೆವನೆಯೊಳ್ |
ಭೂಯುವತಿಯನಡಿಯೊಳಂಬುಗೊಳಿಸಿದ ಸರಸೋ ||
ಪಾಯಂ ಮಂಗಳಕಾಯಂ |
ಶ್ರೀಯಂ ಮಿಗೆ ನೆಗೞ್ಗೆ ಚದುರಗೋವಳರಾಯಂ || ೧

ಆಯುವನಭಿಮತಸಕಲ |
ಶ್ರೀಯುಮನೊಡನಖಿಳಧರಣೀಮಂಡಲವಿಜಯ ||
ಶ್ರೀಯಂ ಚಿಕದೇವಮಹಾ |
ರಾಯಂಗೊಲ್ದೀಗೆ ಚದುರಗೋವಳರಾಯಂ || ೨

ರಾಗ || ಕಾಂಬೋಧಿ ||

ಚದುರಂ ಚಾಗಿಯಲಂಪುಗಾಣಿನೆಱೆಯಂ ಸಂಗೀತಸಾಹಿತ್ಯಕೋ |
ವಿದನುತ್ಸಾಹಿ ವಿವೇಕಶಾಲಿ ನಯಶೀಲಂ ನೇಮಗಾಣಿ ಕಲಾ ||
ವಿದನೊಳ್ಪಾತುಗನೋಜೆಗಾಣಿನುಚಿತಜ್ಞಂ ಭಾವುಕಂ ಭಾಮಿನೀ |
ಹೃದಯಗ್ರಾಹಿ ದಯಾಪಯೋಧಿ ಚಿಕದೇವೇಂದ್ರಂ ಮಹೀಚಂದ್ರಮಂ || ೩

ಮತ್ತಂ,

ಬಳೆಗುಂ ಸಂತಸಮುಣ್ಮುಗುಂ ಬಗೆಯರಲ್ಗುಂ ಪ್ರಜ್ಞೆ ಸಲ್ಗುಂ ವಚಂ |
ಪಳಕುಂ ಗೆಯ್ಮೆ ಮಡಲ್ಗುವೊಳ್ಜಸಮರಂ ಪೆಂಪೇಱುಗುಂ ಮತ್ತಮೇಂ ||
ಕೆಳೆಗೊಳ್ಗುಂ ನೆವಮಿಲ್ಲದೆಲ್ಲ ಜಗಮುಂ ತಾಳ್ಗೆಯ್ಗುಮಾದೈವಮುಂ |
ತಳರ್ವನ್ನಂ ಚಿಕದೇವರಾಯನ ದಯಾಂಕೂರಂ ಕಟಾಕ್ಷಾಂತದೊಳ್ || ೪

ರಾಗ ॥ ಕೇತಾರಗೌಳ ॥

ಜಗದೊಳ್ ಶ್ರೀಚಿಕದೇವನಿಂ ಪಿರಿಯರಿಲ್ಲೆತ್ತಾನುಮುಂಟಾದೊಡಂ ।
ಬಗೆಗೊಳ್ಗುಂ ಪಟುವಾತಿನೊಳ್ ದೊರೆಯುಮಿಲ್ಲೆತ್ತಾನುಮುಂಟಾದೊಡಂ ॥
ಬಗೆಗೊಳ್ಗುಂ ಪ್ರತಿಬಿಂಬದೊಳ್ ಮಲೆಪರಿಲ್ಲೆತ್ತಾನುಮುಂಟಾದೊಡಂ ।
ಬಗೆಗೊಳ್ಗುಂ ಪ್ರಣಯಾಪರಾಧವಿಧಿಯೊಳ್ ಮೆಯ್ಯೋಱದಿನ್ನೆಲ್ಲಿಯುಂ ॥೪

ಅರಸಂ ನೇಹಿಗನೊಲ್ಮೆಗಂ ನೆಱವಿಗಂ ಕಾವಂ ಹಿತಂ ತೆತ್ತಿಗಂ ।
ಸರಸಂ ಮನ್ನಿಪನಾವಗಂ ತಿರುಮಲಾರ್ಯಂಗೆಂಬಿನಂ ಕೋವಿದರ್ ॥
ಪೊರೆದೋತೊಲ್ದಡನಾಡಿಯೋವಿಪುದಿದಿತ್ತ ಟ್ಕತ್ತು ಪೆಂಪೇಱುಗುಂ ।
ಬಿರುದಂತೆಂಬರ ಗಂಡನಪ್ರತಿಮವೀರಂ ಬಲ್ಲರೊಳ್ ಬಲ್ಲಹಂ ॥ ೬

ಮತ್ತಂ,

ರಾಗ ॥ ಅಸಾವೇರಿ ॥

ನೆವಮಿನಿತಿಲ್ಲದೊಲ್ಗು ಮೊಸೆಗುಂ ನೆನೆಗುಂ ಬರಿಕುಂ ದಯಾರಸಂ ।
ಕವಿತರೆ ನಿಟ್ಟಿಕುಂ ನಲಿಗುಮಾದರಿಕುಂ ಮನಮಾಱೆ ಮನ್ನಿಕುಂ ॥
ಸವಿನುಡಿದೋಱುಗುಂ ತಿರುಮಲಾರ್ಯನೊಳಪ್ರತಿಮಪ್ರಭಾವದಿಂ ।
ದವನಿಯುನಾಳ್ಗೆ ಬಾಳ್ಗೆ ಸತತಂ ಚಿಕದೇವನರೇಂದ್ರಚಂದ್ರಮಂ ॥ ೭

ಅನವಧಿಪಯದಿಂದೀಸರಿ ।
ಜನಮನಿತುಮನರಸುಗೆಯ್ತುದಿಂ ಪೊರೆದಿಪದೊಳ್ ॥
ನೆನೆದಂ ಪರಸುಖಮನವ ।
ರ್ಗನುಗೊಳಿಪಿರವಾವುದೆಂದು ಚಿಕದೇವೇಂದ್ರಂ ॥ ೮

ರಾಗ ॥ ಮುಖಾರಿ ॥

ಪರಿಕಿಸೆ ಪರಿಕಿಸೆ ಕಿವಿಯೊಳ್ ।
ಪರಾಶರವ್ಯಾಸಮುಖ್ಯಮುನಿಸಮ್ಮತದಿಂ ॥
ಹರಿಸಂಕೀರ್ತನಮೊಂದೇ ।
ಪರಗತಿಗನುಕೂಲಮೆಂದು ನಿರವಿಸಿ ನೆಗಟ್ದಂ* ॥ ೯

ರಾಗ ॥ ಶಂಕರಾಭರಣಂ ॥

ಪಾಲಂ ಬಯಸಿದ ರೋಗಿಗೆ ।
ಪಾಲಿಂದೌಷಧಮನೀವ ವೈದ್ಯನ ತೆಱದಿಂ ।

ದೀಲೋಗರೊಲ್ವ ಗೀತವ |
ಮಾಲಮೊಳೇ ಮುಕ್ತಿಗತಿಯ ಮೊಗದೋಱಿಸಿಮಂ || ೧೦

ತೊಡರ್ದಿ*ರೆ ನುಡಿಸುಣ್ಣರಗಳ |
ಬೆಡಂಗು ಮನವೊಲ್ದು ಗೀತಗೋಪಾಲವೆಸ ||
ಮಡೆದೊಳ್ಗನ್ನಡಗಬ್ಬಮು |
ನೊಡರಿಸಿ ಚಿಕದೇವರಾಯನುನ್ನತಿವೆತ್ತಂ || ೧೧

ರಾಗ || ಸಾಟಿ || ತಾಳ—ಜಂಪೆ ||

ಗೆಲವುಗೆಲವು । ನೆಲವು ಗೆಲವಾಸತರಿಗೆಲ್ಲಮನೀವ ।
ಬಲವದಪ್ರತಿಮಗೋಪಾಲರಾಯನಿಗೆ || ಪಲ್ಲವಿ ||

ಚರಣ || ಮನವೊಲಿದು ಸಜ್ಜನರ ಮನ್ನಣೆಯೊಳೋವಿ ದು ।
ರ್ಜನರ ತೊತ್ತುಳಿದುಳಿದು ಜಾತಿಧರ್ಮವನು ||
ಅನುಗೊಳಿಸಲವತರಿಸಿ ಯದುಕುಲದಿ ನಂದಗೋ ।
ಪನ ಭಾಗ್ಯಫಲವೆನಿಸಿ ಬಳೆವ ಗೋವಳಗೆ || ೧

ಬಱಿಕ ಪೂತನಿಯುಸುವ ಪಾಲ್ವೆರಸು ಸವಿದೀಂಟಿ ।
ಸುಱಿಗಾಳಿರಕ್ಕಸನ ಸೊಕ್ಕುಮುಱಿದಿಕ್ಕಿ ||
ಕಳೆದು ಶಕಟನ ಜೀವಕಳೆಯನೆಣೆವರವನುಡಿ ।
ದಿಳೆಯೊಳಡಗೆಡಹಿ ನಗುವೆಳೆಯ ಗೋವಳಗೆ || ೨

ಪುಸಿಗಱುವ ಮಡುಪಿ ಪೊಸಬಸವನನು ಬಸವಟಿಸಿ ।
ಮಸಗಿ ಖರತುರಗವೆನಿಪಸುರರನು ಗೆಲಿದು ||
ವಿಸದ ಮಡುವನು ಕಲಕಿ ಪೆಡೆಮೆಟ್ಟಿ ಕಾಳಿಯನ ।
ವಸರಿಸಿದ ಕಾೞ್ಗಿಚ್ಚ ಪರಿದ ಗೋವಳಗೆ || ೩

ತನಗೊಡರಿಸದ ಪೂಜೆ ತಪ್ಪಿದಱಲಿಂದೆ ಕಡು ।
ಗನಲಿಂಬಿಡೆವಿಡದೆ ಮುಗಿಗಱೆವ ವಾಸವನ ||
ತನಿಗೊರ್ವು ತಳಕಿಱಿಂಬಿ ತಳೆದು ಗೋವರ್ಧನ ।
ವನನುಗೊಳಿಸಿ ಕಱುತುಱುವನಾಳ್ದ ಗೋವಳಗೆ || ೪

ಕೊಳಲ ದನಿಯಿಂದೆ ಗೋವಳಗುವರಿಯರ ಬಗೆಯ ।
ಸೊಳಗುಗೆಯ್ದೊಡನಾಟಕೆಳಸಿಯೊಡವೆರಸಿ ||
ಕೆಳೆಯೊಡಂಬಡೆ ರಾಸಕೇಳಿಯೊಳು ಸೊಗವಡಿಸಿ ।
ಸುಱಸುಱಿದು ನಲಿನಲಿವ ಸೊಬಗುಗೋವಳಗೆ || ೫

ರಾಗ ॥ ಪೂಳವಿ ॥ ತಾಳ—ತ್ರಿವುಡೆ ॥

ಗೋವಳರಾಯಾ ಪರಾಕು, ದೇವಾದಿದೇವಾ ॥ ಪಲ್ಲವಿ ॥

ಚರಣ ॥ ಪರಮರಕ್ಷಕ ನಿನ್ನ ಪಾದಾರವಿಂದವ ।
ಸಿರದೊಳು ಪೊಱಲವಸರವೆಳಸಿ ॥
ಪರಭಕ್ತಿಯೊಳು ನಿಂದ ಬ್ರಹ್ಮಾದಿಸುರರೊಳು ।
ಕರುಣಕಟಾಕ್ಷವ ಕಡೆಗೋಡಿಸೊಮ್ಮೆ ॥ ೧

ಜಲಜಲೋಚನ ನಿನ್ನ ಸರಸಗುಣಾಮೃತ ।
ಕಲೆಗಳ ಸವಿದೆರ್ದೆ*ಗರಗಿ ಸೊರ್ಕಿ ॥
ಬಲಿದು ನಾರದಾದಿಗಳೊಗ್ಗಿರಲೊಳು ನಲಿ ।
ನಲಿದು ಪಾಡುವ ಗಾನವ ಕಿವಿಗೊಳಿಸೊಮ್ಮೆ ॥ ೨

ಎಳೆಸಿರಿನೀಳೆಯುರೆಱೆಯ ನಿನ್ನಾಳ್ತನ ।
ದೊಳು ನೆಲೆ ನಿಂದೆವೆಂದೋಜೆಯಿಂದೆ ॥
ಬಳಸಿ ಪರಾಂಕುಶಪರಕಾಲಾದಿಗಳೆಂತು ।
ಬಳೆಯಿಸುವೂಱಿಗಂಗಳ ಬಗೆಗೊಳಿಸೊಮ್ಮೆ ॥ ೩

ರಾಗ ॥ ಕಾಂಬೋಧಿ ॥ ಆದಿತಾಳ ॥

ಬಿರಿಮುಗುಳನು ಮಿಗೆ ಬೀಱಿದರು ।
ಸರಿಮಿಗಿಲೆನೆ ಸಿರಿಯರಸನೊಳಸಿಯರು ॥ ಪಲ್ಲವಿ ॥

ಚರಣ ॥ ಮುಗುಳುನಗೆಯ ಬೆಳಗೊ ತೇಲುವ ಮುದ್ದುನೋಟದ ಬೆಳಗೊ ।
ತಳತಳಿಸುವ ಮಣಿತಾಟಂಕದೊಳುಱೆ ಜಿಗಿದ ಮುತ್ತಿನ ತನಿಬೆಳ್ವಳಗೋ ಎನೆ ॥ ೧

ಸೊಗಸುಕಮ್ಮಲರ್*ಗಳ ಸೂಸಿದರು ।
ಬಗೆಗಾತಿಯರು ಗೋಪಾಲನ ಮೆಯ್ಯೊಳು ॥ ಪಲ್ಲವಿ ॥

ಚರಣ ॥ ಕರರುಹಗಳವೊಗರೊ ಮುತ್ತಿನುಂಗುರಗಳ ಕುಡಿವೊಗರೊ ।
ಕರಕಮಲದ ಮಣಿಕಡಗದೊಳೊಪ್ಪುವ ವರವಜ್ರಂಗಳ ಬಲ್ಪೊಗರೋ ಎನೆ ॥ ೨

ಮೊಲ್ಲೆಮಲ್ಲಿಗೆಗಳ ಚೆಲ್ಲಿದರು ।
ಚೆಲ್ಲಗಾತಿಯರು ಚೆಲುವ ಗೋವಳನೊಳು ॥ ಪಲ್ಲವಿ ॥

ಚರಣ ॥ ಸೊಗಸುಗೋಪಾಲನೊಳು ಸಜ್ಜನಸನ್ನುತಶೀಲನೊಳು ।
ತಿರುಮಲೆಯಾರ್ಯರ ದೇವರೆನಿಸಿ ಭೂವರಚಿಕದೇವನ ಪೊಱೆದು ಮೆಱೆವನೊಳು ॥ ೩

---

ವೃ ॥ ಶ್ರೀಮಂತಂ ಯದುಶೈಲವಲ್ಲಭಪದಾಂಭೋಜಾತಭೃಂಗಂ ಗುಣಾ।
ರಾಮಂ ಪಶ್ಚಿಮರಂಗಧಾಮನಗರೀಸಿಂಹಾಸನಾಧೀಶನು ॥
ದ್ದಾಮಶ್ರೀಯದುವಂಶಕಲ್ಪಕತರುಪ್ರೌಢಪ್ರವಾಳಂ ಜಗ ।
ತ್ಪ್ರೀಮಂಜೆತ್ತು ನೆಗಳ್ದು ಬಾಳ್ಗೆ ಚಿಕದೇವೇಂದ್ರಂ ಮಹೀಚಂದ್ರಮಂ॥೧೦

ರಾಗ ॥ ವಸಂತಭೈರವಿ ॥

ನಿಗುರಿಸಿ ಗೋಣ್ಗಳಂ ದಿಗಿಭಸಂತತಿ ಸಂತಸವಿರ್ಪಿನಂ ಮಹೋ ।
ರಗಪತಿ ವಿಶ್ರಮಂವಳೆದು ಮೆಯ್ಮುಱುಮಂ ತಲೆಯೆತ್ತಿ ಬಾಳ್ವನಂ ॥
ಸೊಗವಿಡಿದಾಳ್ವನಂ ಕಳೆದು ಜೆಂಜೆಮರಂ ಕಮಠಂ ಧರಿತ್ರಿಯಂ ।
ಬಗೆಗೊಳೆ ಬಾಹುಪೂರದೆಸಕಂ ತಳೆದೈ ಚಿಕದೇವಭೂವರಾ ॥ ೧೩

ಅಕ್ಕರವೋದುವಂದೆ ಕುಱುಪಾದುದು ರೂಢಿಯ ಸತ್ಯವಾಕ್ಯಮೂ ।
ರ್ಮಕ್ಕಳೊಳಾಡುವಂದೆ ಕುಱುಪಾದುದು ಸಂದ ಪರಾಕ್ರಮಂ ಕರಂ ॥
ತಕ್ಕುದು ಚಿಕ್ಕದೇವವಿಭುಗಗ್ಗದ ಸತ್ಯಪರಾಕ್ರಮಾಂಕಮೇ ।
ನಕ್ಕುಮೆ ಮಿಕ್ಕ ಸೊರ್ಕಿನರಮಕ್ಕಳ ಮೊಕ್ಕಳಕಿಂತು ಪೆರ್ಗಳಂ ॥ ೧೪

ವಚನಂ ॥ ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪಾಪ್ರತಿಮವೀರ ಶ್ರೀನರಪತಿ ಚಿಕದೇವಮಹಾರಾಯರೀಗೀತಗೋಪಾಲ ಮಹಾಪ್ರಬಂಧದೆರಡುಂ ಭಾಗದೊಳ್ ಶ್ರೀಮನ್ನಾರಾಯಣನ ಗುಣಾನುಭವವಾದ ಸಿತ್ಯಫಲಮುಂ ಅವನಡಿದಾವರೆಯೊಳ್ ನಂಬುಗೆಯೆಂಬ ತದುಪಾಯಮುಮಂ ನಿರೂಪಿಸುವರ್. ಅದಱೊಳ್ ಪ್ರಥಮಭಾಗದೇೞುಂ ಸಪ್ತಪದಿಗಳೊಳಂ ಪಲವುಂ ತೆಱದ ಕಲ್ಯಾಣಗುಣಂಗಳನನುಭವಿಸುವರ್. ಇದಱೊಳೊಮೊದಲ ಸಪ್ತಪದಿಯೊಳ್ ಯಶೋದಾವೃತ್ತಾಂತವ್ಯಾಜದಿಂ ಶ್ರೀಕೃಷ್ಣನ ಬಾಲ್ಯಕೌಮಾರಲೀಲೆಗಳಂ ನಿರೂಪಿಸುವರ್. ಅದೆಂತೆನೆ ;—

ರಾಗ ॥ ಭೂಪಾಳಿ ॥

ಕಂ ॥ ಜಗದುದಯಸ್ಥಿತಿವಿಲಯಮಾ ।
ದಿಗಳಿಂದಂ ಲೀಲೆಗೆಯ್ವನಂ ಗೋಪಿ ದಿಟಂ ।
ಮಗುವೆಂದಪ್ಪುತ್ತೊಡನಮ ।
ರ್ಮಗುಮಾತಿಂ ನಿದ್ದೆದಿಳಿವಿನಂ ನಿರವಿಸಿದಳ್ ॥ ೧೫

॥ ಆದಿತಾಳ ॥

ಮೂಡವೆಳಗಾಯಿತೆೞ್ಱು ಮುದ್ದುಗೋಪಾಲಾ ।
ಆಡುವ ಮಕ್ಕಳು ನಿನ್ನನಱಸುತ್ತೆ ಬಂದಿವೆ ನೋಡು ॥ ಪಲ್ಲವಿ ॥
ಚ ॥ ಮಂಗಳಮೂರುತಿಯೆಳಮಕ್ಕಳ ಮಾಣಿಕವೆ ।
ತಂಗಾಳಿಯು ತಣ್ಪೆ ನೆರೆದಿಂಗಳ ಸೊಂಪೆ ॥
ಮುಂಗುರುಳನೋಸರಿಸಿ ಮೋಹನತಿಲಕವಿಟ್ಟು ।
ಸಿಂಗರಿಪೆ ನಿನ್ನ ಮಱುಸಿಂಗವೆಯೆೞ್ಱು ಬೇಗ ॥ ೧
ಕಟ್ಟಾಣಿಮಣಿಯೆಯೆನ್ನ ಕಂದ ಕಣ್ಣ ಪುಣ್ಯವೆ ।
ಪಟ್ಟದ ಕುವರ ಭೂಮಿಭಾಗ್ಯಫಲವೆ ॥
ಕಟ್ಟಿದ ಪೊನ್ಗಜ್ಜೆ ಕಾಲ ಕಡಗ ಘಲಿಘಲಿರೆನೆ ।
ದಟ್ಟಡಿಯಿಡುವ ಕುಲಧನವೆ ನೀನೆೞ್ಱು ಬೇಗ ॥ ೨
ಪೊನ್ನ ಪುತ್ತಳಿಯೆ ಪೊೞ್ಱ ಪೊಸಪೂವಿನ ಸಂಡೆ ।
ಕನ್ನಡಿಕಳಸವೆಯೆನ್ನ ರನ್ನದೊಡವೆ ॥
ಪೊನ್ನುಡೆಯನುಡಿಸಿ ಮೆಯ್ಯ ಪೊಗರ ಪೊಸತೆನಿಸುವೆ ।
ಎನ್ನೆಳಗೋವಳರಾಯನೆನ್ನಾನೆಯೆೞ್ಱು ಬೇಗ ॥ ೩ —೧—

ರಾಗ ॥ ಮಲಹರಿ ॥

ಕಂ ॥ ವಸುಧೆಯ ಭಾರಮನಿೞಿಪದೆ ।
ಸಿಸುತನದಿಂ ಪೊೞ್ತುಗಳೆವ ಪುಣ್ಯಂ ಕಂತೆ ॥
ಬೞಿಸಿ ಬಿಸರುಹನಾಭನೊಳಿಂ ।
ತುಸಿವರ್* ಬಿಸುಗಣ್ಣರುಚಿತಕಾರ್ಯೋದಯಮಂ ॥ ೧೬ ॥

॥ ಧೃವತಾಳ ॥

ಎತ್ತಣ ನಿದ್ದೆಯೋಱೇೞು ಗೋಪಾಲಾ ।
ನಿತ್ಯನಿರ್ಮಲ ನಿನಗೇನು ಬಿನದವಿ। ದೆತ್ತಣನಿದ್ದೆಯೋಱೇೞು ಗೋಪಾಲಾ ॥ ಪ ॥
ಪೊಡವಿಯಾಣ್ಮರೆನಿಸಿ ಪುಟ್ಟಿದ ದಾನವರ ।
ಮಡುಹಿ ಪ್ರೇಮದೊಳು ಮನ್ನಿಸಿ ಸಜ್ಜನರ ॥
ಮೊಡನೆ ಸದ್ಧರ್ಮಂಗಳನುನ್ನತಿಗೊಳಿಸಿ ಬಂ ।
ದೊಡನಾಡಿಗೋವಳರೊಳೊಡಲುಮಱೆವರೆ ॥ ೧
ಪೊತ್ತಪೊಱೆಯಿೞುಹಿ ಭೂಮಿಯು ಪೊರೆವನೆಂ ।
ದಿತ್ತ ನಂಬುಗೆವಾತನೀಡೇಱಿಸದಿಂತು ॥
ಪತ್ತುಗೆಗೆಯ್ದು ಗೋಪಾಲಕರೊಡನಾಡಿ ।
ಯುತ್ತಮಪುರುಷ ನೀನೊಡಲುಮಱೆವರೆ ॥ ೨

ಮಾಯೆಗೆ ಸಿಲುಕಿ ಮೈಮ್ಮಱೆದಿರ್ಪ ಮಾನವ ।
ರಾಯಸವಡಗಿಸಲವತಾರವೆಸಗಿ ॥
ಬಾಯ ತೆಱೆದು ಮುಕ್ತಿಪದವ ಬಣ್ಣಿಸದೆ ನೀ ।
ನೀಯೆಡೆಯೊಳು ಮಲಗಿರುವುದುಚಿತವೇ ॥೩ —೨—

ರಾಗ ॥ ಮಾಳವಶ್ರೀ ॥

ಕಂ ॥ ಮುಡಿಯಿಂದಡಿವರೆಗಂ ನ ।
ಲ್ತೊಡವುಗಳಂ ತುಡಿಸಲೆಂದು ದಾದಿ ಮನಗೊಂ ॥
ಡೊಡನಾಡಿಗುವರರೊಗ್ಗಿನೊ ।
ಳೊಡೆವೆರೆದೆೞ್ಚಱಿಸಿ ನುಡಿವಳಿಂತಚ್ಯುತನಂ ॥ ೧೩

ತಾಳ ॥ ತ್ರಿವುಡೆ ॥

ಮಱೆದೊಱಗದಿರೇಳು ಮಗುವೆ ಈ ।
ಕಱುಗಾವ ಮಕ್ಕಳು ಬಂದಿವೆ ಕೃಷ್ಣಾ ॥ ಪಲ್ಲವಿ ॥

ಕುರುಳುಪಜ್ಜೆಯ ನುಣ್ಪುಗೊಳಿಸಿ ಚಂಡಿಕೆಗಟ್ಟಿ ।
ತರವೇಱಿಸುವ ತಾತಿಸರವ ಸುತ್ತಿ ॥
ಅರಳೆಲೆಯನು ಪಣೆಗಮರಿಸಿ ಸೊಗಸೆನೆ ।
ತಿರುಮಣಿತಿಲಕವ ತಿದ್ದಿ ಕಳಿಪುವೆನು ॥ ೧

ಕಳೆವೆತ್ತ ಮುತ್ತಿನ ಕಡಕು ನಾಗಾಯ ಪ ।
ಜ್ಜಳಿಪ ಬಜ್ಜರದ ಬಾವುಲಿಯನಿಟ್ಟು ॥
ತೊಳಗುವ ಸುಗ್ಗುಲ್ಲಿದೊಳು ದಿಟ್ಟಿಯ ಬೊಟ್ಟ ।
ನಳವುಗೊಳಿಸಿ ನಿನ್ನ ಘಳಿಲನೆ ಕಳಿಪುವೆ ॥ ೨

ಕೊರಲ ಸರಿಗೆ ಕಂಟಸರ ಪುಲಿಯು ।
ಗುರು ಪೊಂಜರಪಣಿ ತಾಳಿಯ ಜತೆಗೊಳಿಸಿ ॥
ಸರಿಪರಿಪದಕವ ಪವಣುಗೊಳಿಸಿ ಪೀತಾಂ ।
ಬರವನಳವಡಿಸಿ ಭರದಿ ಕಳಿಪುವೆನು ॥ ೩

ಪೊಳೆವ ರನ್ನದ ಬಾಹುಪುರಿ ಭುಜಕೀರ್ತಿ ತೋ ।
ಳ್ವೆಳೆ ತಾತಿಮಣಿಗಳ ಕೆಳೆಗೊಳಿಸಿ ॥
ತೊಳಪ ಮುಂಗೈಮುಱಿ ತೋರಮುತ್ತಿನ ಸರ ।
ತಳುಕಿನುಂಗುರಗಳ ಧರಿಸಿ ಕಳಿಪುವೆನು ॥ ೪

ಒಳುರನ್ನವಿಡಿದ ಪೊನ್ನುಡೆದಾರ ಕಡೆದ ಪ।
ವಳದ ಸವಡಿಸರಗಳನು ಕಟ್ಟಿ ॥
ನಳನಳಿಸುವ ಪಾದನಳಿನಕಂದುಗೆಗೆಜ್ಜೆ।
ಗಳನನುಗೊಳಿಸಿ ಸಿಂಗರಿಸಿ ಕಳಿಪುವೆನು ॥ ೫ —೩—

ರಾಗ ॥ ಮಂಗಳಕೈಶಿಕೆ ॥

ಕಂ ॥ ವಾಸವಶಂಕರವಾರಿರು।
ಹಾಸನರಂ ಮೋಸಗೆಯ್ದು ಮಾಧವನಿರವಂ ॥
ಕಾಸುರಿಯುದೆಳೆಯ ಗೋವಳ।
ರೋಸರಿಸಲ್ ನುಡಿವರೊಲ್ಮೆಬಲ್ಮೆಗಳಿಂದಂ ॥ ೧೮

ತಾಳ ॥ ಜಂಪೆ ॥

ನಿನ್ನಿನಾಟವ ಗೆಲಿದು ನೀ ಮಲಗಿದೊಡೆ ಬಿಡುವೆನೆ।
ಇಂದೆನ್ನ ಮೈಮೆಯ ತೋರ್ಪೆನೇಟು ಗೋವಳರಾಯಾ ॥ ಪಲ್ಲವಿ॥
ಉಜ್ಜುಗಿಸಿ ಸಾವನಿಬರೊಡ್ಡುಗಾಯಾಡುತಿರೆ।
ಬಿಜ್ಜೆಬಿಗಿದಂತೆ ನೀ ಬೇಗ ಬಂದು ॥
ಪಜ್ಜಳಿಸುವೆರ್ದೆಯ ಕೆಂಬರಲಿಂಪೆ ಗುಱಿಯಿಟ್ಟು।
ಗಜ್ಜುಗವ ಗೆಲಿದೆಯುದ ಗರುವರೆಣಿಸುವರೆ ॥ ೧
ಗುಡುಗುಡಾಡುವ ನೆವದಿ ಸಂಗಡಿಗರೊಡವಾಯ್ದು।
ಗುಡುಗುಡಿಪ ದನಿಯಿನಿಸು ಕುಂದಿ ಬರಲು ॥
ಒಡನೆ ಶಂಖವನೂದಿಯುಳಿದುದನು ಪೂರೈಸಿ।
ಕಡೆಹಾಯ್ಸಿ ಗೆಲಿದೆಯುದ ಗರುವರೆಣಿಸುವರೆ ॥ ೨
ಮೊತ್ತವಡೆದಾವು ಕಣ್ಮುಚ್ಚಾಲೆಯಾಟದೊಳು।
ಕತ್ತಲೆಮನೆಯೊಕ್ಕು ಕಾಣಿಸದಿರೆ ॥
ಬಿತ್ತರಿಸಿ ಚಕ್ರದೊಳ್ಪೆಳಗ ಮರ್ಜಿನ ಕೊರ್ಬ।
ಕತ್ತರಿಸಿ ಗೆಲಿದೆಯುದ ಗರುವರೆಣಿಸುವರೆ ॥ ೩ —೪—

ರಾಗ ॥ ಬವುಳಿ ॥

ಕಂ ॥ ಪ್ರಳಯಾಂಬುಧಿಯೊಳ್ ಪವಡಿಸಿ।
ದೆಳಮೆಯ ತೆಱಸಿಂತಿದೆಂದು ನಿರವಿಸಿ ತಿಳಿವಾ ॥
ಪಱಿಯರ್ ಪೞನುಡಿಯಿಂ ಗೋ।
ವಳಗುವರರನ ಕವಡುನಿದ್ದೆಯಂ ಪುಸಿಗೆಯ್ದರ್ ॥ ೧೯

ತಾಳ ॥ ರೂಪಕ ॥

ಮಾಯದ ನಿದ್ರೆಯ ಮಟ್ಟುಗೊಳಿಸಿನ್ನು ।
ಮಾರ್ಕಂಡೇಯನಱಿಹಿದನಿದಱಾಯವದೆನಗೆ ॥ ಪಲ್ಲವಿ ॥

ಚ॥ ಎಲ್ಲಾ ಲೋಕಂಗಳನಿಱ್ರಿಯ ನುಂಗಿ ।
ಯುಲ್ಲಾಸವಡಿಸಿ ನೀನುದರದೊಳಿಟ್ಟು ॥
ಚೆಲ್ಲವಾಡಿದೆ ಗಡ ಜಲನಿಧಿಶಯನ ।
ಬಲ್ಲೆಬಲ್ಲೆವು ನಿನ್ನ ಬಾಲ್ಯದ ಬಗೆಯ ॥ ೧

ಅಂದೇಕಾರ್ಣವದೊಳಾಲದೆಲೆಯೊಳಾ ।
ಸಂದದೊಳೊಱಗಿ ಕೆಯ್ಯಿಂದಿಱಿದುಯ್ದು ॥
ಒಂದು ಕಾಲುಂಗುಟವನೊಲಿದು ಬಾಯೊಳಿಟ್ಟು ।
ಕಂದನಂದದದೊಳಿರ್ದ ಕತೆಯ ಕೇಳಿದುವು ॥ ೨

ಪುಲಿದೊವಲುಡೆಯನು ಬೊಮ್ಮನುಮಂದು ।
ಬಲದ ಮೆಯ್ಯೊಳು ನಾಭಿಪದ್ಮಗರ್ಭದೊಳು ॥
ನೆಲಬಲುಮೆಯೊಳಂತು ನಿರ್ಭಯನಡೆಯೆ ।
ಮಲಗಿದೆ ಗಡ ನಿನ್ನ ಮೆಯ್ಮೆಯಱಿಯಪೆ ॥ ೩ — ೫ —

ರಾಗ—ನಾರಾಯಣಿ ॥

ಕಂದ ॥ ಪಲವುಂ ಗೋವಳವನೆಯೊಳ್ ।
ಪಲವೆಯ್ಯಿಂ ಪಲವು ಲೀಲೆಯುಂ ಪಸರಿಸಿ ಮು ॥
ನ್ನೊಲೆಯೊಳ್ ಮಗುವಿರೆ ದೂಱುವ ।
ಲಲನೆಯರಂ ಗೋಪಿ ಜಡಿದು ತಳೆವಾಗಿಸಿನಳ್ ॥ ೧೦

ತಾಳ ॥ ಝಂಪೆ ॥

ಎನ್ನಯ್ಯ ನಿದ್ರೆದಿಳಿದೇೞು ಬೇಗ ।
ಅರಯ್ಯದೀಪರಿ ನಿನ್ನ ರಕ್ಷೆಗೆಯ್ವರ ಮಾತ ಪುಯ್ಯನಿಸುತೆ ॥ ಪಲ್ಲವಿ ॥

ಚ ॥ ಮನೆವೊಕ್ಕು ತಡಕಿ ನೆಲವಿನೊಳು ಮಱಿಮಾಡಿದೆಳ ।
ಗೆನೆಪೊಸರ ಕಂದಲನು ಕೇೞುಗೀೞುಹಿ ॥
ಮನಸಾಱೆ ಸವಿದುಂಬಿದ ಮಡಕೆಗಳನೊಡೆದಿಟ್ಟ ।
ನೆನುತ ದೂಱುವ ಗೋಪವನಿತೆಯರ ನಾಣ್ಗೆಟ್ಟೆನೈಯ್ಯ ॥ ೧

ಕಱೆವ ಪದಕೆ ನೋದಲಿನಿಳಗಱುವನುಣಬಿಟ್ಟಡನೆ ।
ತೆಱೆದು ಪಂಜರವ ಗಿಳಿವಱಿಯ ಕಱುಬಿ ॥

ಮಱೆದೊಱಗಿದರ ಮೊಗಕೆ ಮಸಿಯು ಪೂಸಿದನೆಂದು ।
ಬಱಿದೆ ಬಂದೊದಱುವೀಭಾವೆಯುರು ಸಾಣ್ಗಾಳೆ ॥ ೨

ಸಿಸುಗಳಾಡುವ ಬೊಗರಿಸೆಂಡುಗಳನಪಹರಿಸಿ ।
ಮಿಸುಕಿಯಿದಿರಿಸಲವರ ಮೆಟ್ಟಿ ಸದೆದು ॥
ಅಸಿಯುರದ್ದರಿಸಲವರಳಪ್ಪಗಿಡಿಸಿದನೆಂದು ।
ಬಸವಳಿದು ಗಳಪುವೀಭಾಸೆಯುರು ಸಾಣ್ಗಾಳೆ ॥ ೩ —೬—

ರಾಗ ॥ ದೇವಗಾಂಧಾರಿ ॥

ಕಂದ ॥ ಪರಮಪ್ರಾಸ್ಯಪ್ರಾಪಕ ।
ಮೆರಡುಂ ಸಿರಿಯುರಸನಡಿಗಳೆಂದಿರ್ಪ ಮಹಾ ॥
ಪುರುಷರ್ ಪ್ರೋಟ್ಟುಱೆಯಿರವಂ ।
ದೊರೆಗೊಳಿಸಿವರಾದಿಪ್ರರುಪನೆಱಕವ ತೆಱಗಂ ೧೧

॥ ಅಟತಾಳ ॥

ನಲ್ವೆಳಗಾದುದು ನವನೀತಚೋರಾ ।
ನಿನ್ನ ಚೆಲ್ವ ನೋಟದ ಕತೆಸೆಱಗುದೋಱುಸು ಕೃಷ್ಣಾ ॥ ಪಲ್ಲವಿ ॥

ಚರಣ ॥ ಮುಸುಕಿದ ಸಂಸಾರಮೋಹವಡೆಗೆ ನೀ ।
ನೆಸಗುವ ನಸುನೋಟದಟ್ಟುರದಂತೆ ।
ಮುಷುಳಿಸುವಿರುಳಿನ ಮದದುರ್ಬ ಮಗ್ಗಿಸಿ ।
ಮಿಸುಗಿತು ಮೂಡಣ ದೆಸೆ ಮೋಹನಕೃಷ್ಣಾ ॥ ೧

ಓಜಿವಡೆಯೆ ಸತ್ವದೊಡನಿರ್ದ ತಾಮಸ ।
ರಾಜಸಗಳ ತನಿರಸವಾಱುವಂತೆ ॥
ತೇಜದುನ್ನತಿಯೊಳು ತೆರಳಿತು ಕತ್ತಲೆ ।
ರಾಜಿಪ ಸಂಧ್ಯಾರಾಗದೊಡನೆ ಕೃಷ್ಣಾ ॥ ೨

ಬಿಡದೆ ಪಸರಿಸುವ ಬಿನ್ನಣದಿಂದೊಡ ।
ಲಿಡೆಯೊಳೊಪ್ಪುವ ಜೀವದೇಱುಗೆಯಂತೆ ॥
ತೊಡರಿದ ಬಿಸಿಲಿಂದ ತೊಳಗಿತು ನೇಸಱೆ ।
ಲ್ಲಿಡೆಯೊಳು ಚಿಕದೇವೇಂದ್ರವರದ ಕೃಷ್ಣಾ ॥ ೩ —೭—

ಪ್ರಾಬೋಧಿಕ ಸಪ್ತಪದಿ ಸಂಪೂರ್ಣಂ.



— ಸಪ್ತಪದಿ -- II

ಶರಣಂ ಶ್ರೀ ಚಿಕದೇವ ನಿನ್ನ ಚರಣಂ ಭೀತರ್ಗೆ ಮತ್ತಂ ಭಯೋ —
ತ್ತರಣಂ ನಿನ್ನ ಪದಾಬ್ಜರೇಣುಭರಣಂ ತಾನೇ ಮಗುಳ್ದಾಪದು ‖
ತ್ಸರಣಂ ತಾವಕದಿವ್ಯನಾಮಕರಣಂ ಮತ್ತಂ ಮಗುಳ್ದಂ ಕುಲೋ |
ದ್ಧರಣಂ ನಿನ್ನಸಘಾಂಘ್ರಿಸಾಸ್ವವರಣಂ ಜೀಯಲ್ಲ ಜೀಯಲ್ಲ ಕೇಳ್ ‖ ೨೦

ಆರಾಣ್ಮರ್ ಚಿಕದೇವನಾರ್ ನೆಗಟ್ವರಾಶ್ರೀಚಿಕ್ಕದೇವೇಂದ್ರನಿ |
ನ್ನಾರೊಳ್ವರ್ ಚಿಕದೇವನಾರ್ ಸಲಪುವರ್ ಶ್ರೀಚಿಕ್ಕದೇವೇಂದ್ರನಿ ‖
ನ್ನಾರೀವರ್ ಚಿಕದೇವನಾರ್ ಬಳೆಯಿಪರ್ ಶ್ರೀಚಿಕ್ಕದೇವೇಂದ್ರನಿಂ |
ತಾರಾರುಂ ಜೆಸಗೊಳ್ವ ಪೇಟ್ವ ನುಡಿಯೊಳ್ ಶ್ರೀಚಿಕ್ಕದೇವೇಂದ್ರನೇ ‖ ೨೩

ವಚನ ‖ ಇಂತು ಮೊದಲ ಸಪ್ತಪದಿಯೊಳ್ ಶ್ರೀಕೃಷ್ಣನ ಬಾಲ್ಯ ಕೌಮಾರಲೀಲೆಗಳಂ ಭಾವಿಸಿ ಮೇಗಣ್ಮೈದುಂ ಸಪ್ತಪದಿಯೊಳ್ ಯೌವನಾರಂಭಲೀಲೆಗಳಂ ನಿರೂಪಿಸುವರ್.

ಆದಿತಾಳ ‖ ರಾಗ—ಕಾಂಬೋಧಿ ‖

ಕಂದ| ಪೊಂಗುವ ಪೊಸವೇಟದ ಗೋ |
ಪಾಂಗನೆ ತನ್ನಳವುಗಿಡಿಸಿ ಮೆಯ್ಮರೆಯಿಸಿದಾ ‖
ಮಂಗಳಮೂರ್ತಿಯ ಸಿಂಗರ |
ದಿಂಗಿತಮಂ ಕೆಳದಿಗಿಂತು ಬಸೆವುಗೆ ಪೇಟ್ದಳ್ ‖ ೨೪

ಸೊಗಸುವಸೆಗೆಗಳಿಗೆ ಬಗೆಸೋತೆ ಕಾಣಮ್ಮಾ ।
ಸಸೆಮೊಗದ ಸಲ್ನುಡಿಯ ಸಲವುಗಾಱ ಗೋಪಾಲನ ‖ ಪಲ್ಲವಿ ‖

ಚ ‖ ಮಿಟ್ಟೆದ ಪಾವುಗೆಯೊಳು ಮಿಸುಗುವ ಪೊಂಗೆಜ್ಜೆಗಳ ।
ಕಟ್ಟುಲಿಯಡಿಗಡಿಗೆ ಘಲಿಘುಘಲಿಸೆ ‖
ನೆಟ್ಟನೆಯೊಡವರುವ ನೇಹಿಗರ ನೆರವಿಯೊಳು ।
ಕಟ್ಟಾಣಿಮಣಿಯೊರ್ವನ ಕೈಲಾಗನೊಳೆಯುತ್ತಿರುವ ‖ ೧

ನಿಂದುನಿಂದಲ್ಲಿಗಲ್ಲಿಗೆ ನೆರಮನೆಮಂಮನೆಯೊಳಿರುವ ।
ಅಂದಗಾತಿಯರ ಬಗೆಯನಳವುಗಿಡಿಸುತ ।

ಸಂದಿಸಿದ ಕೆಳೆಯರೊಳು ಸರಸವಾಡುವ ನೆವದೊ ।
ಳಂದಚಂದಗಳ ತೋಱುತಾನಂದದೊಳೈತ್ತರುವ ॥ ೨

ಬಟ್ಟದೊಡೆಸೋಂಕಿನೊಳು ಪರವಶಗೊಂಡಂತೆ ಜಿಗಿ ।
ದುಟ್ಟ ಪೊಂದಟ್ಟಿಯು ಸಡಿಗೊಳ್ಯನೊಲೆಯೆ ।
ಕಟ್ಟಿದ ಕಾಂಚಿಯು ಘಂಟೆ ಘಣಘಣಿಸೆ ಕಾವನ ।
ಪಟ್ಟದಾನೆಯಂತೆ ಮದಪರವಶದೊಳೈತ್ತರುವ ॥ ೩

ಪೊಳೆವ ಪೊನ್ನ ಸರಗಳ ಪೊಗರು ಮಿಂಚಿನೊಳೊಗುಮಿಗೆ ।
ಕಳೆವೆತ್ತ ಕಾರ ಮುಗಿಲ ಕರುವಿನಂದದಿ ॥
ಬೞಿಕಸ್ಯವ ಬಯಸದೇಕಭಾವದೊಳು ಬೞಿಸಲು ।
ವೆಳವೆಣ್ಣ ಚಾದಗೆಗಳಿಗಿಂಪುದೋಱುತೈತ್ತರುವ ॥ ೪

ಕಡುನೇಹಗಾತಿಯವೊಲು ಕೈಸೇರಿದ ಪೊಂಗೊಳಲ ।
ನುಡಿಸಿ ನುಡಿಸಿ ಸಂತಸಪಡುವಂತೆವೊಲು ॥
ಒಡನೆ ಬಾಯೊಳು ಬಾಯ್ದೆಱೆಯೊಂದಿರೆಯೊಡಲುಮುಱಿತು ।
ಕಡೆಗಣ್ಣ ತೆಱೆಯು ಮಿಗೆ ಕರೆಗಣ್ಮಿಸುತೈತ್ತರುವ ॥ ೫ —೧—

ಕಂ ॥ ವೇಣುವ ನುಡಿಸಲ್ ಪೂಡಿವ ।
ತಾಣಕಮಂ ತನ್ನನೊಲಿಸ ಗೆಯ್ತ್ತುಂ ಗೆತ್ತಾ ॥
ಜಾಣೆ ಜಗಧೀಶನಿರವಂ ।
ಕಾಣಿಸಿ ತಿಳಿಪುತ್ತೆ ತನ್ನ ಸೊಬಗಂ ಮೆಱೆವಳ್ ॥ ೨೫

ಕೊಳಲ ನುಡಿಪುದೆನ್ನ ಕೂರ್ತು ಕಾಣಮ್ಮ ಎನ್ನ ।
ಕೆಳದಿ ನಿನಗಿದಱೊಳೊಂದೊಳವನೊರೆವೆ ಕೇಳು ॥ ಪಲ್ಲವಿ ॥

ಚ ॥ ಅಡಿಯೊಂದನೂಱಿ ನಿಂದದಱ ಮುಂದಕೆ ಮತ್ತೊಂ ।
ದಡಿಯನಡವಾಯಿಸುವಂದದಿಂದ ॥
ಕಡೆಗೆ ತೊಲಗದಂತೆನ್ನಡಿಯನಳವಳಿಸಿ ।
ಪಿಡಿದೊತ್ತಿಗೆಬ್ದುಯ್ವ ಬೆಡಗ ತೋಱುವನಮ್ಮ ॥ ೧

ಸೊಗಸುಗೊಳಲನಾಂತು ಸೊಗಯಿಪ ತೋಳ್ಗಳ ।
ನೆಗಹಿಯುಮರಿಸುವ ನೆವದೊಳೆನ್ನ ॥
ಬಗೆಗರಗಿಸುತ ಪೇೞ್ವಾಯ್ದು ಪಿಡಿದು ಜಿಗಿ ।
ಜಿಗಿದಮ*ರ್ದಪ್ಪುವ ಬೆಡಗ ತೋಱುವನಮ್ಮ ॥ ೨

ಕಡುಸೊಬಗಿಂದ ಕೊಳಲೆಡೆಂಗೊಳ್ಳೆಂದುಪೆಯುನಿ।
ಟ್ಟೊಡನೆ ಪೂರೈಸುವೊಂದೋಜೆಯಿಂದ ॥
ಸಡಗರ ಮಿಗೆ ಪೊಗಸಸಿಯು ಪೊಗದೊಳಿಟ್ಟು।
ಬಿಡದೆ ಮುದ್ದಿಸುವೊಂದು ಜಿಡಗ ತೋಱುವನಮ್ಮ॥ ೩ —೨—

ಕಂ ॥ ಒಡವೆರೆವೆಳವೆಯು ಜವ್ವನ।
ವೆಡೆಯಾಟವೊಳೆಸೆವ ಕೊಳಲ ಗೋವಳನೊಡಲಂ ॥
ತೊಡರ್ದೊಳ್ಪಸದನವೆಸ*ಟ್ಟ*।
ಣ್ಪಿಡಿವಿರೆ ತನ್ನಂತೆಗೆತ್ತು ಕೆಳದಿಯುಸುಸಿರ್ದಳ್ ॥ ೧೬

ಕಣ್ಣಿನಲ್ಲಿ ಕಟ್ಟಿದಂತಿದೆ। ಬಣ್ಣವಾತಲ್ಲವೆನ್ನಂತೆ ಭಾವಿಸಿ ನೋಡಬಾರದೆ ॥ಪ॥

ಚ ॥ ಸೂಡಿದ ಸೋಗೆಗಱಿಯು ಕಡುಸೊಂಪು।
ಸೊಗಸುವಡೆದ ಸುಱಿಗುರುಳಿನ ಗುಂಪು ॥
ಆಡುವ ಮುರುಹುಮಾಗಾಯ್ಗಳ ಪೆಂಪು।
ಕೂಡೆ ಕುಣಿವ ಕುಡುವ್ರುರ್ವಿನಲಂಪು ॥ ೧

ಕೊಳಲೆಡೆಗೆಡೆಗಮರುವ ಕೆಂಬೆರಲು।
ಕೊಸಬುವಡೆಯೆ ಕೊಂಕುವ ಗೆಜಿಗೊರಲು ॥
ತಳತಳಿಸುವ ತೇಲುವ ಕಣ್ಮಲರು।
ತನಿಗಂಪನು ಸೂಸುವ ಸುಯ್ಯೆಲರು ॥ ೨

ಸಿರಿಯೆದೆಯೊಳು ತೊಳಗುವ ಪುಲಿಯುಗುರು।
ಸಿಂಗರಿಸಿದ ಸಿರಿಗಂಡದ ತಿಗುರು ॥
ಕೊರಲ ದಂಡೆಯು ತೊಳಸಿಯು ಪೊಸಚಿಗುರು।
ತೆರೆಮುಸಗುವ ಪೊಂದುಗುಲದ ಪೊಗರು ॥ ೩

ಮುಳಿದು ಯಶೋದೆ ಕಟ್ಟಿದ ಪೊಡೆದಾರ।
ಮುದ್ದುವಡೆದ ನೇವಳದುಡಿದಾರ।
ಬಳಸಿದ ಪವಳಸರದ ಸಿಂಗಾರ।
ಬಣ್ಣದುಡೆಯು ಬಿಗಿದುಟ್ಟ ವೈಯ್ಯಾರ ॥ ೪

ಒಂಡಡಿ ತಲದೊಳು ನಿಂದಿಹ ನಿಲವು।
ಮುಕ್ಕೊಂಡಡಿಯುನು ಸಾರ್ಚಿದ ಬಲುಗೆಲವು ॥

ಮಂದೆಯ ಪಸುಗಳ ಮನ್ನಿಪ ನಲವು ।
ಮಡವ ಸವಿವ ಸಲ್ಲಱಿವಿನೊಳೊಲವು ॥ ೫ — ೩ —

ಕಂದ॥ ಸಿರಿಗೆಯ್ಗೆ ಸೇರಿ ಕಿವಿಗಿಂ ।
ಚರವಂ ಕಱಿಪಧರಸುಧೆಯನೀಂಟುವ ಕೊಳಲಂ ॥
ಸರಿಸವತಿಗೆತ್ತು ಕಱುಬು ।
ತ್ತೊರೆವಳ್ ತನ್ನಂತರಂಗಮಂ ಕೆಳದಿಯರೊಳ್ ॥ ೧೭

ಏನು ನೇಮದೊಳಿರ್ದುದೊ ಬೊಂಗೊಳಲೇನೋಂತುದೊ ಕೆಳದಿ ।
ತಾನೊಲಿದಿನಿಯನ ದಕ್ಕುಗೊಳಿಸುತಿದೆ ॥ ಪಲ್ಲವಿ ॥

ಚ ॥ ಪಿಂದು ಮುಂದನಾರಯ್ಯದೆ ಬಿದಿಱು ಬೇವಸಗೊಳದೆ ।
ಮುಂದುವರಿದಿನಿಯನೊಳು ಮೋಹವಡೆದು ॥
ಕೆಂದಾವರೆಯೆಸಳ್ಗಳ ಕೆಳೆಗೊಂಡು ಮೆಱೆವ ಕೆಯ್ಯ ।
ಚೆಂದಳದ ಸೋಂಕಿನೊಳು ನಂದು ಸೊಗವಡುತಿದೆ ॥ ೧

ಬಳಸಿದರ ಬಗೆಯದೆ ಭರದಿಂದ ಪಿಂದೆಗೆಯದೆ ।
ತಳುವದಿನಿಯನೆಣಿಸುವ ದಾರಿವಿಡಿದು ॥
ಅಳುಕದೆಯುವನ ಕಿವಿಗಮೃತರಸದ ಸೊನೆಯ ।
ನಳವುಗೊಳಿಸುತ ಮಿಗೆಯಾನಂದವಡೆಯುತಿದೆ ॥ ೨

ಇವರಿವರಿಗಳುಕದೆಯೆಡಬಲವನೆಣಿಸದೆ ।
ತವಕದಿಂದವನ ಮೊಗದಾವರೆಯೊಳು ॥
ಕವಿದು ಬಾಯೊಳು ಬಾಯಿಟ್ಟು ಪವಳದುಟಿಯೊಳುಜೇನ ।
ಸವಿದು ಸವಿದೀಂಟುತ ಮಿಗೆ ಸಂತಸವಡೆಯುತಿದೆ ॥ ೩ — ೪ —

ಕಂದ॥ ಇನಿಯಂ ತನ್ನೊಳ್ ಬಳೆಯಿಸು ।
ವಿನಿಗೆಯ್ತ ಮನೆಸಿತಸೆಳಸಿದಳ್ ಮನದೊಳ್ ತಾ ।
ನನಿತಂ ಕೊಳಲುಲಿಗಳೊಳೇ ।
ಅನುಭವಿಸಿದ ಸೊಗಸನಿಂತು ಕೆಳದಿಯೊಳುಸಿರ್ದಳ್ ॥ ೧೮

ಸೊಗಯಿಸುತಿದೆ । ಕೊಳಲುಲಿಯಿಂತು ಸೊಗಯಿಸುತಿದೆ ।
ಬಗೆಗರಗಿಸಿ ಮಿಗೆ ಪರವಶಗೊಳಿಸುತ ॥ ಪಲ್ಲವಿ ॥

ಚ ॥ ಬಿಗುಹ ಬಿಡಿಸಲೆಂದು ಬೆದಱಿಸುವಂತೊಮ್ಮೆ ।
ಬಗೆಯಱಿತೊಡನೊಡಬಡಿಪಂತೊಮ್ಮೆ ॥

ಸೊಗಸುಮಾತುಗಳಿಂದ ಸೊಕ್ಕುಗೊಳಿಪಂತೊಮ್ಮೆ।
ನಗುತ ನಗುತ ಮಿಗೆ ನಲ್ಲಳಿವಂತೊಮ್ಮೆ॥ ೧

ಮುನಿದಿದಿರೊಳು ನಿಂದು ಮೂದಲಿಪಂತೊಮ್ಮೆ।
ಮುನಿಸ ತಿಳುಹಲೆಂದು ಮುದ್ದಿಪಂತೊಮ್ಮೆ॥
ಇನಿಮಾತಿನಿಂದೆಸಗುವಿಚ್ಛಕದಂತೊಮ್ಮೆ।
ಮನಗರಗಿ ನುಡಿವ ಮಚ್ಚುಕಮಾತಿನಂತೊಮ್ಮೆ॥ ೨

ಕರೆದು ಸಂತಸದೊಳೇಕಾಂತವಾಡುವಂತೊಮ್ಮೆ।
ಮರುಳುಗೊಳಿಪ ಮೋಹಮಂತ್ರದಂತೊಮ್ಮೆ॥
ಎರೆಹೊರೆಯುನಿತಿಲ್ಲದೆಚ್ಚಕಮಾತಿನಂತೊಮ್ಮೆ।
ಸರಸದೊಳೆಸಗುವ ಸನ್ನೆಮಾತಿನಂತೊಮ್ಮೆ॥ ೩ —೫—

ಕಂದ॥ ನಿಟ್ಟಿಸೆಯಾಲಿಸೆ ಜಾನಿಸೆ।
ಬಟ್ಟಮೊಗಂ ವೇಣುನಾದಮಾಮೆಯ್ಸಿರಿಯುಂ॥
ತೊಟ್ಟನೆ ಕಣ್ಕಿವಿಬಗೆಗಳ।
ಬಟ್ಟೆಗೆ ಬರ್ಪಂದಮಂ ಮುಸಂಬುಗೆ ಪೇಳ್ದಳ್॥ ೨೯

ಏಪೇಳುವೆನೆನ್ನ ಬಗೆಯ।
ಗೋವಳರರಸನಿಂತು ಕೋಟಲೆಗೊಳಿಪನಮ್ಮ॥ ಪಲ್ಲವಿ॥

ಚ॥ ನಿಟ್ಟಿಸಿದೆಡೆಯೆಲ್ಲಾ। ತೇಲುವ। ನಿಡಿದಾವರೆಗಣ್ಣ। ಯಿಟ್ಟ ಕತ್ತುರಿನಾಮದ ಕುಡುಪುರ್ಬಿನ। ಬಟ್ಟಮೊಗದ ಬಣ್ಣಿಗೆ ಪಸರಿಸುತಿದೆ॥ ೧

ಆಲಿಸುವೆಡೆಯುಲ್ಲಾ। ಅಡಿಗಡಿಗಮ್ಮೃತದ ಪೊಸಲಂತೆ। ಲೀಲೆ ಕೈಮಿಗೆ ಕೊಳಲಿಂದುಣ್ಮುವ ರಾ। ಗಾಲಾಪದೆ ಕಿವಿಗನುಗೊಳಿಸುತಲಿದೆ॥ ೨

ಸಂದಿಪ ನೆಸಹೆಲ್ಲಾ। ಚೆಂದುಟಿಯೊಂದಿದ ಪೊಂಗೊಳಲ। ಬಂದಡಿಯೂಱಿ ಮುತ್ತ್ರಿಂದಡಿಯುಸು ನಾರ್ಜ। ನಿಂದ ನೆಲೆಯುಸುಱೆ ಬಂದಿಗೊಳುತಲಿದೆ॥ ೩ —೬—

ಕಂ॥ ಎಡೆವಿಡದೆ ಜಾನದಿಂ ಸಿರಿಯೊಡ।
ಲೆಡೆಗಳೊಳೊಂದುವೆರಸಿಯುದಱಱೆಸಕಂ॥
ಬಡಿಪೆಸೆವ ತನ್ನ ಚಿತ್ತದ।
ಕಡುಕೂರ್ಪಿನಯಸೊರೆದು ಮಿಱಿದಳೊಳ್ಗಿಳಿಯುರೆಳ್ ೨೯

ಪಲತೆಱನಾಗುತಿದೆ। ಎನ್ನ ಮನಸು। ಪಲತೆಱನಾಗುತಿದೆ।
ಚೆಲುವ ಗೋಪಾಲನ ಮೆಯ್ಸಿರಿಯ ಬಱಿದಿಡದು॥ ಪಲ್ಲವಿ॥

ಚ ॥ ಸುೞಿಗುರುಳಿನೊಳುೞಿ ಸುತ್ತುವರಿಯುತಿದೆ ।
ತೊಳಪ ನುಣ್ಬಣೆಯೊಳು ತೊಳಗುತಿದೆ ॥
ಎಳವೆಱೆನಾಮದೊಳು ಇನಿಸು ಕೊಂಕುತಲಿದೆ ।
ತಳಿರುವ ನೋಟದೊಳು ತಣ್ಪುವಡೆಯುತಿದೆ ॥ ೧

ನಲಿವ ಪುರ್ಬಿನೊಡನೆ ನಲಿನಲಿದಾಡುತಿದೆ ।
ಉಲಿವ ಪೊಂಗೊಳಲೊಡನುಲಿಯುತಿದೆ ॥
ಅಲೆವ ಬೆರಲ್ಗಳೊಡನಲೆವಡೆಯುತಿದೆ ।
ಒಲೆವೊಳುಗೂರಲೊಡನೊಯ್ಯನೊಲೆಯುತಿದೆ ॥ ೨

ಸರಿಸದೊಳ್ಳಡಿಯಂತೆ ಸರಿಸವೆನಿಸುತಿದೆ ।
ಬೆರಲೂಱಿದಡಿಯಂತೆ ಬಿಂಕದೊಳಿರೆ ॥
ನರಪತಿ ಚಿಕದೇವನಾಥ ಶ್ರೀಗೋಪಾಲನ ।
ಸರಸಗುಣಗಳಂತೆ ಸರಸವೆನಿಸುತಿದೆ ॥ ೩ —೭—

ಪ್ರಥಮಾನುರಾಗ ಸಪ್ತಪದಿ ಸಂಪೂರ್ಣಂ.



## —ಸಪ್ತಪದಿ— III

ಪಿಡಿದು ಕಚಾಗ್ರಮಂ ಸೆಳೆದು ನೀಂ ಜಯಲಕ್ಷ್ಮಿಯನಾಜಿರಂಗದೊಳ್ ।
ತೊಡತೊಡರುತ್ತೆ ಮುಂಬರಿದು ನಿನ್ನಡಿಯಂ ಬಿಡದಿರ್ಪರೊಲ್ಮೆಯಿಂ ॥
ಕುಡೆ ಚಿಕದೇವ ನೀಂ ಭಯಮುಮಂ ಪಗೆವರ್ಗೆಜಮೇಶಕೋಶಮಂ ।
ಕುಡುವರದೆಂತವರ್ ನಿನಗೆ ಸೋಲ್ದು ಪರಸ್ಪರಮೀ ವಿಚಾರಿಸಾ ॥ ೨೦

ಅಪವರ್ಗರ್ ತಾಂ ಮೇರುಶೃಂಗಕ್ಕಿರಿಗೞಿದರೆ ನೀಂ ತನ್ಮಹಾಮಾರ್ಗಮಂ ಪಾ।
ಯ್ದು ದಿವಸ್ಸ್ವರ್ದ್ವಾರಮಂತಾಮುಱಿದಿಱಿಪ್ರಪುರೀಗೋಪುರವ್ರಾತಮಂನೀಂ।
ಪಿಡಿವರ್ಬ್ರಹ್ಮಾಂಡಜೀರ್ಣ್ತ್ರೋರಂ ತಾಂ ಪಿಡಿಯೆ ಜಡಿದುತತ್ಕನ್ಯಕಾರತ್ನಮಂ ನೀಂ ।
ನುಡಿ ನೀನಿಂತಿರ್ದುಮೆಂತಪ್ರತಿಮನೆನಿಸುವೈ ಶೂರಲೋಕೈಕವೀರಾ ॥ ೨೧

ವಚನ ॥ ಈ ಮೂಱನೆಯ ಸಪ್ತಪದಿಯೊಳ್ ಶ್ರೀಕೃಷ್ಣನಂ ಕೂಡಿ ಯಗಲ್ದ ವಿರಹಿಣಿಯರ ವಚನವ್ಯಾಜದಿಂದವನ ಗುಣಂಗಳಂ ಪೇಳ್ವರ್.

ರಾಗ—ಕಾಂಬೋಧಿ ॥ ಆದಿತಾಳ ॥

ಮಂಗಳಮೂರುತಿ ಪೊಱಮಟ್ಟನಮ್ಮ। ಮನವಿಡಿದಿರಲಾಱೆನಮ್ಮ ॥ಪಲ್ಲವಿ॥

ಚ ॥ ನಲಿಯುತೆನ್ನಿದಿರಿಗೆ ನಡೆತಂದನಮ್ಮ। ನಡೆದು ನಾಣ್ಗೆಡಿಸಿದನಮ್ಮ ॥
ಹಲವು ಪೊಯ್ಸಿರಿಗಳ ಹರಹಿದನಮ್ಮ। ಹರಹಿ ಹದಗೆಯ್ದನಮ್ಮ ॥ ೧

ಕಡೆಗಣ್ಣ ತೆರೆಗಳ ಕವಿಸಿದನಮ್ಮ। ಕವಿಸಿ ಕೈಗಿಡಿಸಿದನಮ್ಮ ॥
ಕುಡುವುರ್ಬುಗಳ ಮೀಗೆ ಕುಣಿಸಿದನಮ್ಮ। ಕುಣಿಸಿ ಕಗ್ಗೊಲೆಗೊಂಡನಮ್ಮ ॥

ಕೊಳಲ ನುಡಿಸಿ ಪೋಸಗೊಳಿಸಿದನಮ್ಮ । ಗೋಪಾಲನೆಲ್ಲಿದನಮ್ಮ ॥
ಒಳುವನೆಂದೊಳಗೆನ್ನ ನೊಳಗುಗೆಯ್ದನಮ್ಮ । ಒಳಗುಗೆಯ್ದೋಡಿದನಮ್ಮ॥ ೩ ॥

—೧—

ಪೋದನಮ್ಮ। ಪೋದನಮ್ಮ। ಏನೇನೀಮಾಯಕೆನ್ನೇಗೆಯ್ವನಮ್ಮ ॥ ಪ ॥

ಚ ॥ ಎರೆಹೊರೆಯಿಲ್ಲದವೊಲಿರುವನಮ್ಮ । ಒಡನಿರುವನಮ್ಮ।
ಒಡವೆ ಬಿಡದೆವುದೆ ನರಿಯಾಗುಬೇಗೆ ಬೇಱೆಯಮ್ಮ ॥
ಪರಿಪರಿದು ಪಡದ ಪಾಡುವಡಿಪನಮ್ಮ।
ಕಡೆಗೆ ಪರಿಕಿಸೆ ತಾನಲ್ಲನೆಂದು ಪರಿವನಮ್ಮ ॥ ೧ ॥

ಪುಟ್ಟುಗೆಯ್ಮೆ ನಾಡಂತಲ್ಲ ಪೊಸತಮ್ಮ। ಪೊಚ್ಚ ಪೊಸತಮ್ಮ।
ಅವನಿಷ್ಟ ಗಂಟ ಬಿಡುವರು ಬೇಱಿಲ್ಲವಮ್ಮ ॥
ಪಟ್ಟಪಗಲನಿರುಳೆನಿಪ ದಿಟ್ಟನಮ್ಮ। ಬಲು।
ಬಿಟ್ಟವ ಪೊಟ್ಟುಗಳೆವ ಜೀರನಮ್ಮ ॥ ೨ ॥

ಮಂಗಳಾಂಗವನು ತೋಱಿ ಮಱೆವನಮ್ಮ।
ಜಗದ ಕಂಗಳೊಡನೆ ಮನಸ ಕಳುವನಮ್ಮ ॥
ಹೆಂಗೊಲೆಗಿನಿಸಾದರು ಹೇಸನಮ್ಮ। (ಇನಿಸು ಹೇಸನಮ್ಮ)।
ಅಅಂಗಜನ ಹವಣಲ್ಲ ಅವಸ್ಥೆಯನಮ್ಮ ॥ ೩ ॥ —೨—

॥ ರಾಗ—ಯರಕಲಕಾಂಬೋಧಿ ॥

ಕಾಣಿರೆ ನೀವೆನ್ನನಿಂದುನನೆಲ್ಲರ ಕಣ್ಣ ಪುಣ್ಯದ ಬೆಳಸ। (ನಮ್ಮೆಲ್ಲರ ಕಣ್ಣ ಪುಣ್ಯದ ಬೆಳಸ)। ತಾಣತಾಣದೊಳು ತಡೆದು ತಡೆದು ಸಿಂಗಾರಿಸಿ ಹರಣವ ಕೇಣಿಗೊಂಬವನ ॥ ಪಲ್ಲವಿ ॥

ಚರಣ॥ ನೋಟದ ಸುಳುಹಿನೊಳೇ ಮುನ್ನಿನ ಮಾಟವ ಮಱೆಯಿಪನ ಪುರಿಗ। ನಾಟದೊಳೆಲ್ಲರನಳಪ್ಪಿ ಡಿಸಿ ನಿಂಗೆ ಕೋಟಿಶೆಗೊಳಿಸುವ ಕೊಳಲುಗೋವಳನ ॥ ೧

ಸಿರಿಮೊಗದೊಳಮಿಸೊಸೇ ನೋಳ್ಪರ ಕರಣವ ಕಲಕುವನ ಮ । ತ್ತಿರಿಯೊ
ಳಾನಂದದ ಸೆರೆಯುನಲುಗಿ ಮಿಗೆ ಹರವಸಗೊಳಿಸುವ ಹರಿಯುನೀಂಪೇಳು ॥ ೨ ॥
ಪೊಂಗೊಳಲುಲುಹಿಸೊಳ್ ಲೋಕಕೆ ಮಂಗಳವೆಸಗುವನ, ತನ್ನಿಂಗೆ ।
ತಂಗಳೊಳಗೆಳವೆಣ್ಗಳನುಜು ಗುಂಗುದಿಗೊಳಿಸುವ ಕೊನಬುಗೋವಳನ ॥ ೩

—೩—

॥ ರಾಗ—ಕಾಂಬೋಧಿ ॥

ಕಂಡಿರೇನೆ । ಕಂಡಿರೇನೆ । ಕಂಡಿರೆಯೆನ್ನಿನಿಯನ ಕಂಡಿರೇನೆ ।
ಕಂಡವರು ಪೂಜದಿರಿ ಕಾಲಿಗೆಜಗುವೆನೆನ್ನ ಪುಂಡರೀಕಾಕ್ಷನು ಪೋದ
ಪೊಲಬ ತೋಱಿರೆ ॥ ಪಲ್ಲವಿ ॥

ಚ ॥ ಎಡಬಲಗಡೆಗೆ ಸಿಡಿವೆಳವೆಣ್ಣುವಕ್ಕಿಯು ಪಿಡಿವ ।
ಬಡಿವಲೆಯು ಪೋಲ್ವ ಪೊಸಬಗೆಯು ನೋಟದ ॥
ಸುಡಿವ ಪೊಂಗೊಳಲ ಗತಿವಿಡಿದೆನ್ನೆ ರ್ಪ*ಯುಂತಾಡುವ ।
ಕಡುವ್ರುರ್ಪಿನ ಕೊಂಕುಗೊರಲ ಕೊನಬುಗಾಜನ ॥ ೧ ॥ —೪—

॥ ರಾಗ—ಕಾಂಬೋಧಿ ॥

ಏನೆಯುಮ್ಮ ಏನೆಯುಮ್ಮ । ಇದೇನಿಂತು ತಡವಿನ್ನೇತಕಮ್ಮ ॥ ಪ ॥

ಚ ॥ ಮುದ್ದುನಗೆಯು ಬಲೆಗೆ ಸಿಕ್ಕುಬಿದ್ದೆನಮ್ಮ । ಕೊಳಲ ।
ಸದ್ದುಗೇಳಿದಂದೆ ಬೆಲೆಗೆ ಸಂದೆನಮ್ಮ ॥
ಅದ್ದೆನು ವಿರಹಾಂಬುಧಿಯೊಳದ್ದೆನಮ್ಮ । ಅವನ ।
ಪೊದ್ದುಗೆಗೊಳಿಸಿ ಗೆಲವ ಪೊಣ್ಮೆನಮ್ಮ ॥ ೧
ಬಣ್ಣವಗೆಯು ಬವಣಿಯೊಳು ಬಂದೆನಮ್ಮ । ಯೆನ್ನ ।
ಪೆಣ್ಣುಬುದ್ಧಿಯಿಂದ ನೊಂದು ಬೆಂದೆನಮ್ಮ ॥
ತಣ್ಣಡಿನೆಲಿಗಾಸೆದಳೆದೆನಮ್ಮ । ಕಾರು ।
ವಣ್ಣನೂಱುಗದ ಸಿರಿಯುನೊದವಿಸಮ್ಮ ॥ ೨
ವೇಣುವಿಡಿದ ಬಿಂಕಕೆ ಬೆಚ್ಚಿತೆನಮ್ಮ । ಅವನ ।
ತಾಣಕದಂಡದೊಳುಱು ತಣಿದೆನಮ್ಮ ॥
ಕಾಣೆನಿನ್ನ ಬೇಱೆಗತಿಯು ಕಾಣೆನಮ್ಮ । ನೀನೆ ।
ಕಾಣಿಕೆಗೆಯ್ವುವನಿಗೆನ್ನ ಕರುಣಿಸಮ್ಮ ॥ ೩ —೫—

॥ ರಾಗ—ಮುಖಾರಿ ॥

ನಲ್ಲನೆಂಪು ನಂಬಿದೆನಮ್ಮ । ಇಂತು ।
ಕಲ್ಲೆರ್ದೆಯುವನೆಂಬುದ । ಕಂಡು ಕಾಣದಾದೆನಮ್ಮ ॥ ಪ ॥

ಚ ॥ ಬಲುವಾವ ಪುಲ್ಸರವೆನಿಸುವನು ।
ಪಟ್ಟಪಗಲೆ ನೇಸಱನು ಮಱಸುವನು ।
ಪೇಸುವೆಲರ ಪಿಡಿದು ಕೆಡಪಿ ತೋಱಸುವನು । ಜವರ ।
ತಲೆಯೊಳು ಬರೆದ ಬಿರಿಯು ತಬ್ಬಿಬ್ಬುಗೊಳಿಸುವನು ॥ ೧ ॥
ಏನೆನಿವನ ಮಹಿಮೆಗಳನೇಕ ।
ಜಗದೊಳಿಲ್ಲವಿವನಿಗೆ ಸರಿ ತೂಕ ।
ಇನ್ನೇವೇಳುವೆನಿವನದೊಂದು ಡಾಕ ಯುವನ ।
ಮೂವಣ್ಣದ ಮಾಯೆಯೊಳು ಮುಳುಗಿಹುದೀಲೋಕ ॥ ೨
ಜಗದ ಜಾಲಗಾಱರೊಳಿವನೇ ಮೇಲು ।
ಇನಿಸು ಸಡಿಲವಿವನಿಟ್ಟ ಕಾಲ ಕೀಲು ।
ಈಜಗವೆಲ್ಲಾಯುವನೊಳೊಂದು ಪಾಲು ।ಮೇಗೆ ।
ಬಗೆಬಗೆಯೊಳಿಹುದಿವನ ಸೊಗಸು ಮೂಱುಪಾಲು ॥ ೩ ॥ —೬—

॥ ರಾಗ—ಘಂಟಾರವ ॥

ಗೋಪಾಲನ ತೋಱು ಗೋಪಾಲನ ತೋಱು । ಗೋಪಾಲನ ತೋಱು
ಗೋಪಾಲನ ತೋಱು । ಈಸರಿಯುವನ ಸೇವೆಯಿಲ್ಲದಿರಲಾಱು ॥ ಪಲ್ಲವಿ ॥
ಚ ॥ ಮುದ್ದುಮುದ್ದುಮೊಗದೊಳೆನ್ನ ಮೊಗವಿಟ್ಟು ಮುದ್ದಿಸು ।
ತಿದ್ದಲ್ಲದಿಬಲೆಯೊಡಲನಿನ್ನು ಪೊಱಲಾಱು ॥ ೧
ಪೊಗರೊಗುವ ಪಚ್ಚೆಮಣಿಯು ಪೋಲ್ವ ಸಿರಿಮೆಯ್ಯ ।
ಬಿಗಿಬಿಗಿ ಪಪ್ಪದಿಂದೊಡಲ ಬಿಚ್ಚೀಗೆಯ್ಗಾಱು ॥ ೨
ಚಿಕ್ಕದೇವೇಂದ್ರಗೊಲಿದ ಸಿರಿಗೋವಳನಡಿಗೆ ।
ಪಕ್ಕದಿಂದೊಡಲ ಸೆಱೆಯು ಸಿಕ್ಕುದೊಡಕಿಗಾಱು ॥ ೩ —೭—

ವಿಷಯ ಸಪ್ತಪದಿ ಸಂಪೂರ್ಣಂ.



— ಅಷ್ಟಪದಿ — IV

ಭಿಕ್ಷುವಾಗಿ ಬೇಡಲ್ ಪರಿದು ಕೊಕ್ಕುಕೊಂಡುದು ಗೋಲ್ಕೊಂಡೆಯಂ।
ಪಕ್ಷಿ ಸಿಂಹಕ್ಕೆ ಲಿಕ್ಕೆ ವಿಜಯನಗರಮಂ ಬೀಡಿಲ್ಲ ನೊಕ್ಕೆನಿಂ ॥
ದಕ್ಷಿಣಾಶಾವಸಿತ ಶಂಭುಸೇನೋದ್ಯಮುಜ್ಜಕೊಬರ್ಜಮಂ ।
ತಕ್ಷನೆಸೆದ್ದ ಮಜ್ಜ ತವಾಕ್ರಮದಿಂ ಚಿಕದೇವಭೂವರಂ ॥ ೨೦

ಮದನನೋ ಶಂಬರನೋ ದಶಾಸ್ಯಸುತನೋ ಮಾರೀಚನೋ ಎಂಬಿನಂ ।
ಭಯದಿಂದಾಗಡೆ ಢಿಳ್ಳಿ ಭಾಗನಗರಪ್ರಾಂತಂಗಳೊಳ್ ನಾಡುಗರ್ ।
ಜಯಜೀಯೆಂದಿದಿರಿಟ್ಟು ಕಪ್ಪದೊಡವಿಂ ಪೊಂಪೇೞು ಬಂದಾಶಿವಾ ।
ಜಿಯ ಸೊರ್ಕಂ ಮುರಿದಿಕ್ಕಿಯಪ್ರತಿಮವೀರಾಧೀಶ್ವಯಂ ತಾಳ್ದಿದಂ ॥ ೩೩

ವಚನ ॥ ಈ ನಾಲ್ಕನೆಯ ಸಪ್ತಪದಿಯೊಳ್ ವಿರಹಿಣಿಯರ ವಿರಹೋದ್ರೇಕಮುಂ ಶ್ರೀಕೃಷ್ಣನೊಳ್ ಬಿನ್ನವಿಸ ದೂತಿಯರ ವಚನವ್ಯಾಜದಿಂ ಶ್ರೀಕೃಷ್ಣನ ಗುಣಾತಿಶಯಮುಮಂ ಪ್ರಕಟಿಸುವರ್.

॥ ರಾಗ—ಯದುಕುಲಕಾಂಬೋಧಿ ॥

ಕಂದ॥ ಕಡುಗೂರ್ತುರ್ ಕಣ್ಣನಂ ಸೋ ।
ಲ್ತೊಡಗೂಡುವ ಸ್ವೈಸನೆರ್ದೆಯೊಳಾಳೋಚಿಸುತುಂ ॥
ಕಡೆಗಾಣದಲಸುವಿನಿಯಳ ।
ಮಿಡುಕಂ ಗೋವಿಂದನೊಡನೆ ದೂದವಿ ಪೇಳ್ದಳ್ ॥ ೩೪

॥ ತಾಳ – ಝಂಪೆ ॥

ದೇವರೊಲವನು ಮನದಿ ಲಾವಣಿಗೆಗೊಂಬಳು ।
ಈವಿಧದಿ ನೀನವಳನೆಣಿಸದಿರುವರೆ ಕೃಷ್ಣ ॥ ಪಲ್ಲವಿ ॥
ಚ ॥ ಪಿಡಿದ ಬೆಳ್ಳಿಲೆವಡಿಪು ಪಿಡಿಸಂತೆ ಕಂದುತಿರೆ ।
ಅಡಸಿದೊಳ್ಳಡಕೆಯುಚ್ಚಳಿಯದಿರಲು ॥
ಕುಡಿಪುರ್ವ ಪಲತೆರದ ಕೊಂಕುಗೊಳಿಸುತ್ತೆ ಮೆ ।
ಲ್ಲೊಡಲ ಜಡಮುರಿದು ನಿಟ್ಟುಸಿರುವಿಡುತಲಸುವಳು ॥ ೧
ಬಳಸಿ ನುಡಿವರ ಮಾತು ಬಯಲೊಳಗೆ ತಿರುಗುತಿದೆ ।
ಸುೞಿವುಗಾಣದೆ ದಿಟ್ಟಿ ಸೊೞಗುತಿದೆ ।
ತೊಳಪ ಗಲ್ಲದೊಳು ಕೈದಳವನಮರಿಸಿ ತುಂಬಿ ।
ತುಳುಕಿ ಸುರಿವಾಲಿನೀರ್ದೊಱೆಯು ಕರೆಗಣ್ಮೆಸಳು ॥ ೨
ಮಲಗಲೆಳಸುವಳೊಡನೆ ಮಲಗನೊಪದೇಳುವಳು ।
ನಿಲಲೆಳಸಿ ಕುಳ್ಳಿರುವಳಲೆವಡುವಳು ॥
ಅಲುಗದವೆಯು ವಿಚಿತ್ರದಂದವನು ನೆಱೆಗೊಂಡು ।
ತಲೆದೂಗಿ ತನ್ನೊಳಗೆ ತಾನೆ ಕಳವಳಿಸುವಳು ॥ ೩ —೧—

॥ ರಾಗ—ಕಾಂಬೋಧಿ ॥

ಕಂದ॥ ನಲ್ಲಳ ಸೋಲವನಾಲಿಸಿ ।
ಚೆಲ್ವಾಡುವ ಪರಿಯ ಮನದ ಹಮ್ಮೈೞಿನ ಕರಂ ॥

ತಲ್ಲಳಮುಣ್ಮುವ ತೆಱದಿಂ ।
ಸೊಲ್ಲಿಸಿದಳ್ ದೂತಿ ವಿರಹತಾಪೋನ್ನತಿಯಂ ॥ ೩೫

ಬಿನ್ನವಿಸಲೆನ್ನ ಹವಣಲ್ಲ । ಆ। ಚೆನ್ನಿಗೊಳು ಗೋಪಾಲ ಚೆಲ್ಲಾಟ ಸಲ್ಲ ॥ ಪ।

ಚ॥ ಒಲುಮೆಗಾತಿಯರು ನಾಡೊಳು ಪಲರುಮಿರೆಯುವಳೊಲುಮೆ ನಾಡಾಡಿಯಲ್ಲ । ಪಲವಗೆಯೊಳೇಸದನು ಬಣ್ಣಿಪುದು ಕೇಳವಳು ಪಡುವ ಪಾಡುಗಳ ಬಗೆ ಜೋಡೆ । ಆ। ನೆಲೆಯ ನಿರವಿಸಿ ತಿಳುಹಲಾಗದೆ । ತಡೆದು । ನಿಲಲಾಗದಳವಳು ಇನ್ನರೆಗಳಿಗೆ ಮಾಣದೆ ॥ ೧

ಎಸಳುಗಂಗಳ ನೀರ್ಗಳೆಡೆವಿಡದೆ ಪೊಸಲಿಡುವ್ರವೇಪೆ ಪರಿಕಾಲ್ಗಳಂತು। ಬಿಸುಸುಯ್ಲ ಬಿಸಿಬಿಸಿನೊಳು ಜೀವಸಂಬಡೆವ್ರದನು ಚಿತ್ತರಿಸಿ ಬಗೆಗೊಳಿಪುದಂತು । ಅವಳ ನಿಸುವ ಕಾವನ ವಂತ ಸಂತು। ಗಿರಿ । ಪೊಸವೇಟದೊಳು ಇವಳಿಗೇನೇನುಬಂತು ॥ ೨

ಪೇಟುವಡೆ ನಾಲಗೆಗೆ ಬಿಸುಪೇಱುವುದು ಕೇಳೆ ಜೀಗೆಗೊಂಬುವು ಕಿವಿಗಳು। ತಾಳುವಳದೆಂತೊ ಆತರುಣಿಯುಃ ಕಟಕಟ ಪರಿತಾಪದೇೞಿಗೆಯನೇನೆಂಬೆ। ಆಬಾಲೆ ಕಡುಗಾವಿಡಿದ ಬೊಂಬೆ। ಗಿರಿ। ಪೇಟುವೆನು ಜೀಸಗೆಯ ಬಿಸಿಲ ಪೂದೊಂಬೆ ॥ ೩

॥ ರಾಗ—ಕನ್ನಡಗೌಳ ॥ †

ಕಂದ॥ ಕಾವಲೆಯುಗಲ್ಕೆಗಾಱದೆ ।
ದಹಾಂ ಪೊಯ್ಮಱಿಪ ನೆನೆವ ನುಡಿಬೊಡರಿಸುವುವು ॥
ಸ್ಮಾದವಿಕಾರಂಗಳನಾ ।
ಪೂವವಿ ಗೋವಳನ ಕಿವಿಗೆ ನವಿನೋಱಿಸಿದಳ್ ॥ ೩೬

ನಿನ್ನವಳ ಪಿಲ್ಲೆರ್ಡೆಯ* ನೆಲೆಯ ನೀನೆ ಬಲ್ಲೆ ।
ಚೆನ್ನಗೋವಳರಾಯ ಚಿಂತೆಗಳವಡದೆಮಗೆ ॥ ಪಲ್ಲವಿ ॥



ಚ ॥ ಮರುಳುಗೊಂಡಂತಿಹಳು ಮಱವಟ್ಟು ಪೊಯ್ಮಱೆದು ।
ಕರಕರೆಯೊಳೊಂದುವಳು ಕಾತರಿಪಳು ।
ಪರಿಪರಿಯ ನೆನಹುಗಳ ಪಸರಗೊಂಬಳು ಸುಯ್ದು ।
ಒಸವಱಿದು ಬಾಪ್ಪಿಟ್ಟು ಪಲವ ಪಂಬಲಿಸುವಳು ॥ ೧

ಎಡೆವಿಡದೆ ಜಾನಿಸುವಳಿದೆ ಬಂದನೆರೆಯನೆಂ ।
ದೊಡನೆಗ್ದು ಮುಂಬರಿವಳೋಸರಿಪಳು ॥
ಮಡಮುಱಿದು ನೋಡಿ ಪೊಯ್ಮಱಿಸದಿರು ಮನದನ್ನ ।
ತಡೆ ನಿಲ್ಲು ನಿಲ್ಲೆಂದು ತವಕದಿಂದೊಡಗುವಳು ॥ ೨

† ನೀಲಂಬರಿ ರಾಗ ಬೇರೆ ಪ್ರತಿಯಲ್ಲಿದೆ.

ಬಯಲ ತಕ್ಕೈಸುವಳು ಬಾಯ್ಗೊಟ್ಟೆಕೆಳಸುವಳು ।
ದಯೆಗೆಯ್ದು ಸಲಹೆಂದು ತಲ್ಲಣಿಪಳು ।
ನಯಸರವ ತೋರುವಳು ನಲವೇರಿಯಾಸಂದ ।
ಮರುಳೆನಿಸುವಳು ನಿನ್ನ ಮಾಯೆಯೆಂತುಟೊ ಕೃಷ್ಣ ॥ ೩ —೩—

॥ ರಾಗ—ಕಾಂಬೋಧಿ ॥

ಕಂದ॥ ಬಂದೊಂದುಂ ದಿವ್ಯಾಂಗದ ।
ಸೌಂದರ್ಯಂ ಬಗೆಗೆ ಬಂದು ಪರಿವಿಡಿಯಿಂದಂ ॥
ನಿಂದಿರೆ ತೊಬಿಲ್ವ ಕಾಮಿನಿ ।
ಯುಂದವನಿಂತಚ್ಯುತಂಗೆ ಸಖಿ ಸೊಲ್ಲಿಸಿದಳ್ ॥ ೩೭

ಕಳವಳಿಪಳಿಂತೆಮ್ಮ ಕಣ್ಗೆಡಿಪಳು ।
ಕೊಳಲ ಗೋವಳ ನಿನ್ನ ಗುಣಗಳನೆ ಗುಣಿಸುವಳು ॥ ಪಲ್ಲವಿ ॥

ಚ ॥ ಒಲಿವ ಸಿರಿಮೊಗದೋಜೆಯುಚಿತವೆಂದೊದರುವಳು ।
ಸಲಿಸಲಿವ ಪುರ್ವೆಂದು ಸೈಗರೆವಳು ।
ಅಲೆವಡುವ ನೋಟದೊಂದಂದವೆಂದಳಲುವಳು ।
ಉಲಿವ ಪೊಂಗೊಳಲ ಮೆಲ್ಲುಲಿಯೆಂದು ಗಳಪುವಳು ॥ ೧

ಪಲತೆಱದಿ ತೊಸೆವ ಕಿವಿವಜ್ಜೆಂದೊರಲುವಳು ।
ಕಳೆವೆತ್ತ ಕದಪೆಂದು ಕನವರಿಪಳು ॥
ಸಲವೀವ ಚಕ್ರದುಸ್ಥಿತಿಯೆಂದು ನಮಿಸುವಳು ।
ಒಲವುರಿಯು ಸಂಕೆಂದು ಬಸವಳಿದು ಪಲುಬುವಳು ॥ ೨

ಮುರಿವಡೆದ ಭುಜದ ಕಡುಮುದ್ದೆಂದು ಮೊಳಗುವಳು ।
ತಿರುಹಿದೊಳ್ನಡುವೆಂದು ದೆಸೆಗಿಡುವಳು ।
ಬೆರಲೂಱಿ ನಿಂದಡಿಯು ಬೆಡಗೆಂದು ಬೆಚ್ಚುವಳು ।
ಸರಿಸದೊಳ್ಪಡಿಯೆಂದು ಸಂತಸದೊಳೀಜಗುವಳು ॥ ೩ —೪—

॥ ರಾಗ—ಘಂಟಾರವ ॥

ಕಂದ॥ ಓರಂತುರಿ ಮಸಗುವ ವಿರ ।
ಹಾರಭಟೆಗೆ ಹಮುಗಿ ಹರಣಪಟುವಂ ನೆಱೆಗೆ ॥
ಯ್ವಾರಮಣಿ ಸುಡಿದ ನುಡಿಗಳ ।
ವಾರಿಜಮುಖಿಂತೆಂದು ಹರಿಗೆ ಸಖಿ ಸೊಲ್ಲಿಸಿದಳ್ ॥ ೩೮

ಚೆನ್ನೆಯಾಡುವಳಿದಸು ಚಿತ್ತವಿಪುದು ।
ಇನ್ನವಳ ಮನದಿರವನೆಂತು ಬಿತ್ತರಿಸುವೆನು ॥ ಪಲ್ಲವಿ ॥

ಚ ॥ ಗಿಳಿವಱಿಗೆ ನೀನೆ ಪಾಲ್ಗೆನೆಯೂಡಿ ಬಳಯಿಸೆಂ ।
ದೆಳೆಯುಂಚೆ ನಿನ್ನ ಕೆಯ್ಯೆಡೆಯಿದೆಂದು ।
ಕಳವಳಿಸಿ ಕಾತರಿಸಿ ಗಾಱುಗೆಡಲೇಕಿನ್ನು ।
ಕೆಳದಿಯೆಱ್ಜ್ಱಿದೊಳಿರು ಕೆಲಕೆ ತೊಲಗದಿರೆಂದು ॥ ೧
ಭಾವಚಿತ್ರದ ಪಟವ ಭಕ್ತಿಯೊಳೆ ಪೂಜಿಸೆಂ ।
ದೀವಕುಳಸರವಿನಿಯಗೀವುದೆಂದು ॥
ಈವಿಧದಿ ಮರುಳೆ ನೀನೇಕೆ ಮಱುಗುವೆ ಸಾಕು ।
ಈವೇಳೆಗೇನು ಹಿತವೆಂದು ತಿಳಿದೆಸಗೆಂದು ॥ ೨
ಅವನ ಪೆಸರಕ್ಕರವನನುಗೊಳಿಸು ಕಿವಿಯೊಳೆಂ ।
ದವನ ಪಾವುಗೆಯ ಮುಡಿಗವುಚೆಂದು ॥
ಅವಿವೇಕಿ ಬಱಿದೆ ನೀನಱಲೇಕೆ ಸಾಕಿನ್ನು ।
ಎವೆಯುಲುಗದಂತೆ ಕೂರ್ತೆನ್ನ ನೋಡುತಿರೆಂದು ॥ ೩ —೫—

॥ ರಾಗ—ಘಂಟಾರವ ॥

ಕಂದ॥ ಅಱಿನಱತುಸಿರೆಡೆಯಾಟಂ ।
ಬಱತ್ತೊಱಗಿದ ಬಾಳೆಯಿರವನಾರಯ್ದು ಕರಂ ॥
ಮಱುಗುವ ಕೆಳದಿಯರೆಸಕವ ।
ನಱಿಪಿದಳಾವೂತಿ ತವಕದಿಂ ಗೋವಳನೊಳ್ ॥ ೩೯

ಸಿಪಿವೆತ್ತಣ ಜಿಸದವೇಱು ನಡೆನಡೆ ಬೇಗ ।
ವಾಸಿನಿಯ ನೆಲೆಗೆನ್ನ ಮನಸು ಚಂಚಲಿಸುತಿದೆ ॥ ಪಲ್ಲವಿ ॥

ಚ ॥ ಬಾವನ್ನದಣ್ಪೆಲ್ಲಿ ಪನ್ನೀರ್ಗಳೆಲ್ಲಿ ಪೊಸ ।
ದಾವರೆಗಳೆಲ್ಲೆಂದು ತವಕದಿಂದ ।
ಗಾವಳಿಸಿ ಕೆಳದಿಯರು ಕಳವಳಿಸುತಿರೆ ಕಂಡು ।
ದೇವರಡಿದಿಡೆಗೆ ಕಡುದೀವರದೊಳಿರ್ಪ್ಪುದೆನು ॥ ೧
ಅಸಿರೊಡಲ ಬಿಸುಪ ತಿಳಿದೊಸರ್ವ ಕಣ್ಣೀರ ನೋ ।
ಡುಸಿರನಾರಯ್ಯೆನುತ್ತೋಜೆಗುಂದಿ ।
ಬಸವಳಿದು ಕೆಳದಿಯರು ಪಂಬಲಿಸುತಿರೆ ಕಂಡು ।
ಉಸಿರಲೆಂದೀಡಿದೆನೊಱುಱಿನಿಂದಿರ್ಪ್ಪುದೆನು ॥ ೨
ಪಂತ ಸಂದುಪೆ ಮದನ ಪಾಡು ತಿರುಗಿತೆ ಚಂದ್ರ ।
ನಂತಸವೆ ಇಂದಿಗೆ ವಸಂತನೆಂದು ॥
ತಿಂತಿಣಿಸಿ ಕೆಳದಿಯರು ದಿಗಿಲುವಡುತಿರೆ ಕಂಡು ।
ಸಂತಾಪದಿಂ ನಿನ್ನ ಸನ್ನಿಧಿಯನೆಯ್ದಿದೆನು ॥ ೩ —೬—

|| ರಾಗ — ಮೋಹನ ||

ಕಂದ|| ದಾದಿಯರುಂ ಕೆಳದಿಯರುಂ |
ಮೂದಲಿಯುರುಬಿಸಿಯುಳುಳುಹಿನೊಳ್ ಕೆಯ್ದುಗೆವಂ ||
ತಾಮದು ಸೀಪಿಸಿನ್ನೊರ್ವನೆ |
ಕಾಮಜ್ವರಪ್ರಸೆಂದು ಕೆಳದಿ ಕೌರಿಯೊಳುಸಿರ್ದಳ್ || ೪೦

ನಲ್ಲಳಿಗೆ ನಲವಿಂದಿಗೆ । ಅ । ಲ್ಲಲ್ಲಿ ವಿರಹಾಯಾಸ ಹರಿವಡೆಯಲಿಂತು || ಪ ||

ಚ || ಬಳಸಿರುವ ಬಾಂಧವರ ಬಳಗದೊಳು ಬಸವಳಿಕೆ ।
ತಳಿರುವಾಸಿನೊಳು ಪರಿತಾಪದೊಂದೆಸಕ ।
ಬಳಗೆಳದಿಯರೊಳು ಬಿಡದೊಗುವ ಕಣ್ಣೀರ್ವೊನಲು ।
ತಿಳಿದು ನಿರವಿಸುವರೊಳು ದಿಗಿಲು ನೆಲೆವಡೆಯೆ || ೧

ನೆರೆದು ನಿಟ್ಟಿಸುವರೊಳು ನಿಟ್ಟುಸಿರ ಕಾಲಾಟ ।
ನೆರೆಹೊರೆಯ ಪೆಣ್ಗಳೊಳು ನಿಚ್ಚಲಿರ್ದ ಗಿಜ್ಜು ।
ಪೊರೆವ ದಾದಿಯರೊಳಾಮೆ ಪೊಣ್ಮೆ ಬಹ ಮುಮ್ಮುಳಿವು ||
ಪರಿಜನದ ನೆರವಿಯೊಳು ಬವಣೆ ಬೇರ್ವರಿಯೆ || ೨

ಎನ್ನವಂದಿಗರೆಡೆಯೊಳೇವಗೆಯ ಪಂಬಲಿಕೆ ।
ಮನ್ನಣೆಯ ಸಖಿಯರೊಳು ಮಱುಕದೊಂದುಬ್ಬು ||
ಚೆನ್ನ ಚಿಕದೇವರಾಜೇಂದ್ರವಲ್ಲಭ ಕೃಷ್ಣ ।
ನಿನ್ನ ಕೆಯ್ಯೊಳು ಹರಣ ನೆಲೆವಡೆಯಲಿಂತು || ೩ — ೭ —

ವಿರಹೋದ್ರೇಕ ಸಪ್ತಪದಿ ಸಂಪೂರ್ಣಂ.

## — ಸಪ್ತಪದಿ — V

|| ರಾಗ — ಕಾಂಬೋಧಿ ||

ಕತೆಗನ್ನೊಳ್ ಸಿರಿ ಸಿಕ್ಕಿ ತೋರ್ಕೆಗೆಡೆಯಂತಾಗೆಯೊಳ್ಳಾಟಕ್ರಮಂ। ಕಡುಸೊಂಪಿಂ ಚಿಕದೇವ ಕಂಬುಕೊರಲೊಳ್ ಬಿಲ್ ಪುರ್ಬಿನೊಳ್ ತೋರ್ಕೆಯಿಂ । ಪಡೆಗಾಕಾರವುಮುಕ್ಕೆ ಮಾನುಷಮುಮಿನ್ನಂತಂತು ನೀಂ ಮಾಂಜಿಯುಂ | ನುಡಿಗುಂ ಸತ್ವಪರಾಕ್ರಮತ್ವದೆ ಪೊಡಮ್ಡು ವಿಷ್ಣುವೆಂದೇ ಜಗಂ ॥ ೪೧

ಪ್ಪುಗೆಯಂ ಬಯಲೆಸಿಸುತೆ ಪಡಿ |
ಮೊಗಮೊಳ್ ಮೂದಲೆಯ ಮುಂದುಗೆಯ್ದಳ್ ಮತ್ತಂ ॥ ೪೫

ನೀತವೆ । ಇದು ನೀತವೆ । ನಿನ್ನ ನಡೆ ಬೇಱೆ ನುಡಿ ಬೇಱೆ ನೆನಹು ಬೇಱೆಲೆ ಕೃಷ್ಣ ॥ ಪಲ್ಲವಿ ॥

ಚ ॥ ಮೊಗಸಿರಿಯು ನಿಟ್ಟಿಸೆ ಮುದ್ದುಮುದ್ದಾಗಿದೆ ।
ಒಗೆಯು ಭಾವಿಸಲಿಂತು ಪಾಸಱೆಗಲ್ಲೆನಿಸಿದೆ ॥ ೧ ॥

ಸವಿಮಾತುಗಳ ಕೇಳೆ ಸೈಯೆನಿಸುತಲಿದೆ ।
ಕವಕೋಡುಗಳ ನೋಡೆ ಕತ್ತಲೆ ಕವಿಯುತಿದೆ ॥ ೨ ॥

ರೂಪುರೇಖೆಗಳ ನೋಡೆ ರೋಮಾಂಚವಾಗುತಲಿದೆ ।
ಗೋಪಾಲ ನಿನ್ನೊಲವೆನ್ನ ಕೋಟಲೆಗೊಳಿಸುತಿದೆ ॥ ೩ ॥ —೨—

ರಾಗ ॥ ಕಾಂಬೋಧಿ ॥

ಕಂದ ॥ ನೆನಪುಂ ನುಡಿಯುಂ ನಡತೆಯು |
ಮನಿತನಿತುಂ ಬೇಱೆಬೇಱೆ ಪಲ್ಲಟವಾಗಿ ॥
ಪೊಸನವಾಗೋವಳರೆಱೆಯನ |
ಮೊನೆಮಾತಿನೊಳಿಂತು ಜಱಿದು ನುಡಿವಳ್ ಮತ್ತಂ ॥ ೪೬

ನುಡಿವ ನೂತನ ಬೇಱೆ ನಡೆವ ನಟನೆ ಬೇಱೆ ।
ಬಿಡದೆ ಮನಸೊಳಿಹ ಬಿನ್ನಣ ಬೇಱೆ ।
ನಡೆ ನಡೆ ನಡೆ ನಿನ್ನ ನಾಲಗೆಗಾನುತ್ತರ ।
ಗುಡಲಾಱೆನು ದಮ್ಮಯ್ಯ ಗೋಪಾಲರಾಯ ॥ ೧ ॥

ಬೇಟವೊರ್ವಳಲ್ಲಿ ಪುರ್ಣನಾಟವೊರ್ವಳಲ್ಲಿ । ಸನ್ನೆ ।
ನೋಟವೊರ್ವಳಲ್ಲಿ ಒಱಬೂಟಕವಿಲ್ಲಿ ।
ತಾಟೊಟುತಗರುಬೊಗರುಟಕ್ಕುಟೌಳಿಯೆಸಗುವ ।
ಕೋಟಲೆ ಸಾಕು ದಮ್ಮಯ್ಯ ಗೋಪಾಲರಾಯ ॥ ೨ ॥

ಅಪರಿಮಿತಮಹಿಮ ಅಖಿಲಾಂತರಾತ್ಮ ನಿನ್ನ ।
ಕಪಟನಾಟಕದೊಳು ಕಡೆಗಾಣ್ಬರಾರು ।
ಅಪಚಾರ ಬರ್ಪುದಿನ್ನು ಅಂತಿಂದೆಂದು ನುಡಿದೊಡೆ ।
ಗುಪಿತದಿಂದಿರು ದಮ್ಮಯ್ಯ ಗೋಪಾಲರಾಯ ॥ ೩ ॥ —೩—

ರಾಗ ॥ ಖಾಬಿ ॥

ಕಂದ ॥ ಕೈತವನೊಳ್ ಕಡುಪ್ರೈನ್ಯದ ।
ಮಾತುಗಳಿಂದಾಱಿಸಱಿಯೆನೆಂಮುನಿವರ್ಗೆ ಮುರಾ ॥
ರಾತಿಯು ನೀತಿಯು ರೀತಿಯು ।
ನೀತೆಱವೊಳ್ ಬಿಱಿಗೆ ಬಿನ್ನವಿಸಿದಳ್ ಮತ್ತಂ ॥ ೪೩

ಬಡವನೆ ನೀನು ಏನೇನೇನು ಬಡವನೆ ನೀನು ।
ಈವುಸಿಗೊಡಬಡುವೆನೆ ನಾನು ॥ ಪಲ್ಲವಿ ॥

ಚ ॥ ಬಡವನೆನಿಸಿ ತೋಱು ಬಲ್ಲಿದನಾಗಿ ನಿಂ ।
ದಡಿಯುಲ್ಲಿ ಲೋಕವೆಲ್ಲವನಾಕ್ರಮಿಸುವೆ ॥ ೧ ॥

ಮುಗುದನೆ ನೀನು ಏನೇನೇನು ಮುಗುದನೆ ನೀನು ।
ಸಾಜವೆಂದು ಬಗೆವೆನೆ ನಾನು ॥ ಪಲ್ಲವಿ ॥

ಚ ॥ ಮುಗುದನೆನಿಸಿ ತೋಱು ಮೋಸಗೊಳಿಸಿ ಮೂ ।
ಜಗವನಡಸಿ ನುಂಗಿ ಚೆಲ್ಲಾಟವಾಡುವೆ ॥ ೨ ॥

ಸುಲಭನೆ ನೀನು ಏನೇನೇನು ಸುಲಭನೆ ನೀನು ।
ಇದಕೆ ಮನವೊಲಿವೆನೆ ನಾನು ॥ ಪಲ್ಲವಿ ॥

ಚ ॥ ಸುಲಭನೆನಿಸಿ ತೋಱು ಸೊಬಗುಗೋವಳನಾಗಿ ।
ಹಲವುಮಾನಿಗಳನು ಹರಿಹಿ ಮೆಯ್ಮಱಿಸುವೆ ॥ ೩ ॥ —೪—

॥ ರಾಗ—ಕಾಂಬೋಧಿ ॥

ಕಂದ ॥ ಬಡನೊಡನುಪಚಾರಂಗಳ ।
ನೊಡರಿಸುತ್ರೊಳ್ವಾತನಾಡುತೊಡಬಡಿಸುವ ಮೆ ॥
ಲ್ಲಡಿಗೆಱಗುವ ಗೋವಳನಂ ।
ನುಡಿದಳ್ ಮೆಲ್ಲಿಡಿದ ಕೋಂಕುನುಡಿಯೊಳ್ ಮತ್ತಂ ॥ ೪೮

ಗುಟ್ಟಿನೊಡನಿರು ಗೋಪಾಲ । ಸಾಕುಸಾಕಿನ್ನು (ಗುಟ್ಟಿನೊಡನಿರು ಗೋಪಾಲ) ॥ ಪಲ್ಲವಿ ॥

ಚ ॥ ಬಂದು ಕಜ್ಜದಿಂದಲಿ ನೀನೊಂದೆಡೆಯೊಳಿರ್ದೆಯುದ ।
ಹಿಂದ ಬಂದ ತಪ್ಪಾವುದೀಸಂದೇಹವೇಕೆ ಬಱದೆ ॥ ೧ ॥

ಆನು ನೀನೆಂಬ ಭೇದವನಱಿಯದಿರುವೆನ್ನೊಳು ।
ನೀನುಸರಿಪುದಿದು ನೀತನೆನಿಸಿ ತೋಱದು ॥ ೨ ॥

ಏನೆನಿದೆತ್ತಣ ಪಾಪವೇತಕಡಿಗೆಱಗುವೆ ।
ಗೋವಳರರಸ ನಿನ್ನ ಕೂಡೆ ಪ್ರೋಱಲಱಿಯೆನು ॥ ೩ ॥ —೫—

ರಾಗ ॥ ಮುಖಾರಿ ॥

ಕಂದ ॥ ಮಿಱುಗುವ ಮೆಯ್ಸಿರಿಗಮ*ರ್ದಾ ।
ಕುಱುಪುಗಳಂ ಸರಾಂಜಿನರಾಜಿ ಸರಾಯೆಗಳಿಂದಂ ।
ಮಱೆಮಱೆಯಿಸ ಗೋಪಾಲಕ
ರೆಱೆಯನೊಳಿಂಗನ್ನವಾತನು*ಸಿರ್ವಾಳ್ ಮತ್ತಂ ॥ ೪೯

ನಿನ್ನ ಬಿಡುವವಳೇ ನಾನು । ಗೋಪಾಲ ಕೇಳು ॥ ಪಲ್ಲವಿ ॥
ಚ॥ ಮಾಜಲೇಕೆ । ಯೆನಗೆ ಮಱೆಮಾಜಲೇಕೆ ।
ಬಾಜಿಸೆ ಕೊಳಲು ತಾಕಿತೆ ಬಣ್ಣದುಟಿಯು ॥
ಓಜೆಯುಚಿತವಾಗಿದೆ । ಯೆನ್ನಾಣೆ ಕೇಳೋಜೆಯುಚಿತವಾಗಿದೆ ।
ಸೋಜಿಗಗೊಂಡು । ಸೊಕ್ಕಿದೆ ಸೊರಗಿದೆ ಸೊಲ್ಲಿಸೆನ್ನೊಡನೆ ॥ ೧ ॥
ಆಡಲೇಕೆ । ಯಿನಿತು ಪುಸಿಯಾಡಲೇಕೆ ।
ಜಾಡಿದೆ ಪೆಸ್ಸಿರಿ ಪಸುಗಳಟ್ಟಳಿಯು ॥
ಈಡುಜೋಡಿಲ್ಲದಕೆ । ಯೆನ್ನಾಣೆ ಕೇಳೀಡುಜೋಡಿಲ್ಲದಕೆ ।
ಬೇಡನೀವಾಯು । ಬೆಚ್ಚದೆ ಬೆದಱದೆ ಪೇಳುನೆನ್ನೊಡನೆ ॥ ೨ ॥
ಮಾಯವೇಕೆ । ಯೆನ್ನೊಳು ಮಾಯಮಾಯವೇಕೆ ।
ಕಾಯದೊಳೇನು ಕಾನನದ ಮುಳ್ಮೊನೆಯು ॥
ಈಯಿರವಿಂಪಾಗಿದೆ । ಯೆನ್ನಾಣೆ ಕೇಳೀಯಿರವಿಂಪಾಗಿದೆ ।
ಆಯಿತಾಯಿತಂಜದೆಯಳುಕದೆಯಱುಹುಯೆನ್ನೊಡನೆ ॥ ೩ ॥ —೬—

ರಾಗ ॥ (ಇಂದು) ಘಂಟಾರವ ॥

ಕಂ ॥ ಮನವಿನಿಯನನನುನಯೋಕ್ತಿಯೊ ।
ಳಿನಿಸಿನಿಸುಂ ಮುನಿಸು ತಣ್ಪುಗೊಂಡಿರ್ಪತರೆ ಮಾ ॥
ನಿನಿ ಬಗೆಗಱಗುತೆ ಗೋಪಾ ।
ಲನ ಪಲವುಂ ಜಾಣ್ಮೆವಲೆಗೆ ಸಿಲ್ಕಿದಳೊಲವಿಂ ॥ ೫೦

ಎನ್ನನೊಡಂಬಡಿಸಲೇಕೆ ನಿನ್ನವಳು ನಾ ॥ ಪಲ್ಲವಿ ॥
ಚ॥ ಎನ್ನ ಮುನ್ನ ಭಾಗ್ಯಫಲವೆನ್ನ ಬೆನ್ನಬಿಡದಿರೆ ।
ನಿನ್ನೊಳು ತಪ್ಪೆಣಿಪುದು ನೀತವೆನಿಸಿರದು ॥ ೧ ॥

ಅಂದಿನ ಕಾಲದೊಳು ನಾವಂತು ಸಂತಸದೊಳಿರ್ದೆ ।
ವಿಂದಿನ ಕಾಲದ ಗುಣವಿಂತು ಬಂದುದೆಮಗೆ ॥ ೨॥

ಚಿಕ್ಕದೇವೇಂದ್ರವರದ ಚೆನ್ನಿಗ ಗೋಪಾಲರಾಯ ।
ಮಿಕ್ಕ ಮಾತೇನು ನಿನ್ನ ಮಿಗಿಲವಳಲ್ಲನೆಂದಿಗು ॥ ೩ ॥ —೭—

ಪ್ರಣಯಕಲಹ ಸಪ್ತಪದಿ ಸಂಪೂರ್ಣಂ.



## — ಸಪ್ತಪದಿ — VI

ಪಟ್ಟದಿಗೊಳ್ಪಿಸಂ ಪಗೆವರೊಳ್ಕಲಸಂ ಮಿಗೆ ಕೊಂಡು ಕಂಮುಕಂ ।
ಗುಟ್ಟಿದ ಮುನ್ನೆ ಬಲ್ಪಗೆಗಳಂ ತಲೆಗುಟ್ಟಿ ಸಮಂತು ದಟ್ಟಿಯಂ ॥
ಕಟ್ಟಿದ ಮುನ್ನಸೋ ಪರಿದು ಕಟ್ಟಿ ಪ್ರೊದಟ್ಟಿರಿದುರ್ಗವರ್ಗಮಂ ।
ನೆಟ್ಟನೆ ಚಿಕ್ಕದೇವನೆಸೆದಂ ಸಲೆ ಸತ್ಯಪರಾಕ್ರಮಾಂಕದಿಂ ॥ ೫೧

ಗಂಡರಗಂಡನುಶೌರ್ಯವರಮುಕ್ಕಳ ಗಂಡಬಿದಿರ್ಚ ಕೈಮುಕ್ಕೆ ।
ಕೊಂಡರ ಗಂಡನಾಡಿಸುದಿವಸ್ಪುದ ರಾಯರ ಗಂಡನಾಹವ್ರೋ ॥
ದ್ವಂಡರ ಗಂಡನೆಂಬ ಪಲವ್ರಂ ಬಿರುದುಂ ಚಿಕದೇವರಾಯನೊಳ್ ।
ಮಂಡಿತಮಾಗೆ ಮೊತ್ತಮೊದಲೊಂದಿನ ಸತ್ಯಪರಾಕ್ರಮಾಂಕದಿಂ ॥ ೫೨

ಮಾತನ ! ಈ ಜಾನಿಯ ಸಪ್ತಪದಿಯೊಳ್ ಶ್ರೀಕೃಷ್ಣನೊಳ್ ಬೆರಸಿ ಮೆಳವೆಣ್ಗಳ್ ತಂತಮ್ಮ ವೃತ್ತಾಂತಮಂ ಕೆಳದಿಯರೊಳ್ ಪೇಳ್ವ ನುಡಿಗಳ್ ನೆಮದಿಂದವನ ಗುಣಂಗಳಂ ಬಿರಿಪಿಸುವರ್.

ರಾಗ ॥ ಮುಖಾರಿ ॥

ಸಿಗೆಯ್ತ್ತಿಸಮ್ಮ । ನಸಿಪೆತ್ತಣ ಮಾಯನೆಂದಱಿಯೆನೆ ।
ಸಿಗೆಯ್ತ್ತಿಸಮ್ಮ । ನಾನೇಳಿಸಿ ಗುಣಾತುಗೆಯ್ಬುದೆಲ್ಲಾ ನೀರೊಳು ಬರೆದಂತಾದು ದಮ್ಮ ॥ ಪಲ್ಲವಿ ॥

ಚ॥ ಇಂದು ನಲ್ಲನಿಲ್ಲಿಗೆಯ್ದಿದೊಡೆನ್ನ ಕಣ್ಗಳೆಳಸಿದಂತೆ ।
ಅಂದಚೆಂದಗಳನಾರಯ್ದು ನೋಡುವೆನೆಂದಿರ್ದೆನಮ್ಮ ॥
ಬಂದೊಳಸೊಗದ ತೋಜದ ಮುನ್ನಮೆ ಮಬಂದೆ ನೆನೆದ ನೆನಪಿನೊಳ ।
ಗೊಂದಾವರು ತೋಜನಾದುದು ಕೇಳೆನ್ನಾ ದುದನೇನೆಂದುಸಿರುವೆನಮ್ಮ ॥೧॥

ಇಂದು ನಲ್ಲನಾಡುವ ನುಡಿಯೊಳೊಂದನುಱಿಯದಾಲಿಸಿಯಱಿವೃ ।
ಗುಂದದದಕೆ ಬದಲುನುಡಿವೆನೆಂದಿರ್ದೆನಮ್ಮ ॥
ಬಂದೊಳಂದನಿಱು ತೋಱಿದ ಮುನ್ನವೆ ಪಲವು ನೆನಹನೆಲ್ಲ ಮಱೆತು ।
ಬೆಂದ ನಾಲಗೆ ಮುದುಡುಗೊಂಡ ಬಗೆಯನಾನೆಂತು ಪೇೞುವೆನಮ್ಮ ॥ ೨ ॥

ಇಂದು ಚೆಲುವಗೋಪಾಲರಾಯನೆನ್ನೊಳೊಲಿದು ಲಾಲಿಸುವೆನಕ ।
ಕೊಂಡಕೊಂಡ ಬದಲುಗೆಯ್ವೆನೆಂದಿರ್ದೆನಮ್ಮ ॥
ಬಂದು ಕೆಯ್ಯ ಪಿಡಿಯದ ಮುನ್ನವೆ ಬಲಿತ ಮನದ ಬಿಗುಹು ಸಡಿಲಿ ।
ಮುಂದುದೋಱಿದೆ ಮೋಸಗೊಳಿಪ ಮೋಹಕಿನ್ನಾರಿಗೆ ಮೊರೆಗೆಯ್ವೆನಮ್ಮ ॥

—೧—

॥ ರಾಗ— ಕಾಂಬೋಧಿ ॥

ಮೋಹವೀಪರಿಯೊಳೆನ್ನ ಮುಂದುಗೆಡಿಸುತ್ತಿದೆ ;
ಊಹದನನಱಿಯೆನಾನೆಲ್ಲರಂತಿರ್ದೆನಮ್ಮ ॥ ಪಲ್ಲವಿ ॥

ಚ॥ ಬರವ ಕೇಳಿದೊಡನೆಯೆಂದನಿರವಿನೊಳಿರಲೀಸದು ।
ಭರದೊಳಿದಿರುಗೊಂಡು ಪಾದಪದ್ಮಕೆಱಗಲೀಸದು ॥
ಗರುವಕೆಱೆಯನೊತ್ತಿಗೆ ಸಾಜಗತಿಯೊಳೆಯ್ದಲೀಸದು ।
ಬಱಿದೆಯುವನ ಬಱಿಯು ನಿಂದು ಪದುಳವಡೆಯಲೀಸದು ॥ ೧ ॥

ಎಱಕಗೊಂಬುದಲ್ಲದೆ ಮುಂದಣೆಸಕವಣೆಸಲೀಸದು ।
ಅಱಿಕೆಗೂಡಿಯೊಂದು ನುಡಿಯನನಸೊಳಾವಲೀಸದು ॥
ಅಱಿವುಮಱೆಯಲ್ಲದೆಣಿಸದಂತೆ ನಡೆಯಲೀಸದು ।
ಕುಱಿತು ಮುದ್ದುಮೊಗವ ನೋಡಿ ಕಱುವುಗೊಳಿಸಲೀಸದು ॥ ೨ ॥

ಸುಗುಣನೆನಗುವೆಸಕವಱಿತು ಸೊಗಸುವಡಿಸಲೀಸದು ।
ಬಗೆಯೊಳಿರ್ದಂತೆ ಕೊಸಬುವಗೆಯ ಬಳಸಲೀಸದು ॥
ಬಿಗಿದ ತಕ್ಕೆ ಸಡಿಲಿ ಪೆಱತು ಬಿನದಗೆಯ್ಯಲೀಸದು ।
ಮೊಗದೊಳಿಟ್ಟ ಮೊಗವ ನೆಗಹಿ ಮುದ್ದುಮಾಡಲೀಸದು ॥ ೩ ॥ —೨—

॥ ರಾಗ—ಭೈರವಿ ॥

ಮನಸಿನ ದಾಹ ಬೇಱೆ । ಏಗೆಯ್ವೆನಮ್ಮ । ತನುವಿನ ದಾಹ ಬೇಱೆ ॥ ಪಲ್ಲವಿ ॥

ಚ॥ ಅವನ ಬಱಿಗೆ ಸುಱಿಯಲಮ್ಮದಳವ್ರಗುಂದಿಯಳುಕಿ ಬಳುಕಿ ।
ಬವಣಿಗೊಂಬ ಮೆಯ್ಯ ಸಜ್ಜ ಬಡಿಸಿದೆನಮ್ಮ ॥
ಅವನ ಪಡಿಮೊಗದಿ ನಿಲ್ಲಲಮರಿತೆಂಬುದಲ್ಲದೆ ।
ಲವಲಿಕೆಗೂಡಿಯುರ್ಬಿ ಲಳಿಮಸಗದೆಂತುಗೆಯ್ವೆ ॥ ೧ ॥

ಚ॥ ಇದೆ ಬಂದನರಸನೆಂಬೀನುಡಿಗೇಳ್ದೆ । ಬಿದಿಬೀದಿಯೊಳು ಪುರ್ಚು ಪೆಂಪುಗೊಂಡುರ್ಚಿ । ಸೊದೆಯುಂಡವೊಲು ಗಾಳಿ ಸೊಂಕಿದವೊಲು । ಬಿದಿರುವಡೆದವೊಲು ಬೆರ್ಚಿದವೊಲು । ಮದವೇಱಿದವೊಲು ಮರುಳಾದವೊಲು । ಹದನಿಱಿದವೊಲು ಹರವಸಗೊಂಡವೊಲು । ಮಾಗಮಂತ್ರಾವೇಶ ಮಾಡಲಿಟ್ಟವೊಲು ಮುದದ । ಮುನ್ನೀರೊಳು ಮುೞುಗಿ ತೇಲುತಿಪೆ ॥ ೧ ॥

ಒಱಿಸುಡಿಯುಲಿನ್ನ ಪ್ರಾಣವಲ್ಲಭನ । ಕಱಿಕು ನೋಡದ ಮುನ್ನ ಕೊಱಗಿತಿನ್ನೊಡಲು । ಮಱಿತೊಱಗಿದವೊಲು ಮರವಟ್ಟವೊಲು । ಬಿಱುಗುವಡೆದವೊಲು ಬಿಗಡುಗೊಂಡವೊಲು । ಅಱುವ್ರಗುಂದಿದವೊಲು ಅಳವೞಿದವೊಲು ತೆಱಸಱಿಯುದವೊಲು ಪಿಸಿಗೆಟ್ಟವೊಲು । ಪವಿವಡಸಿದವೊಲು ಪಾಡೞಿದವೊಲು । ತೊಱೆದಸ್ಯಚಿಂತೆಯು ನೊಕೇರ್ಱುತಿದೆ ॥ ೨ ॥

ಎಱೆಯು ಚಿಕ್ಕದೇವೇಂದ್ರನಿನ್ನ ಲಾಲಿಸಿದ ನೆರೆನೊಗನುಗನ್ನೆ ದರ್*ಪವನೆಯೊಳು । ನೆಱೆಸಿಕ್ಕಿದವೊಲು ಚಿತ್ರಿಸಿದವೊಲು । ಕರುವಿಟ್ಟೆಱೆದವೊಲು ಕಾಸಿ ಬೆಸ್ತವೊಲು । ಸರಿಗೊಂಡವೊಲು ಸರಗೂಳಿಸಿದವೊಲು । ಕೊಱೆದು ಕೊಂಡವೊಲೊಂದುಗೂಡಿದವೊಲು । ನಿಱುಗೆವಡೆದವೊಲು ನೆಲಸಿತೆಂಬವೊಲು । ತಱುಕಂದಾನಂದದ ತನ್ಮಯವಾಗುತಿದೆ ॥ ೩ ॥ —೨೯—

॥ ರಾಗ— ಶಂಕರಾಭರಣ ॥

ಇದಿ ನಾ ನೋಮುಫಲಮೆಯಂತಿ । ಯಿಂಗನೇಮಂದುನೆ ಪದಿನೇಳ್ಳೈ ನಾನೇ ನೆಂಚಿನ ಪಂತಮೀಡೇರದಮ್ಮ ॥ ಪಲ್ಲವಿ ॥

ಚ॥ ಅದನರೊವಾನಿ ಪೋಮು ಜೂಚಿನಂತಟನೆ ।
ಯದಲೊ ನೆಲಕೊಂನ ದಿಟವೆಂದೊಪ್ಪೋಯುನೆ ॥
ಚದರಕಮುದಿಗಟ್ಟಿಜೇಶಿಟಂತಲೋನೆ ।
ಮುದಮುನಕನುಗಾವ ಮುಂದುಗ ಪೋಸಬುಚ್ಚೆ ॥ ೧ ॥

ವೆಲದಿ ವಾನಿ ಪಲುಕುವಿನೇಟಂತಲೋನೆ ।
ಅಲುಕವೇಡಿಚೆಲ್ಲನಾರಿಪೋಯುನೆ ॥
ಚಲಮುವಿಡವಕ ನಾದಿಂಚಿಟಂತಲೋನೆ ।
ವೊಲಕನಪ್ಪುಲುಮುಂನುಗಾ ಪೋಸಬುಚ್ಚೆ ॥ ೨ ॥

ಚಿಕ್ಕನಿಗೋಪಾಲುನಿಜೆಂತಜೇರೇಟಂತಲೋನೆ ।
ವೆಕ್ಕಸಮ್ಮೈನವಿಗುವೆಂದೊಪ್ಪೋಯುನೆ ॥
ಅಕ್ಕರದಾಚುಕಅರಮರಶೇಯುಗ ।
ಅಕ್ಕರೋಸೇನಿನದಲಿಸುಪ್ಪುದೆ ಪೋಸಬುಚ್ಚೆ ॥ ೩ ॥ —೬—

|| ರಾಗ—ಮೋಹನ ||

ಕೆಳದಿಯಿದೇನು ಮಾಯು | ಕೇಳಿನ್ನೇನುಪಾಯು | ಸುಳಿಯುಲೊಡನೆ ಗೋಪಾಲರಾಯು ಸೊಕ್ಕುಗೊಳಿಪುದೆನ್ನ ಕಾಯು || ಪಲ್ಲವಿ ||

ಚ || ಮುರಿದೇಳ್ವುದು ನವಿರು | ಮೊಳೆವುದೊಡನೆ ಬೆಮರು |
ತರಹರಿಪುದೊಯ್ಯನುಸಿರು | ತಳೆವುದೆಚ್ಚೆಂಬ ಪೆಸರು || ೧
ಕದುಬುಗೊಂಬುದು ಕರಣ | ಕವಿವುದಂತಃಕರಣ |
ಗದಗದಿಪುದು ಕರಚರಣ | ಕರಗಿ ಕಾತರಿಪುದು ಹರಣ || ೨
ಬಳೆವುದೆರ್*ದೆಯು ಗೆಲವು | ಬಲಿವುದೊಡನೆ ನಲವು |
ಮುಳುಗಿ ತೇಲುತಿರ್ಪುದೊಲವು | ಮುಂದಣೆಸಕದೆಣಿಕೆ ಪಲವು || ೩ —೭—

ರೂಪಕತಾಳ ಸಪ್ತಪದಿ ಸಂಪೂರ್ಣಂ.



## — ಸಪ್ತಪದಿ — VII.

ಜಾಜಿಸಿ ಜಾಡ್ಯಮಂ ಜಡಕಮುರ್ಗಮನೆಬ್ಬಿಸೆ ಬಲ್ಸುರಂಗದಿಂ |
ಪೋಜಿದ ಕೋಂಟೆಯೊಳ್ಜರಿವೀರಭಟರ್ಸರಿದಬ್ಜಜಾಂಡಮಂ ||
ವಿಪಾಜಿಮ...ರಲೆಂದು ದಿವದಿಂದೊಡವಾಯ್ದು ವಿಮಾನವಾಹಕರ್ |
ದೂಜಿಪರಂದು ಸಿಂವ ಜನಲೋಕದೊಳಪ್ಪ್ರತಿಮಪ್ರತಾಪಮಂ || ೫೩

ಕೆವರ್*ಜ ಕಪರ್ದದಿಂ ತಿಸುಳಿ ಮುಪ್ಪೋಟಲೆಂದು ಕಸಲ್ದು ಪಾಯ್ವಿನಂ ||
ಕವಡಿದ ಕಣ್ಗಳಿಂ ಕಡುಗಿ ನಿಟ್ಟಿಸಿ ಬೆಟ್ಟುಗಳೆಂಮ ವಾಸವಂ ||
ಸಪಿವಿಸಮೊಬ್ದುವಾಜಡಕಮುರ್ಗದ ಪಾಸಜಿಗಳ್ ಸುರಂಗದಿಂ |
ಮುದಪೊಡಸಾಡುಪಪ್ರತಿಮನೊಳ್ಜಸದಾತಿರಿಕಲ್ಗಳೆಂಬಿನಂ || ೫೪

ವಚನ | ಇಂತಾಜುಂ ಸಪ್ತಪದಿಗಳೊಳ್ ಶ್ರೀಕೃಷ್ಣನ ಬಾಲ್ಯಕೌಮಾರಲೀಲೆಗಳುಮಂ ಯೌವನಾರಂಭಲೀಲೆಗಳುಮಂ ಭಾವಿಸಿ, ಈಪಿಜನೆಯ ಸಪ್ತಪದಿಯೊಳ್ ಶ್ರೀಕೃಷ್ಣನ ಕಲ್ಯಾಣಗುಣಂಗಳನನುಭವಿಸಿ ರುಕ್ಮಿಣೀಸತ್ಯಭಾಮೆಯರ್ಗಂ ದಿವ್ಯಸೂರಿಗಳ್ಗಮಾಳ್ವಾರುಗಳ್ಗಮಾಚಾರ್ಯರ್ಗಂ ಮಂಗಳಾಶಾಸನಂಗೆಯ್ಯುರ್.

॥ ರಾಗ—ಇಂದು ಘಂಟಾರವ॥ ತಾಳ—ಝಂಪೆ॥

ಸೊಗಸುಗೋಪಾಲನಿಗೆ ಶುಭಮಂಗಳಂ ।
ಜಗದೇಕಮೋಹನನಿಗೆ ಜಯಮಂಗಳಂ ॥ ಪ ॥

ಚ ॥ ಸಿರಿವೆತ್ತ ಮೆಲ್ಲಡಿಯ ಚೆಲ್ವಿಕೆಗೆ ಮಂಗಳಂ ।
ತೆರೆಮಸಗುವುಗುರ ಕಾಂತಿಗೆ ಮಂಗಳಂ ।
ಕರಮೆಸೆವ ಕಿಱುದೊಡೆಯ ಗಾಡಿಗಂ ಮಂಗಳಂ ।
ವಿಮಲಗುಡೊಡೆವೊಗರ ಸೇರುವೆಗೆ ಮಂಗಳಂ ॥ ೧

ಪೊಸದೇಸೆಯಿಂದುಟ್ಟ ಪೊಸ್ನಡುಗೆ ಮಂಗಳಂ ।
ಬಿಸಜದಿಂಡೆಸೆವ ನಾಭಿಗೆ ಮಂಗಳಂ ।
ಮಿಸುಪ ಕೆಂಬರಲಿಂದೆ ಮೆಱೆವೆರ್ದೆಗೆ ಮಂಗಳಂ ।
ಒಸೆದು ಧರಿಸಿದ ತುಳಸಿಯೊಳುಸರಕೆ ಮಂಗಳಂ ॥ ೨

ಚೆಲುವ ಪಾಱುಂಬಳೆಯ ಸಿಂಗರಕೆ ಮಂಗಳಂ ।
ಬಲಮುರಿಯ ಸಂಕದೊಪ್ಪಕೆ ಮಂಗಳಂ ।
ಉಲಿವ ಪೊಂಗೊಳಲ ಮೆಲ್ಲುಲಿಗಳಿಗೆ ಮಂಗಳಂ ।
ನಲಿನಲಿವ ಮಕರಕುಂಡಲಗಳಿಗೆ ಮಂಗಳಂ ॥ ೩

ಮುಗುಳುನಗೆ ಬಗೆಗೊಳುವ ಸೊಗಸಸಿಗೆ ಮಂಗಳಂ ।
ಪೊಗರುಗುವ ಕದಪಿನೋಜೆಗೆ ಮಂಗಳಂ ।
ಮಗಮಗಿಪಯುಸಿರ ಪರಿಮಳಕೆ ಮಿಗೆ ಮಂಗಳಂ ।
ಬಗಸೆಗಣ್ಗಳ ತಣ್ಪುವಗೆಗಳಿಗೆ ಮಂಗಳಂ ॥ ೪

ಸಕಲಲೋಕವ ಪೊರೆವ ಸೈರಣೆಗೆ ಮಂಗಳಂ ।
ಅಕಳಂಕಗುಣಸಮೂಹಕೆ ಮಂಗಳಂ ।
ಚಿಕದೇವರಾಯನಿಗೆ ಚಿಂತಿತಾರ್ಥವನೀವ ।
ಸುಕರಗೋಪಾಲನಿಗೆ ಶೋಭನಂ ಮಂಗಳಂ ॥ ೫

—೧—

॥ ರಾಗ—ಶ್ರೀರಾಗ॥ ತಾಳ—ಝಂಪೆ॥

ಸುಗುಣೆ ರುಕ್ಮಿಣಿಗೆ ಮಿಗೆ ಶುಭಮಂಗಳಂ ।
ಜಗದೀಶನೆಱೆಯಳಿಗೆ ಜಯಮಂಗಳಂ ॥ ಪಲ್ಲವಿ ॥

ಚ॥ ಅಡಿಗೆಱಗಿದರೊಳು ಬಳೆವಱ್ಕಱಿಗೆ ಮಂಗಳಂ ।
ಬಡವರಿಗೆ ಕುಡುವ ಭಾವಕೆ ಮಂಗಳಂ ॥
ಎಡೆವಿಡದೆ ಜಗದೊಳಿರುಪೆಱಕಕ್ಕೆ ಮಂಗಳಂ ।
ತಡೆಯದೆಲ್ಲೆಡೆಯೊಳಿಹ ತರಹರಕೆ ಮಂಗಳಂ ॥ ೧

ಶರನಿಧಿಯೊಳುದಿಸಿದತಿಶಯಕೆ ಮಿಗೆ ಮಂಗಳಂ ।
ಸಿರಿಪೆಸರುವಡೆದ ದೇಸೆಗೆ ಮಂಗಳಂ ।
ಸರಸಿಜೋದರದೊಳಿಹ ಸಂಗತಿಗೆ ಮಂಗಳಂ ।
ಹರಿಯೆರ್ದೆಯ ನೆಲೆಗೊಂಡ ಹರಿಸಕ್ಕೆ ಮಂಗಳಂ ॥ ೨

ತಕ್ಕರನು ಪೆರ್ಚಿಸುವ ದಾಯಕ್ಕೆ ಮಂಗಳಂ ।
ಮಿಕ್ಕುಮಿಗುವರಿವ ವೈಮೆಗೆ ಮಂಗಳಂ ।
ಚಿಕ್ಕದೇವೇಂದ್ರನಿಗೆ ಸಿರಿಯನೇಳ್ಗೆಗೊಳಿಪ ।
ಪೆಕ್ಕಳದೊಳೆಸೆವ ಪೊಸಪಸ್ನಣಕೆ ಮಂಗಳಂ ॥ ೩ —೨—

॥ ರಾಗ—ಕಾಂಬೋಧಿ ॥ ತಾಳ—ಝಂಪೆ ॥

ಸತ್ಯಭಾಮೆಗೆ ಸಕಲಜಯಮಂಗಳಂ ।
ಪ್ರತ್ಯಂತಲೋಚನೆಗೆ ಶುಭಮಂಗಳಂ ॥ ಪಲ್ಲವಿ ॥

ಚ॥ ಇನಿಯನನುಸರಿದೆಸಗುವಿಚ್ಛಕಕೆ ಮಂಗಳಂ ।
ಮನಮಚ್ಚುಗೊಳಿಪ ಸೇಮಕೆ ಮಂಗಳಂ ।
ಇನಿದುಗುವ ತೆಳಿವ ನುಡಿಪೆಚ್ಚುಳಿಗೆ ಮಂಗಳಂ ।
ಅನುಸರಿಸಿ ನಡೆವ ಬಗೆಗಾಪಗಂ ಮಂಗಳಂ ॥ ೧

ಮುಸಿದಿನಿಸು ಪೊಗದೆಸೆವ ಮುಖಕಕ್ಕೆ ಮಂಗಳಂ ।
ಕಿನಿಸುನೋಟಗಳ ಕೊಂಕಿಗೆ ಮಂಗಳಂ ।
ಬಿನದದೊಳು ಮೂದಲಿಪ ಬಿನ್ನಣಕೆ ಮಂಗಳಂ ।
ಅಸಿತಮೊಳು ಬಗೆಗರಗುವಬ್ಬಿಗೆ ಮಂಗಳಂ ॥ ೨

ಒಡವೆರೆದು ಹರಿಯನೊಲಿಪೊಯ್ಯಾರಕೆ ಮಂಗಳಂ ।
ಎಡದೆಸೆಯ ಸೇರಿದಿರವಿಗೆ ಮಂಗಳಂ ।
ಎಡೆವಿಡದೆ ಚಿಕ್ಕದೇವೇಂದ್ರನಿಗೆ ಜಯವೀವ ।
ಪೊಡವಿವಡೆದಿಯ ದರೆಯ ಪೊಸವನಗೆಗೆ ಮಂಗಳಂ ॥ ೩ —೩—

॥ ರಾಗ—ಕಲ್ಯಾಣಿ ॥ ಆದಿತಾಳ ॥

ಸೇನಾನಾಥನಿಗೆ ಶ್ರೀಮಂಗಳಂ ।
ಶ್ರೀನಾಥಸಂತರಂಗಸೇವಕಗೆ ಮಂಗಳಂ ॥ ಪಲ್ಲವಿ ॥

ಚ॥ ಪರವಾಸುದೇವನಲ್ಲಿ ಪರಮಹರ್ಷದೊಳಿರೆ ।
ಪರಿಪರಿ ಸೇವೆಗೆಯ್ವ ಪದುಳಕೆ ಮಂಗಳಂ ॥ ೧
ನಳಿನಾಕ್ಷನಾರೊಗಿಸಿ ನಲವಿನಿಂದ ಬಿಡುವ ।
ತಳಿಗೆ ಪ್ರಸಾದಗೊಂಬ ಧನ್ಯತೆಗೆ ಮಂಗಳಂ ॥ ೨

ತಡೆಯಿಲ್ಲದೆ ಮುಕ್ತಿಗೆ ದಾಱಿದೋಱಿಸಲೆಂದು ।
ಶಠಕೋಪನಿಗೊಲಿದ ಸಂಪದಕೆ ಮಂಗಳಂ ॥ ೩ —೪—

॥ ರಾಗ—ಪಂತುವರಾಳಿ ॥ ತ್ರಿಪುಡೆ ತಾಳ ॥

ಮಂಗಳಂ ಮಿಗೆ ಮಂಗಳಂ ॥ ಗರುಡನಿಗೆ ॥ ಪಲ್ಲವಿ ॥

ನಳಿನಾಕ್ಷನ ಪಱಿಗೆಳೆಯನೂಱಿಗದವ ।
ಪಱಿಯಿಗೆ ಬಿಜ್ಜಣ ಪಟ್ಟವಹೆ ।
ಒಳುದೇರೆನಿಸಿಯುನ್ನತಿವಡೆದೊಪ್ಪುವ ।
ಪಱಿನುಡಿಯೊಡಲಿನ ಪಕ್ಕಿಗೆ ॥ ೧

ಮಂಗಳಂ ಮಿಗೆ ಮಂಗಳಂ ॥ ಮಹಾಶೇಷನಿಗೆ ॥ ಪ ॥

ಚ ॥ ವಾಸುದೇವಗೆ ನಲ್ವಣೆ ಪಾವುಗೆ ಮೆ ।
ಲ್ವಾಸಿಗೆ ಸತ್ತಿಗೆ ಬಣ್ಣದುಡೆ ।
ಈಸಕಲಾಕೃತಿಯಿಂದೊಳ್ಗೆಯ್ದಡ ।
ವಾಸನೆಯಿಱಿಯದ ಪಾವಿಗೆ ॥ ೨

ಮಂಗಳಂ ಮಿಗೆ ಮಂಗಳಂ ॥ ಪರಕಾಲನಿಗೆ ॥ ಪ ॥

ಚ ॥ ನುಡಿನುಡಿಯೊಳು ಜೇನುಗುವೊಲು ಮಾಧವ ।
ನಡಿಗಳ ಮೈಮೆಯುನಱುಹಿದಗೆ ।
ತಡೆದು ನಿಲಿಸಿ ಬಾಳ್ಗಡಿತದ ಬಲ್ಮೆಯೊ ।
ಳೊಡನೆ ಮಂತ್ರವ ಕೊಂಡುತ್ತಮಗೆ ॥ ೩ —೫—

॥ ರಾಗ—ಭೈರವಿ ॥ ಅಟ್ಟತಾಳ ॥

ಶಠಕೋಪಯೋಗಿಗೆ ಮಂಗಳಂ । ಹರಿ ।
ಯಡಿಯ ಪಾವುಗೆಗೆ ಮಂಗಳಂ ॥ ಪಲ್ಲವಿ ॥

ಚ ॥ ವಕುಳಾಭರಣಗೆ ಮಂಗಳಂ । ವೈಷ್ಣವರೆಜಿಯಗೆ ಮಂಗಳಂ ॥
ಅಕಳಂಕಚರಿತಗೆ ಮಂಗಳಂ । ಆದಿದೇಶಿಕನಿಗೆ ಮಂಗಳಂ ॥ ೧
ಸೇನೇಶದಾಸಗೆ ಮಂಗಳಂ । ಸೇವಕಪಾಲಗೆ ಮಂಗಳಂ ।
ಮಾನಿತಚರಿತಗೆ ಮಂಗಳಂ । ಮಧುರಕವೀಂದ್ರಗೆ ಮಂಗಳಂ ॥ ೨
ಕುರುಕಾಪುರೀಶಗೆ ಮಂಗಳಂ । ಗುಣಗಣನಿಳಯಗೆ ಮಂಗಳಂ ।
ಕರುಣಾನಿವಾಸಗೆ ಮಂಗಳಂ । ಕಾರಿಕುಮಾರಗೆ ಮಂಗಳಂ ॥ ೩ —೬—

॥ ರಾಗ—ಮಧುಮಾಧವಿ ॥ ಅಟ್ಟತಾಳ ॥

ಮಂಗಳಂ ಶುಭಮಂಗಳಂ ।
ಮಂಗಳಮೆಂಬಿರುಮಾನಾರಿಗೆ । ಜಯ ॥ ಪಲ್ಲವಿ ॥

ಚ॥ ಅಹಿರಾಜನಂಶನೆಂದನಿಬರುಮಱಿವಂತೆ।
ಮಹಿಯೊಳುದಿಸಿದಗೆ ಮಂಗಳಂ।
ಸಹಜಗುಣಗಳಿಂದೆ ಜಗದೊಳೇಱಿಗೆವೆತ್ತ।
ಮಹನೀಯಚರಿತಗೆ ಮಂಗಳಂ॥೧
ಶ್ರುತಿವಿಪರೀತವ ಸೊಲ್ಲಿಪ ವಿವಿಧಕು।
ಮತಿಗಳ ಗೆಲಿದಗೆ ಮಂಗಳಂ।
ಸ್ತುತಿಸೆ ವೈದಿಕದಿವ್ಯಸೂರಿನಿವಹಸ।
ನ್ಮತವ ಬಳಸಿದಗೆ ಮಂಗಳಂ॥೨
ಅನತರಿಗೆ ವೇದಾಂತವಱಿಹಿ ಪರ।
ಮಾನಂದವಡೆದಗೆ ಮಂಗಳಂ।
ಶ್ರೀನಾಥನೊಲುಮೆಯ ಸೇವಕನೆನಿಪ ರಾ।
ಮಾನುಜಾಚಾರ್ಯಗೆ ಮಂಗಳಂ॥೩ —೭—

ಮಂಗಳ ಸಪ್ತಪದಿ ಸಂಪೂರ್ಣಂ.



ಗಡಿ ಮೂಡಲ್ ತೊರೆಯೂರನಂತಗಿರಿಗಳ್ ಧಾರಾಪುರಂ ತೆಂಕಲಾ।
ಪಡುವಲ್ ಬಲ್ವಗೆಬಂದಿಗಾಱ ವಸುಧಾರಾಭಿಖ್ಯೆಯೂರ್ಮತ್ತಮಾ॥
ಬಡಗಲ್ತಾಂ ಪುಳಿಯೇಱುಗುಂಡುಮಲೆಗಳ್ ನೀನಾಳ್ವ ದೇಶಕ್ಕೆ ಮೇರ್।
ಗಡಿ ನಾಲ್ಕುಂ ಕಡಲೊಳ್ಜಸಕ್ಕೆ ಸರಿಯೇ ನಿನ್ನೇಱಿಗಿನ್ನೆಲ್ಲಿಯುಂ॥ ೫೫
ಕ್ಷ್ವೇಳಾರಾವದೆ ಸೇರೆಯಂ ಪಟಪಥತ್ಕಾರಂಗಳಿಂ ಜೆಂಗಳೂರ್।
ಧೂಳೀಪುಂಜದೆ ಚೆಂಜಿದಂಡೆಸಲೊಡಂ ಪಾಂಡ್ಯಾವನೀಮಂಡಲಂ॥
ಚೋಳೋರ್ವೀತಲಮೆಯ್ದೆ ಬಾಳ ಪೊಳಪಿಂಗಾಳಾದುದಂದಂದೆ ತಾಂ।
ಪೇಱೇಂ ಕಾಳೆಗದೊಳ್ಪದಕ್ಕೆ ಚಿಕದೇವಾ ಬಲ್ಲರೊಳ್ ಬಲ್ಲಹಾ॥ ೫೬

॥ ಲಯಗ್ರಾಹಿವೃತ್ತ ॥

ಅಂದಿನದಿನಕ್ಕೆ ಭಯದಿಂದೆ ಮಣಿದಿರ್ದ ನೃಪ
ಬೃಂದಮನಿತುಂ ಧರದೊಳೊಂದುವೆರೆದೊಳ್ಪಿಂ।
ಸಂದಿಸಿ ಶಿವಾಜಿಗನುವಿಂದೊರೆದು ಮರ್ಗಮನ।
ಮಂದಿರೊಡಗೂಡಿಯುವನಂದು ಕವಡಿಂದಂ॥
ಸಂದಣಿಪ ಕಾಳೆಗದೊಳೊಂದಿಸಿ ಮುಂಬರಿಯೆ
ಬಂದೆಱಗಿ ಪಾವುಗಳ ಗೊಂದಣದೆ ವಿಷ್ವ।

ಸ್ವಂದನವ ಮಾಣಿಕ್ಯದೊಳೆ ಕೆಂದು ಕೊಳೆಯಾಡಿದಳ
ವಿಂದೆ ಚಿಕದೇವನೃಪಸಿಂಹ ಸೊಗವಾಳ್ದಂ ॥ ೫೩

॥ ಗದ್ಯ ॥

ಇದು ಸಕಲಜಗದುದಯವಿಭವಾದಿಲೀಲನುಂ, ಲಕ್ಷ್ಮೀಲೋಲನುಂ, ಅಖಿಲಹೇಯಪ್ರತ್ಯನೀಕನುಂ, ಅಪ್ರಾಕೃತಪ್ರತೀಕನುಂ, ಅವಾಪ್ತಸಮಸ್ತಕಾಮನುಂ, ಅನಂತಕಲ್ಯಾಣಗುಣಗಣಾರಾಮನುಂ, ನಾರದಭವಪೂಜಿತನುಂ, ಸನಕಮುನಿನಿಭಾಜಿತನುಂ, ಯದುಗಿರಿಶಿಖರಾಲಂಕಾರನುಂ, ಯತಿರಾಜಸಂಪತ್ಕುಮಾರನುಂ. ಆಶ್ರಿತರಕ್ಷಾಪರಾಯಣನುಮಪ್ಪ ಯಾದವಗಿರಿನಾರಾಯಣನಡಿದಾವರೆಯುಗಗದೊಳ್ ಬಳೆದೇಱಿವಳೆದ ಯಾದವಕುಲೋದ್ಧಾರಕನುಂ, ಶುಭಗುಣೋದ್ಧಾರಕನುಮಾದ ದೇವರಾಜನೃಪಾಲಪೌತ್ರನುಂ, ಅತ್ರಿಗೋತ್ರಪವಿತ್ರನುಂ, ದೊಡ್ಡದೇವರಾಜ ಗರ್ಭಾಂಬುಧಿಕಲಾಧರನುಂ, ಸಕಲಕಲಾಧರನುಂ, ಅಶ್ವಾರೋಹಣಕಲಾರೇವಂತನುಂ, ಗಜಾರೋಹಣಮಘವಂತನುಂ, ಅಸ್ತ್ರವಿದ್ಯಾಭೃಗುರಾಮನುಂ. ಅಪ್ರತಿಮಧಾಮನುಂ, ಕರ್ಣಾಟಭೂಮಂಡಲಾಧೀಶನುಂ, ದೇವಸಂಕಾಶನುಂ. ಪಶ್ಚಿಮರಂಗಪುರಸಿಂಹಾಸನಾಧಿಷ್ಠಿತನುಂ. ಸುಪ್ರತಿಷ್ಠಿತನುಂ. ದೇವಬ್ರಾಹ್ಮಣ ಪರಿಪಾಲನೈಕಾಸ್ತನುಂ. ಸಕಲಪ್ರಜಾಕಾನ್ತನುಂ. ಅಸಕೃದಾವರ್ತಿತಷೋಡಶಮಹಾದಾನನುಂ, ಆಶ್ರಿತಸರ್ವಶ್ರೇಯೋನಿಧಾನನುಂ, ರಸಿಕಜನಕರ್ಣರಸಾಯನೀಕೃತಸಂಗೀತವಿಸ್ತರನುಂ, ಸಾಹಿತ್ಯವಿದ್ಯಾನಿಕಷಪ್ರಸ್ತರನುಂ. ಪೂರ್ವದಿಗ್ವಿಜಯಯಾತ್ರಾವಿತ್ರಾಸಿತ ಚೇದಿಮಂಗಳೋಪಾನ್ತ ಕಾನ್ತಾರೋಪಗೂಢವ್ಯೂಢಸೇನಾಭಿಗುಪ್ತಪಾಂಡ್ಯಸೇನಾಧಿಪ ಸಂಗರಕಿರೀಟ ವೆಂಕಟಕೃಷ್ಣಶಿಬಿರಸರ್ವಸ್ವಹರಣಸಮಸಮಯಸಮಾಕ್ರಾನ್ತ ಮಳಲಿ ಪನಮತ್ತಿಶಾಲೆಯ ಚೇದಿಮಂಗಲ ಕೆಂಗು ಧಾರಾಪುರಾದಿ ಪಾಂಡ್ಯನೃಪದುರ್ಗಮದುರ್ಗಸ್ತೋಮನುಂ. ಸಂಗರಭೀಮನುಂ. ಉದ್ವೃತ್ತಸುರತ್ರಾಣಕಮಾವಿಕ್ಷೋಭಣವಿಚಕ್ಷಣವಿಕಟಮರಾಟ ಶಿವಾಜಿವಾಜಿಸೇನಾಧಿಪ ಜಯತಜಿಕಾಟಕರ ದಾದಜಿಕಾಕಡ ಪ್ರಮುಖರಕ್ತಸಾಳೋಚ್ಛಲದ್ರಕ್ತಧಾರಾಸಿಕ್ತಕೃಪಾಣಸಂದರ್ಶನಭೀಲಿಸಹರಜಿ ಸಂತಜಿ ಮುಖ್ಯಮಹಾರಾಷ್ಟ್ರನೃಪಪ್ರವೇಕನುಂ, ಅಪ್ರತ್ಯನೀಕನುಂ, ಗಂಭೀರೋದ್ಧತಪರಿಘಾವರಣಭೀಷಣಶತಘ್ನೀ

ಶತಸಂಕುಲಮತ್ತ ವಾರಾವಳೀಸೇನಾವಳೀವರ್ಮಿತಧರ್ಮಪುರೀಪ್ರಸಭಾಕ್ರಮಣ ಶ್ರಮಣನಿರ್ಜನೀಕೃತ ಕೆಂಗೇರಿ ವಾಮಲೂರು ಜೇವುಹಳ್ಳಿ ಬೈರನೆತ್ತ ಕುನ್ನತ್ತೂರ್ ಮುಖ್ಯದುರ್ಗವರ್ಗನಿರಾಯಾಸಾಕ್ರಮಣನಿರ್ವೃತನಿಜಸ್ವೈನಿಕಸಮೂಹನುಂ. ಉಪವಕಲಾಶ್ವೇತವಾಹನನುಂ, ದಕ್ಷಿಣದಿಗ್ವಿಜಯಯಾತ್ರಾವಿತ್ರಾಸಿತ ಪಲಾಯಿತ ಪಾಂಡ್ಯಬಲಾನುಧಾವನಶ್ರಾನ್ತ ನಿಜಬಲವಿಶ್ರಾನ್ತಿ ಸ್ಥಾನೀಕೃತಜಲಧಿವೇಲಾತನಾಲಾರಣ್ಯನುಂ, ಆನತಜನಶರಣ್ಯನುಂ, ಪಶ್ಚಿಮದಿಗ್ವಿಜಯ ಪ್ರಸ್ತಾನಭೇರೀರವಾಕರ್ಣನಸಂಭ್ರಾನ್ತದುರ್ದಾನ್ತ ಹುಶಾನಖಾನಸನಾಥ ಕೇಳದಿನೃಪ ಸಮರ್ಪಿತ ಸರ್ವಸ್ವನಿರ್ವಾಪಿತಕೋಪನುಂ, ಅಮಿತಪ್ರತಾಪನುಂ, ಉತ್ತರದಿಗ್ವಿಜಯಸಮಯಾಭಿಯಾತ ಕುತುಪಶಾಹ ವಾಹಿನೀವಿಮರ್ದನ ಕ್ಷಣಾಕ್ರಾಂತ ಕಂಡಿಕೆರೆ ಚಿಕ್ಕನಾಯಕನಹಳ್ಳಿ ಹೊನ್ನವಳ್ಳಿ ಸಾರತವಳ್ಳಿ ತುಜುಗೆರೆ ಪ್ರಮುಖದುರ್ಗ್ರಹಪ್ರಾಕಾರವಾರನುಂ, ಅಸಹಾಯಶೂರನುಂ, ಜಡಕನದುರ್ಗಪತಾಪಗ್ರಹಣವೇಳಾನಿಖಾತಸುರಂಗಮುಖಾನಲೋತ್ಕ್ಷಿಪ್ತಗಂಡೋಪಲಪಾತನಿರುದ್ಧ ಬಿಜ್ಜವರ ಮದ್ದಗಿರಿ ಚೆನ್ನರಾಯದುರ್ಗ ವೀರಣದುರ್ಗಾದ್ಯಸಂಖ್ಯದುರ್ಗವರ್ಗಾಕ್ರಮಣಾವಸರಾವನತಸಾಮಂತನೃಪಾಲಮೌಳಿಮಣಿಘೃಣೀನೀರಾಜಿತಪದರಾಜೀವನುಂ, ಮಹಾನುಭಾವನುಂ, ಸಾಹಜಿಮುಖಮರಾಟನೃಪರಾಜಧಾನೀಕೃತಾಭಂಗುರಬೆಂಗಳೂರ್ ಹರಣನಿಷ್ಪ್ರಾಣಿತ ಶಂಭುಜಿ ಸಾಹಜಿ ಸಂತಜಿ ಹರಜಿ ಪ್ರಮುಖ ಮಹಾರಾಷ್ಟ್ರನೃಪಾಲಜಾಲನುಂ, ರಿಪುಕುಲಕಾಲನುಂ, ಸಂಗ್ರಾಮರಾಮನುಂ, ಸಾಹಸೋದ್ದಾಮನುಂ, ಪ್ರೌಢಪ್ರತಾಪನುಂ, ಪ್ರಕಟಿತಾಟೋಪನುಂ, ಅಮಿತಪರಾಕ್ರಮನುಂ. ಅಭೇದ್ಯವಿಕ್ರಮನುಂ, ಕರ್ಣಾಟಚಕ್ರವರ್ತಿಯುಂ, ಕಲ್ಯಾಣಕೀರ್ತಿಯುಂ. ಲೋಕೈಕವೀರನುಂ. ವೀರರೊಳ್ಗಂಡನುಂ, ಗಂಡರೊಳ್ಗಂಡನುಂ, ಅಂತೆಂಬರ ಗಂಡನುಮೆನಿಸಿ ನೆಗಳ್ದ ಶ್ರೀಮದಪ್ರತಿಮವೀರನರಪತಿ

ಶ್ರೀ ಚಿಕದೇವಮಹಾರಾಜ ವಿರಚಿತಮಪ್ಪ ದಿವ್ಯಪ್ರಬಂಧಂಗಳೊಳ್

ಶ್ರೀ ಗೀತಗೋಪಾಲ ಮಹಾಪ್ರಬಂಧದೊಳ್

ಪೂರ್ವಭಾಗಂ ಸಂಪೂರ್ಣಂ.



॥ ಶುಭಮಸ್ತು ॥

# ಶ್ರೀ ಗೀತಗೋಪಾಲೋತ್ತರಭಾಗಂ.



ಕಂದ ॥ ಶ್ರೀರಮಣನಖಿಲಸದ್ಗುಣ |
ವಾರಿಧಿಯಾನಂದಮಯವಿನೂನೋದರವಿ ॥
ಸ್ಫಾರಿತರೂಪಂ ಯದುಗಿರಿ |
ನಾರಾಯಣನಾಳ್ದನಕ್ಕೆ ನರಪತಿಗನಿಶಂ ॥ ೧

ಆನಂದೈಕರಸಂ ಸಮಸ್ತಜಗದಾನಂದಂಗೆ ಚಕ್ರಾಯುಧಂ |
ಸೇನಾಚಕ್ರವಿಮರ್ದಿತಾಹಿತಮಹೀಚಕ್ರಂಗೆ ವೈಕುಂಠನ ॥
ಸ್ವಸ್ಸೋಪಾಯವಿಕುಂಠಿತಾರಿಧರಣೀಭೃದ್ದುರ್ಗವರ್ಗಂಗೆ ಲ |
ಕೈಟ್ರೀನಾರಾಯಣಸೇವಕಕ್ಕೆ ಚಿಕದೇವೇಂದ್ರಂಗೆ ಸಾಮ್ರಾಜ್ಯಮಂ ॥ ೨

ಜಡಕನ ದುರ್ಗದಿಂ ನೆಗೆವ ಪಾಸಱೆಗಳ್ ತಡೆಗಟ್ಟಿ ಬಟ್ಟೆಯಂ |
ಕೆಡಪ ಕುಮಾರರಾಣತಿಯಿನೆಂದಿಪರೊಳ್ ಬಱಿವತ್ತೊ ಬಿಂಜಮಂ ॥
ದೆಡಬಲದತ್ತ ಸುತ್ತ ವಿನಮಾಱಿಯೊಱೆದ ವೈರಿವೀರರಂ |
ಸುಡಿಸೆ ಪ್ರೊದಟ್ದ ಯುದ್ಧಗರುಡಧ್ವಜಸುದ್ಧತಿಗೆತ್ತಸಂದಿಸಂ ॥ ೩

ಬಡಲೊಡನೊರ್ವನಂ ದಿನಮನೇಱಿಸಿದಾಕುಶಿಕಾತ್ಮಜಂಗದೇಂ |
ಬಿಡಯಮೆ ಸಾಕು ಸಿಕ್ಕೆ ಚಿಕದೇವನೃಪಾಲವರಂ ಸುರಂಗದಿಂ ॥
ಜಡಕನ ದುರ್ಗದೊಪ್ಪೊಗದ ಕೋಂಟೆಯನೇಱಿದ ವೀರರೊಜ್ಜಿನೇ |
ಅಡರಿಸಿದಂ ದಿನಕ್ಕಮಮ ಸೈ ಮಹಿಮಾ ಭಳಿ ಸ್ತೋತು ಭಾಸ್ವರೇ ೪

ವಚನ ॥ ಇಂತು ಶ್ರೀಗೀತಗೋಪಾಲಮಹಾಪ್ರಬಂಧದೊಳ್ ಪೂರ್ವಭಾಗದೊಳಂ ಸಪ್ತಪದಿಗಳೊಳ್ ಗೋಪಿಕಾವೃತ್ತಾಂತನಿರೂಪಣವ್ಯಾಜದಿಂ ಭಗವದ್ಗುಣಂಗಳನನುಭವಿಸಿ, ಈಯುತ್ತರಭಾಗದೊಳಂ ಸಪ್ತಪದಿಗಳೊಳ್ ಗುಣಾನುಭವಂ ಎಡೆವಿಡದೆ ದೊರೆಕೊಂಬ ಮೋಕ್ಷಮಂ ಸಾಧಿಪುದಕ್ಕೆ ಉಪಾಯಮಪ್ಪ ಪ್ರಪತ್ತಿಸ್ವರೂಪಮಂ ನಿರೂಪಿಸುವೆಂ. ಇದಱೊಳೂ

ಮೊದಲ ಸಪ್ತಪದಿಯೊಳ್ ತಾಂ ಪ್ರಸಕ್ತಿಗೆಯ್ದ ದೇವತೆಯುಂ ಗುರುಪರಂಪರೆಯೊಡನೆ ನುತಿಗೆಯ್ದರ್. ಇದಱೊಳೊಮೊದಲ ಪಂಚಪದಿಯೊಳ್ ತಮ್ಮ ಯದುಕುಲದೇವತೆಯಪ್ಪ ಯಾದವಗಿರಿನಾರಾಯಣನ ಕಲ್ಯಾಣಗುಣಂಗಳನನುಭವಿಸಿಯುವರ್ಕೆ ಮಂಗಲಾಶಾಸನಂಗೆಯ್ದರ್.

॥ ರಾಗ—ಯರಕಲಕಾಂಬೋಧಿ ॥ ಆದಿತಾಳ ॥

ಮಂಗಳಂ ತಿರುನಾರಾಯಣನಿಗೆ । ಮಿಗೆ ಮಂಗಳ ಯದುಗಿರಿನಿಲಯನಿಗೆ ॥ಪಲ್ಲ॥

ಚ॥ ತಾನೊಲಿದರ್ಚಾವತಾರವಡೆದು ಚತು
ರಾನನಲೋಕದೊಳವತರಿಸಿ ।
ಆನಂದಮಯವೆನಿಪತಿಶಯವೆಸರ ವಿ
ಮಾನಮಧ್ಯದಿ ನಿಂದ ಮಹನೀಯಗೆ ॥ ೧

ವನಜಸಂಭವನ ಭವನದೊಳು ಬಹುಕಾಲ
ವನುಪಮದಿವ್ಯಾರ್ಚನೆವಡೆದು ।
ಸನತುಕುಮಾರನ ಸಂಗಡ ಬದರಿಯ
ಬನದೆಡೆಗೆಯ್ತಂದ ಭವ್ಯನಿಗೆ ॥ ೨

ಪಲವಗೆ ಪೂಜಿಪ ಬದರಿನಾರಾಯಣ
ನೊಲಿದು ಮುನಿಗಳು ತನ್ನೊಡನೆ ಬರೆ ।
ಕಲಿಕಲುಷವನೆಲ್ಲ ಕಳೆವ ಯಾದವಗಿರಿ
ನಿಲಯದಿ ನೆಲಸಿದ ನಿರುಪಮಗೆ ॥ ೩

ಆದಿವಿಡಿದು ದತ್ತಾತ್ರೇಯ ರಾಘವ
ಯಾದವ ರಾಮಕೃಷ್ಣಾದಿಗಳು ।
ಪಾದವಂದನೆಗೆಯ್ದು ಭಜಿಸೆಯುವರ ಪೊರೆ
ವಾದಿದೇವನಿಗಂಬುಜಾಕ್ಷನಿಗೆ ॥ ೪

ರಾಮಾನುಜಮುನಿರಾಜ ಭೂಮಿಪರೊಳು
ಪ್ರೇಮವ ಮಿತಿಮೀಱಿಬಳಸಿದಗೆ ।
ಶ್ರೀಮಂತನಿಗೆ ಮಿಗೆ ಚಿಕದೇವರಾಯಗೆ
ಕಾಮಿತಾರ್ಥವನೀವ ಗರುವನಿಗೆ ॥ ೫

—೧—

ವಚನ ॥ ಈಯೆರಡನೆಯ ಪಂಚಪದಿಯೊಳ್ ಮುಂ ತಮ್ಮ ಕೂಟಸ್ಥರ್ ದ್ವಾರಕಾನಗರದಿಂ ಕರ್ಣಾಟಕಕ್ಕೆ ಬಂದು ಮೊತ್ತಮೊದಲ್ ತಾವುಗೊಂಡುದಱಿಂ ತಾಯ್ವನೆಯೆನಿಪ ಮಹೀಶೂರನಗರಕ್ಕೆ ಅಧಿದೇವತೆಯಪ್ಪ ಲಕ್ಷ್ಮೀನಾರಾಯಣಂಗೆ ಮಂಗಳಾಶಾಸನಂಗೆಯ್ದರ್.

॥ ರಾಗ—ಮಧುಮಾಧವಿ ॥ ಅಟ್ಟತಾಳ ॥

ಮಂಗಳಂ ಲಕ್ಷ್ಮೀರಮಣಗೆ । ಮಿಗೆ ಮಂಗಳ ಮಹಿಶೂರಪುರವಾಸಗೆ ॥ ಪ ॥

ಚ ॥ ಸಿರಿರಾಣಿಯೊಡಗೂಡಿ ಶೇಷಪೀಠದೊಳು ಕ
ಟ್ಟರಸುತನದೊಳೆಸೆವನಘನಿಗೆ ।
ಪರವಾಸುದೇವಗೆ ಭಕ್ತರಸಾನಂದ
ಪರವಶಗೊಳಿಸುವ ಭವ್ಯನಿಗೆ ॥ ೧
ಅಮಿತಗುಣಾಢ್ಯನಿಗಂಬುನಿಧಿಯೊಳಱು
ವಮರಿರೆ ನಿದ್ದೆಗೆಯ್ವಚ್ಯುತಗೆ ।
ಅಮರರ ಮೊಱೆಗೇಳಿ ಅಸುರರೇಳಿಗೆಯನು
ಶಮನಗೊಳಿಸಿ ತೋರ್ಪ ಚದುರನಿಗೆ ॥ ೨
ಸುಗುಣರ ಮನ್ನಿಸಿ ವಿಗಡರ ಮುಗ್ಗಿಸಿ ।
ಬಗೆಗೊಳೆ ಧರ್ಮವ ಬಲಿಸಿದಗೆ ।
ಯುಗಯುಗದೊಳು ಪುಟ್ಟಿಯುಚಿತಚರಿತ್ರದಿ ।
ಜಗವ ಪಾವನಗೆಯ್ವ ಜಾಣನಿಗೆ ॥ ೩
ಬಲ್ಲರು ತನ್ನನೆಂದೋಕರಿಸದೆ ಮಿಗೆ ।
ಪೊಲ್ಲದರೆಂದೊಮ್ಮೆ ಪೊಱತಟ್ಟದೆ ।
ಎಲ್ಲರ ಹೃದಯದೊಳಿರ್ದವರಿಗೆ ಬಲ್ಮೆ ।
ಬಲ್ಲವಿಕೆಗಳನು ಬಲಿಸುವಗೆ ॥ ೪
ನರಪತಿ ಚಿಕದೇವನಾಥಸಂರಕ್ಷಣ ।
ಪರನಿಗೆ ಮಹೀಶೂರಪುರವಾಸಗೆ ।
ಪರವ್ಯೂಹವಿಭವಾಂತರ್ಯಾಮಿಯರ್ಚಾವ ।
ತರಣದಿ ಲೋಗರ ಪೊರೆವನಿಗೆ ॥ ೫

—೨—

ವಚನ । ಈ ಮೂಱನೆಯ ತ್ರಿಪದಿಯೊಳ್ ತಮ್ಮ ರಾಜಧಾನಿಯಪ್ಪ ಶ್ರೀರಂಗಪಟ್ಟಣದ ಪಶ್ಚಿಮರಂಗರಾಯನ ಗುಣಂಗಳಂ ಪೊಗಳ್ವರ್.

॥ ರಾಗ—ಕುರಂಜಿ ॥ ಅಟ್ಟತಾಳ ॥

ಪಾವನಗುಣನಿಸ್ಸೀಮನ ।
ಭಾವುಕಹೃದಯಾಭಿರಾಮನ । ನಾ ।
ಭಾವಿಪೆ ಪರಿಪೂರ್ಣಕಾಮನ ।
ಪಶ್ಚಿಮಶ್ರೀರಂಗಧಾಮನ ॥ ಪಲ್ಲವಿ ॥

ಚ ॥ ಮಂಗಳಫಣಿಪತಿತಲ್ಪನ ।
ಮಹನೀಯಸತ್ಯಸಂಕಲ್ಪನ ।

ಅಂತ । ರಂಗದೊಳಿಡುವೆಯೆನ್ನಪ್ಪನ ।
ಶ್ರೀ । ರಂಗಪಟ್ಟಣದ ರಂಗಪ್ಪನ ॥ ೧

ನೀಲನೀರದ ಸಂಕಾಶನ ।
ನಿರವಧಿನಿತ್ಯಪ್ರಕಾಶನ ।
ಭಕ್ತ । ಪಾಲನ ಕಲಿತಾವೇಶನ ।
ನಾ । ಭಜಿಸುವೆ ಶ್ರೀರಂಗೇಶನ ॥ ೨

ಸರಸಿಜಭವ ಭವಧ್ಯೇಯನ ।
ಮುನಿ । ವರಗೌತಮಭಾಗಧೇಯನ ।
ನಿರುಪಮಭಕ್ತಿ ವಿಧೇಯನ ।
ನಾ । ನೆನೆವೆ ಪಶ್ಚಿಮರಂಗರಾಯನ ॥ ೩ —೩—

ವಚನ : ಈ ನಾಲ್ಕನೆಯ ತ್ರಿಪದಿಯೊಳ್ ಪ್ರಸನ್ನವಿಷಯದೊಳೊ ವರ್ಜ ದೋಷವೆಣಿಸ ಜಗದೀಶನ ಕೋಪಮಂ ಕಳೆದು ಕೃಪೆಯಂ ಜನಿಯಿಪ ಶ್ರೀರಂಗನಾಯಕಿಯಂ ಪೊಗಳ್ವರ್.

॥ ರಾಗ—ಮುಖಾರಿ ॥ ಅಟ್ಟತಾಳ ॥

ನಿನ್ನ ಪೊಗಬಲೆನ್ನಳವೆ ।
ರಂಗನಿಲಯನ ಭಾಗ್ಯದ ಫಲವೆ ।
ನಿನ್ನೊ । ಳೆನ್ನ ನುಡಿಯು ಬಿತ್ತಿ ಜಿಳೆಪೆ ।
ಯೆನ್ನಿಷ್ಟಾರ್ಥವ ಕೈಕೊಳುವೆ ॥ ಪಲ್ಲವಿ ॥

ಚ॥ ಕಡಲೊಳೊಗೆದ ಕನ್ನೆ ರನ್ನೆ ।
(ನಿತ್ಯ)ಕಲ್ಯಾಣಗುಣಸಂಪನ್ನೆ ।
ಕಡುವಣ್ಣವಿಡಿದ ಚೆಂಬೊನ್ನೆ ।
ರಂಗಾಧೀಶನ ಮನದನ್ನೆ ॥ ೧

ಅರಯ್ಯೆ ನಿನ್ನ ಮುಗ ಬೊಮ್ಮ ।
ಅಲ್ಲಾ ಚಂದ್ರಶೇಖರ ವೊಮ್ಮ ।
ನಿನ್ನ ಸೇರಿರೆ ಹರಿಪರಬೊಮ್ಮ ।
ಅಮ್ಮ ಶ್ರೀರಂಗನಾಚ್ಚಾರಮ್ಮ ॥ ೨

ಶ್ರೀರಮಣಿ ಶ್ರುತಿಗೇಯೆ ।
ಸಿದ್ಧೋಪಾಯಸಹಾಯೇ ।
ಈರೇಳು ಲೋಕದ ತಾಯೇ ।
ರಂಗೇಶಪದಾಂಬುಜಚ್ಛಾಯೇ ॥ ೩ —೪—

ವಚನ || ಈ ಐದನೆಯ ತ್ರಿಪದಿಯೊಳ್ ಲಕ್ಷ್ಮಿಯತ್ತಣಿಂದಧಿಕರಿಸಿದ ವೋಕ್ಷವಿದ್ಯೆಯಂ ಪರಮಪದದಿಂದಿಳಿಗಿಳಿಪಿದ ವಿಷ್ವಕ್ಸೇನರಂ ಶರಣ್ಬುಗುವರ್.

|| ರಾಗ—ಕಾಂಬೋಧಿ || ಆದಿತಾಳ ||

ಸೇನಾನಾಥ ಸೇರಿದೆ ನಿನ್ನ ।
ಆನತವತ್ಸಲ ವಿಷ್ವಕ್ಸೇನ ವಿಜಿತಾರಿಸೇನ || ಪಲ್ಲವಿ ||

ಚ|| ಪರಮಕೃಪಾಲಯ ಪಾಲಿಸು ಮತಿಯ ।
ದೊರೆಕೊಳಿಸೆನಗೆ ಸತ್ಪುರುಷಸಂಗತಿಯ ||
ಕರುಣಿಸು ನಿನ್ನಡಿಗೆಱಗುವ ಮತಿಯ ।
ಭರದಿ ಕೈಸೇರಿಸು ಭಾಗ್ಯೋನ್ನತಿಯ || ೧

ಶ್ರೀಕರಸೂತ್ರವತಿಯ ಮನದನ್ನ ।
ಲೋಕನಿಯಮನಾಲೋಕಸಂಪನ್ನ ।
ಆಕುರುಕೇಶನನಾಳಿದ ಗನ್ನ ।
ಸಾಕು ಅನಾಥನ ಸಲಹೊ ನೀಯೆನ್ನ || ೨

ನಳಿನಾಕ್ಷಗೆ ಮಿಗೆ ನಚ್ಚಿನ ಕೆಳೆಯ ।
ತಳಿಗೆ ಪ್ರಸಾದವ ಸವಿವಗ್ಗಳೆಯ ।
ಕಳೆದು ಭವಾಂತರಕಲುಷಾವಳಿಯ ।
ತಳುವದೆ ಕೈವಿಡಿ ಸದ್ಗುಣನಿಳಯ || ೩

--೫--

ವಚನ || ಈ ಆಱನೆಯ ತ್ರಿಪದಿಯೊಳ್ ಪ್ರಪನ್ನಜನಕೂಟಸ್ಥರಪ್ಪ ನಮ್ಮಾಳ್ವಾರಂ ನೆಮ್ಮುವರ್.

|| ರಾಗ—ಘಂಟಾರವ || ರೂಪಕತಾಳ ||

ನಮ್ಮಾಳ್ವಾರೆ ನಂಬಿದೆ ನಿನ್ನ ।
ಗಮ್ಮನೆ ಸಲಹೆನ್ನ ಕರುಣಾಸಂಪನ್ನ || ಪಲ್ಲವಿ ||

ಚ|| ಕಡುಗಿ ವಿಭಾಗಿಸಿ ಕರಣದ ಪಡೆಯ ।
ಶಡಗೋಪವೆಸರನು ಪಡೆದಗ್ಗಡೆಯ ।
ಪಿಡಿದಿರುವೆನು ಜಗಿಜಗಿದು ನಿನ್ನಡಿಯ ।
ಸಡಿಲ ಬಿಡದೆ ಮುನ್ನ ಸಲಹುಯೆನ್ನೊಡೆಯ || ೧

ಅಂದು ಮಧುರಕವಿಹರುಷವ ತಾಳ್ದಿ ।
ಅಂದದಿ ದ್ರವಿಡಾವ್ನಾಯವ ಪೇಳ್ದಿ ।

ಕುಂದದೆ ಶ್ರೀಶನ ಗುಣಗಳ ಪೊಗಳ್ದ ।
ಸಂದ ಸಕಲದುರ್ಮತಗಳ ತಗುಳ್ದ ॥ ೨

ಒಡನೆ ರನ್ನದ ಪಾವುಗೆಯ ರೂಪಾಂತೆ ।
ಬಿಡದೆ ಶ್ರೀಧರನಡಿಯೆಡೆಯೊಳು ನಿಂತೆ ।
ತಡೆಯದೆ ಮುನಿಗಳ ಮುಡಿಯೊಳೊರಂತೆ ।
ಕಡುರಮ್ಯವಾದ ಚೂಡಾಮಣಿಯಂತೆ ॥ ೩ —೬—

ವಚನ ॥ ಈ ವಿಜಿನೆಯ ತ್ರಿಪದಿಯೊಳ್ ತಮ್ಮ ಯಾದವಗಿರಿಗೆ ಕುಲದೇವರೆನಿಸಿ ಯದುಗಿರಿಯೊಳ್ ನೆಲಸಿದ ರಾಮಪ್ರಿಯಂಗೆ ಪ್ರಿಯತಮರೆನಿಸಿದ ರಾಮಾನುಜರಂ ಸನ್ನುತಿಸುವರ್.

॥ ರಾಗ—ಯುರಕಲಕಾಂಬೋಧಿ ॥ ಅಟ್ಟತಾಳ ॥

ಶ್ರೀಭಾಷ್ಯಕಾರ । ಪಾಲಿಸೆನ್ನ ಶ್ರೀಭಾಷ್ಯಕಾರ । ಶ್ರೀಭಾಷ್ಯಕಾರಾದಿಶೇಷಾವತಾರ । ಶೋಭನ[1] ಗುಣಗಣ[1] ಸುಜನಮಂದಾರ ॥ ಪಲ್ಲವಿ ॥

ಚ॥ ತಿರುಪತಿಯೊಳಗಂದು ತಿರುವೇಂಕಟೇಶಗೆ ।
ತಿರುಲಾಂಛನವಿತ್ತ ದೇಶಿಕೋತ್ತಮನೆ ।
ಪರಿಪರಿಯುಕ್ತಿಯಿಂ ಪರವಾದಿಗಳನೆಲ್ಲ ।
ಪರಿದು ವೇದಾಂತತಾತ್ಪರ್ಯವ ನುಡಿದೆ ॥ ೧

ಕುಂದದೆ ತಿರುಕುರುಂಗುಡಿಯ ನಂಬಿಗೆ ನೀ ।
ನಂದು ಸಕಲವೇದಾಂತವಿದ್ಯೆಗಳ ।
ಚೆಂದವ ತಿಳುಪಿಯಾಚಾರ್ಯನೆಂದೆನಿಸಿ ನೀ ।
ಸಾಂದೀಪನಿಯಂತೆ ಸನ್ನುತಿವಡೆದೆ ॥ ೨

ಡಿಳ್ಳಿಯೊಳೊಂದುಗೂಡಿರೆ ದೇವರು ಚೆಲ್ವ ।
ಪಿಳ್ಳೆ ಬಾರೆನೆ ನಿನ್ನ ಬೆಂಬಳಿಯ ಬರಲು ।
ಉಲ್ಲಾಸದಿಂ ಯಾದವಾದ್ರಿಗೈದಿಸಿ ಚೆಲ್ವ ।
ಪಿಳ್ಳೆರಾಯಗೆ ನೀ ಪಿತನೆಂದೆನಿಸಿದೆ ॥ ೩ —೭—

ಗುರುಪರಂಪರಾಸಪ್ತಪದಿ ಸಂಪೂರ್ಣಂ.



ಪಾ—1. ಗುಣಾಸಾರ.

## — ಸಪ್ತಪದಿ — II.

ಬಾನುಮ್ಪಂ ಬಳೆದಿರ್ಪ ಮದ್ದಗಿರಿಯುಂ ದಾಱೆಟ್ಟವಂ ಬಂದನಿ |
ನ್ನೇನಾನುಂ ಗಿರಿದುರ್ಗದೊಳ್ ಮಲೆಪೆವೆಂಬೀಯಾಸೆ ಬಲ್ಮೋಸಮೆಂ ||
ತಾನುಂ ನಿಲ್ವೊಡೆ ಸೊನ್ನೆವೆಟ್ಟನಡರಲ್ಪೇೞ್ಕುಂ ರಿಪುಕ್ಷ್ಮಾಧವ |
ಗಾಸಾಕಂಬರಮೇಱಲಾಱದೊಡೆ ಪುತ್ತೊಂದುಂಟು ಮತ್ತಲ್ಲಿ ದಲ್ || ೫

ಅಱುವತ್ತುಂಸಾಸಿರಂವಾರುವಮೊಡನಱುನೂಱಾನೆಮೂಲಕ್ಕವಾಳುಂ
ತುಱುಗಿರ್ಪಾಸೈನ್ಯದಿಂ ಮದ್ದಗಿರಿಗೆ ಮೊದಲೊಳ್ ಮುತ್ತಿದಾಚೋಳನಂ ಕೈ||
ಸೆಱೆಗೊಂಡಾಸೊರ್ಕಿನಿಂದುರ್ಕುವರನವರ ದುರ್ಗಂಗಳಂ ಪೆಣ್ಗಳಂ ನೀಂ |
ಸೆಱೆಗೊಂಡೇಂ ಗಂಡರೊಳ್ಗಂಡನೆನಿಸಿ ಬಿರುದಂ ಬೀರರೊಳ್ಗಂಡ ಕೊಂಡೈ||

ವಚನ || ಲೋಕದೊಳ್ ಕೆಲರ್ ತಾವೆಳಸಿದ ಫಲಮಂ ಸಾಧಿಸುವುದಕ್ಕೆ ತಾವೆಸಗುವ ಕರ್ಮಂ ಮೊದಲಾದುದೇ ಸಾಧನಮೆಂದು ನೆಱೆನಂಬಿಯದಕ್ಕೆ ಸಹಾಯವಾಗಿ ಜಗದೀಶ್ವರನಂ ಕೊಂಡಿರ್ಪರ್. ಈ ಚಿಕದೇವರಾಯರ್ ತಾವೆಸಗುವ ಕರ್ಮಜ್ಞಾನಭಕ್ತ್ಯಾದಿಗಳಾಳ್ದನಪ್ಪ ಶ್ರೀಮನ್ನಾರಾಯಣಂಗೆ ಮುಖೋಲ್ಲಾಸಮನಾಗಿಸುವೆಸಕಂಗಳೆಂದುಂ ಫಲಪ್ರಾಪ್ತಿಗವನೇ ಸಾಧನಮೆಂದುಂ ನಂಬಿರ್ಪರ್. ಈಯರ್ಥಮನೀಯರಡನೆಯ ಸಪ್ತಪದಿಯೊಳ್ ನಿರವಿಸುವರ್. ಅದಱೊಳಿವು ಮೊದಲಾದ ಪಂಚಪದಿಯೊಳೀ ನೆಲೆಯುಂ ತಮ್ಮನಾಳ್ಗೊಂಡ ಪಶ್ಚಿಮರಂಗರಾಯಂಗೆ ಬಿನ್ನವಿಸುವರ್.

ರಾಗ—ಕಾಂಬೋಧಿ || ಅಟ್ಟತಾಳ ||

ನಿನ್ನ ನಂಬಿದೆ। ನಿನ್ನ ನಂಬಿದೆ। ನಿನ್ನ ನಂಬಿದೆ ನಂಬಿದೆ ||
ನೀ। ನೆನ್ನ ಸಲಹು ಬಿಡು ನಿನ್ನ ಚಿತ್ತವಿನ್ನು || ಪಲ್ಲವಿ ||

ಚ|| ನೀನಱಿಯದುದುಂಟೆ ಪೇೞು ।
ನಿನ್ನವನೆಂಬೀೞ್ಗೆಯೊಂದೆನಗೆ ।
ನೀನಲ್ಲದನ್ಯವ ನೆನೆವನಲ್ಲ ಕರ್ಮ ।
ಜ್ಞಾನಭಕ್ತಿವೈರಾಗ್ಯವ ನಂಬಿದವನಲ್ಲ || ೧
ಎಳಮೆಯೊಳ್ ಪರಿದಾಟ ।
ಯೌವನದೊಳು ಮೊಳವೆಣ್ಗಳೊಡನಾಟ ।
ಬೞಿಕ ವಾರ್ಧಿಕದೊಳು ಪಲಪಡರಿಸ ಕಾಟ ।
ತಿಳಿಸಿ ಕರ್ಮಯೋಗ ತೀರದೆಂತಿನಗು ರಂಗ || ೨

ವೇದಾಂತಗಳು ಪಲವು ।
ಅವಱೊಳು ವಿವಾದಂಗಳವು ಕೆಲವು ।
ಭೇದಿಸಿ ನೋಡಲು ವೇದ್ಯವಾಗದು ತಲವು ।
ಓದುಗಳಿಂ ಜ್ಞಾನಯೋಗ ಸಾಗದೆಂದಿಗು ॥ ೩

ತನುವ ದಂಡಿಪುದರಿದು ।
ಕರಣಂಗಳ ತಡೆವುದು ಮಿಗೆಯರಿದು ।
ಮನವ ಬಲ್ವಿಡಿವುದು ಮತ್ತಮರಿದರಿದು ।
ನೆನಹಿನೊಳ್ ವೈರಾಗ್ಯ ನೆಲೆಗೊಳ್ಳದೆಂದಿಗು ॥ ೪

ಸಿರಿಯಾಸೆ ಕಡುನಿಡಿದು ।
ಸಗ್ಗದ ನಾಡ ಸೆಱೆಯಾಸೆಯೆಡೆಗೊಡದು ।
ಮರಳಿ ಕೈವಲ್ಯದ ಮರುಳು ಬೆನ್ನಬಿಡದು ।
ಪರಮಭಕತಿಯೋಗ ಬಲಿಯುದೆಂದಿಗು ರಂಗ ॥ ೫ — ೧—

ವಚನ ॥ ಈ ಯೆರಡನೆಯ ಪಂಚಪದಿಯೊಳ್ ಅಧಿಕಾರದೊಳಿರ್ಪ ತಾಂ ಬಿಡತಕ್ಕುವಂ ತಮ್ಮ ಮನಮುಂ ಸೆಱೆಗೊಂಡ ರಾಯಗೋವಿಂಗೆ ಬಿನ್ನವಿಸುವರ್.

॥ ರಾಗ—ಕಾಂಬೋಧಿ ॥ ಅಟ್ಟತಾಳ ॥

ನಿನ್ನ(ನ)ಲ್ಲದೆ ನಾನೊಲ್ಲೆನು । ಅ । ನಿನ್ನಮಹಿಮೆಗಳ ಬಲ್ಲೆನು । ನೀ ।
ನಿನ್ನ ಕೈಬಿಟ್ಟೊಡೆ ಸಲ್ಲೆನು । ಸ್ವಾಮಿ । ಚೆನ್ನಿಗ ಚಿಕದೇವೇಂದ್ರವಲ್ಲಭ ಕೃಷ್ಣ ॥
॥ ಪಲ್ಲವಿ ॥

ಚ॥ ಬಱಿಯಾಸೆಗೆ ಬಸವಳಿಯೆನು ।
ಕೆಲಬಲದ ಕೆಸಱುಗಳ ತುಳಿಯೆನು ।
ಕಿಱಿದನೆಸಗಿ ಕೀಳಿಗಿಳಿಯೆನು ।
ನಿನ್ನನಱಿಯುದರೊಡನಾಡಿಯುಱಿಯೆನು ಕೃಷ್ಣ ॥ ೧

ಮಿತಿಮೀಱಿಯಾನುರವಣಿಸೆನು ।
ಸಲ್ವ ಮೇರೆಗಳನು ಕಡೆಗಣಿಸೆನು ।
ಇತರದೇವತೆಗಳ ಗಣಿಸೆನು ।
ಅವರೀವ ಫಲಂಗಳನೆಣಿಸೆನು ಕೃಷ್ಣ ॥ ೨

ಮುದ್ರೆಯನೊಮ್ಮೆಯು ಮೀಱೆನು ।
ಮೀಱಿ ಮುಗ್ಗಿ ಪಲವು ಕೊಂಬಿಗೇಱೆನು ।
ಕ್ಷುದ್ರಫಲಂಗಳ ಕೋರೆನು ।
ಚತುರ್ಥ ಫಲಕೆ ಕೊಡಲಿಯಾಗಲಾಱೆನು ಕೃಷ್ಣ ॥ ೩

ಮರುಳರೊಡನೆ ಮಾತನಾಡೆನು ।
ಮಿಕ್ಕ ಮಾಯಾವಿಗಳೊಡಗೂಡೆನು ।
ತರವನರಿಯದಾಸೆಮಾಡೆನು ।
ತಪ್ಪುದಾರಿಯಿಡಿದು ನಿನ್ನ ಕಾಡೆನು ಕೃಷ್ಣ ॥ ೪ ॥
ಪಲವು ಬಟ್ಟೆಗಳನು ಮೆಟ್ಟೆನು ।
ಅಲ್ಲಿ ಪರಿದಾಟಕೆ ಕಾಸೆಗಟ್ಟೆನು ।
ಒಲಿದು ವಿಷಯಗಳ ಮುಟ್ಟೆನು ।
ಇನ್ನೊಮ್ಮೆಯುಮಿಪದದಲ್ಲಿ ಪುಟ್ಟೆನು ಕೃಷ್ಣ ॥ ೫ ॥ — ೨ —

ವಚನ ॥ ಈ ಪರಿಜಾರಿಯ ಸಂಚಾರದಿಯೊಳಿಂತು ಬಿಡತಕ್ಕುವಂ ಬಿಟ್ಟವರ್ ತಾಂ ನಡೆಯತಕ್ಕುದಂ ನಿರವಿಸಿ ಈಸಲಿ ದೊರೆಕೊಂಡುದಕ್ಕೆ ತಮ್ಮ ಸಂತಸವಂ ಶ್ರೀಯದುಗಿರಿನಾರಾಯಣಂಗೆ ಬಿನ್ನವಿಸುವರ್.

॥ ರಾಗ—ಮುಖಾರಿ ॥ ಆದಿತಾಳ ॥

ಧನ್ಯನಾದೆನು ನಾನಿಂದು ಧನ್ಯನಾದೆನು ।
ಅನ್ಯವನರಿಯದು (ನಾ) ನಿನ್ನಾಳುತನದಿ ನಿಂದೆನು ॥ ಪಲ್ಲವಿ ॥

ಚ ॥ ನಿನ್ನಡಿಗೆ ಪೊಡೆಮಟ್ಟು । ನಿನ್ನ ದಿವ್ಯನಾಮವಿಟ್ಟು ।
ನಿನ್ನ ಮುದ್ರೆಗಳನಿಟ್ಟು । ನಿನ್ನ ಜೀಯಡೆಯುಟ್ಟು ॥ ೧ ॥
ನಿನ್ನಡಿಯೊಲವ ಕಂಡು । ನಿನ್ನೋಗವ ಕೈಕೊಂಡು ।
ನಿನ್ನ ಪ್ರಸಾದವನುಂಡು । ನಿನ್ನೊಲ್ಮೆಜಾಗವ ಕೊಂಡು ॥ ೨ ॥
ನಿನ್ನ ಮೂರುತಿಯ ನೋಡಿ । ನಿನ್ನ ಮುಂದೆ ನಲಿದಾಡಿ ।
ನಿನ್ನ ದಾಸರೊಡಗೂಡಿ । ನಿನ್ನಗುಣಂಗಳ ಪಾಡಿ ॥ ೩ ॥
ನಿನ್ನ ಕೂರ್ಮೆಗೆಡೆಯಾಗಿ । ನಿನ್ನವರಡಿಗೆ ಬಾಗಿ ।
ನಿನ್ನೊಲವಿದ್ದಂತೆ ಪೋಗಿ । ನಿನ್ನಾಳಿನಾಳಿನಾಳಾಗಿ ॥ ೪ ॥
ಚೆನ್ನಿಗ ಗೋಪಾಲರಾಯ । ಚಿಕ್ಕದೇವೇಂದ್ರಪಿಧೇಯ ।
ಸನ್ನುತಮಂಗಳಕಾಯ । ಸಲಹಿದೆನ್ನನು ಜೀಯ ॥ ೫ ॥ — ೩ —

ವಚನ ॥ ಇಂತು ತಾಂ ಪರಮಪುರುಷನ ಪಾದಾರವಿಂದಂಗಳಂ ನೆನೆದು ನಂಬಿ ಸಲ್ಲಾಪವನಾಡಿ ಸಲ್ಲಾಪನೆಸಗಿ ಆನಂದೊಲವಂ ಪಡೆದು ಆನಂದದೊಳೋಲಾಡುತ್ತ ತಮ್ಮಂತೆ ಸಕಲಜನರುಂ ಸಂತಸಂಬಡೆಗೆಂದು ಮೇಲೆ ಮುಂದುಂ ಪದಂಗಳಿಂ ಹರಿಯಂ ಪಾಡಲೆಳಸಿದರ್. ಅವುಗಳೊಳ್ ನಾಲ್ಕನೆಯ ತ್ರಿಸಚಿವೋಳ್ ಪರ್ಯಾಯದಲ್ಲಿ ಸಕಲಗಂ ತಿಳಿ ಇಂತು ಪದೆವರ್ ಹಿ

ಯರಸನೊಲವಪ್ಪುದು ತಪ್ಪೆಂಬುದರ್ಕೆ ತನ್ನೊಳ್ಮೆಗಂ ಒಡನಾಟಕ್ಕಂ ಕೆಳೆಗಂ ಕೇಳಿಗಂ ನೆರವಿಗಂ ನೇಹಕ್ಕಂ ನಲ್ಮೆಗಂ ನಂಬುಗೆಗಂ ನೆಲೆವೀಡೆನಿಸಿ ನೆಗೞ್ತೆವೆತ್ತ ತಿರುಮಲಾರ್ಯರಂ ದೃಷ್ಟಾಂತಂಗೆಯ್ದು ದೃಢೀಕರಿಸಿ ತಮ್ಮ ಯದುಕುಲದೇೞ್ತರವನಾಳ್ಗೊಂಡ ಯಾದವಗಿರಿನಾರಾಯಣನಡಿದಾವರೆಗಳಂ ನಂಬಿ ಬಾೞ್ವೆಂದು ಪೆಂಡಿರ್ಗುಪದೇಶಂಗುಡುವರ್.

॥ ರಾಗ—ಕಾಂಬೋಧಿ ॥ ಅಟ್ಟತಾಳ ॥

ಪಾದವ ನೆರೆನಂಬಿ ಬದುಕಿರೊ । ನಮ್ಮ ಯಾದವನಾರಾಯಣನ ದಿವ್ಯಶ್ರೀ ॥ಪಲ್ಲವಿ॥

ಚ॥ ಹಿಂದಣ ನಡತೆಗೆ ಹೇಸಿರೊ ।
ಮುಂದೆ ನಿಂದೆ ಬಾರದವೊಲು ನೀಸಿರೊ ।
ನೀವಿಂದು ಮೊದಲು ಕುಲಕೇಳಿಗೆಯಪ್ಪಂತೆ ।
ಒಂದೆ ದಿಟವ ಪಿಡಿದುತ್ತಮರೆನಿಸಿರೊ ॥ ೧ ॥
ನಿಮ್ಮ ನೆಲೆಯ ನೀವೆ ತಿಳಿಯಿರೊ ।
ತಿಳಿದೊಮ್ಮದ ನಡತೆಯನುಳಿಯಿರೊ ।
ಬಲುಹಮ್ಮುಹೆಮ್ಮೆಗಳನು ಹಳಿಯಿರೊ ।
ಸಜ್ಜನ ಸಮ್ಮತವಪ್ಪಂತೆ ಸನ್ಮಾರ್ಗಪಿಡಿಯಿರೊ ॥ ೨ ॥
ಕರ್ಮದ ಬಳಿಗಂಟ ಕಳೆಯಿರೊ ನಿಮ್ಮ ।
ದುರ್ಮತಿಧೂಳಿಯ ತೊಳೆಯಿರೊ ಮಿಗೆ ।
ನಿರ್ಮಲಚಿತ್ತದಿ ನೇಮಪಿಡಿದು ನಮ್ಮ ।
ತಿರ್ಮಲಾರ್ಯರಂತೆ ಸ್ಥಿರವಾಗಿ ಬಾಳಿರೊ ॥ ೩ ॥ — ೪ —

ವಚನ। ಈ ಬಿಸನೆಯ ಏಕಪದಿಯೊಳ್ ಅಧಿಕಾರಿಗಳ್ ನಗುವೆಸಕಂಗಳೊಳಾವಶ್ಯಕಂಗಳಾದುವಂ ಪಿರವಿಸುವರ್.

॥ ರಾಗ—ಕಾಂಬೋಧಿ ॥ ಆದಿತಾಳ ॥

ಪಾದಂಗಳನೆ ನಂಬಿರೊ ದಿಟವಿಡಿದು। ಪಾದಂಗಳನೆ ನಂಬಿರೊ॥ (ಪಾದಂಗಳನೆ ನಂಬಿರೊ ಪಾದಂಗಳನೆ ನಂಬಿರೊ) ॥ ಬಲವ ಪಂಬಲಿಸದಿರಿರೊ । ಶ್ರೀದೇವಿಯರಸ ನಮ್ಮ ಯಾದವನಾರಾಯಣನ ॥ ಪಲ್ಲವಿ ॥

ಚ॥ ನಮ್ಮ ನಡತೆಗಳಿಂದ ನಾವು ಕಡೆವಾಯ್ವೆವೆಂಬ ।
ಹಮ್ಮ ಹಳಿದು ಬಿಸುಡಿರೊ । ಬಿಜುಗೆಮ್ಮೆಗಳ ।
ನೆಮ್ಮಿನೆಲೆಗೆಡದಿರಿರೊ ಭಾರವಿಳುಹಿ ।
ನಮ್ಮನಿದಿರ್ ಸೊಗವಡಿಯಿರೊ ಲೋಗರಿರಾ ॥ ೧ ॥ — ೫ —

ವಚನ ॥ ಈ ಆಜ್ಞೆಯು ಪಂಚಪದಿಯೊಳ್ ಅಧಿಕಾರಿಗಳ್ಗೆ ಪರಮ ಪುರುಷನನುಗೊಳಿಸುವ ಸಕಲಶ್ರೇಯಸ್ಸುಗಳಂ ನಿರವಿಸುವರ್.

॥ ರಾಗ—ಖಾಜಿ ॥ ತಾಳ ರೂಪಕ ॥

ನಂಬು ನಂಬು ನಂಬು ನೆರೆ ನಂಬು । ನಂಬು ಶ್ರೀಕೃಷ್ಣಪದಾಂಬುಜಂಗಳ
ಹಂಬಲಿಸದಿರು ಹಲವನು ॥ ಪಲ್ಲವಿ ॥

ಚ॥ ಕರಣದೋಷಂಗಳ ಕಳೆವನು । ಕಲ್ಮಷವನೆಲ್ಲ ತೊಳೆವನು ।
ಹಿರಿಯರ ಸಂಗತಿಗೆಳೆವನು । ಪೆತ್ತೆಸಂದೇಹಗೆದಳೆವನು ॥ ೧ ॥

ಹಿಂತಣ ತಪ್ಪ ಮರೆವನು । ಬೇಡಿದುದನೆಲ್ಲ ಕರೆವನು ।
ಅಂತರಂಗದೊಳು ಮೆರೆವನು । ಆನಂದರಸವನೆರೆವನು ॥ ೨ ॥

ಕರ್ಮದ ಬೇರ ಕಡಿವನು । ಕಾಲನ ಬಾಯ ಬಡಿವನು ।
ನಿರ್ಮಲಮತಿಯ ಕೊಡುವನು । ನೆವವಿಲ್ಲದಕ್ಕರವಡುವನು ॥ ೩ ॥

ಪುರುಳುಗೊಳಿಸಿ ಪೊರೆವನು । ಪೊಸಪೊಸಬೇಟದಿ ಬೆರೆವನು ।
ಎರೆಹೊರೆಯಿಲ್ಲದಿರುವನು । ಎಳದ ದಾರಿಗೆ ಬರುವನು ॥ ೪ ॥

ಚಿಕದೇವರಾಯನ ದೇವನು । ಸೇವಕಜನರ ಜೀವನು ।
ಸಕಲವಿಧದೊಳು ಕಾವನು । ಸರ್ವಾಭೀಷ್ಟವನೀವನು ॥ ೫ ॥ — ೬ —

ವಚನ ॥ ಈ ಯೋಜನೆಯು ತ್ರಿಪದಿಯೊಳ್ ತನುಗಂ ತಮ್ಮ ಕೆಳೆಯರ್ಗಂ ಸರ್ವಾಭೀಷ್ಟಮಂ ಸಾಧಿಸುವುದಕ್ಕೆ ಸಿದ್ಧೋಪಾಯಮಾಗಿರ್ಪ ಶ್ರೀಕೃಷ್ಣ ಪದಾರವಿಂದಗಳಂ ಪ್ರೋತ್ಸಾಹಿಸುವರ್.

॥ ರಾಗ—ಮರಕಲಕಾಂಬೋಧಿ ॥ ಝುಂಪೆತಾಳ ॥

ಪಾದವೆಚ್ಚರಿಕೆ । ಪಾದವೆಚ್ಚರಿಕೆ (ಪಾದವೆಚ್ಚರಿಕೆ) । ಶ್ರೀಪಾದಾವಧಾನ
ಗೋಪಾಲ ಚಿಕದೇವ ಚಿಕದೇವಭೂಪಾಲಪರಿಪಾಲ ॥ ಪಲ್ಲವಿ ॥

ಚ॥ ಸಿರಿರಾಣಿಯೊಲವಿಂದ ಸೇರಿಯೊತ್ತುವ ಪಾದ ।
ಪುರುಳೆನಿಸಿ ವೇದದೊಳು ಪೊಳೆವ ಪಾದ ।
ಸರಸಿಜಧ್ವಜಕಂಬುಚಕ್ರಲಾಂಛಿತಪಾದ ।
ಪರಮಯೋಗೀಶ್ವರರು ಭಾವಿಸುವ ಪಾದ ॥ ೧ ॥

ಅವನಿಯಾಕಾಶಗಳನಳೆದು ಪೆರ್ಚಿದ ಪಾದ ।
ದಿವಿಜನದಿಯನು ಪಡೆದ ದಿವ್ಯಪಾದ ।
ಶಿವನ ಪಾವನಗೆಯ್ದು ಶಿವನೆನಿಸಿದೀಪಾದ ।
ಕವಿದು ಕಲ್ಲಿಗೆ ಜೀವಕಳೆಯಿತ್ತ ಪಾದ ॥ ೨ ॥

ನೆಣೆಸವರ್ಗೆ ಸ್ವಾಮಿಯೊಲವಪ್ಪುದಾದೊಡಂ ಈ ನಡತೆಯುಳ್ಳವರಿಂ ಮನ
ಮಂ ಬಳ್ಳಿಡಿಮ ತಪ್ಪದೆ ನಡೆಯುವೇಳ್ಪುದೆಂದು ಪೇಳ್ದರ್.

॥ ರಾಗ—ಕಾಂಬೋಧಿ ॥ ಆದಿತಾಳ ॥

ಇಂದಿರೇಶನೊಡನಾಡಿನೆಮ್ಮ ಹವಣೆ। ಎನ್ನ ಕಂದ ಕೇಳವನನೇಸ್ತು (?) ಕಡು
ಗಧಾರಿಯು ನಟಣ ॥ ಪಲ್ಲವಿ ॥

ಚ॥ ತನುವಿಗೆ ಹಿತವೆನಿಪ ತವಕಿಗರೊಡನಾಡದೆ।
ಮನವಾರತೆಯೊಳು ಮಿಗೆ ಮನವ ನಿಲ್ಲಿಸದೆ।
ಜನನಿಜನಕಾದಿಯಾದ ಜನ್ಮಬಂಧುತೆಯು ತೊರೆದು।
ಅನಿತರಭಕ್ತಿಯೊಳಿರೆ ಅಂದಿಗೊಲಿವನು ಗಡ ॥ ೧ ॥

ಎನಗುಪೆನೆಲ್ಲವನೆಂದು ಹೆಕ್ಕಳದೊಳೆಸಗದೆ।
ಎನಗಲಾಯೆನೆಂದು ಮಿಗೆ ಹಿಂದೆ ಸಾರದೆ।
ಎನಗುವ ಸೇವೆಯುನೆಸಗಿಯೆಸಕವಿದೆನ್ನದಲ್ಲೆಂದು।
ಹಸನೆಡದಂತೆವೊಲಿರೆ ಅಂದಿಗೊಲಿವನು ಗಡ ॥ ೨ ॥

ಪರಿಪರಿ ಲೋಗರವೊಲು ಪಲಭೋಗವ ಬಯಸದೆ।
ತರವಳಿಯು ತನ್ನ ಸ್ವಾತಂತ್ರ್ಯವನೆಣಿಸದೆ।
ತಿರುಮಳೆಯಾರ್ಯಾದಿ ದಿವ್ಯದೇಶಿಕರಾಣತಿವಿಡಿದು।
ಅರಮನೆಯಿಲ್ಲದಂತಿರೆ ಅಂದಿಗೊಲಿವನು ಗಡ ॥ ೩ ॥ — ೧ —

ವಚನ ಈ ಎರಡನೆಯ ತ್ರಿಪದಿಯೊಳ್ ಸಕಲಚೇತನರಂ ರಕ್ಷಿಪೆನೆಂದಿರ್ಪ ಶ್ರೀಮನ್ನಾರಾಯಣನಿವರ ನಡತೆಯೊಳ್ ಸುಕೃತಮೆಂಬ ಪೆಸರಿಡಲ್ಕೆಂದು ಯಾದೃಚ್ಛಿಕಪ್ರಾಸಂಗಿಕವಾದ ನಡತೆಯುಂ ನೆಮಗೆಯ್ದು ಇವರ್ಗೆ ತನ್ನೊಳ್ ಪೇಷಾಭಿಮುಖ್ಯಮಂ ಬಳೆಯಿಸಿ ಮುಕ್ತಿಪರ್ಯಂತವಾಗಿ ಪಯೋಗಿಪ್ಪುದೆಂಬರ್ಥಮಂ ತನ್ನ ಪೆಣ್ಗಳಂ ಮರುಳ್ಗೊಳಿಸಿ ನಕ್ಕುಗೊಂಡ ಶ್ರೀಕೃಷ್ಣನಂ ಮೋಹಿಸ ವೃದ್ಧಗೋಪಿಯರ ವಚನವ್ಯಾಜದಿಂ ವಿವರಿಸುವರ್.

॥ ರಾಗ—ಭೈರವಿ ॥ ತಾಳ ಝಂಪೆ ॥

ಪಾಯಕಾರನೆ ಮಗಳು ಮಾಣುವೋದಳಕಟ।
ಜಾಯ ಪಾತಿಗೆ ಸುಡಿಮಿಬಂದಿಗೆಯ್ಯದೆ ಬಿಡನು ॥ ಪಲ್ಲವಿ ॥

ಚ॥ ನೆನೆದೊಡನೆ ಮನದೊಳಗೆ ನೆಲಸಿ ಮುನ್ನಿನ ಕೆಲಪ್ರ।
ನೆನಹುಗಳನೆಲ್ಲವನು ನೀಕರಿಸುತ।
ದಿನದಿನಕೆ ತನ್ನಡಿಯ ಸೇವೆಯೊಳು ತವಕವನು।
ಕೊನರುಗೊಳಿಸುತ ಕೊಂದುಕಾರಿಸದೆ ಬಿಡನು ॥ ೧ ॥

ಪಟುರೊಡನಾಡಿಸುತ ಪಲವಗೆಯ ಬೋಧನೆಯ ।
ಬಳೆಯಿಸುತ ಪದವಱಿತು ಬಸಗೆಯ್ಯುತ ।
ಬಱಿಕ ವಿರಹಾಗ್ನಿಯನು ಪರ್ಬಿಸುತ ಮನದಳವ ।
ಹಿಱಿಹಿಱಿದು ಪೇಗದೊಳು ಹಿಪ್ಪೆಗೆಯ್ಯದೆ ಬಿಡನು ॥ ೨ ॥

ಪರಿಪರಿಯ ಭವಸುಖದ ಬಯಲೆನಿಸಿ ಸ್ವಾತಂತ್ರ್ಯ ।
ದಿರವ ತೊಲಗಿಸಿ ತನ್ನೊಳೇಕವೆನಿಸಿ ।
ತಿರುಮಲಾರ್ಯಾದಿ ವರದೇಶಿಕರ ಮತದಿ ಪರಿ ।
ಚರಣದೊಳು ತಣ್ಣನೇ ತಣಿಯಿಸದೆ ಬಿಡನು ॥ ೩ ॥ — ೩ —

ವಚನ । ಈ ಮೂಱನೆಯ ದ್ವಿಪದಿಯೊಳ್ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಂಗಳ್ ಮೊದಲಾದ ಮೋಕ್ಷೋಪಾಯಂಗಳನಾಚರಿಸುವರ್ ತಮ್ಮಂತೆ ತಿಳಿವುಂ ಪಟುತ್ವಮುಮಿಲ್ಲದೆ ಬೞಲ್ದ ಪ್ರಪನ್ನರಪ್ಪವರ್ಗೆ ಸಕಲ ಸಾಂಸಾರಿಕದುಃಖನಿವೃತ್ತಿರೂಪಮಪ್ಪ ಮೋಕ್ಷಾನಂದಂ ಬರ್ಪ ತೆಱನಾವುದೆಂದಾಕ್ಷೇಪಿಸಿ ಪ್ರಪನ್ನರ್ಗೆ ಮೋಕ್ಷೋಪಾಯಮಪ್ಪ ಶ್ರೀಮನ್ನಾರಾಯಣನೇ ತನ್ನ ಜ್ಞಾನಶಕ್ತ್ಯಾದಿಗುಣಂಗಳಿಂದಾ ಪ್ರಪನ್ನರ್ಗೆ ಸಕಲಸಾಂಸಾರಿಕ ದುಃಖಂಗಳಂ ಕಳೆದು ಮೋಕ್ಷಾನಂದಮನನುಗೊಳಿಸುವನೆಂಬ ಪರಿಹಾರಮಂ ತಂತಮ್ಮ ಗುಣಂಗಳಿಂ ಬೆಳಗಿತು ಮಾಱಿ ನುತಿಪ ಸವತಿಯರಂ ಕಾಡಿತು ಶ್ರೀಕೃಷ್ಣನಂ ನೆರೆನಂಬಿಯುಪಾಸಲಪ್ಪಂ ಪಡೆದ ಗೋಪಿಯೊರ್ವಳ್ ನುಡಿವ ನುಡಿಯುಂ ನೆಪಂಗೆಯ್ದು ದೃಢೀಕರಿಸುವರ್.

॥ ರಾಗ—ಕಾಂಬೋಧಿ ॥ ಅಷ್ಟತಾಳ ॥

ಎನ್ನ ದೋಷಂಗಳನೆಣಿಸಿ ನೋಯುದಿರಿ ನೀವೆನ್ನಾಳ್ದ ಚಿಕದೇವೇಂದ್ರ ಗೋಪಾಲಕನುನ್ನತಿಯನು ನೆನೆದೆನ್ನೊಳ್ಗೊಡಬಡಿ ॥ ಪಲ್ಲವಿ ॥

ಚ॥ ಗುಣವಿರೆ ಕರ್ಪರು ಕೊರತೆಡೆಯೊಳು ಬಿಗೆ ಗುಣಗಣಗಳನನುಗೊಳಿಪರು ನಿರರೆ । ಗುಣಕೆ ಕೊರತನು ನಿಮ್ಮ ಕೊರ್ಪೆಯಿಂದೆನ್ನೊಳು ಗುಣವನೆಣಿಪ ನಿಲ್ಲಿ ಕೋಪವೇತಕೆ ನಿಮಗೆ ॥ ೧ ॥

ಗುಣ ಪಿರಿದಾಗೆ ದುರ್ಗುಣವ ಮೆಚ್ಚುವುದವಗುಣ ಪಿರಿದಾಗೆ ಸದ್ಗುಣವ ಮೆಚ್ಚುವುದು । ಗುಣಿಗಳರಸನ ಸದ್ಗುಣಂಗಳೆನ್ನಯ ದುರ್ಗುಣವ ಮೆಚ್ಚಿದು ನಿಲ್ಲಿ ಕೋಪವೇತಕೆ ನಿಮಗೆ ॥ ೨ ॥ — ೩ —

ವಚನ । ಈ ನಾಲ್ಕನೆಯ ತ್ರಿಪದಿಯೊಳ್ ಮೂಱನೆಯ ದ್ವಿಪದಿಯೊಳ್ ಪೇೞ್ದರ್ಥಮಂ ಮೂಱುಂ ದೃಷ್ಟಾಂತಂಗೆಯ್ದು ತೋಱಿ ದೃಢೀಕರಿಸುವರ್.

॥ ರಾಗ— ಖಾಪಿ ॥ ಅಟ್ಟತಾಳ ॥

ಅಱಿತು ಅಱಿಯರೆನ್ನ ಕ್ಕತಂಗಿಯರು। (ಅಱಿತು ಅಱಿಯರೆನ್ನ ಕ್ಕತಂಗಿಯರು)। ಎನ್ನೆಱೆಯ ಶ್ರೀ ಚಿಕದೇವೇಂದ್ರನೆನ್ನಲ್ಲಿ ಕುಱುವುಗೊಳುವೊಡೊಂದು ಗುಣವಿಲ್ಲದಿರ್ದೊಡೆ। ಏಱಿಕದೊಳಿರೆ ನೋಡಿನಾಪರಿ ಮಱುಗುವ॥ಪಲ್ಲವಿ॥

(ವಚನ॥ ಈ ಪಲ್ಲವಿಯೊಳ್ ಚಿಕದೇವೇಂದ್ರ, ಎಂಬುದಱೊಳ್ ಚಿಕದೇವನೆಂದು ವಿನಯದಿಂ ತಮ್ಮಂ ಪೆಸರ್ಗೊಂಡು ಇಂದ್ರನೆಂಬುದಱಿಂ ತಮಗಾಳ್ದನಪ್ಪ ಶ್ರೀಕೃಷ್ಣನಂ ಪೇೞ್ದರ್.)

ಚ॥ ಸೊಬಗಿಯೆ ಸುಗುಣೆಯೆ ಸೊಗಸುಗಾತಿಯೆ ಪೇ। ಳಿವಳಿಗೇತಕೆ ಹೆಮ್ಮೆಯೆಂದೞಲುವರು। ಕುಬುಜೆಗೊಲಿದು ಮೆಯ್ಯ ಕೊಂಕುಗಳನು ತಿದ್ದಿ। ಸೊಬಗಿಯೆನಿಸಿಯಾಳ್ದ ಸುಗುಣಗೋವಳನಂತೆಂದು ॥೧॥

ಸರಸಿಯೆ ಚದುರೆಯೆ ಚೆಲ್ಲಗಾತಿಯೆ ಈ। ಪರಿಯೇಱ್ಗಯೇಕೆಂದು ಬಣ್ಣಗುಂದುವರು। ಕರಡಿವೆಣ್ಣನು ಪೆಟ್ಟದರಸಿಯರೊಳು ಸರಿ। ವೆರಸಿಯಾಳಿದ ಸಿರಿಯರಸಗೋವಳನಂತೆಂದು ॥೨॥

ತಲೆಸೆಲೆಯಱಿತೂೞ್ಗವನೆಸಗುವಳಿವಳಾ। ಯುಲಸೆಗಿಂತೇತಕೆಂದಳವುಗುಂದುವರು। ಪೊಲಬಱಿಯದ ಗೋಪಬಾಲಸೆಯರಿಗೆ ಜಾಣ್ಮೆ। ಗಲಿಸಿಯಾಳಿದ ಪೆಂಪುಗಾಱ ಗೋವಳನಂತೆಂದು ॥೩॥ — ೩ —

ವಚನ॥ ಉಪಾಯಾಂತರದಿಂ ಶ್ರೀಸ್ವಾಮಿ ಪ್ರಸನ್ನರಂ ನಿಂದಿಸಿದೊಡಂ ಅವರ್ಗೆ ಕಮುದವಾದಿಗುಣಂಗಳ್ ಉಂಟಾಗಿಪ್ಪುದಱಿಂ ನಿಂದಕರೊಳ್ ಕೋಪಂ ಪುಟ್ಟದು; ಮತ್ತಂ "ಎಮ್ಮೊಳ್ ನಾವುಂ ದೋಷಮಿಪ್ಪುದಱಿಂ ಪೈಸೆ ನಿಂದಿಪರ್. ಅದಱಿಂದಾದೋಷಮಂ ಪರಿಹರಿಪುದು" ಎಂದು ಸ್ವಾಮಿಗೆ ಬಿನ್ನವಿಸುವರ್. ಈಯರ್ಥಮನಿವರುಂ ಈಪದನೆಯ ತ್ರಿಪದಿಯೊಳ್ ತಿಳಿಪುವರ್.

॥ ರಾಗ—ಮುಖಾರಿ ॥ ಅಟ್ಟತಾಳ ॥

ನಿಂದೆಗೆಯ್ವರು ಮಿಗೆ ನಿಂದಿಸುತಿರಲಿ ॥ ಪಲ್ಲವಿ॥

ಚ॥ ನಿಂದೆಗೆಯ್ವರು ಮಿಗೆ ನಿಂದಿಸಲೆಮಗೇನ। [illegible] ಕೇಳಿ ಶ್ರೀನಾಥನ ಪದಕೆ ಬಿನ್ನವಿಸೆನು। ನಂದಕುಮಾರನ [illegible]। ನಂದನೆ [illegible] ದಿರಿ ಚಿತ್ತಕೆ। ಬಂದ ಪರಿಗೊಳದ [illegible] ॥೧॥

ಪೊಲ್ಲದ ನುಡಿಗಳ ಸೊಲ್ಲಿಸುತಿರಲಿ ॥ ಪಲ್ಲವಿ॥

ಚ॥ ಪೊಲ್ಲದ ನುಡಿಗಳ ಸೊಲ್ಲಿಸುತಿರೆ [illegible] ದ। [illegible] ಪದಕೆ ಬಿನ್ನ[illegible]

ನೆಸು । ಬಲ್ಲರ ಬಲ್ಲಹ ಪಾವನವಹ ನಿನ್ನ । ಮೆಲ್ಲಡಿಗಳೊಳು ಮಿನುಗುವ ರೇಣು । ಗಳಲ್ಲಿ ಧೂಳಿರೆ ತೊಡೆದನುಗೆಯ್ವುದು ಲೇಸು ॥ ೨॥

ಬೈದೊಡೆ ಬೈದರ ಬಾಯಿ ನೊಂದಪುದು ॥ ಪಲ್ಲವಿ ॥

ಚ॥ ಬೈದೊಡೆ ಬೈದರ ಬಾಯಿ ನೊಂದಪುದೆನು । ಗಾದ ಕೋಟಿತೆಯಾವುದ ದಕೆ ಬಿನ್ನವಿಸೆನು । ಯಾದವನಾರಾಯಣ ನಿನ್ನ ( ದಿವ್ಯ ) ಶ್ರೀ । ಪಾದ ಸೋಂಕಿದ ರನ್ನಪಾವುಗೆ ಪೂಸಿರೆ । ಆದರದಿಂದದನನುಗೆಯ್ವುದು ಲೇಸು ॥ ೩ ॥

ವಚನ ॥ ಈತಂಸನೆಯ ತ್ರಿಪದಿಯೊಳ್ ಜ್ಞಾನಿಗಳ್ಗೆ ಭಯಂ ಪುಟ್ಟುವುದರ್ಕಂ ಪುಟ್ಟಿದ ಭಯಂ ಪರಿಹಾರಮಪ್ಪುದರ್ಕಂ ಕಾರಣಂಗಳಂ ಬಿನ್ನವಿಸುವರ್.

॥ ರಾಗ—ಕಾಂಬೋಧಿ ॥ ತಾಳ ತ್ರಿಪುಡೆ ॥

ತನ್ನ ನೆನೆವುದು ಜೀವ ತಲ್ಲಣಿಪುದು । ಕೂಡೆ ನಿನ್ನ ನೆನೆವುದೊಯ್ಯನೆ ನೆಲೆಗೆ ನಿಲ್ಲುವುದು ॥ ಪಲ್ಲವಿ॥

ಚ॥ ಪುದಿದ ತೊವಲು ಕಂಡ ಪಿಡುಗಿಲುನರಗಳಿಂ ।
ದೊದವಿದೊಡಲ ನೆನೆದೊಱಲುವುದು ।
ಹೃದಯಮಧ್ಯದಿ ನಿಂತು ಹಿತವನೆಸಗುವ ನಿನ್ನ ।
ನೆರ್ದೆಗೊಳಿಸುತೊಯ್ಯನೆ ಹೆಕ್ಕಳಿಸುವುದು ॥ ೧ ॥

ಉಲಿಸೊಂಕುಸವಿರೂಪೊಳುಗೆಂಪಿಗೆಱಗುವ ।
ಪಲವು ಕರಣಗಳಲೆಗೆಲಸುವುದು ।
ಸಲುವ ವಿಷಯ ನಿನ್ನ ಚರಣಕರ್ಪಿತವೆಂಬ ।
ನೆಲೆಯ ತಿಳಿದೊಡನೆ ಸಲಹೇಱುವುದು ॥ ೨ ॥

ಮರಳಿ ಮರಳಿ ತಾನು ಮಾಡುವ ಪಾಪಂಗಳ ।
ಬಿಱುಬ ನೆನೆದು ಮಿಗೆ ಬೆದಱುವುದು ।
ನರಪತಿ ಯದುಕುಲನಾಥ ತೇರೇಱು ನೀ ।
ನೋಡಿದೊಂದು ನುಡಿಯುತ್ತರ್ಜೆ ಕೊಬ್ಬುವುದು ॥ ೩ ॥ — ೬ —

ವಚನ ॥ ಇಂತು ನಿರ್ಭಯಮಿದೊಳಿರ್ಪ ತಮ್ಮ ಮನೋರಥಂಗಳ ಪೇಳ್ಯೊಳ್ಗಿನೆಯ ತ್ರಿಪದಿಯೊಳ್ ಬಿನ್ನವಿಸುವರ್.

॥ ರಾಗ—ಕಾಂಬೋಧಿ ॥ ಅಟ್ಟತಾಳ ॥

ಬಸಿರಿಂದೆ ನಗೆಂದಿಗಪ್ಪುದೊ । ನಿನ್ನ ದಾಸಾನುದಾಸರ ದಾಸನೆನಿಪುದೊಂದೈ ॥
॥ ಪಲ್ಲವಿ ॥

ಸುಲಭನೆಂಬುದಂ ಪೇೞ್ದು ದೃಢೀಕರಿಸುವರ್. ಅವತಾರಿಕೆಯೊಳ್ ಮೊದಲ ಪಂಚಪದಿಯೊಳ್ ಸ್ವಾಮಿಯ ಸ್ವರೂಪರೂಪಗುಣವಿಭವಾದಿಗಳನಿತುಮಂ ಭಾವಿಸಿ ತಿಳಿವ ಉಪಾಯಾಂತರನಿಷ್ಠೆಯರಿಗಾದೊಡಮವನಾರ್ಕ್ಕುಂ ತಾನಾರುಮೆಂದು ತಿಳಿದು ಪ್ರೀತಿಗೊಳಿ ಸಂಚಿನ ಪ್ರಪತ್ತಿನಿಷ್ಠೆ ಸುಲಭನೆಂಬುದಂ ತಿಳಿಪುವರ್.

॥ ರಾಗ—ಯದುಕುಲಕಾಂಬೋಧಿ ॥ ತಾಳ—ಝಂಪೆ ॥

ನಿನ್ನ ನೆಲೆಯಱಿಯಲೆನ್ನಳವೆ । ನೀ । ನೆನ್ನಿನಿಯನೆನ್ನಾಳ್ದನೆಂಬನಿತಸಲ್ಲದೆ ॥ ಪಲ್ಲವಿ ॥

ಚ ॥ ಅಱಿಯರು ಗಡಮುಕ್ತಿವೆಂಬವರು ।
ನಿನ್ನನಱಿವರು ಗಡಱಿಯೆವೆಂಬರು ।
ಈಯಱಿತಱಿಯದಿರ್ಪ ಭೂಸಕೇಜನ ನೀನೆ ಬಲ್ಲೆ ॥ ೧

ಕಿಱಿಯ ಗಡ ಕಿಱಿಯರೊಳಗೆಲ್ಲ ।
ನೀನು ಪಿರಿಯ ಗಡ ಪಿರಿಯರೊಳಗೆಲ್ಲ ।
ಈಕಿಱಿಪಿರಿಯತನದೊಂದು ಕೀಲ ನೀನೆ ಬಲ್ಲೆ ॥ ೨

ಇಂತಿರ್ಪನೆನಿಸಲ್ಲದು ಗಡ ।
ನೀನಿಂತಲ್ಲವೆನಸಲ್ಲದು ಗಡ ।
ಮೇಣೆಂತಪ್ಪುದಿಂತಲ್ಲವೆಂಬುದನು ನೀನೆ ಬಲ್ಲೆ ॥ ೩

ಎಲ್ಲರೊಳಗಿರ್ಪೆ ಗಡ ನೀನು ।
ನಿನ್ನೊಳೆಲ್ಲ ಜಗಮಿರ್ಪುದು ಗಡೇನು ।
ಇಂತೆಲ್ಲರೊಳು ನೀ ನಿನ್ನೊಳೆಲ್ಲಮಿದ ನೀ ಬಲ್ಲೆ ॥ ೪

ಸುರರಿಗೆಲ್ಲರಿಗೊಡೆಯನು ಗಡ ।
ನೀ ನರನ ಕೆಯ್ಯಾಳೆನಿಸಿದೆ ಗಡ ।
ಸ್ವಾಮಿ ತಿರುಮಲಾರ್ಯರಿಗೊಲಿದ ದೇವ ನೀನೆ ಬಲ್ಲೆ ॥ ೫

—೧—

ವಚನ ॥ ಈಮೂರನೆಯ ತ್ರಿಪದಿಯೊಳ್ ಸರ್ವೇಶ್ವರಂ ಕರ್ಮಯೋಗಾವಿಷ್ಠರಂ ಪೊರೆವೆಡೆಯೊಳವರವರ ಕರ್ಮಾನುಗುಣನಾಗಿ ನಡೆನಡೆವೆಚ್ಚಿಂಬ ನಿಂತಿಗೊಳಗಾಗಿರ್ಪಾತಂ ಪ್ರಪನ್ನರ ವಿಷಯದೊಳ್ ಕೃಪಾಪರವಶನಾಗಿ ನೀತಿಯುಂ ವಿಚಾರ್ಪ್ಪ ಸಲಪ್ಪುವನೆಂಬುದಂ ನಿರವಿಸುವರ್.

॥ ರಾಗ—ಕಾಂಬೋಧಿ ॥ ಅಟ್ಟತಾಳ ॥

ನೀತಿಯಾವುದು ನಿನಗೆ । ಭಾವಿಸೆಯನನೀತಿಯಾವುದು ನಿನಗೆ ॥

ನೀತಿಯಾವುದು ಕೃಷ್ಣ ನಿನಗೆ ನಿನ್ನವನೆಂದೋತು ಪಾಲಿಪುದೆನ್ನನುಜನ ಮಾತುಗಳೇಕೆ ॥ ಪಲ್ಲವಿ ॥

ಚ॥ ನಡೆಯುತಕ್ಕುದಲ್ಲದ ಮತ್ತೊರ್ವರು ನುಡಿಯುತಕ್ಕುದಲ್ಲದ। ದುಡುಕಿನೊಳೆಸಗುವ ದುರುಳುತನದ ಕಿಡುನಡತೆಗಳೆಲ್ಲವು ನಲವೆನಿಸುತಲಿದೆ ॥ ೧

ಪಿಡಬಲವನಾರಯ್ಯದೆ ಪಿಂದುಮುಂದೆಣಿಸಿ ಹಿಂದಕೆ ಸಾರದೆ । ಒಡಲು ಮುಳಿದು ನೀನುಸಿರ್ದ ಪೂಯ್ಸ್ಟಾತುಗಳೊಡನೆ ವೇದಂಗಳನೊಂದುವೆರಸುತಿದೆ ॥ ೨

ಪುರುಷಪಶುಗಳೆನಿಪ ಗೊಲ್ಲರೊಳೊಡವೆರೆದು ಜಾಜುವ ನಿನ್ನನು। ಪರಮ ರಕ್ಷಕನೆಂದು ಭಜಿಸಿ ಭಾವಿಸುವರು ತಿರುಮಲೆಯಾರ್ಯಾದಿದೇಶಿಕರೆಂದೆನೆ ॥ ೩

ಪಾಕನ ಈಸುಗೂಜನೆಯು ತ್ರಿಸದಿಯೊಳ್ ಅರ್ಜುನಂಗೆ ಸಾರಥಿಯುಂ ಗೋಪಿಯರ್ಗೆ ವಲ್ಲಭನುಂ ಪಾಂಡವರ್ಗೆ ದೂತನುಮಾದುದಂ ನಿವರ್ಶನಂಗೆಯುಂ ಭಕ್ತಿ ವಿಷಯದೊಳ್ ಭಕ್ತಪರವಶನಾಗಿ[1] ನೀತಿಯುಂ[1] ವಿನಾಜ್[3] ಸಲಪುವನೆಂಬುದಂ ಸ್ಥಿರೀಕರಿಸುವರ್.

॥ ರಾಗ—ಕಾಂಬೋಧಿ ॥ ಝಂಪೆತಾಳ ॥

ಉತ್ತರೆಯ ಸಿಸುವಿನುಸಿರಿತ್ತ ಪಾದಕಳುಕುವೆ । ನಿನ್ನ ಸತ್ಯಬ್ರಹ್ಮಚರ್ಯಪ್ರಭುತ
ನಗಳಂತಿರಲಿ ॥ ಪಲ್ಲವಿ ॥

ಚ॥ ಕಡುಗಕ್ಕೈದುಗಳೊಂದ ಪಿಡಿಯುನೆಂದಿರ್ದು ಕೈ ।
ವಿಡಿದ ಫಲುಗುಣನು ಕೈಗಿಡಲು ಕಂಡು ॥
ಕಡುಗಿ ಭೀಷ್ಮನ ಶಿರವ ಕಡಿವ ತವಕದಿ ಚಕ್ರ ।
ವಿಡಿದ ಸತ್ಯವ ಲೋಕವೆಲ್ಲರಱಿಯುದುದೆ ॥ ೧

ಕೊಳಲೂದಿ ಜಗವ ಮರುಳ್ಗೊಳಿಸಿ ಯಮುನೆಯ ತಡಿಯ ।
ಪೃಳಿನವನದೆಡೆಯು ಪೂಬೊದಱುಗಳಲಿ ।
ನಳಿನ ಗೋಪಳತಿಯರ ನಳಿತೋಳ ತಕ್ಕೈಪಿಗು ।
ಹಿಜಾಯುವಿಹ ಬ್ರಹ್ಮಚರ್ಯವೆಲ್ಲರಱಿಯುದುದೆ ॥ ೨

ದೊರೆತನದ ಸೋಡಿಯುಲಿ ಕರೆದು ಧರ್ಮಜ ನಿನ್ನ ।
ಭರದಿ ನಡೆ ಕೌರವನ ಬಱಿಗೆನ್ನಲು ।
ಶಿರದೊಳಾಜ್ಞೆಯು ಧರಿಸಿ ತೆರಳ್ದ ಪಕ್ಷಿತುರಂಗ ।
ದೆಸೆಯು ನಿನ್ನರಸುತನವಾರುಮಱಿಯುದುದೆ ॥ ೩                    —೩—

ಪಾ—1 ನೀತಿಪಂ.

ವಚನ ॥ ಈ ನಾಲ್ಕನೆಯ ಪಂಚಪದಿಯೊಳ್ ಪ್ರಸನ್ನರ್ ಭಗವತ್ಪರತಂತ್ರರಾಗಿ ಸ್ವಬುದ್ಧಿಯುಂ ಸ್ವಪ್ರಯತ್ನಮುಮಿಲ್ಲದೆ ವಿಕಲಕರಣರಂತೆಯುಂ ಅಚೇತನದಂತೆಯುಮಿರ್ಪುದಱಿಂದಿವರಂ ಕಾಪಿಡದಿರ್ದೊಡೆ ತನಗೂಣೆಯುಂ ಬರ್ಪುದಱಿಂ ತಾನೆ ಕಾಪಿಡುವನೆಂಬುದಂ ನಿರವಿಸುವರ್.

॥ ರಾಗ—ಶಂಕರಾಭರಣ ॥ ಅಟ್ಟತಾಳ ॥

ತಪ್ಪದಾರದು। ತಿಳಿದು ನೋಡೆ ತಪ್ಪದಾರದು। ತಪ್ಪುನೆಪ್ಪುಗಳ ವಿಕಲ್ಪಿಸದೆಲ್ಲವ।
ನೊಪ್ಪುಗೆಯ್ದೆನ್ನನೊಲಿದು ಪಾಲಿಸು ಕೃಷ್ಣ ॥ ಪಲ್ಲವಿ ॥

ಚ ॥ ಅರಯ್ಯೆ ಮುಗ್ಗಿರಿವಂಧನ ತಪ್ಪೋ।
ದಾಱಿದೋಱುವ ದಂಡಧಾರನ ತಪ್ಪೋ।
ಮೇರೆಯಱಿಯದೆನ್ನ ಮೇಲಣ ತಪ್ಪೋ।
ನಾರಾಯಣ ನಿನ್ನ ನಟನೆಯ ತಪ್ಪೋ ॥ ೧

ತೊಂಡು ಮೇವ ಪಸುವಿಂಡಿನ ತಪ್ಪೋ।
ಕಂಡು ಕಾಯದ ತುಱುಗಾವನ ತಪ್ಪೋ।
ಗಂಡುವಿಱಱುವೆನ್ನ ಗೆಯ್ಮೆಯ ತಪ್ಪೋ।
ಕೊಂಡಾಳುವ ನಿನ್ನ ಕೂರ್ಮೆಯ ತಪ್ಪೋ ॥ ೨

ಜಾವಿಯ ಬಳಸುವ ಪಸುಳೆಯ ತಪ್ಪೋ।
ತಾ ವಂದು ತಡೆಯದ ತಾಯದು ತಪ್ಪೋ।
ಈ ವಿಷಯಕೆ ಮುಗ್ಗುವೆನ್ನದು ತಪ್ಪೋ।
ಆವೇಳೆಗಾಪುಗೆಯ್ಯದ ನಿನ್ನ ತಪ್ಪೋ ॥ ೩

ಗುಱಿಯ ತಾಕದ ಮೊನೆಗೋಲಿನ ತಪ್ಪೋ।
ಜುಱಿತೆಸೆಯದ ಬೀರಗುವರನ ತಪ್ಪೋ।
ಒಱುಗೆಯ್ಮೆಗೆಯ್ಪೆನ್ನ ಭಾವದ ತಪ್ಪೋ।
ಅಱಿವುದೋಱಿಸದ ನಿನ್ನಾಟದ ತಪ್ಪೋ ॥ ೪

ಓಜೆಗುಂದುವ ವೀಣೆಯುಲಿಪಿನ ತಪ್ಪೋ।
ಬಾಜಿಸುವನ ಕೆಯ್ಯ ಪವಣಿನ ತಪ್ಪೋ।
ರಾಜಶ್ರೀಚಿಕದೇವರಾಯನಿಗೊಲಿದ ಶ್ರೀ।
ರಾಜಗೋಪಾಲ ನಿರಾಕರಿಸದೆ ಪೇಱು ॥ ೫

—೪—

ವಚನ ॥ ಈ ಐದನೆಯ ತ್ರಿಪದಿಯೊಳ್ ಜಗದೀಶ್ವರಂ ಲೋಗರ್ಗೆ ದುರ್ಲಭನಾದೊಡಂ ತನ್ನಂ ನಂಬಿದವರ್ಗೆ ಸುಲಭನಾಗಿ ಸಿಲ್ಕಿ ಸರ್ವಾಭೀಷ್ಟಮನೀವನೆಂಬುದಂ ನಿರವಿಸುವರ್.

॥ ರಾಗ—ಶಂಕರಾಭರಣ ॥

ಎಲೆಲೆ ಕಳ್ಳಕಳ್ಳನೆಚ್ಚಱಿರೊ । ಎಚ್ಚಱುಗೂಡಿ ಬಱಿಸಂದು ಭರದೊಳು ಬಸಗೆಯ್ಯಿರೊ ॥ ಬಸಕೆ ತಂದು ಪಲವಗೆಯರ್ಥವ ಬರ ನೋಡಿ ಬದುಕಿರೊ ॥ ಪಲ್ಲವಿ ॥

ಚ ॥ ಪೆತ್ತವರನು ಬಿಟ್ಟು ಪೆಱರ ಸೇರಿದ ಕಳ್ಳ ।
ಮತ್ತವರಿಗೆ ತನ್ನ ಮಾಯನೋಱಿದ ಕಳ್ಳ ।
ಒತ್ತಿ ಮೊಲೆಯನೂಡೆಯುಸಿರುಂಡ ಬಲುಗಳ್ಳ ।
ಸುತ್ತುವ ಗಾಳಿಯ ಸೊಂಕಿ ಕೊಲುವ ಕಳ್ಳ ॥ ೧

ತುಡುಕಿ ಪಾಲ್ವೆಣ್ಣೆಯ ತುಡುತಿಂದ ಬಲುಗಳ್ಳ ।
ಪಿಡಿದೊರಲಿಗೆ ಕಟ್ಟೆ ಪೆಂಪೇಱಿದ ಕಳ್ಳ ।
ಕಡುಗಿ ಕಱುವನಿಟ್ಟು ಕಾಯ್ಗಡವಿದ ಕಳ್ಳ ।
ಒಡನೆಳವೆಂಡಿರುಳ್ಳುಡೆಯ ಕಳ್ದ ಕಳ್ಳ ॥ ೨

ಇದಿರಿಸೆ ವಿಧಿಶಿವರಿರವುಗಿಡಿಪ ಕಳ್ಳ ।
ಪದಿನಾಲ್ಕು ಲೋಕವ ಬಾಯಾಲುವ ಕಳ್ಳ ।
ಚದುರ ಶ್ರೀ ಚಿಕದೇವಚಂದ್ರನ ಬಿನ್ನಣ ।
ಪೊದವಿಸ ಪೆರ್ಬಲೆಯೊಳುದೊಡಕಿಗೆ ಬಿದ್ದ ॥ ೩ —೫೫—

ವಚನ ॥ ಈಪರಾಜನೆಂಬ ತ್ರಿಪದಿಯೊಳ್ ಸ್ವಾಮಿಯ ದಯದಿಂದಮೇ ಮೋಕ್ಷಮೆಂದುಂ ಸ್ವಾಮಿಯುಮಾರ್ಗಂಗೆಯ್ವುದೆ ಮೋಕ್ಷಾಸಂದಮೆಂದುಂ ಪ್ರಾರ್ಥನೆಗೆ ತಾನೇ ಉಪಾಯಮಪ್ಪನೆಂಬುದಂ ನಿರವಿಸುವರ್.

॥ ರಾಗ—ಮೋಹನ ॥

ನಿನ್ನೊಲ್ಮೆಗವ ನಾನೆಳಸುವೆ । ಸ್ವಾಮಿ ।
ನಿನ್ನಿಂದಲೇ ಇದ ನೆರಪೇೞಿಸುವೆ ॥ ಪಲ್ಲವಿ ॥

ಚ ॥ ಸಿರಿಯರಾಣ್ಮ ಕೇಳ್ ನಿನ್ನ ಸೇವೆಗಲ್ಲದ ನಾಡ ।
ಸಿರಿಬಲುಮೆಯ ಕೂರ್ತು ಚಿಂತಿಸೆನು ।
ಇದ । ಭರದಿ ಸಾಧಿಪೆನೆಂಬ ಪಲದಾೞಿಯೊಳು ಪರಿ ।
ಪರಿದು ಪಲರ ಬೇಡಿ ಪಡಬಾಱೆನು ಕೃಷ್ಣ ॥ ೧

ಪತನವಪ್ಪುದೆಂಬ ಭಯಪರವಶದೊಳು ।
ಮಿತಿಗೊಂಬ ಸಗ್ಗವ ಕಾಮಿಸೆನು ।
ಗತಿ ನೀನೆಂದೆಣಿಸದ ಕಾಮ್ಯಕರ್ಮದ ವಿ ।
ಪ್ರತಿಪತ್ತಿಯೊಳಾನು ಪಡಬಾಱೆನು ಕೃಷ್ಣ ॥ ೨

ಎಱೆಯು ಶ್ರೀಱಕದೇವೇಂದ್ರವರದ ನಿನ್ನ ।
ಮಱೆವ ಕೈವಲ್ಯಕೆ ಮನವಿಡೆನು ॥
ಈಸಿಱಿಯನೆಳಸಿ ನಿನ್ನ ಸೇವೆಯನುೞಿದು ಗೆಯ್ವ ।
ಬಱುಯಾಗಹೋಗಾನು ಪಡಲಾಱೆನು ಕೃಷ್ಣ ॥ ೩ —೬—

ವಚನ । ಈಸಂಕೀರ್ತನೆಯ ಪಂಚಪದಿಯೊಳ್ ತನ್ನಂ ನಂಬಿದವರಂ ವೈರಾಗ್ಯದೊಳಂ ಕರ್ಮಜ್ಞಾನಭಕ್ತಿಗಳೊಳಂ ಪ್ರಪತ್ತಿಯೊಳಂ ಕೊಱತೆಯುಳ್ಳೊಡಮಾಭಾರಮನವರೊಳ್ ಹೊಱಿಸದೆ ತಾನೇ ಪೊತ್ತು ನಿರ್ವಹಿಸಿ ರಕ್ಷಿಸುವನೆಂಬುದಂ ನಿರವಿಸುವರ್.

॥ ರಾಗ—ಕೇತಾರಗೌಳ ॥

ನಡೆಯದಿರ್ಪವನಲ್ಲ ನಡೆವವನುಮಲ್ಲ । ನಡೆಯದೆ ನಡೆವ ಬಱುನಟನೆಯ ನಗೆನಗೆ ನಲ್ನಡತೆಗಳನಿತ್ತು ನಿನ್ನಾಳೆನಿಪುದೆನ್ನ ॥ ಪಲ್ಲವಿ ॥

ಚ ॥ ಒಡೆಯನಾಣತಿವೆರಸಿದೂಱಿಗವಿದೆಂದು ಮನ ।
ವಿಡಿದು ಸತ್ಕರ್ಮಗಳನೊದರಿಸುವೆನೊಮ್ಮೆ ॥
ಒಡಲೊಡವೆ ಪೊನ್ನೊಡವಿ ಮಡದಿಮಕ್ಕಳ ಪೊರೆವ ।
ಸಡಗರದೊಳೀವಗೆಯ ಸಡಿಲಿಸುವೆನೊಮ್ಮೆ ॥ ೧

ಅಱಿಯದಿರ್ಪವನಲ್ಲ ಅಱಿವವನುಮಲ್ಲ । ಅಱಿಯದಱಿತವನೆನಿಸುವಱು ಮರುಳಿಗೆನಗೆ ನಲ್ಲಱಿವವನುಗೊಳಿಸಿ ನಿನ್ನಾಳೆನಿಪುದೆನ್ನ ॥ ಪಲ್ಲವಿ ॥

ಚ ॥ ಪೆಱತೆನಿಪ ತತ್ವಗಳ ಚಿತ್ತರವನಾರಯ್ದು ।
ನೆಱೆಯಿರುವ ಜೀವನನು ಚಿಂತಿಸುವೆನೊಮ್ಮೆ ।
ಬಱಿಯ ವಿಷಯದ ಸವಿಗೆ ಬಸವೞಿದು ಸೊರ್ಕಿ ಮ ।
ಯ್ಮಱೆತು ಜಿಜ್ರನೆ ಬೆಱೆತು ಮತಿಗಿಡುವೆನೊಮ್ಮೆ ॥ ೨

ಆಸೆಯಿಲ್ಲದವನಲ್ಲ ಆಸೆಗನುಮಲ್ಲ । ಆಸೆಯಿಲ್ಲೆಂದು ಫಲವಾಸೆಗೆಯ್ವೆನ್ನ ಬಯಲಾಸೆಯನು ಕಳೆದು ನಿನ್ನಾಳೆನಿಪುದೆನ್ನ ॥ ಪಲ್ಲವಿ ॥

ಚ ॥ ಈಸಕಲವಿಷಯಂಗಳಿರವನೆರ್ದೆಗೊಳಿಸಿ ಬಲು ।
ಪೇಸಿಕೆಯಿದೆಂದೊಡನೆ ಪೆಱದೆಗೆವೆನೊಮ್ಮೆ ॥
ಮೋಸದಿಂದವಱೊಳುಱೆ ಮುೞುಗಿ ಮುಂಗೆಟ್ಟು ಕಡು ।
ಗಾಸಿವಡೆದಳವೞಿದು ಖತಿಗೊಳುವೆನೊಮ್ಮೆ ॥ ೩

ನೇಹವಿಲ್ಲದವನಲ್ಲ ನೇಹಿಗನುಮಲ್ಲ । ನೇಹವಿಲ್ಲದ ಪುಸಿಯ ನೇಹಿಗನಿಗೆನಗೆ ನೆರೆನೇಹವನು ಬಳೆಸಿ ನಿನ್ನಾಳೆನಿಪುದೆನ್ನ ॥ ಪಲ್ಲವಿ ॥

೩॥ ದೇಹಕರಣಗಳ ಬುದ್ಧಿಯನಿತ್ತವನಿಗೆ ದಾ ।
ಸೋಹಮೆಂದಕ್ಕಟಯೊಳು ಸೊರ್ಕುವೆನದೊಮ್ಮೆ ।
ಈಹದನನುಳಿದು ನಾನೆನ್ನದೆಂಬೀಕ್ಷಿಬದ ।
ಮೋಹದೊಳು ಕಾಲೂಱು ಮೊಗಗೆಡುವೆನೊಮ್ಮೆ ॥ ೪

ನಂಬದಿರ್ಪವನಲ್ಲ ನಂಬುವನುಮಲ್ಲ । ನಂಬದೇ ನಂಬಿದವನೆಂಬ ಡಂಬಕನೆನಗೆ ನಂಬುಗೆಯನಿತ್ತು ನಿನ್ನಾಳೆನಿಪುದೆನ್ನ ॥ ಪಲ್ಲವಿ ॥

೫॥ ನಂಬಿ ಚಕದೇವೇಂದ್ರನಾಥಗೋಪಾಲನ ಪ ।
ದಾಂಬುಜವ ನಿರ್ಭರದೊಳನುಗೊಳುವೆನೊಮ್ಮೆ ।
ಕೊಂಬ ಪುರುಳುಂಬೂಟವೆಂಬ ಬಲೆಸಿಲುಕಿನೊಳು ।
ಪಂಬಲಿಸಿ ಪಲವನುಱೆ ಬಸವಱುವೆನೊಮ್ಮೆ ॥ ೫

ಮಱಿಮೆಯ ಸಪ್ತಪದಿ ಸಂಪೂರ್ಣಂ.



— ಸಪ್ತಪದಿ — V. —

ನೋಡೆ ಸುರಾಸುರರ್ ಶರಧಿಯಂ ಕಡೆಯುತ್ತಿರೆಯೆಂಟು ದಿಕ್ಕಿನೊಳ್ ।
ತಿರೆ ಕವಿದೆಯ್ದೆ ಸುರ್ಗನುಸಿಗೆಯ್ದು ಪಱಂಬುವ ಮಂದರಾದ್ರಿಯೋಳ್ ।
ಕಿಱುಪಿದಿದೆನ್ನವೆಣ್ದೆಸೆಯು ಮನ್ನಿಯರೊಜ್ಜೆನೊಳೊಂದೆ ವೇಳೆಯೊಳ್ ।
ಪರಿತರೆ ಪೊಯ್ದು ಪೊಯ್ದು ಭರದಿಂ ಬಱಗೆಯ್ದ ಸಭೇದ್ಯವಿಕ್ರಮಂ ।
ಮಾಗಂ ಕೊಯ್ದಸೆವಂತರಾವ್ರವಸಮಂಗಿತ್ತಸ್ರಸನ್ನಾಸಮಂ ।
ಭೋಗರ್ ಭಾವಿಸೆ ಪೊಯ್ದು ಚಿತ್ರಪಥೆಗುಸ್ದ್ರಾಜಿತಜಿಘಾಂಸೆಯಂ ।
ಜೋಗಂ ದಾವಜಿಕಾಕಪಾಂಕಸಣಲಿಂ ಕೊಯ್ದಲ್ಲ ದೇಶಕ್ಕಮು ।
ಪ್ಪಂಗಂ ಪ್ರೋಪಿಸನಾಳ್ದ ಸಸ್ರತಿಮಹಿಂರಂ ಮೋದಿಸಿಂಚಕ್ರಮಂ

ಪಂಚನ । ಈ ಐದನೆಯ ಸಪ್ತಪದಿಯೊಳ್ ಪ್ರಸನ್ನರ್ಗೆ ಶ್ರೀಮನ್ನಾರಾಯಣನಲ್ಲದೆ ಪೆಱತೊಂದು ಗತಿಯಿಲ್ಲವೆಂಬುದಂ ನಿರವಿಸುವರ್.

॥ ರಾಗ—ಯರಕಲ ಕಾಂಬೋಧಿ ॥ ತಾಳ—ರೂಪಕ ॥

ಸಲ್ಲವಾಡದಿರೆನ್ನ ಸಲಹೊ ಪಕ್ಷಿತುರಂಗ । ವಲ್ಲಭ ವಾಸುದೇವಾ ॥
ಬಲ್ಲರ ಮಾತಿನ ಬರವನಱೊಳು ಬಂದೆ । ಬಲ್ಲೆನೆಂದೊಡೆದೊಡನುಱದುಪೋಪವನಲ್ಲ ॥ ಪಲ್ಲವಿ ॥

ಚ॥ ಕಡಲೊಳು ನಡೆವ ಹಡಗಿನ ಕಂಭವ ।
ನಡರಿ ಸೇರಿದ ಪಕ್ಕಿಯಂದದಿಂದಾನು ॥
ಎಡಬಲದೊಳು ಜೋಡೊಂದಿರವುಗಾಣೆನು ನಿ ।
ನ್ನಡಿಗಳ ಸೇರಿದೆನನ್ಯವನಱಿಯೆನು ॥ ೧

ಪೊಱಗುಸಿಡಿಲುಗಳ ಪೋಹರದೊಳು ನೊಂದು ।
ಒಱಲಿ ಬಾನೊಳು ಪರಿಪರಿದು ಮುಗಿಲುಗಳಿಂ ॥
ದಿಱಿವ ಮೞಸಲ ನೀರನೆಳಸುತ ಬಾಯ್ಬಿಡು ।
ಪೆಳೆಯು ಚಾದಗಗೆ ನಾನೆಣೆಯೆನಿಸಿರ್ಪೆನು ॥ ೨

ನೀತಿಯಾದೊಡಮಪನೀತಿಯಾದೊಡಮದ ।
ನೀತೆಜನೆಂದು ಬಂದಿದಿರಾಡಲಱಿಯದೆ ॥
ಭೂತಳಾಧಿಪನೆಂತು ಪೊರೆದೊಡಮವನಡಿ ।
ಗೋತು ಸೇರಿದ ಕುಳವೊಕ್ಕಲಂತಿರ್ಪೆನು ॥ ೩

ಕಾರವೊಗರುಹುಳಿಕಹಿಗಳನಿತ್ತೊಡ ।
ಮೋರಂತೆ ಸಹಿದಪಟೊಳು ಭೇದವೆಣಿಸದೆ ॥
ಹಾರೈಸಿ ವೈದ್ಯನ ಮವಣನಾರಯ್ದು ಮ ।
ಹಾರೋಗಿಯಂತಾನು ಮದವೞಿದಿರ್ಪೆನು ॥ ೪

ಒಲಿದು ಲಾಲಿಸಿದೊಡಮೊಲ್ಲದಿರ್ದೊಡಮೊಂದೆ ।
ನೆಲೆಯೊಳು ನಲ್ಲನ ನೆರೆನಂಬಿ ಬಾೞುವ ॥
ಕುಲದೊಳು ಪುಟ್ಟಿದ ಕುವರಿಯಂದದೊಳು ನಿ ।
ನ್ನೊಲವ ಕೂರ್ತಿರುವೆ ನಾನುೞಿದುದನಱಿಯೆನು ॥ ೫

ತಡೆಯಲಾಱದ ಕೋಪದಟ್ಟುಳಿಯಿಂದೊಮ್ಮೆ ।
ಬಡಿದು ನೂಕಿದ ತಾಯ ಬೞಿಯಿಂದ ತೊಲಗದೆ ॥
ಎಡೆವಿಡದಡಱುತವಳೆಱಕವನೆಳಸುವ ।
ಕಡುಗೂಸಿನಂದವ ಕೈವಿಡಿದಿರ್ಪೆನು ॥ ೬

ಪರಿಪರಿ ಫಲಗಳ ಬಗೆಗೊಳಿಸದೆ ನಿನ್ನ ।
ಚರಣವ ಬಯಸುವ ಚದುರರಂತಾನು ॥
ತಿರುಮಲೆಯಾರ್ಯ್ಯರ ದಿವ್ಯಕೃತಿಯನಿದ ।
ನಿರದೆ ಪಾಡುವೆನು ಕೇಳಿತರವನಱಿಯೆನು ॥ ೭

ಉಪಾಯ ಸಪ್ತಪದಿ ಸಂಪೂರ್ಣಂ.



## — ಸಪ್ತಪದಿ — VI. —

ಬೞಸಿಯುಮನೊಂದುಗೂಡಿ ಪರಿತಂದ ವಿಪಕ್ಷಿತಿಪಾಲವರ್ಗಮಂ ।
ಘುೞಿಲನೆ ಪೊಯ್ದು ಸಂದೊಡವು ಪೆರ್ಮೆಯುಮುತ್ತಿಮುಂಗಿದಿರ್ಚಿದಾ ॥
ಬೞಯುತ್ತರಪ್ಪ ಬಲ್ಕು ತುಪರಾಹಸನೇಮುಲರಾಹಸಂ ಕರಂ ।
ಮುಱುಗಿಸಿ ಮ್ಯೆಮೆವೆತ್ತ ನೆಸಲೊಪ್ಪುಗುವಿರಾಜಿಕದೇವಭೂವರಂ ॥ ೧೩
ತಕ್ವದೆ ಥಿಳ್ಳಿಯಾಳ್ವ ದೊರೆಯುಂ ಕೆಳೆಗೊಂಡವನತ್ತಣಿಂದಮೇ ।
ತೊಳ್ಕಳವೆತ್ತ ಭಾಗನಗರಾಧಿಪನಂ ವಿಜಯಾಪುರೀಶನಂ ॥
ಬಾಹ್ಲೀಣನೆಂಬನಂ ಪಿಡಿದು ಕೆಯ್ದುಱಿಗೊಂಡುಱೆ ಪಾಡುಪಂತದಿಂ ।
ಬಾಹ್ವಸಭೇದ್ಯವಿಕ್ರಮನೆನಿಸಲ್ ಮೆಱೆವಂ ಚಿಕದೇವಭೂವರಂ ॥ ೧೪

ವಚನ ॥ ಈವರಾಜನೆಂಬ ಸಪ್ತಪದಿಯೊಳ್ ಪ್ರಸನ್ನರ್ಗೆ ಭಗವದ್ಗುಣಾನುಭವಮುಂ ತತ್ಕಿಂಕರವೃತ್ತಿಯುಮಲ್ಲದೆ ಪೆಱತೊಂದು ಭೋಗಮುಂ ರುಚಿಸದೆಂಬುದಂ ನಿರೂಪಿಸುವರ್.

॥ ರಾಗ— ಕಾಂಬೋಧಿ ॥ ತಾಳ ರೂಪಕ ॥

ನಿನ್ನನಲ್ಲದನ್ಯರನೆಣಿಸೆನೆ । ಅ । ಚೆನ್ನಿಗ ಪಶ್ಚಿಮರಂಗ ಪಟ್ಟಣದ ಚೆಲುವ ಲಕ್ಷ್ಮೀನಾರಸಿಂಹ ಎನ್ನೆಱೆಯಾ ॥ ಪಲ್ಲವಿ ॥

ಚ ॥ ಜಲರುಹನಾಭ ನೀನು ಸಕಲ । ಜಗದೀಶನೆಂದು ತಿಳಿದು ಮಿಕ್ಕ । ನಳತೆಯು ನೆಲನನಾಳುವ ದೇವರಿಗಾನೆಱಗುವೆನೆಂತು ॥ ಕಳೆದು ಮೂಜಗದ ಕತ್ತಲೆಯೆಲ್ಲವ । ತೊಳಗುವ ಸೂರ್ಯನ ತೋಱುಕೆಗಲರ್ದ । ಕಳಿಪೆತ್ತ ಪೆಱವೊಳದಾವರೆ ಮಿಂಚು । ಬೞಬೞಮಿನ ಬೆಳಕಿಗೆ ಪೊಗರೇಱುವುದೆ ॥ ೧

ಪರಮಾತ್ಮ ನೀನು ಪರತತ್ವವೆಂದು । ಭಾವಿಸಿ ನಿನ್ನ ಬಯಸಿ ಮಿಕ್ಕ । ತರವಳಿದೈವದಾಸೆಗೆ ಸಿಲುಕಿ ದಾಱುಡಿದಪ್ಪುವೆನೆಂತು ॥ ಭರದೊಳು ಕಡಲ ಬಳಿಗೆ ಪರಿವ । ಬಲುಮೆಯಿಂದೊಳೆಸೆವ ಬಿಂಕದ ಪೆರ್ವೊನಳೆ । ಮುರವುಗೆಟ್ಟಡಿದೊಳು ತೋಱುವ ಕಿಱುಹೊಕ್ಕರಣೆಯ ಬಾವಿಗೆ ಹವಣಿಸುವುದೆ ॥ ೨

ಸಿರಿರಾಣಿಯರಸ ನಿನ್ನ ದಿವ್ಯ । ಚರಣಾರವಿಂದದೊಳೆಱಗಿ ಮಿಕ್ಕ । ಮರುಳುದೈವಗಳ ಮಾಯೆಗೆ ಸಿಲುಕಿ ಪ್ರೈಮಱಿದಿರ್ಪೆನೆಂತು ॥ ಸರಸಿಯೊಳಲರ್ದ ಕೆಂದಾವರೆಗೆಱಗಿ । ಸವಿದಱುಪೊಳುಗಂಪ ಸಂತಸದೊಳೋಗುಮಿಗೆ । ಪರವಶಗೊಂಡಿರ್ಪ ತುಂಬಿಯಿಂದು ಕೊಳವಳಿಕೆಗೆ ಪೋಲಿಕ್ಕೆ ಕೂರ್ತೆಱಗುವುದೆ ॥ ೩

ಪಱಿವಿನಿ ಕಿಲ್ಲನೆನಿಸಿ ಮೆಱೆವ । ಪಾವನಚರಿತ ನಿನ್ನ ಭಜಿಸಿ । ಒಱಿಕಾಸು ಪಲವ್ರಬಣಗುದೆವರ ಭಜನೆಗೆಯ್ವೆನೆಂತು ॥ ತಿಳಿನೀರೊಳೆಸೆವ ಮಾನಸಸರಸಿಯಾದಲ್ಲಿ ನಲಿದು

ಸಲಪೇಱುವಂತೆ । ಪುಱಿತು ಪೊಲಸುಗಂಪುವೆತ್ತು ಪಾಪಸೆಗೊಂಡ ಕೊಳಚೆವಳ್ಳದೊಳು ಕೂರ್ತೆಱಗುವುದೆ ॥ ೪

ಶ್ರೀವರ ನಿನ್ನ ಕಲ್ಯಾಣಗುಣವ ಭಾವಿಸಿ । (ಯಾನಂದವಡೆದು) ನಿನ್ನ ಬಯಸಿ ಮಿಕ್ಕ । ಗಾವಿಲ ದೈವದ ಗಡಣದಿರವ ಗಣನೆಗೆಯ್ವೆನೆಂತು ॥ ಮಾವಿನಿಂಬಣ್ಣ ಮಸವಾಱಿ(ಸವಿ)ಸಿದು । ಪೆಮ್ಮುಱೆದುರ್ಕಿ ಸೊರ್ಕಿರುವರಗಿಳಿ । ಗಾವಳಿವಡೆದು ಕಾಗೆಗಳೆಱಗುವ । ಬೇವಿನ ಪಣ್ಗಾಸೆವೆತ್ತೆಱಗುವುದೆ ॥ ೫

ಅಂಬುಜಲೋಚನ ಕೇಳು ನಿನ್ನ । ಕೃಪಾಮೃತಪಾನದಿ ತಣಿದು ಮಿಕ್ಕ । ಡೊಂಬಿ ದೈವಂಗಳ ಬೆಂಬೞಿವಿಡಿದು ಪಂಬಲಿಸುವೆನೆಂತು ॥ ಅಂಬರತಲವನಡರಿ ಮುಗಿಲ । ಮುಂಬನಿಯುಂಡು ಸೊರ್ಕುವ ಚಾದಗೆ । ಗುಂಬಚೆಂಬಿನೊಳು ತುಂಬಿರ್ದ ಪೞನೀರ ಕೊಂಬೆನೆಂದೆಣಿಸಿ ಕೂರ್ತೆಱಗುವುದೆ ॥ ೬

ಶ್ರೀನರಸಿಂಹ ನಿನ್ನಡಿಗೊಲಿದು । ತಿರುಮಲೆಯಾರ್ಯನುಸಿರ್ದ ಸರಸ । ಗಾನವನಾಲಿಸಿ ಮಿಕ್ಕ ದೈವಗಳ ಗನ್ನವ ಕೇಳ್ವೆನೆಂತು ॥ ಜೇನಿಗೆ ಸಾಸಿರವಡಿ ಸೊಗಸೆನಿಸುವ । ತೇಜದೊಳೆಸೆವ ಸೊದೆಯುಂಡು ಸೊರ್ಕಿ ನಿಂ । ದಾನಂದದೊಳು ಜಾಱುವಮುರರಿಳೆಯು ಪುಲು । ಮಾನಸರೂಟವ ಮಸಗೊಳಿಸುವರೆ ॥ ೭

ಫಲಸಪ್ತಪದಿ ಸಂಪೂರ್ಣಂ.

## — ಸಪ್ತಪದಿ — VII —

ಇಡೆ ಕೆಯ್ಪಿಟ್ಟಿಯನೊಂದನೇ ಜಡಿದು ನಿಸ್ಸೀಡಾಪುವರ್ ತಮ್ಮ ಕೆ ।
ಯ್ಪಡಿಯೊಳ್ಕೃಮುವನೆಲ್ಲಮಂ ರಿಪುನೃಪರ್ ನಿಂ ಬಂತೆಯುಂಗೊಂಡು ಬೊ ॥
ಬ್ಬಿಡುವಾಪಿರ್ವಿದಿರೇಱಿ ತಾಮಿದಿರಿಸರ್ ವ್ಯಾಸಮ್ರೀಷಂಗಳಂ ।
ಸುಡಿ ನಿನ್ನಪ್ರತಿಮತ್ವಮೆಂತೊ ಚಿಕದೇವಾ ಬಲ್ಲರೊಳ್ ಬಲ್ಲಹಾ ॥ ೧೫

ಇರವೊಱಿವಾಲಿಸಿ ಪ್ರೋನಲನಿಂಬೆ ತೃಷಾಭರಮಂ ನಿವಾರಿಪರ್ ।
ಜರಿದು ಪ್ರೋವಟ್ಟಿ ನೀಳ್ಕ್ಮಡಿಯು ಪೆರ್ಮುಗಸುಕಂ ಬಿಸಿಲಾರ್ಪನಾಱಿಪರ್ ॥
ಭರವಸದಿಂದೆ ನಂದಿಸುವೆನೆಂದೆರ್ದೆಗಿಚ್ಚ ನರಾತಿಕಾಂತೆಯರ್ ।
ಪರಿತರೆ ನಿನ್ನ ಬಲ್ಪತೆ ಸೊಗಂಬಡುವರ್ ಚಿಕದೇವಭೂವರಾ ॥ ೧೬

ವಚನ ॥ ಇಂತಾಱುಂ ಸಪ್ತಪದಿಗಳೊಳ್ ದಿವ್ಯಾತ್ಮಗುಣಂಗಳನನುಭವಿಸಿ ಈ ಸಪ್ತಮಸಪ್ತಪದಿಯೊಳ್ ದಿವ್ಯಮಂಗಳವಿಗ್ರಹಗುಣಂಗಳನನುಭವಿಸುವರ್.

ರಾಗ—ಯರಕಲ ಕಾಂಬೋಧಿ ॥ ತಾಳ—ಝಂಪೆ ॥

ಕಂಗೊಳಿಸದಿರಲಾಜಪ ಕಣ್ಣ ಪುಣ್ಯದ ಬೆಳಸ । ಕಂಗೊಳಸದಿರಲ್ಲಾಜನೆ । ಪೊಂಗೊಳಲ ನುಡಿಸುತಿರ್ಪೊತ್ತಿನೊಳು ಪುರವೀಧಿ । ಸಿಂಗರಿಸಿ ಮೆಜೆವ ಹರಿಯು ಸಿರಿಯ ॥ ಪಲ್ಲವಿ ॥

ಚ ॥ ಕ್ರಮದಿ ನಡುತೋಳ್ಮುಡಿಗಳೊಂದಿನಿಸು ಕೊಂಕಿನೊಳು ಕಮನೀಯ ವೆಂದೆನಿಸಿ ಮೆಜೆಯೆ । ಸಮತಳದಿ ನಿಂದಡಿಯು ಮುಂದೆ ಮತ್ತೊಂದಡಿಯು ನಾರ್ಜಿ ಯುಂಗುಟವನೂಱ । ರಮಣೀಯರೇಖೆಯೊಳು ನಿಂದು ಕೊಳಲುಲಿಗೊಳುವ । ರಾಯಗೋವಳನ ತೋಱ ನೀಱೇ ॥ ೧

ಬಳಬಳಸಿ ಸಲಿಸಲಿವ ಬಾಲಕರ ಕೆಯ್ಯ ತಪ್ಪಳೆಯೊಳುಜ ಬಣ್ಣವೇಱ । ಕೆಳೆವಕ್ಕಳೆಡಬಲದೊಳೊಲಿದೂದುವೆಲೆಸುತ್ತಿನೊಳು ಸರವಸೋಂದುವೆರಸಿ । ಕೊಳಲ ಸುಜ್ಞರವ ಕೊಸರಿಡಿಸಿ ಕುಡಿವರಿಯಿಸುವ । ಕುವರಗೋವಳನ ತೋಱ ನೀಱೇ ॥ ೨

ಮತ್ತಕದೊಳೆಸೆವ ಕಾಚ್ಮೆರದ ಪೂಸನೆತಳಿರು ಕತ್ತುರಿಯ ಪೀಲಿ ಚಲಿಸೆ । ಸುತ್ತುವೆಳದುಂಬಿಗಳ ಸೊಬಗಿನೊಳು ನಿಱಗುರುಳು ಸುಜಾಯ ಮೊಗದಾವರೆಯೊಳ । ಚಿತ್ತಜಾವೇಶಮಂತ್ರಗಳ ಕೊಳಲಿಂದಳೆವ । ಚೆನ್ನಗೋವಳನ ತೋಱ ನೀಱೇ ॥ ೩

ಕಳೆವೆತ್ತ ಕತ್ತುರಿಯ ವೀಣೆಯೊಡನೊಡನುಣ್ಮಿ ಕವಿವ ತನಿಗಂಪಿನಂತೆ । ಬಳೆವ ತಾನದ ಗಮಕಗತಿಯ ಪ್ರೈಸಿರಿಗೆ ಮೊಗ ಬಗೆಬಗೆಯ ಭಾವವಡೆಯೆ । ಕೊಳಲಿಗಿಂದುಟಿಯ ಸವಿದೋಱಯೊಳುದನಿಗೊಳುವ । ಕೊನಬುಗೋವಳನ ತೋಱ ನೀಱೇ ॥ ೪

ಗುಡಿಗೊಳುವ ಕುಣಿವ ಕೊಂಕುವ ನಿಮಿರ್ವ ಚಳಕದೊಳು ಕುಡುವುರ್ವ ಕೋಟಲೆಗೊಳೆ । ಒಡನೊಲೆವ ತೊನೆವ ತೂಗುವ ಭರದಿ ಕನ್ನವುರ ಜಡಿದು ಕದಪಿನೊಳು ಸಲಿಸೆ । ಬೆಡಗು ಮಿಗೆ ಶಿರವನೊಲೆದೊಲೆದು ವೇಣುವ ನುಡಿಪ । ಬಿನದಗೋವಳನ ತೋಱ ನೀಱೇ ॥ ೫

ಕಪಿವ ಕಡೆಗಣ್ಣ ಸೇರುವ ನೀಳ್ವ ಸೆಲೆಗೊಳುವ ಕರಗುವರೆಮುಗಿವ ನಗುವ । ಸೆವದಿ ತೆರೆಗೊಳುವ ತೇಲುವ ಪೊಳೆವ ಪೊಗರೊಗುವ ನೇಹದಿನಿರಸದಿ ಸನೆವ । ಸವಿನೋಟದಿಂದ ಕಣ್ಮನವ ಕೈಸೆಱಗೊಳುವ । ಚದುರಗೋವಳನ ತೋಱ ನೀಱೇ ॥

ಹರವಿರಿಂಚರ ಬಗೆಗೆ ಹವಣೆನಿಸದಾನಂದದಿರವ ಗೊಲ್ಲರ ಬೀಡಿನ । ನೆರೆ ಹೊರೆಯ ಪಲವು ಮರ ಮೊರಡಿ ಮಿಗ ಪಕ್ಕಿ ಕಱು ತುಱುಗಳಿಗೆ ಸೂಱೆಗೊಳಿಸಿ । ತಿರುಮಲಾರ್ಯರ ಮನವ ಸೆಱೆವಿಡಿದುಗೊಂಡೆಸೆವ । ದೇವ ಗೋವಳನ ತೋಱ ನೀಱೇ ॥ ೭

ಮೂರ್ತಿಧ್ಯಾನ ಸಪ್ತಪದಿ ಸಂಪೂರ್ಣಂ.



ವೃ॥ ದಲಿತಾರಾತಿಸಿರಾಜ್ಯಾಂಕುರಪ್ರತಿಸರಾಲಂಕಾರೆ ಸಂಭಿನ್ನಕೃ |
ತ್ತಿಲಸಚ್ಛತ್ರಪಟೀಪರೀತ ರಿಪುಪೃತ್ನಾಂಕೇರುಹೋತ್ತಂಸನಂ
ಜಾಲ ನೋಂಪಿಂ ಚಿಕದೇವರಾಜ್ಞವಧು ಗಾಢೋತ್ತಾಹದಿಂ ಪ್ರಾರ್ಥನಾಂ |
ತ್ರಲತಾವಾಲೆಯನಿಟ್ಟಳಂದು ಜಯಕಾಂತಾಂಗಾಪವ್ರೋದ್ವಾಹದೊಳ್ ॥ ೧೭

ದಳಿತಾರಿಭಶಿರಃಕಪಾಲತತಿಭೃಂಗಾರಂಗಳಂ ಪಿಡಿದಿಪ |
ಗ್ಗಳಶೃಂಗಂಗಳಸಂಸಿಂಚಿತಸಿರಾಪಾಂಶಂಗಳಂ ಪೇಸಿಯಿಂ |
ತಳೆದೊಳ್ಪಿಂ ಚಿಕದೇವರಾಜ್ಞವಧು ರತ್ನಾಸಾರಕಾತ್ರಿರಜೋ |
ಕುಟಿಯಂ ಸೂಸಿದಳಾಪದ್ರೋತ್ತವದೊಳಾಶಾಕಾಮಿನೀವೃಂದದೊಳ್ ॥ ೧೮

ಬಲೆಯುತ್ತೆ ಲೀಲೆಯೊಳ್ ಕರಿಕನುತ್ಕ್ರತಿಯಿಂ ಚಿಕದೇವ ತಾವಕಾ |
ಸಿಲಲನೆ ಸಂಗರಾಂಗಣದೊಳೊಕ್ಕನವೇಕ್ಷ್ ಪ್ರೋಸಗೆಲ್ಲವೆಣ್ಣುವು |
ಗ್ಗಲಿಸೆ ಗತಾಗತಕ್ರಮದೆ ಜೈತ್ರಜಿವಾದಜಿಕಾಕಪಾದಿಮು |
ರ್ಜಲಿತಮರಾಟರೊಪ್ಪುಡೆಯ ಸಂದಲೆಯಿಂ ತಿರಿಕಲ್ಲನಾಡಿದಳ್ ॥ ೧೯

॥ ಲಯಗ್ರಾಹಿ ॥

ಬಂದು ದೆಸೆಯೊಳ್ ತುರುಕರೊಂದು ಕಡೆಯೊಳ್ ನೆರೆಸ
ರೊಂದೆಡೆಯೊಳಾರೆಯರ ಬಿಂದಮಳವಿಂ ಜೀ |
ಜಾಂದು ಬಟಿಯೊಳ್ ತಿಗುಳರೊಂದಿದವಿರೊಳ್ ಕೌಪಗ |
ರೊಂದು ಕೆಲದೊಳ್ ಮಳೆಸರೊಂದುವೆರೆದೆಲ್ಲರ್ |
ಸಂದಣಿಸಿ ಕಾಳಗಕೆ ಮುಂದುವರಿದಸ್ಸಮದ
ಟಿಂದವರ ಘಟ್ಟಗಳ ಸಂದಲೆಗಳಂ ದಿ |
ಗ್ಬಲಂದಬಲಿಯಿತ್ತು ನಲವಿಂದೆ ಚಿಕದೇವನೃಪ |
ನಂದಮಿಗೆ ಪೆರ್ಜಸಮನೊಂದಿ ನೆಗಪಾಲ್ಗಂ ॥ ೨೦

॥ ಗದ್ಯಂ ॥

ಇದು ಸಕಲಜಗದುದಯವಿಭವಾದಿಲೀಲನುಂ, ಲಕ್ಷ್ಮೀಲೋಲನುಂ, ಅಖಿಲಹೇಯಪ್ರತ್ಯನೀಕನುಂ, ಅಪ್ರಾಕೃತಪ್ರತೀಕನುಂ, ಅವಾಪ್ತಸಮಸ್ತಕಾಮನುಂ, ಅನಂತಕಲ್ಯಾಣಗುಣಗಣಾರಾಮನುಂ, ಸಾರಸಭವಪೂಜಿತನುಂ, ಸನಕಮುನಿಸಭಾಜಿತನುಂ, ಯದುಶಿಖರಿಶಿಖರಾಲಂಕಾರನುಂ, ಯತಿರಾಜಸಂಪತ್ಕುಮಾರನುಂ, ತ್ರೈತರಕ್ಷಾಪರಾಯಣನುಮಪ್ಪ ಯಾದವಗಿರಿ ನಾರಾಯ

ಣಸಡಿದಾವರೆಯ ರಾಜೀಗದೊಳ್ ಬಳೆದೇೞ್ಗೆವಳೆವ ಯಾದವಕುಲೋದ್ಧಾರಕನುಂ, ಶುಭಗುಣೋದ್ಧಾರಕನುಮಾದ ದೇವರಾಜನೃಪಾಲಪೌತ್ರನುಂ, ಅತ್ರಿಗೋತ್ರಪವಿತ್ರನುಂ. ದೊಡ್ಡದೇವರಾಜ ಗರ್ಭಾಂಬುಧಿಕಲಾಧರನುಂ, ಸಕಲಕಲಾಧರನುಂ. ಅಶ್ವಾರೋಹಣಕಲಾರೇವಂತನುಂ, ಗಜಾರೋಹಣಮಘವಂತನುಂ. ಶಸ್ತ್ರವಿದ್ಯಾಭೃಗುರಾಮನುಂ, ಅಪ್ರತಿಮಧಾಮನುಂ, ಕರ್ಣಾಟಭೂಮಂಡಲಾಧೀಶನುಂ, ದೇವಸಂಕಾಶನುಂ, ಪಶ್ಚಿಮರಂಗಪುರಸಿಂಹಾಸನಾಧಿಷ್ಠಿತನುಂ. ಸುಪ್ರತಿಷ್ಠಿತನುಂ, ದೇವಬ್ರಾಹ್ಮಣಪರಿಪಾಲನೈಕಾನ್ತನುಂ, ಸಕಲಪ್ರಜಾಕಾನ್ತನುಂ, ಅಸಕೃದಾವರ್ತಿತಷೋಡಶಮಹಾದಾನನುಂ, ಆಶ್ರಿತಸರ್ವಶ್ರೇಯೋನಿಧಾನನುಂ, ರಸಿಕಜನಕರ್ಣರಸಾಯನೀಕೃತಸಂಗೀತವಿಸ್ತರನುಂ, ಸಾಹಿತ್ಯವಿದ್ಯಾನಿಕಷಪ್ರಸ್ತರನುಂ, ಪೂರ್ವದಿಗ್ವಿಜಯಯಾತ್ರಾವಿತ್ರಾಸಿತ ಚೇದಿಮಂಗಲೋಪಾನ್ತ ಕಾನ್ತಾರೋಪಗೂಢವ್ಯೂಢಸೇನಾಭಿಗುಪ್ತ ಪಾಂಡ್ಯಸೇನಾಧಿಪ ಸಂಗರಕಿರೀಟ ವೆಂಕಟಕೃಷ್ಣ ಶಿಬಿರಸರ್ವಸ್ವಹರಣಸಮಸಮಯಸಮಾಕ್ರಾನ್ತ ಮಳಲಿ ಪರಮತ್ತಿಶಾಲೆಯ ಚೇದಿಮಂಗಲ ಕೊಂಗು ಧಾರಾಪುರಾದಿ ಪಾಂಡ್ಯನೃಪ ದುರ್ಗಮದುರ್ಗಸ್ತೋಮನುಂ, ಸಂಗರಭೀಮನುಂ, ಉದ್ವೃತ್ತಸುರತ್ರಾಣಚಮೂವಿಕ್ಷೋಭಣವಿಚಕ್ಷಣ ವಿಕಟಮರಾಟ ಶಿವಾಜಿ ಪಾಜಿಸೇನಾಧಿಪ ಜಯತಜಿಕಾಟಕರ ದಾದಜಿಕಾಕಡ ಪ್ರಮುಖಕಂಠನಾಳೋಚ್ಛಲದ್ರಕ್ತಧಾರಾಸಿಕ್ತಕೃಪಾಣಸಂವರ್ಶನವಿಲೀನಹರಜಿ ಸಂತಜಿ ಮುಖ್ಯಮಹಾರಾಷ್ಟ್ರನೃಪಪ್ರವೇಕನುಂ, ಅಪ್ರತ್ಯನೀಕನುಂ, ಗಂಭೀರೋದ್ಧತಪರಿಘಾವರಣಭೀಷಣಶತಘ್ನೀಶತಸಂಕುಲಮತ್ತ ಮಾವಳಿಸೇನಾವಳೀವರ್ಮಿತಧರ್ಮಪುರೀಪ್ರಸಭಾಕ್ರಮಣಶ್ರಮಣನಿರ್ಜನೀಕೃತ ಕೆಂಗೇರಿ ಪಾಪಲೂರು ಜೇವ್ರಪಳ್ಳಿ ಜೈರಸೆತ್ತ ಕುನ್ನತ್ತೂರ್ ಮುಖ್ಯದುರ್ಗವರ್ಗನಿರಾಪದಾಸಾಕ್ರಮಣನಿರ್ವರ್ತಿತನಿಜಸ್ವೈರಿಕಸಮೂಹನುಂ, ಆಹವಕಲಾಶ್ವೇತವಾಹನನುಂ, ದಕ್ಷಿಣದಿಗ್ವಿಜಯಯಾತ್ರಾವಿತ್ರಾಸಿತ ಪಲಾಯಿತ ಪಾಂಡ್ಯಬಲಾನುಧಾವನಪ್ರಸ್ತನಿಜಬಲವಿಶ್ರಾನ್ತಿಸ್ಥಾನೀಕೃತ ಜಲಧಿವೇಲಾತಮಾಲಾರಣ್ಯನುಂ, ಅನತಜನಶರಣ್ಯನುಂ, ಪಶ್ಚಿಮದಿಗ್ವಿಜಯಪ್ರಸ್ಥಾನ ಭೇರೀರವಾಕರ್ಣನಸಂಭ್ರಾನ್ತದುರ್ದಾನ್ತ ದುರಾಸದಾಸನಸನಾಥ ಕೆಳದಿನೃಪ ಸಮರ್ಪಿತ ಸರ್ವಸ್ವನಿರ್ವಾಪಿತಕೋಪನುಂ, ಅಮಿತಪ್ರತಾಪನುಂ, ಉತ್ತರದಿಗ್ವಿಜಯ

ಸಮಯಾಭಿಯಾತ ಕುತುಪಶಾಹ ವಾಹಿಸೀವಿಮರ್ದನ ಕ್ಷಣಾಕ್ರಾಂತ ಕಂದಿಕೆರೆ ಚಿಕ್ಕನಾಯಕನಹಳ್ಳಿ ಹೊನ್ನವಳ್ಳಿ ಸಾರತವಳ್ಳಿ ತುಱುಗೆರೆ ಪ್ರಮುಖ ದುರ್ಗ್ರಹಪ್ರಾಕಾರವಾರನುಂ, ಅಸಹಾಯಶೂರನುಂ, ಜಡಕನದುರ್ಗಪತಾದ್ಗ್ರಹಣವೇಳಾಸಿಖಾತಸುರಂಗಮುಖಾನಲೋತ್ಕ್ಷಿಪ್ತಗಂಡೋಪಲಪಾತನಿರ್ಧೂತ ಬಿಜ್ಜವರ ಮದ್ದಗಿರಿ ಚೆನ್ನರಾಯದುರ್ಗ ವೀರಣದುರ್ಗಾದ್ಯಸಂಖ್ಯ ದುರ್ಗವರ್ಗಾಕ್ರಮಣಾವಸರಾವನತಸಾಮಂತನೃಪಾಲಮೌಳಿಮಣಿಘೃಣೀನೀರಾಜಿತಪದರಾಜೀವನುಂ, ಮಹಾನುಭಾವನುಂ, ಸಾಹಜಿಮುಖಮರಾಟನೃಪರಾಜಧಾನೀಕೃತಾಭಂಗುರಬೆಂಗಳೂರ್ ಹರಣ ನಿಷ್ಪ್ರಾಣಿತ ಶಂಭುಜಿ ಸಾಹಜಿ ಸೂತಜಿ ಹರಜಿ ಪ್ರಮುಖ ಮಹಾರಾಷ್ಟ್ರ ನೃಪಾಲಜಾಲನುಂ, ರಿಪುಕುಲಕಾಲನುಂ, ಸಂಗ್ರಾಮರಾಮನುಂ, ಸಾಹಸೋದ್ದಾಮನುಂ, ಪ್ರೌಢಪ್ರತಾಪನುಂ, ಪ್ರಕಟಿತಾಟೋಪನುಂ. ಅಮಿತಪರಾಕ್ರಮನುಂ, ಅಭೇದ್ಯವಿಕ್ರಮನುಂ, ಕರ್ಣಾಟಚಕ್ರವರ್ತಿಯುಂ. ಕಲ್ಯಾಣಕೀರ್ತಿಯುಂ, ಲೋಕೈಕವೀರನುಂ, ವೀರರೊಳ್ಗಂಡನುಂ, ಗಂಡರೊಳ್ಗಂಡನುಂ. ಅಂತೆಂಬರ ಗಂಡನುಮೆನಿಸಿ ನೆಗೞ್ದ ಶ್ರೀಮದಪ್ರತಿಮವೀರನರಪತಿ ಶ್ರೀ ಚಿಕದೇವಮಹಾರಾಜ

ವಿರಚಿತಮಪ್ಪ

ದಿವ್ಯಪ್ರಬಂಧಂಗಳೊಳ್

ಶ್ರೀ ಗೀತಗೋಪಾಲ ಮಹಾಪ್ರಬಂಧದೊಳ್

ಉತ್ತರಭಾಗಂ ಸಂಪೂರ್ಣಂ.

→ ಗೀತಗೋಪಾಲಂ ಸಮಾಪ್ತಂ. ←



ಕರ್ಣಾಟಕ ಕಾವ್ಯಕಲಾನಿಧಿ, ಕೋಶ ಸಂಖ್ಯೆ - ೩೩.

ಶ್ರೀಮತ್ಕರ್ಣಾಟಮಂಡಲಾಧೀಶ್ವರ

ಶ್ರೀ ಚಿಕದೇವರಾಯ ಮಹಾರಾಜಪ್ರಸಾದಪರಿಪೂರ್ಣ

ಸಚಿವನಿಚಯತಿಲಕನೂ, ಆಸ್ಥಾನಕವಿಯೂ ಆದ

ಚಿಕುಪಾಧ್ಯಾಯನ

# ದಿವ್ಯಸೂರಿ ಚರಿತೆ

ಎಂ. ಎ. ರಾಮಾನುಜಯ್ಯಂಗಾರ್ಯ

ಅಸಿಸ್ಟೆಂಟ್ ಮಾಸ್ಟರ್, ಮಹಾರಾಣೀಕಾಲೇಜ್, ಮೈಸೂರು

ಇವರಿಂದ ಪರಿಶೋಧಿತವಾಗಿ ಪ್ರವೇಶನೊಡನೆ

ಮೈಸೂರು

ಜಿ. ಟಿ. ಎ. ಮುದ್ರಾಶಾಲೆಯಲ್ಲಿ ಮುದ್ರಿತವಾಯಿತು

1911

ಕ್ರಯ ೧ ರೂಪಾಯಿ]

# ಪ್ರವೇಶ.

## —ಕವಿಚರಿತ್ರೆ—

ಈ ಗ್ರಂಥವನ್ನು ರಚಿಸಿದವನು ಚಿಕುಪಾಧ್ಯಾಯನು. ಈತನಿಗೆ ಚಿಕುಪಾಧ್ಯಾಯನೆಂದು ನಾಮಕರಣವಿರಲಾರದು, ಇದು ಆತನ ಅಡ್ಡಹೆಸರಾಗಿರಬಹುದು. ಚಿಕದೇವಮಹಾರಾಜರವರ ಉಪಾಧ್ಯಾಯರಲ್ಲಿ ಈತನು ಚಿಕ್ಕವನಾದುದರಿಂದ ಈತನಿಗೆ ಆ ಹೆಸರು ಬಂದಿತೆಂದು ಕೆಲವರು ಹೇಳುವರು. ಈತನು ತನ್ನ ನಿಜನಾದ ನಾಮವನ್ನು ಎಲ್ಲಿಯೂ ಹೇಳಕೊಂಡಿಲ್ಲ. ಈ ಗ್ರಂಥದ ಪ್ರಥಮಾಶ್ವಾಸದ ೯೧ ನೆಯ ಪದ್ಯದಿಂದ ಈ ಕವಿಯು ಯಜುಶ್ಶಾಖೆಯ ಪುರುಕುತ್ಸಗೋತ್ರದ ಶ್ರೀವೈಷ್ಣವ ಬ್ರಾಹ್ಮಣನಾದ ರಂಗಾಚಾರ್ಯನೆಂಬವನಿಗೆ ಪುತ್ರನಾಗಿಯೂ ಚಿಕದೇವ ಮಹಾರಾಜರ ಸಚಿವರಲ್ಲಿ ಪ್ರಧಾನಸಚಿವನಾಗಿಯೂ ಇದ್ದನೆಂದು ತಿಳಿದುಬರುತ್ತದೆ. ಆ ಕಾಲದಲ್ಲಿ ರಾಜನ ಮಂತ್ರಾಲೋಚನಾಸಭೆಗೆ ಸೇರಿದವರೆಲ್ಲರಿಗೂ "ಸಚಿವ" ಅಥವಾ "ಮಂತ್ರಿ" ಯೆಂದು ಕರೆಯುವುದು ವಾಡಿಕೆಯಲ್ಲಿದ್ದಿತು. ಈತನು ರಾಜ್ಯಾಡಳಿತವನ್ನು ನಿರ್ವಹಿಸುತ್ತಿದ್ದ ಮಂತ್ರಿಯಾಗಿರಲಿಲ್ಲ; ತಿರುಮಲೈಯಂಗಾರ್ ಎಂಬುವನು ರಾಜ್ಯಾಡಳಿತವನ್ನುಮಾಡುತ್ತಿದ್ದವನು. ಈ ಗ್ರಂಥದ ಅಧ್ಯಾಯ ೧, ೯೦ ನೆಯ ಪದ್ಯದಲ್ಲಿಬುಧರಸ್ನು ನೋಡಿ "ವಿಮಳಚರಿತೆಯನೀಗಳ್ ಕನ್ನಡದೊಳ್ಪ್ರಾತಿಂ ಕೇಳಿಸಿಂ" ಎಂದು ಚಿಕದೇವರಾಯಮಹಾರಾಜರು ಅಪ್ಪಣೆ ಕೊಡಿಸಿದ ಮೇರೆ ಕವಿಯೂ ಈ ಗ್ರಂಥವನ್ನು ಬರೆದುದಾಗಿ ಹೇಳಿರುವನು. ಆದ್ದರಿಂದ ಈತನು ಅವರ ಆಸ್ಥಾನಕವಿಯೂ ಆಗಿರಬೇಕು. ಈ ಗ್ರಂಥದ ಅಂತ್ಯದ ಗದ್ಯದಲ್ಲಿ "ಚಿಕದೇವಮಹಾರಾಜ ಪ್ರಸಾದ ಪರಿಪೂರ್ಣ ಸಚಿವ ನಿಚಯತಿಲಕ" ಎಂದು ಹೇಳಿಕೊಂಡಿರುವುದರಿಂದ ಮಹಾರಾಜರಿಗೆ ಪ್ರೇಮಪಾತ್ರನಾಗಿದ್ದು ಅವರ ಅಭಿಮಾನದಿಂದ ಸಚಿವರಲ್ಲಿ ನಾಯಕ ಪದವಿಯನ್ನೂ ಹೊಂದಿರಬಹುದು. ಏತೇನ ಈತನು ಚಿಕದೇವರಾಯ ಮಹಾರಾಜರಿಗೆ ಬಾಲ್ಯದಲ್ಲಿ ಉಪಾಧ್ಯಾಯನಾಗಿ, ಆಮೇಲೆ ಆಸ್ಥಾನಕವಿಯಾಗಿ, ಆಮೇಲೆ ಸಚಿವಮುಖ್ಯನಾಗಿಯೂ ಇದ್ದನೆಂದು ಸಿದ್ಧವಾಯಿತು.

ಚಿಕದೇವಮಹಾರಾಜರು ಕ್ರಿ. ಶ. ೧೬೭೨ ರಿಂದ ೧೭೦೪ ರ ವರೆಗೆ ಆಳಿದ್ದರಿಂದ ಕವಿಯು ೧೭ ನೆಯ ಶತಮಾನದಲ್ಲಿ ಇದ್ದವನು.

ಈ ಕವಿಗೆ ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ವಿಶೇಷ ಪಾಂಡಿತ್ಯವಿದ್ದಿತೆಂಬುದಕ್ಕೆ ಈತನ ಗ್ರಂಥಗಳೇ ಸಾಕ್ಷಿಗಳಾಗಿವೆ ಈತನು ಬಹು ಗ್ರಂಥಗಳನ್ನು ರಚಿಸಿರುವನು. ಈತನು ರಚಿಸಿರುವ ಗ್ರಂಥಗಳಲ್ಲಿ ಈವರೆಗೆ ನಮಗೆ ತಿಳಿದಿರುವುವು :—

I. ಸಾಂಗತ್ಯಗಳು—(1) ಚಿತ್ರಶತಕ, (2) ನೀತಿಶತಕ, (3) ಪಶ್ಚಿಮರಂಗಸಾಂಗತ್ಯ, (4) ರಂಗನಾಯಕ ರಂಗನಾಯಿಕೀಸ್ತುತಿ, (5) ಶೃಂಗಾರಶತಕ, (6) ಪಶ್ಚಿಮರಂಗಸಾಂಗತ್ಯ, (7) ಪುರುಷ ವಿರಹ, (8) ರಂಗಧಾಮಸ್ತುತಿ, (9) ಯಾದವಗಿರಿ ಮಾಹಾತ್ಮ್ಯ.

II. ಗದ್ಯಗ್ರಂಥಗಳು—(1) ಶುಕಸಪ್ತತಿ, (2) ಕಾಮಂದಕ ನೀತಿಸಾರ, (3) ಶ್ರೀರಂಗಮಹಾತ್ಮ್ಯ, (4) ಶೇಷಧರ್ಮ, (5) ವಿಷ್ಣುಪುರಾಣ ಪ್ರಬಂಧ, (6) ಸ್ವಾತಿಕ ಬ್ರಹ್ಮವಿದ್ಯಾವಿಲಾಸ, (7) ಯಾದವಗಿರಿಮಾಹಾತ್ಮ್ಯ, (8) ಅರ್ಥಪಂಚಕದ ಟೀಕೆ, (9) ರಹಸ್ಯತ್ರಯ ಟೀಕೆ, (10) ಭರದ್ವಾಜಸಂಹಿತೆ, (11) ಪಶ್ಚಿಮರಂಗಮಾಹಾತ್ಮ್ಯ, (12) ರಂಗಸ್ವಾಮಿಯ ಶೃಂಗಾರಸೂತ್ರೋದಾಹರಣೆ, (13) ವೇಂಕಟಗಿರಿಮಾಹಾತ್ಮ್ಯಟೀಕೆ, (14) ವೈದ್ಯಾಮೃತಟೀಕೆ.

III. ಚಂಪುಗ್ರಂಥಗಳು— (1) ವಿಷ್ಣುಪುರಾಣ, (2) ರುಕ್ಮಾಂಗದ ಚರಿತ್ರೆ, (3) ಕಮಲಾಚಲಮಾಹಾತ್ಮ್ಯ, (4) ಹಸ್ತಿಗಿರಿಮಾಹಾತ್ಮ್ಯ, (5) ಅರ್ಥಪಂಚಕ, (6) ತತ್ತ್ವತ್ರಯ, (7) ಅಮರುಕಶತಕ, (8) ದಿವ್ಯಸೂರಿ ಚರಿತೆ.

ಈ ಗ್ರಂಥಗಳಲ್ಲಿ I (9), II (6), (8), (9), (10) III (5), (6), (8) ವಿಶಿಷ್ಟಾದ್ವೈತಮತವಿವರಣರೂಪವಾದ ಗ್ರಂಥಗಳು; I (9) II (3), (7), (11), (13) ಸ್ಥಳಮಾಹಾತ್ಮ್ಯ ಗ್ರಂಥಗಳು ; II (4), (5) III (1), (2) ಪುರಾಣಗಳ ಅನುವಾದಗಳು; I (1), (2), (5) (7), II (12) III (7) ಕವಿತಾಚಮತ್ಕಾರಪ್ರದರ್ಶಕಗ್ರಂಥಗಳು; II (1), (2) ನೀತಿಬೋಧಕಗ್ರಂಥಗಳು.

ಈತನ ಅಂಕಿತದಲ್ಲಿ ಕೆಲವು ಹಾಡುಗಳೂ ಸಿಕ್ಕುತ್ತವೆ.

ಈ ಕವಿಯ ಬಂಧವು ಲಲಿತವಾಗಿಯೂ ಹೃದಯಂಗಮವಾಗಿಯೂ ಇದೆ. ಆದರೂ ತಿರುಮಲೆಯಂಗಾರ್ಯನ ಗ್ರಂಥಗಳಷ್ಟು ಪ್ರೌಢವಾಗಿಲ್ಲ. ಈತನ ಗ್ರಂಥಗಳಲ್ಲಿ ಷಟ್ಪದೀ ಗ್ರಂಥಗಳಿಗೆ ಸಹಜವಾದ ಹೊಸಕನ್ನಡ ಪ್ರಯೋಗಗಳು ಕೆಲಕೆಲವು ಸಿಕ್ಕುವುವು. ( ಆಶ್ವಾಸ ೬-೫ ಪದ್ಯ, ೫-೫, ೭-೩೩ ಇತ್ಯಾದಿ ) ಈತನು ತನ್ನ ಗ್ರಂಥಗಳಲ್ಲಿ ರೇಫಪರಕವಾದ ಅಕ್ಷರಗಳನ್ನು ಶಿಥಿಲಾಕ್ಷರವಂತೆ ಗಣಿಸಿ ಅತಿಯಾಗಿ ಉಪಯೋಗಿಸಿರುತ್ತಾನೆ. (ಉದಾ—ಆ. ೨-೧೧; ೩-೨; ೫-೯, ೧೪, ೧೬; ೬-೨೬, ೬೦ ಇತ್ಯಾದಿ). ಈತನು ವಿಶಿಷ್ಟಾದ್ವೈತ ಮತಗ್ರಂಥಗಳನ್ನು ಚೆನ್ನಾಗಿ ಓದಿದವನು.

ಈತನ ವಂಶೀಯರು ಈಗಲೂ ಬೆ ಗಳೂರಲ್ಲಿ ಸಂಪನ್ನರಾಗಿದ್ದಾರೆಂದು ಕೇಳುತ್ತೇವೆ, ಅವರು ಈತನ ಚರಿತ್ರೆಯನ್ನು ವಿಸ್ತಾರವಾಗಿ ಬರೆದು ಕನ್ನಡಿಗರಿಗೆ ಸಹಾಯಮಾಡುವರೆಂದು ಕೋರುತ್ತೇವೆ.

—ಪ್ರಕೃತ ಗ್ರಂಥವಿಚಾರ—

ಇದೊಂದು ಚಂಪೂಗ್ರಂಥ. ಇದರಲ್ಲಿ ೧೪ ಆಶ್ವಾಸಗಳಿವೆ. ಆಶ್ವಾಸಗಳ ವಿಷಯಗಳು ವಿಷಯಸೂಚೀಪತ್ರದಿಂದ ತಿಳಿಯಬರುತ್ತವೆ. ಈ ಕವಿಯ ಚಂಪೂಗ್ರಂಥಗಳಲ್ಲಿ ಇದು ಶ್ರೇಷ್ಠವಾದುದು.

ಈ ಗ್ರಂಥದಲ್ಲಿ ಕವಿಯು ಶ್ರೀಕೃಷ್ಣಪರವಾಗಿಯೂ ಚಿಕದೇವಮಹಾರಾಜ ಪರವಾಗಿಯೂ ಅರ್ಥವಾಗುವ ಒಂದು ಪದ್ಯವನ್ನು ಮೊದಲು ಬರೆದು, ಬಳಿಕ-ರಂಗನಾಥ, ರಂಗನಾಯಕಿ, ಶಂಖ, ಚಕ್ರ, ಗದೆ, ಖಡ್ಗ, ಶಾರ್ಙ್ಗ, ಕೌಸ್ತುಭ, ವೈಜಯಂತೀಮಾಲೆ, ಶೇಷ, ಗರುಡ, ವಿಷ್ವಕ್ಸೇನ, ಆಳ್ವಾರುಗಳನ್ನು ಕ್ರಮವಾಗಿ ಪ್ರಾರ್ಥನೆಮಾಡಿ, ಅನಂತರ ಆ ಆಳ್ವಾರುಗಳ ವಿಷಯದಲ್ಲಿ ಒಬ್ಬೊಬ್ಬರಿಗೆ ಒಂದೊಂದು ಪದ್ಯವನ್ನು ಬರೆದು ಅದರಲ್ಲಿ ಅವರ ಮಹಿಮೆಯನ್ನು ಸಂಗ್ರಹವಾಗಿ ವರ್ಣಿಸಿ, ಆಮೇಲೆ "ಕೇಳ್ವರ್ ಸಂತೋಷಾಬ್ಧಿಯೊಳ್ ಮುಳುಗುವಂತೆಯೂ, ದುರಿತರೋಗಕ್ಕೆ ದಿವ್ಯೌಷಧಿಯಾಗಿಯೂ ಈ ಗ್ರಂಥವನ್ನು ನಿರ್ಮಿಸಿದಹಾಗೆಯೂ, ಇದಕ್ಕೆ ಕರ್ತೃ ಶ್ರೀಯರಸನೆಂದೂ ಹೇಳಿಕೊಂಡು, ಆಮೇಲೆ ಬುಧರಿಗೆ ವರಮಣಿಪುಂಜಾನ್ವಿತ ಜಲಧಿಗೆ ಭಕ್ತಿಯಿಂದ ಒಂದು ಗುಂಜೆಯನ್ನು ಅರ್ಪಿಸುವ ರೀತಿ

ಯಲ್ಲಿ ಈಕಥೆಯನ್ನು ಅರ್ಪಿಸಿ, ಅದರಲ್ಲಿ ಕಂಡುಬಂದ ತಪ್ಪನ್ನು ತಿದ್ದುವಂತೆ ಅವರಲ್ಲಿ ಪ್ರಾರ್ಥಿಸಿ, ಬಳಿಕ ಕುಕವಿಗಳನ್ನು ನಿಂದಿಸಿ, ಸತ್ಕವಿಗಳನ್ನು ಪ್ರಶಂಸಿಸಿ, ವ್ಯಾಸ ಶುಕ ವಾಲ್ಮೀಕಿಗಳಿಗೆ ನಮಸ್ಕರಿಸಿ, ಬಳಿಕ ಈ ಕಾವ್ಯಪ್ರಶಂಸೆಮಾಡಿ, ಆಮೇಲೆ ತನ್ನಲ್ಲಿ ವಿಶೇಷವಾಗಿ ಅನುಗ್ರಹಮಾಡಿದ ಚಿಕದೇವಮಹಾರಾಜರ ವಂಶವನ್ನು ವರ್ಣಿಸಿ, ಈ ಗ್ರಂಥಪ್ರತಿಪಾದ್ಯ ವಿಷಯವನ್ನು ಆರಂಭಿಸಿರುವನು.

ಈಗ್ರಂಥವನ್ನು ಬರೆಯಲು ಕಾರಣವನ್ನು (ಆಶ್ವಾ. ೧, ೯೦-೩)ಲ್ಲಿ ಕವಿಯು ಹೀಗೆ ಹೇಳಿರುತ್ತಾನೆ:—ಶ್ರೀ ಚಿಕ್ಕದೇವಮಹಾರಾಜರು ಶ್ರೀರಂಗಾದಿ ದಿವ್ಯಕ್ಷೇತ್ರಗಳ ಮಾಹಾತ್ಮ್ಯಗಳನ್ನು ಕೇಳುತ್ತಿರುವಲ್ಲಿ ವೈಷ್ಣವ ಸಮುಚಿತ ದಿವ್ಯಪ್ರಬಂಧಗಳನ್ನು ರಚಿಸಿದ ದಿವ್ಯಸೂರಿಗಳ ಚರಿತ್ರವನ್ನು ಕೇಳುವ ಆಶೆ ಹುಟ್ಟಿ ಆಸ್ಥಾನಸ್ಥರಾದ ಪಂಡಿತರನ್ನು ಕುರಿತು ದ್ರಾವಿಡಭಾಷೆಯಲ್ಲಿ ಕಂಗೊಳಿಸುವ ಆ ಮಹಾಮಹಿಮರ ಚರಿತ್ರೆಯನ್ನು ಕನ್ನಡಮಾತಿನಲ್ಲಿ ತಿಳಿಸಲು ಕೇಳಿದಂತೆಯೂ, ಅದಕ್ಕೆ ತಾನು ಒಪ್ಪಿಕೊಂಡು ಹರಿಕೃಪೆಯಿಂದ ಇದನ್ನು ಬರೆದಹಾಗೆಯೂ ಹೇಳಿರುವನು.

ಮತ್ತು ಕೊನೆಯ ಆಶ್ವಾಸದ ೧೬೮ ನೆಯ ಪದ್ಯದಲ್ಲಿ "ವಿಳಸದ್ವ್ಯೋಮನಭೋರಸಾಮ್ಯತಗುಶಾಕಾಬ್ದಂಗಳುಂ ಸಂದ ಪಿಂಗಳಸಂವತ್ಸರ ಫಾಲ್ಗುನಾಮಕ ಮಹಾಪಕ್ಷಾಷ್ಟಮಿವಾಸರಂ...ದೀವ್ಯತ್ಕೃತಿ ಪೂರ್ಣಮಾಯ್ತು" ಎಂದು ಹೇಳಿರುವುದರಿಂದ ಈ ಗ್ರಂಥವು ಶಾಲಿವಾಹನ ಶಕಾಬ್ದ 1600 ನೆಯ ಸಂವತ್ಸರಕ್ಕೆ ಸಲ್ಲುವ ಕ್ರಿ. ಶ. 1678 ನೆಯ ಪಿಂಗಳ ವರ್ಷದ ಫಾಲ್ಗುನಮಾಸದ ಶುಕ್ಲಪಕ್ಷದ ಅಷ್ಟಮೀ ತಿಥಿಯಲ್ಲಿ ಮುಗಿಸಲ್ಪಟ್ಟ ತೆಂದು ಗೊತ್ತಾಗುತ್ತದೆ.

ಈ ಗ್ರಂಥವನ್ನು ಪಠಿಸುವುದಕ್ಕೆ ಮುಂಚೆ ಈ ಗ್ರಂಥಪ್ರತಿಪಾದ್ಯರಾದ ದಿವ್ಯಸೂರಿಗಳು ಯಾರು ಎಂಬುದನ್ನು ಮೊದಲು ತಿಳಿದುಕೊಳ್ಳಬೇಕಾಗಿದೆ. ಅವರ ವಿಷಯವಾಗಿ ತಿರುಮಲೈಯಂಗಾರ್ಯನು ಚಿಕದೇವರಾಜವಿಜಯದಲ್ಲಿ—

"ತೊಲಗಿಸಿ ಕಾಮುಮಂತುಳಿದುಕೋಪಮನೋಡಿಸಿಲೋಭಮುಂಶಮಂ।
ನೆಲೆಗೊಳೆ ಸಂದು ಮೋಹಮುದಮತ್ಸರಮೊಂದದ ದಿವ್ಯಸೂರಿಗಳ್ ॥

ಕಲಿಬಲಹಾರಿಗಳ್ ಕಲುಷವೈರಿಗಳಾಶ್ರಿತಕಾರ್ಯಕಾರಿಗಳ್ ।
ನಲವಿನೊಳೆಮ್ಮನಾಳ್ಗ ನಳಿನಾಕ್ಷಚರಿತ್ರದ ಜೈತ್ರಭೇರಿಗಳ್ ॥ ”

ಎಂದು ಪ್ರಾರ್ಥನೆಮಾಡಿರುವನು. ಅವರನ್ನು “ಜೀವನ್ಮುಕ್ತರು” ಎಂದು ಕರೆಯಬಹುದು. ಅವರ ವಿಷಯದಲ್ಲಿ ಕೆಲವರು ಹರಿಯ ಆಜ್ಞಾಬಲದಿಂದ ಆತನ ಪರಿವಾರಗಳಾದ ಗರುಡ, ಅನಂತ, ಶಂಖ, ವಿಷ್ವಕ್ಸೇನ, ಚಕ್ರ, ಖಡ್ಗ, ಧನುಸ್ಸು, ಗದೆಗಳೆಂಬ ವೈಕುಂಠದಲ್ಲಿರುವ ಸೂರಿಗಳು ತಮ್ಮತಮ್ಮ ಅಂಶಗಗಳಿಂದ ಸಮಸ್ತ ಜಡಲೋಕೋಜ್ಜೀವನಾರ್ಥವಾಗಿ (ಅ. ೧-೧೫) ಭೂಮಿಯಲ್ಲಿ ಅವತರಿಸಿದವರೆಂದೂ, ಕೆಲವರು ಮೊದಲಿವರು ಸಾಮಾನ್ಯರಾಗಿದ್ದು ಭಗವಂತನ ನಿರ್ಹೇತುಕ ಕಟಾಕ್ಷವಿಶೇಷಕ್ಕೆ ಪಾತ್ರರಾಗಿ ದಿವ್ಯಸೂರಿಗಳಾದವರೆಂದೂ ಭಿನ್ನಾಭಿಪ್ರಾಯಪಡುತ್ತಾರೆ. ಅವರು ವಿಶೇಷಜ್ಞಾನಸಂಪನ್ನರಾದ್ದರಿಂದ ದಿವ್ಯಸೂರಿಗಳೆಂಬ ಅಂಕಿತವನ್ನೂ, ಈಶ್ವರಭಕ್ತಿಸಾಗರದಲ್ಲಿ ಮುಳುಗಿಹೋಗಿರುವುದರಿಂದ (ಧಾ. ಆೞ್-ಮಿಮುಗ್ನೆ) ಆೞ್ವಾರೆಂಬ ಹೆಸರನ್ನೂ ಪಡೆದರು. ಅವರು ಯಾರೆಂದರೆ :—(1) ಪೊಯ್ಗೈಯಾೞ್ವಾರ್, (2) ಪೂದತ್ತಾೞ್ವಾರ್, (3) ಪೇಯಾೞ್ವಾರ್, (ಈ ಮೂವರು ಅಯೋನಿಜರು), (4) ತಿರುಮೞಿಶೈಯಾೞ್ವಾರ್ (ಇವರು ಋಷಿಪುತ್ರರಾಗಿ ಜನಿಸಿ ಶೂದ್ರರಲ್ಲಿ ಬಳೆದವರು) (5) ನಮ್ಮಾೞ್ವಾರ್ (ನಾಲ್ಕನೆಯ ವರ್ಣದಲ್ಲಿ ಜನಿಸಿದವರು) (6) ಮಧುರಕವಿಯಾೞ್ವಾರ್, (ಬ್ರಾಹ್ಮಣರು) (7) ಕುಲಶೇಖರಾೞ್ವಾರ್ (ಕ್ಷತ್ರಿಯರು) (8) ಶೂಡಿಕ್ಕೊಡುತ್ತನಾಚ್ಚಿಯಾರ್, (9) ಪೆರಿಯಾೞ್ವಾರ್, (ಬ್ರಾಹ್ಮಣರು) (10) ತೊಂಡರಡಿಪ್ಪೊಡಿಯಾೞ್ವಾರ್ (ಬ್ರಾಹ್ಮಣರು) (11) ತಿರುಪ್ಪಾಣಾೞ್ವಾರ್ (ಅಯೋನಿಜರು, ಅಂತ್ಯಜರು) (12) ತಿರುಮಂಗೈಯಾೞ್ವಾರ್ (ಶೂದ್ರರು) ಅಂತು ಹನ್ನೆರಡು ಮಂದಿ. ಇವರು ಬೇರೆಬೇರೆ ವರ್ಣದಲ್ಲಿ ಅವತರಿಸಿದವರು. ಈ ಆೞ್ವಾರುಗಳ ಸಂಸ್ಕೃತದ ಪರ್ಯಾಯನಾಮಗಳು ಯಾವುವೆಂದರೆ—(1) ಸರೋಯೋಗಿ, (2) ಭೂತಯೋಗಿ, (3) ಮಹದಾಹ್ವಯರು, (4) ಭಕ್ತಿಸಾರರು. (5) ಶಠಗೋಪರು, (6) ಮಧುರಕವಿಗಳು, (7) ಕುಲಶೇಖರರು, (8) ಗೋದಾದೇವಿ, (9) ಭಟ್ಟನಾಥರು, ಅಥವಾ ವಿಷ್ಣುಚಿತ್ತರು, (10) ಭಕ್ತಾಂಘ್ರಿರೇಣು. (11) ಮುನಿವಾಹನರು. (12) ಪರಕಾಲರು.

ಆಳ್ವಾರುಗಳು ಹನ್ನೆರಡು ಮಂದಿಗಳಾದ್ದರಿಂದ ಈಗ್ರಂಥಕ್ಕೆ "ಪನ್ನಿರಾಳ್ವಾರ್ ಪ್ರಬಂಧಂ" ಎಂದರೆ ಹನ್ನೆರಡು ಆಳ್ವಾರುಗಳ ಚರಿತ್ರೆಯೆಂಬ ಹೆಸರು ಬಂದಿತು. ಈ ಆಳ್ವಾರುಗಳು ರಚಿಸಿದ ತಮಿಳುಭಾಷೆಯಗಾಥೆಗಳು ನಾಲ್ಕುಸಾಸಿರವು ಚಿಲ್ಲರೆ ಇರುವುದರಿಂದ, ಅವರು ರಚಿಸಿದಪ್ರಬಂಧಸಮುದಾಯಕ್ಕೆ "ಸಹಸ್ರಗಾಥಾ" ಎಂದೂ "ನಾಲಾಯಿರ ಪ್ರಬಂಧಂ" ಎಂದೂ ಹೆಸರುಗಳು ಉಂಟಾಗಿವೆ. ಈ ಪ್ರಬಂಧದ ತಾತ್ಪರ್ಯದ ಆಧಾರದ ಮೇಲೆ ವಿಶಿಷ್ಟಾದ್ವೈತ ಮತಸಿದ್ಧಾಂತವು ಸ್ಥಾಪಿತವಾಗಿರುವುದು; ಈ ಪ್ರಬಂಧಗಳ ತಾತ್ಪರ್ಯಕ್ಕೆ ಅನುಸಾರವಾಗಿ ವ್ಯಾಸಕೃತ ಬ್ರಹ್ಮಸೂತ್ರಕ್ಕೆ ಶ್ರೀಭಾಷ್ಯವನ್ನು ಶ್ರೀರಾಮಾನುಜಾಚಾರ್ಯರು ಮಾಡಿರುತ್ತಾರೆಂದು ಕೇಳುತ್ತೇವೆ. ಈ ಆಳ್ವಾರುಗಳಲ್ಲಿ ಮುಖ್ಯವಾದವರು ನಮ್ಮಾಳ್ವಾರ್ ಎಂದೂ, ಉಳಿದವರೆಲ್ಲರೂ ಅವರಿಗೆ ಅವಯವಸ್ಥಾನವೆಂದೂ ನಿರೂಪಿಸಿ, ಆ ಸಹಸ್ರಗಾಥೆಗಳಿಗೂ, "ಪುರಾಣಾನಾಂ ಕರ್ತಾ ಸತ್ಯವತೀಸುತಃ" ಎಂದು ಎಲ್ಲಾ ಪುರಾಣಗಳಿಗೂ ವ್ಯಾಸಮಹರ್ಷಿಯೇ ಕರ್ತರೆಂದು ಹೇಳುವಂತೆ, ನಮ್ಮಾಳ್ವಾರೇ ಕರ್ತೃವೆಂದು ವಿಶಿಷ್ಟಾದ್ವೈತಿಗಳಾದ ಶ್ರೀವೈಷ್ಣವರು ಹೇಳುವರು. ಮತ್ತು ಈ ಸಹಸ್ರಗಾಥೆಯನ್ನು "ದ್ರಾವಿಡಬ್ರಹ್ಮಸಂಹಿತಾ" ಎಂದು ಕರೆದು, ತತ್ಪ್ರಣೇತರಾದ ನಮ್ಮಾಳ್ವಾರನ್ನು

ಶ್ಲೋ॥ ಮುನಿಂಭಜಾಮಹೇ ಕೃಷ್ಣತೃಷ್ಣಾತತ್ವಮಿಹೋದಿತಾಂ ।
ಸಹಸ್ರಶಾಖಾಂ ಯೋಽದ್ರಾಕ್ಷೀದ್ದ್ರಾವಿಡೀಂ ಬ್ರಹ್ಮಸಂಹಿತಾಂ ॥
ಯದ್ಗೋಸಹಸ್ರಮಪಹಂತಿ ತಮಾಂಸಿ ಪುಂಸಾಂ ।
ನಾರಾಯಣೋವಸತಿ ಯತ್ರಸಶಂಖಚಕ್ರಃ ॥
ಯನ್ಮಂಡಲಂ ಶ್ರುತಿಮಯಂ ಪ್ರಣಮಂತಿ ವಿಪ್ರಾಃ ।
ತಸ್ಮೈನಮೋ ವಕುಳಭೂಷಣಭಾಸ್ಕರಾಯ ॥

ಎಂದು ಪ್ರಶಂಸಿಸುವರು.

ಈ ಆಳ್ವಾರುಗಳಂತೆಯೇ ರಾಮಾನುಜಾಚಾರ್ಯರು ಅನಂತಾವತಾರವಾಗಿಯೂ ಆಳ್ವಾರುಗಳ ಮತವಾದ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರಚಾರಗೊಳಿಸಿ ಲೋಕೋಜ್ಜೀವನಮಾಡಿದ್ದರಿಂದಲೂ ಅವರ ಚರಿತ್ರೆಯನ್ನು ಈ ಗ್ರಂಥದಲ್ಲಿ ಕವಿಯು ವರ್ಣಿಸಿ ಸೇರಿಸಿದ್ದಾನೆ.

ಸಂಸ್ಕೃತ ದ್ರಾವಿಡಭಾಷೆಗಳಲ್ಲಿ ಓದಿ ತಿಳದುಕೊಳ್ಳಲು ಯೋಗ್ಯತೆಯಿಲ್ಲದ ಶ್ರೀವೈಷ್ಣವರಿಗೂ ಇವರ ಮತವನ್ನು ತಿಳಯಲಾಸೆಯುಳ್ಳ ಇತರರಿಗೂ ಈಗ್ರಂಥವು ವಿಶೇಷವಾಗಿ ಪ್ರಯೋಜಕವಾಗಿರುವುದು. ಇವರಲ್ಲಿ ಹೇಳರುವ ಸಂಗತಿ ಸರ್ವೋತ್ತಮವಾದುದು ; ಇದರ ಶೈಲಿಯು ಮನೋಹರವಾಗಿರುವುದು. ಇದರ ಪಠನದಿಂದ ಭಾಷಾವ್ಯುತ್ಪತ್ತಿಯಾಗುವುದಲ್ಲದೆ ವಿಶಿಷ್ಟಾದ್ವೈತ ಮತಸಾರವೂ ತತ್ಪ್ರವರ್ತ್ತಕರಾದವರ ಚರಿತ್ರೆಯೂ ಮುಖ್ಯವಾಗಿ ಶ್ರೀ ರಾಮಾನುಜಾಚಾರ್ಯರ ಚರಿತ್ರೆಯೂ ಕರತಲಾಮಲಕವಾಗುವುವು. ಈ ಗ್ರಂಥದ ಮಹಿಮೆಯನ್ನು ಕವಿಯು ತಾನೇ ೧೪ ನೆಯ ಆಶ್ವಾಸದ ೧೧೯, ೧೨೦, ೧೨೧, ೧೨೨, ೧೨೩ ಪದ್ಯಗಳಲ್ಲಿ ಹೇಳಕೊಂಡಿರುತ್ತಾನೆ.

## ಮುದ್ರಣ ವಿಚಾರ.

ಈ ಗ್ರಂಥವನ್ನು ಎರಡು ಪ್ರತಿಗಳ ಸಹಾಯದಿಂದ ಮುದ್ರಿಸಿದ್ದೇವೆ. ಅವುಗಳಲ್ಲಿ ಮೈಸೂರು ಗೌವರ್ನಮೆಂಟು ಓರಿಯಂಟಲ್ ಕೋಶಾಗಾರಕ್ಕೆ ಸೇರಿದ ಒಂದು ಪ್ರತಿಯನ್ನು ಕೊಟ್ಟದುದಕ್ಕಾಗಿ, ಕ್ಯೂರೇಟರಾದ ಮ|| ರಾ|| ಮಹದೇವಶಾಸ್ತ್ರಿಗಳವರಿಗೂ, ಈ ಗ್ರಂಥವನ್ನು ಆಮೂಲಾಗ್ರವಾಗಿ ಬರೆದು ಕೊಟ್ಟು ಶೋಧನೆಯಲ್ಲಿ ಸಹಾಯಮಾಡಿದುದಕ್ಕಾಗಿ ಮ|| ರಾ|| ಎಸ್. ಜಿ. ಗೋವಿಂದರಾಜಯ್ಯಂಗಾರ್ಯರಿಗೂ ಕೃತಜ್ಞರಾಗಿರುತ್ತೇವೆ.

ಮ. ಆ. ರಾ.



## ಶೋಧನ ಪತ್ರ.



ಇಲ್ಲಿ ಸಂಖ್ಯೆಗಳು ಪದ್ಯಸಂಖ್ಯೆಗಳನ್ನು ತಿಳಿಸುತ್ತವೆ.

ಶೋಧಿತಭಾಗಗಳು:—

ಪ್ರಥಮಾಶ್ವಾಸ—೨೮ ನೆಯ ಗದ್ಯ, ಸ್ಪಂದನಮಾತ್ರದಿಂ | ೩೪. ಕರ್ದಮಿತ ಬುದ್ಧಿ | ೪೪. ವಿದಸುದ್ಯದಾಜ್ಞಸವಂತಂ | ೫೦. ರುಚಿಯಿಂ | ೫೮. ಮಹಾಂಭೋನಿಧಿ | ೮೧. ಚಂದ್ರಾತಪನಾ | ೯೫. ದಾನವಂ ಕರಂ ವಿರಚಿಸಿ | ಅಂತ್ಯ-ಗದ್ಯ-ದಿನಕರರಾದ |

ದ್ವಿತೀಯಾಶ್ವಾಸ—೩. ಗೆಯ್ಯುತ್ತುಂ |

ತೃತೀಯಾಶ್ವಾಸ—೬. ತನ್ನಾಸ್ತ್ರೀಯ | ೭. ತಾಳ್ದರಸಿತ್ತಜೊಳ್ | ೮. ಕ್ಷಿಸಿಯೇಪಾ | ೨೫. ಲಕ್ಷ್ಮಿಯುಂ | ೩೫. ಗೋರಂತೇಜಗೀಯುಪ | ೩೭. ಪಂಕೇಜಾತವುಂ |

ಚತುರ್ಥಾಶ್ವಾಸ—೧೬, ಪರ್ಣಾಸವಿಪಾಪ |

ಪಂಚಮಾಶ್ವಾಸ—೧೨. ಮಾಮಿವರಂ |

ಸಪ್ತಮಾಶ್ವಾಸ—೩೯. ಶರೀರ ಸ್ಪರ್ಶವುಂ | ೫೫. ಮದಗ್ರಹದಿಂದೆ | ೫೬. ನಿಜಭರ್ತಾರಂಗೆ | ಅಂತ್ಯಗದ್ಯ, ಮುರಾಳೀಕೃತ.

ಅಷ್ಟಮಾಶ್ವಾಸ—೪. ಪ್ರತಿವಾಸರಂ | ೬.ಭಕ್ತನೆನಿಪಾ |

ನವಮಾಶ್ವಾಸ—೨. ಬಳೆಯುತಿರ್ದರ್ | ೧೭. ಮಹಪೆನೆನಲ್ಕಾ | ೭೬. ಗ. ದೇಶಮಸ್ಮದೀಯಮಾಗಿರ |

ಏಕಾದಶಾಶ್ವಾಸ—೩೪. ಯಾತ್ಮಾಲಯಾರ್ಥ |

ತ್ರಯೋದಶಾಶ್ವಾಸ--೭. ವಿಶಾಮಾರ್ತೆಯನೆಯ್ದು | ೧೪. ಪಂತೆಸಗವೇಳ್ಕು | ೨೦. ತರಲಾಗಳವರ್ಗ | ೨೫. ಮದೀಯಮಹಿಮೊಪ್ಪಿರೆಯುಂ | ೨೮. ದರ್ಶನಾರ್ಥಂಗಳಂ | ೩೬. ಸೇವಿಸಿಬಳಿಕ್ಕ | ೬೪. ಬಂದುಜ್ವಳ | ೬೪. ಗ. ಸೇವಿಸಿ | ೬೯. ಸೇವೆಯುಗೆಯ್ದುಂ | ಅಂತ್ಯಗದ್ಯ. ಭಾಷ್ಯಕಾರಾ |

ಚತುರ್ದಶಾಶ್ವಾಸ—೧೩. ಕೂರತ್ತಾಜ್ವಾರ್|೩೩. ಮೂರನೆಯ ಪಾದದಲ್ಲಿ ಛಂದೋದೋಷವಿದೆ ; ಸದ್ಭಕ್ತಿಯಿಂ (?) | ೫೮. ಸಚ್ಛಿದಂಬುಧಿಗಳ್ | ೯೫. . ಅಂತು | ೧೨೪. ವಿಳಸದ್ವ್ಯೋಮ |

# ವಿಷಯಸೂಚಿಕೆ.

---

॥ ಶ್ರೀರಸ್ತು ॥

# ದಿವ್ಯಸೂರಿಚರಿತೆ

ಶ್ರೀಮತೇ ರಾಮಾನುಜಾಯ ನಮಃ.

ಶ್ರೀಸತ್ಯಾಂಚೆ ಸದಾನಪಾರಿವಿಭವಂ ಕಲ್ಯಾಣದೀವ್ಯನ್ಮಹಾ |
ವಾಸಂ ಗೋಪರಿಪಾಲನೈಷಿ ಸುಮನೋಗೋತ್ರಾವನೋದ್ಯತ್ಸಮು ||
ಲ್ಲಾಸಂ ಸಮ್ಯಗನಂತಭೋಗಲಸದಂಗಂ ರಾಜಹಂಸಾಶ್ರಯೋ |
ದ್ಭಾಸಂ ಸತ್ಯಪರಾಕ್ರಮಾಪ್ರತಿಮನೆಮ್ಮಂ ಪಾಲಿಕಾಚಂದ್ರಮಂ ||೧||

ಶ್ರೀಮದ್ದುಗ್ಧಾಂಬುಧಿಕ |
ನ್ಯಾಮಾನಸಮಾನಸೈಕಕೇಲಿಸಹಂಸಂ ||
[1]ಸಾಮಜವರದಂ[1] ಜಲದ |
ಶ್ಯಾಮಂ ಶ್ರೀರಂಗಧಾಮನೀಗೆಮಗೊಳ್ಪಂ ||೨||

ನಿಜನೇತ್ರಂ ಭುವನಾಳಿಚಕ್ಷು ನಿಜನಾಭೀಪದ್ಮಭೂತಂ ಜಗ |
ದ್ವ್ರಜ[2]ಸೃಷ್ಟೈಕ[2]ವಿಶಾರದಂ ನಿಜಸುತಂ ಕಾಮಪ್ರಭಾವಾಸ್ಪದಂ ||
ನಿಜತಲ್ಪಂ ಬಹುವಿಷ್ಟಪೋದ್ವಹನಧುರ್ಯಂ ನೋಡಲೀಪೆಂಪುವೆ |
ತ್ರಿಜನಾನಂದಕರಂ ಮದೀಪ್ಸಿತಮನೊಲ್ದೀಗಾವಗಂ ಮಾಧವಂ ||೩||

ಆವಳಪಾಂಗಕಾಂತಿ ಮುನಿಚಿತ್ತಮರಾಳಕೆ ದುಗ್ಧಮಾಯ್ತುಮ |
ತ್ತಾವಳ ದಂತಶೋಭೆ ಹರಿನೇತ್ರಚಕೋರಕೆ ಜೊನ್ನಮಾದುದಿಂ ||
ತಾವಳೊಡಲ್ವೊಗರ್ಭಜಕಜಕ್ರಕೆ ಪೊಂಬಿಸಿಲಂತೆ ತೋರ್ಕಮಾ |
ಪಾವನಮೂರ್ತಿ ರಂಗವಿಭುವಲ್ಲಭೆಯೀಗೆಮಗಿಷ್ಟಸಿದ್ಧಿಯಂ ||೪||

ನಿಜನಾದಶೌರ್ಯದಸುರ |
ವ್ರಜವಸಿತಾಗರ್ಭಮಿಂದಿರೇಶಾನಸಪಂ ||

---

ಪಾಠಾಂತರಗಳು.—1. ತಾಮರಸಾಕ್ಷಂ. 2. ಪುಂಸೃಷ್ಟಿ.

ಕಜಮುರುದತಿಪೂತಂ ಪಾಂ |
ಚಜನ್ಯವಿಾಗೆಮಗೆ ನಿರ್ಮಳತ್ವಮನನಿಶಂ ||೫||
ಸುರರಿಪುವಿಚ್ಛಿನ್ನಗಳ |
ಚ್ಛುರಿತಮಹಾರಕ್ತಧಾರೆಯಿಂ ತೋದುದಿತಾಂ ||
ಬುರುಹಸಖಬಿಂಬರುಚಿವಿ |
ಸ್ಫುರಿತಂ ಕುಡುಗೆಮಗೆ ವಿಷ್ಣುಚಕ್ರಂ ಸಲವಂ ||೬||
ತ್ರಿದಶಾರಿಮತ್ತ[1]ಕರಿಭಿದು[1] |
ವಿದಳನ ಪರಿಮುಕ್ತಮೌಕ್ತಿಕಾವಳಿಮಲ್ಲೀ ||
ಸದಮಳಮಾಲಾಕಲಿತಂ |
ಮುದಮಂ ಕುಡುಗೆಮಗೆ ವಿಷ್ಣುಗದೆಯನವರತಂ ||೭||
ಬಲವದರಾತಿಪ್ರಾಣಾ |
ನಿಲನಿತ್ಯಾಹಾರದೃಪ್ತಕಾಳೋರಗನು ||
ಜ್ಜ್ವಲಹರಿರುಚಿಘನವಿದ್ಯು |
ಚ್ಛಲದಂತೆಸೆವಸಿ ಮದಿಷ್ಟಮಂ ಕುಡುಗನಿಶಂ ||೮||
ನಿಜಗುಣರವಪವಿಭಿನ್ನದ |
ನುಜಹೃಚ್ಛೋಣಿತಪ್ಲುತಾಪುತಿಸ್ಫುಟಬಾಣ ||
ವ್ರಜಶಿಖಿ ಹರಿವಾಮಕರಾಂ |
ಬುಜಮಂಡಿತಶಾರ್ಙ್ಗವಿಾಗೆಮಗೆ ಸನ್ಮತಿಯಂ ||೯||
ವಾಸೋತ್ಪತ್ತಿ ವಿಧಿಮುಖ್ಯ ಸು |
ರಸ್ತೋಮಾಂಬಕಚಕೋರಕಕ್ಕಂ ಯುತ್ಸವ ||
ಜಸ್ತತಿಚಂದ್ರಿಕೆಯಿಾಗಾ |
ಕೌಸ್ತುಭವಿಾಪ್ತಿತಮನೆಮಗೆ ಹರಿವಕ್ಷಸ್ಥಂ ||೧೦||
ತತನಿಜಗನ್ಧಭ್ರಮದಳಿ |
ತತಿಗಾನಶ್ರವಣನಿತ್ಯಸಂಹೃಷ್ಟಶ್ರೀ ||
ಪತಿವೈಜಯಂತಿಯಿಾಗೆಮ |
ಗತಿಸೌಖ್ಯಮನಿಂದಿರಾಂಗಸುರಭಿತಮನಿಶಂ ||೧೧||

ಪಾ—1. ಕುಂಭೀ.

ವಿನುತಾತಪತ್ರಶಯ್ಯಾ ।
ಸನಾದಿ ದಿವ್ಯೋಪಕರಣವಾದ ರವಾಧೀ ॥
ಶನ ತನುಸಂಸ್ಪರ್ಶನಪೂ ।
ತನಸಂತಂ ಸುವಾತಿಯೊಳ್ಪನೀಗೆನುಗನಿಶಂ ॥೧೨॥

॥ ವಂಶಸ್ಥವೃತ್ತ ॥

ಸ್ವಪಕ್ಷವಾತಕ್ಷುಭಿತಾಂಬುರಾಶಿಯುಂ ।
ವಿಪದ್ಘನಧ್ವಾಂತವಿದಾರಣಾರ್ಕನಂ ॥
ಸಪತ್ನಮತ್ತೇಭಮೃಗಾಧಿರಾಜನಂ ।
ಸುಪರ್ಣನಂ ಸನ್ನುತಿಗೆಯ್ವೆನಾವಗಂ ॥೧೩॥

ದಾನವತತಿಸಂಹಾರನಿ ।
ದಾನಂ ನಿಜಶೌರ್ಯರಕ್ಷಿತಾಖಿಲಸುಮನಸ ॥
ಸ್ಸೇನಂ ಮುದಮಂ ವಿಷ್ವ ।
ಕ್ಸೇನಂ ಕುಡುಗೆಮಗೆ ಭಾಗವತಸಂತಾನಂ ॥೧೪॥

ಹರಿಯಾಜ್ಞಾಬಲದಿಂ ಸಮಸ್ತಜನಲೋಕೋಜ್ಜೀವನಾರ್ಥಂ ಮಸುಂ ।
ಧರೆಗೆಯ್ತಂದವತಾರಮಂ ಗರುಡವಿಷ್ವಕ್ಸೇನಶೇಷಾರಿಬಂ ॥
ಧುರಶಜ್ಞಾಸಿಧನುರ್ಗದಾದಿಗಳ ಸಾರಾಂಶಂಗಳಿಂ ಮಾಡಿದಾ ।
ಪರತತ್ವಜ್ಞರಭೀಷ್ಟಮಂ ಕುಡುಗೆ ಪನ್ನಿರ್ಮಹಾಯೋಗಿಗಳ್ ॥೧೫॥

ಅವರಾರೆಂದೊಡೆ :—

ಲಸದಬ್ಜಾಕ್ಷದರಾಂಶದಿಂದಮುಳಕಾಂಚೀಪತ್ತನಾಭ್ಯರ್ಣಹೇ ।
ಮಸರಃಕಾಂಚನಪದ್ಮದಲ್ಲಿಯವತಾರಂಗೆಯ್ದ ಲಕ್ಷ್ಮೀಶಪ ॥
ದ್ಬಿಸಜಧ್ಯಾನಮಹಾಪರಾಯಣರ ಪೊಯ್ಗಾಳ್ವಾರ ಯೋಗೀಂದ್ರರಿ ।
ವ್ವಸರೋನಾಮರ ಪಾದಮಂ ಸ್ಮರಿಸುವೆಂ ಸದ್ಭಾವನಾನಿಷ್ಠೆಯಿಂ ॥೧೬॥

ಶ್ರೀಧಾತ್ರೀನಾಥಕೌಮೋದಕಿಯ ಸಾರಾಂಶದಿಂ ದಿವ್ಯಭಾಸ್ವ ।
ದಬ್ಧಾಂಭೋರಾಶಿಯುಂಪೆರ್ಚಿಸುತಿರುಕಡಲ್ಮಲೆಯೊಳ್ಕುಂದದೊಳ್ಧೀ ।
ರಾಧಾರಾಧೇಯಭೂತಾಪ್ತಮದಿಸೊಗೆಮ ಯೋಗಪ್ರಮಾಸಿದ್ಧರಾದಾ ।
ಪೂಧತ್ತಾಳ್ವಾರ ಪಾದಾಂಬುಜಕೆ ಮಣಿವೆನಾಂ ವಿಸ್ಫುರದ್ಭಕ್ತಿಪೆರ್ಚಲ್ ॥೧೭॥

ಜಲಭಿತ್ಕೇಶವನಂದಕಾಖ್ಯಮಹಾಖಡ್ಗಾಂಶದಿಂ ಸಂತತೋ ।
ಜ್ಜ್ವಲಮೈಲಾಪುರದಿವ್ಯಕೈರವಮಣಿಶ್ರೀಗರ್ಭದೀವಾಸ್ಥಾನದೊಳ್ ।

ವಿಳಸಚ್ಛ್ರೀಮುಖದಾಖ್ಯೆಯಿಂದೊಗೆದ ಪೇಯಾಳ್ವಾರನುದ್ಯತ್ಪ್ರಬಂ ।
ಧಳತಾವರ್ಧನಚೈತ್ರರಂ ನುತಿಸುವೆಂ ಪ್ರಜ್ಞೋತ್ಸವಂ ಪೊಣ್ಮಲಾಂ ‖೧೮‖

ವಿಳಸಚ್ಚಕ್ರಾಂಶದಿಂದಂ ತಿರುಮೞಿಶೆಯೆನಿಪ್ಪೂರ ಶ್ರೀಭಾರ್ಗವರ್ಷ್ಯ ।
ಜ್ವಳಗರ್ಭಾಂಬೋಧಿಯೊಳ್ ಸಂಭವಿಸಿಯೆಳಮೆಯೊಳ್ ಯೋಗಸಾಮರ್ಥ್ಯದಿಂ
ತಿಳಿದೆಲ್ಲಾ ತತ್ವದೊಳ್ಪಂ ಪರಿಭವಿಸಿಯುಮಾಧೀಶನಂ ಭಕ್ತಿಸಾರಾ ।
ಮಳನಾಮಂಬೆತ್ತಿ ದಿವ್ಯಾಂಗತಿರುಮೞಿಶೆಯಾಳ್ವಾರ್ಮಂತೋವುಗೆಮ್ಮಂ ‖

ವಿವಿಧಾಮ್ನಾಯದ ಸಾರಮಾದುದೆನೆ ವಿಷ್ವಕ್ಸೇನದಿವ್ಯಾಂಶನಂ ।
ಭವರಾಶ್ರೀಕುರುಕಾಪುರಾಂತದೊಳುದಾರರ್ಸಪ್ತಸಂತಾನವೈ ‖
...ಸುತ್ರಪ್ರೋಳ್ಕಾರಿಯಾರ ಲಲನಾಗರ್ಭಾಬ್ಧಿಸಂಜಾತವೈ ।
...ಶಠಗೋಪರೀಗೆಮಗೆ ನಮ್ಮಾಳ್ವಾರ್ಮಹಾನಂದಮಂ ‖೨೦‖

ಕುಮುದಾದಿಗಣಾಂಶೋದ್ಭವ ।
ರಮುಳರ್ ಕಾತಗೋಪಪಾದಪೂಜಾಸ್ತುತಿಲ ‖
ಬ್ಧಮುದರ್ ಸಂತಸಮಂ ಕುಡು ।
ಗೆಮಗೆಂದುಂ ಪವೆದು ಮಧುರಕವಿಯೆನಿಪಾಳ್ವಾರ್ ‖೨೧‖

ಸ್ಫುರಿಪಾಕೌಸ್ತುಭವಂಶದಿಂದನುಪಮಶ್ರೀಕೇರಳಕ್ಷೋಣಿಯೊಳ್ ।
ತಿರುವಂಜಿಕ್ಕಳದಲ್ಲಿ ಚೇರಧರಣೀನಾಥಾನ್ವಯಪ್ರೋದ್ಭವರ್ ‖
ಪಿರಿಮಂ ರಾಮಕಥಾನುಷಂಗಪ್ರಮುಖದ್ಧರ್ಮಾತವಾತ್ಸಲ್ಯರಾ ।
ದರದಿಂದಂ ಕುಲಶೇಖರಾಳ್ವೆನಪೆವಾಳ್ವಾರ್ಗೆ ಸಂತೋಷಮಂ ‖೨೨‖

ವರತಾರ್ಕ್ಷ್ಯಾಂಶದಿನಿಂದಿರೇಶನನುಸಾರಂಬೆತ್ತು ವೇದಪ್ರಿರಾ ।
ನರ ಸದ್ವಂಶದೊಳೊಲ್ದು ಪುಟ್ಟಿ ವಿಲಸಚ್ಛ್ರೀವಿಲ್ಲಿಪುತ್ತೂರೊಳಾ ‖
ದರದಿಂದಂ ವಟಪತ್ರಶಾಯಿಗೆ ಸುಮಸ್ರಕ್ಸೇವೆಯಂ ತಾಳ್ದದಾ ।
ಪೆರಿಯಾಳ್ವಾರ್ಗೆ ಭಟ್ಟನಾಥರೆಮಗೀಗಾಹ್ಲಾದಮಂ ಸಂತತಂ ‖೨೩‖

ಪರಿ ಸರ್ವೋತ್ತಮನೆಂದು ಪಾಂಡ್ಯಸಭೆಯೊಳ್ ತತ್ವಾರ್ಥಮಂ ತೋಱಿದಾ
ಪೆರಿಯಾಳ್ವಾರ್ಗಳೆಯಂಶದಿಂ ಪನೆದು ಪುತ್ರೀಭಾವಮಂ ತಾಳ್ದಿ ಶ್ರೀ ‖
ಹರಿಪೂಜಾರ್ಹಸುಮಂಗಳಂ ಮುಡಿದು ರಂಗಾಧೀಶನಂ ಕೂಡಿಯೊ ।
ಪ್ಪಿರೆ ಶೂಡಿಕ್ಕುಡುತ್ತಾಳ್ವೆನರ್ಗೆ *ಗೋದಾದೇವಿಗಾಂ ವಂದಿಪೆಂ ‖೨೪‖

ವಿವಿಧಾಹ್ಲಾದನಿವಾಸಕೋಳಧರಣೀಕಾವೇರ್ಯುದಕಪ್ರಾಂತದೊ |
ಪ್ಪುವ ಮಂಡಂಗುಡಿಯೆಂಬ ನೆಲ್ವೊಜಲೊಳೊಳ್ಪಿಂದಂ ಪುರಶ್ಚೂಡವೈ ||
ಷ್ಣವಸದ್ವಂಶದೊಳಚ್ಯುತಸ್ರಜದಿನಾಭಕ್ತಾಂಘ್ರಿರೇಣ್ವಾಖ್ಯೆಯುಂ |
ತವೆ ತಾಳ್ದುದ್ಭವರಾಗಿ ಮುಕ್ತಿವಡೆದಾಳ್ವಾರೀಗೆ ಮದ್ವಾಂಛೆಯುಂ ||೨೪||

ಸಲೆ ಶ್ರೀವತ್ಸವರಾಂಶದಿಂ ನೆಗೞ್ದ* ಕಾವೇರೀಸವಿಾಪೋರ್ವಿಯೊಳ್ |
ನಲವಿಂವಂ ನಿಚುಳಾಭಿಧಾನದೊಱೆಯೂರೊಳ್ಪುಟ್ಟಿಯುಂತಂತ್ಯರೊಳ್ ||
ವಿಲಸದ್ಗಾನರಸಪ್ರಹೃಷ್ಟಮುನಿವಾಹವಿಷ್ಣುಭಕ್ತಿಪ್ರಭೋ |
ಜ್ಜ್ವಲಚಿತ್ತರ್ಪದೆದೆಮ್ಮನೋವುಗೆ ತಿರುಪ್ಪಾಣಾಖ್ಯೆಯಾಳ್ವಾರ್ಕರಂ||೨೫||

ವರಶಾರ್ಙ್ಗಾಂಶದಿನಬ್ಧಿಸಂಗಮದ ಕಾವೇರಿಸವಿಾಪೋರ್ವಿಯೊಳ್ |
ಪರಕಾಲಾಖ್ಯೆಯನಾಂತು ಶೂದ್ರಕುಲದೊಳ್ ಸಂಜಾತರಾಗಿಂದಿರಾ ||
ವರನಂ ಬಟ್ಟೆಯೊಳೆಲ್ಲನುಂ ಕವರ್ದು* ರಂಗಾಧೀಶಕೈಂಕರ್ಯತ |
ತ್ಪರಭಾವರ್ ಪರಿಪಾಲಿಸೀಗೆ ತಿರುಮಂಗೈಯಾಳ್ವಾರ್ ಮಹಾನಂದಮಂ ||೨೬||

ವಿಷ್ಣುವೆ ರುದ್ರಮುಖ್ಯವಿಬುಧೋತ್ತಮನೆನ್ನದ ವೈರಿಮಂಡಲೀ|
ಜಿಷ್ಣುವಿನಸ್ಯದರ್ಶನಸರತ್ಯವಿದಾರಣಸಿಸ್ತನಾವಗಂ ||
ಕೃಷ್ಣಪದಾಂಬುಜಾತನಟುಭಕ್ತಿರಸಾಮೃತಪೂರನಿತ್ಯವ |
ರ್ಧಿಷ್ಣುವ ಭಾಷ್ಯಕಾರರಡಿದಾವರೆಯಂ ನುತಿಗೆಯ್ವೆನೊಳ್ಪಿನಿಂ ||೨೭||

ವಚನ | ಇಂತೆನಿಸನಂತಕಲ್ಯಾಣಗುಣಗಣಭರಿತನುಂ, ಅಚಿಂತ್ಯನುಂ, ಅಪ್ರತ ರ್ಕ್ಯನುಂ, ಅಪ್ರಮೇಯನುಂ, ಅನಾಮಯನುಂ, ಅನೇಕಕೋಟಿಬ್ರಹ್ಮಾಂಡ ಘಟನಾಘಟನಸಮರ್ಥನುಂ, ನಿಜಭ್ರೂಸ್ಪಂದನಮಾತ್ರದಿಂ ಕೋಟಿರುದ್ರ ಬ್ರಹ್ಮೇಂದ್ರಭಾಸ್ಕರರಂ ಸೃಜಿಸಿ ಲೀಲಾಲೋಕನದಿಂ ರಕ್ಷಿಸಿ ಕಿಂಚಿತ್ಕೋ ಪದಿಂ ಕಡೆಗಾಣಿಸ ವಾಙ್ಮನಸಾಗೋಚರನುಂ, ಮುನಿಮಾನಸದೂರನುಂ, ಅನಸ್ತ್ಯಯಾನಾಗಮ್ಯನುಮೆನಿಸಿದ ಶ್ರೀಮನ್ನಾರಾಯಣನ ವಧೂಚಿಹ್ನಪರಿ ವಾರಾನುಧಾದಿಗಳ ಕೃಪಾನುಸಕಟಾಕ್ಷವೀಕ್ಷಣಮಂ ಪಡೆದು,

ಪೇಱ್ವೆಂ ಪನ್ನಿರ್ವರುಮೆನಿ |
ಪೊಱ್ಪಾರ ಪವಿತ್ರಸಾಗ ಚಾರಿತ್ರಮನಾ ||
ಕೇಳ್ವರ್ಸಂತೋಷಾಬ್ಧಿಯೊ
ಳಾಱ್ಪಂತಿರೆ ದುರಿತರೋಗದಿವ್ಯಪಥಮಂ ||೨೮||

ಈಯರಾಳ್ವಾರ ಚರಿತ್ರೆಗೆ |
ಶ್ರೀಯುರಸಂ ಕರ್ತೃ ಸಕಲವಿದ್ವದ್ವಿನುತಂ ||
ಕಾಯಜರೂಪಂ ಚಿಕುಪಾ |
ಧ್ಯಾಯಂ ಕೃತಿಕುಶಲನೆಂದೊಡಾಲಿಸರಾರೋ ||೨೦||

ಅಂಜದೆ ಪೇೞ್ವೆಂ ವರಮಣಿ |
ಪುಂಜಾನ್ವಿತಜಲಧಿಗೆಯ್ದ ಭಕ್ತಿಯೊಳೊಂದಂ ||
ಗುಂಜೆಯನರ್ಪಿಪವೋಲಾಂ |
ಕಂಜಾಕ್ಷನ ಕೃಪೆಯ ಮಹಿಮೆಯಿಂದೀ ಕಥೆಯಂ ||೨೧||

ಬಲ್ಲ ಬುಧರಾಲಿಸಿದಱೊ |
ಳ್ಸೊಲ್ಲೆಳ್ಪ್ರಸವೊಳವರ್ಥಸಂದರ್ಭದೊಳಂ ||
ಮೆಲ್ಲನೆ ತಪ್ಪಿರೆ ತಿರ್ದುವು |
ದಿಲ್ಲದ ಕುಂದಿಡುವ ಕುಜನತತಿಗಾನಳ್ಕಂ ||೨೨||

ಸ್ಫುರಿಸುವ ರನ್ನಗನ್ನಡಿಯೊಳಲ್ಲವೆ ವಕ್ತ್ರದ ಕಾಂತಿ ವೃತ್ತಿಕಾ
ವಿರಚಿತವಾದ ಭಾಂಡಶಕಲಂಗಳೊಳೇಂ ಮಿಗೆ ತೋರ್ಪುದೇ ಸುಕಾ || |
ವ್ಯರುಚಿರಸಾರವಂ ವಿಮಳಮಾನಸಸತ್ಕವಿಯಂತೆವೋಲ್ ವಸುಂ |
ಧರೆಯೊಳದೇಂ ಪರಾಮರಿಸೆ ಬಲ್ಲನೆ ಕಲ್ಮಷಚಿತ್ತದುರ್ಜನಂ ||೨೩||

ಸತತಂ ಕ್ರಿಮಿಗಣಕಲುಷೀ |
ಕೃತಪಲ್ವಲವಾರಿ ರುಚಿಯನೀಗುವೆ ಪೆಱರೊಳ್ ||
ಮಿತನನುಸರಿಸದಸೂಯಾ |
ನ್ವಿತಖಲಕರ್ದಪಿತಾಬುದ್ಧಿಯಕ್ಕುಮೆ [1]ವಿಮಳಂ[1] ||೨೪||

ರಸೆಯೊಳ್ ಪಾಕರಸಾಯನಾದಿಗಳ ಕುಂಭಂಬೊಕ್ಕು ತೇಂಕಾಡಿಯುಂ|
ರಸದಿಂಪಂ ಮಿಗೆ ದರ್ವಿ ನಾಲಗೆಯವೋಲಾತ್ತಂ ಬಲ್ಲನೇ ಸತ್ಕವಿ ||
ಪ್ರಸರಂಬೊಕ್ಕೊಡಮೇಂ ಕಱುಂಬಿ ತೆಗಳ್ವಾಖಳಂ ಖಳಂ ಬಲ್ಲನೇ |
ರಸಿಕಂ ನಿರ್ಮಳಮಾನಸಂ ಸುಕವಿಯಂತೊಳಬ್ಬದಿಂಪಂ ವಲಂ ||೨೫||

ಕೃತಿಕೃತಕೃತರಸಭಾವೋ |
ನ್ನತಿಯಂ ಸಾಹಿತ್ಯನಿಪುಣನಂತೆವೊಲತಿದು ||

---

ಪಾ—1. ಸೇವ್ಯಂ.

ರ್ಮತಿ ತಿಳಗುಮೆ ಕರಡಿಗೆ ವಿ |
ಶ್ರುತಗಂಧದಲಂಪನಜಿಗುಮೇ ನಾಶಯುವ್ರೋಲ್ (?) ||೩೬||

ಧರೆಯೊಳ್ ಕವಿತಾಮೃತಸಾ |
ಗರಮುಂ ಕಳೆಯುಳ್ಳ ಲಕ್ಷಣಾನ್ವಿತನುದಯಂ ||
ಪಿರಿದುಂ ಪೊಣ್ಮೆಕುಮಲ್ಲದೆ |
ಪರಕುಜನಕವಿಪ್ರಭಾವನೇಂ ಪೆರ್ಚಿಕುಮೇ ||೩೭||

ಮರನಂ ಕೊಱಿದೊಡೆ ಪುಱುವ |
ಕ್ಕರದಾಕೃತಿಯುಪ್ಪ ತೆಱದೆ ದುಷ್ಕವಿಯುಱು ||
ತ್ತಿರಲೇನಾನುಂ ಶಬ್ದಂ |
ದೊರೆಕೊಂಡೆಸಗಿದೊಡೆ ಕವಿತೆಯಕ್ಕುಮೆ (ಸೇವ್ಯಂ) ||೩೮||

ಸುರನದಿಯೊಳ್ಮುಳುಂಗಿಸಿಯೊಡಲ್ಗೆ ಸುಗಂಧಮನಪ್ಪುಗೆಯ್ದು ಭಾ |
ಸುರಮಣಿಭೂಷಣಂದುಡಿಸಿ ಪಾಲೆಱೆದೊಯ್ಯನೆ ಸಂತವಿಟ್ಟು ಮೇಣ್ ||
ಉರುಚತುರಂತಯಾನದೊಳಮರ್ಚಿದೊಡಂ ಮಲದಾಸೆ ಪೋಗಿ ಕು |
ಕ್ಕುರಮಿರದೂಱ್ಪುದಂ ಬಿಡುವುದೇ ಕಡುನೇಹದಿ ಬೇಡಿಕೊಂಡೊಡಂ ||೩೯||

ಬರೆದೊಡೆ ಬಣ್ಣಂ ಬರ್ಕುಮೆ |
ವಿರಚಿಸಿದೊಡೆ ಪಚ್ಚೆ ಮಕ್ಕುಮೇ ದುತ್ತೂರಂ |
ಧರೆಯೊಳ್ ಕನಕಾಹ್ವಯುಮುಂ |
ಧರಿಸಿರ್ದುಂ ಮಿಸುನಿಯುಂತಿರಕ್ಕುಮೆ ಸೇವ್ಯಂ ||೪೦||

ಗುಣಮುನಮರ್ಚಿದೊಡಂ ಮೇಣ್ |
ಗುಣಾತ್ಮಕಮೆನಿಪ್ಪ ವಸ್ತುವಂ ತಾನೊಳವೊ ||
ಕ್ಷಣಮದು ಭೇದಿಪ ಬುದ್ಧಿಯು |
ನೆಣಿಸಲೊಡಂ ಸೂಜೆ ಪಾಣ್ಬುದೇ ಕೂರ್ಪರಮುಂ ||೪೧||

ಇಳೆಯೊಳ್ತ್ತ್ವಷ್ಟ್ರಿಯೆ ಶಿಶು |
ಗಳ ಮಲಮನುಸಹಸ್ತದಿಂದೆ ತೊಳೆವಳ್ಕರದಿಂ ||
ದೆಳಸಿ ರಸನಾಗ್ರದಿಂ ಜನ |
ಮಳಮುಂ ಕ್ಷಾಳಿಸುವ ಖಳನನೇನೊಳ್ಳದನೋ ||೪೨||

ಕವಿತಾರಸದೊಳ್ಪಂ ಸ |
ತ್ಕವಿ ಸವಿದಾನಂದಿಪಂತೆ ಖಳನಱಿಗುಮೆ ಫು |
ಲ್ಲವನಜರಸದಿಸಿದಂ ತುಂ |
ಬಿವೊಲೇಂ ನಿಕಟಸ್ಥ ಭೇಕಿಯಾಸ್ವಾದಿಕುಮೇ ||೪೩||

ಅದಱಿಂ ದಕ್ಷಂ ಸುಶಾಂತಂ ಶುಚಿ ಸುಜನನುತಂ ಸತ್ಯವಾಕ್ಯಂ ಕಲಾಕೋ |
ವಿದನುದ್ಯ[1]ದ್ದೇಜ್ಞನ[1]ವಂತಂ ಮೃದುಪದರಚನಂ ಕಾವ್ಯಸಂವೇದಿಯಾನಂ ||
ದದ ಸಾಕಾರಂ ಕೃತಜ್ಞಂ ಶ್ರುತಿವಿದನಮಳಂ ನಿರ್ಮ್ಮದಂ ನಿರ್ವ್ವಿಕಾರಂ |
ಸದಯಂ ತಾನಾವನಾತಂ ಕವಿಯೆನಿಸಿಕುಮಂಗಾ ತುಱಿಲ್ಗೆಯ್ವೆನೆಂದುಂ ||

ಪರಿತಾಪಮನೆಸಗಿದೊಡಂ |
ಪಿರಿದುಂ ಮಥಿಸಿದೊಡಮಾಗುಮೊಳ್ಪಂ ಸುಜನಂ |
ವರಧೂಪದಂತೆಯುಂ ಮಳ |
ಯರುಹಂಬೊಲುಮದಱಿನೆಱಗುವೆಂ ತತ್ಪದಕಾಂ ||೪೫||

ವ್ಯಾಸನನಾಮ್ನಾಯಾರ್ಥ |
ವ್ಯಾಸನನಂಭೋಜನಾಭಪದಯುಗಭಕ್ತ್ಯ ||
ವ್ಯಾಸನ ಪುರಾಣತತಿವಿಭ |
ವ್ಯಾಸನನಾಂ ನುತಿಪೆನೊಲ್ದು ಕೃತಿವೃದ್ಧ್ಯರ್ಥಂ ||೪೬||

ಶುಕನಂ ಮುಕ್ತಿಶ್ರೀಕರ |
ಶುಕನಂ ಹರಿಭಕ್ತಿದುಗ್ಧವಾರಿಧಿಚಂದ್ರಂ ||
ಶುಕನಂ ಭಗವದ್ಧ್ಯಾನಾಂ |
ಶುಕನಂ ನೆನೆವೆಂ ಸಮಸ್ತವಿದ್ಯಾಧಿಕನಂ ||೪೭||

ರಾಮನ ಕಥಾಬ್ಧಿವರ್ಧನ |
ಸೋಮನ ವಾಲ್ಮೀಕಿಯಾದಿಕವಿತಾವಿಧಿನಿ ||
ಸ್ತೋಮನ ಸೀತಾಶೋಕವಿ |
ರಾಮನ ಪದಕೆಱಗಿ ರಚಿಪೆನೀಸತ್ಕೃತಿಯಂ ||೪೮||

*ಚೆಂದಳಿರ್ಜೊಂಪದಂತೆ ಪೊಸಮಲ್ಲಿಗೆವೂವಿನ ಕಂಪಿನಂತೆ ಮಾ |
ಕಂದದ ಗುಂಪಿನಂತೆ ವಿಕಚಾಂಬುಜರಾಜಿಯುಲಂಪಿನಂತೆ ಶ್ರೀ ||

---

ವಾ—1. ದ್ಯಾಭನುವಂ.

ಚಂದನದಣ್ಪಿನಂತೆ ಮಲಯಾನಿಲನೊಪ್ಪುವ ತಣ್ಪಿನಂತೆ ಸೈ ॥
ಪಿಂದೆ ರಸಜ್ಞಚಿತ್ತಕತಿಮೋದಮನೀಕೃತಿಯೀವುದಾವಗಂ ॥೪೯॥

ಈಕಥಾಪ್ರಾರಂಭವೆಂತೆನೆ :—

ಶ್ರೀಕಾಂತಾಮಣಿಸತ್ಕಟಾಕ್ಷರುಚಿಯಿಂ ಶೇಷಾಮಳಾಂಗಾಂಶುವಿಂ ।
ವ್ಯಾಕೀರ್ಣಾಮೃತವಾರಿರಾಶಿವಿಲಸತ್ಕಲ್ಲೋಲಸುಜ್ಯೋತಿಯಿಂ ॥
ವೈಕುಂಠಂ ಘನಚಂದ್ರಿಕಾಪಟಲದಿಂ ಗೆಯ್ದಂತೆ ಶುಭ್ರತ್ವಜ್ಗನಾ ।
ನೀಕಸ್ತೋತ್ರವಿದೂರವೊಪ್ಪುಗುಮಖಂಡಬ್ರಹ್ಮತತ್ತ್ವಾಕರಂ ॥೫೦॥

ಆನಗರದೊಳೆಸೆಗುಂ ಶ್ರೀ ।
ಭೂನೀಳಾಹಸ್ತಲಾಲಿತಾಂಘ್ರಿಸರೋಜಂ ॥
ಜ್ಞಾನಾನಂದಪಯೋನಿಧಿ ।
ದಾನವಕುಲತಿಮಿರಭಾನು ವಿಷ್ವಕ್ಸೇನಂ ॥೫೧॥

ಆತನ ನಾಭೀಪುಟಸಂ ।
ಜಾತಕುಶೇಶಯದ ಮಧ್ಯದೊಳ್ಜನಿಯಿಸಿದಂ ॥
ಧಾತಂ ಸ್ಥಿರಚರಜೀವ ।
ವ್ರಾತವಿನಿರ್ಮಾಣಕುಶಲವಿಧಿನಿಷ್ಣಾತಂ ॥೫೨॥

ಆವನಿಂದತ್ರಿ ತದಕ್ಷಿಯಿಂದಮೊಗೆವಂ ಶೀತಾಂಶುಮಾತಂಗೆ ಸಂ ।
ಭವನಾದಂ ಬುಧನಾತನಿಂದೆ ಶಶಿವಂಶೋದ್ಧಾರಿಯಾದಂ ಪುರೂ ॥
ರವನಾಭೂಪತಿಗೂರ್ವಶೀಜಠರದಿಂದಾಯುಃಕುಮಾರಂ ಸಮು ।
ದ್ಭವನಾದಂ ನಹುಷಾವನೀಶನವನಿಂದಂ ಪುಟ್ಟಿದಂ ಪೆಂಪಿನಿಂ ॥೫೩॥

ಆತಂಗೊಲ್ದು ಯಯಾತಿಯುದ್ಭವಿಸಿದಂ ತದ್ಗರ್ಭದೊಳ್ ಭೂಪತಿ ।
ವ್ರಾತಾಮರ್ತ್ಯಧರಾಧರಂ ಯದುಮಹಾರಾಜೇಂದ್ರನಾದಂ ಯಶಃ ॥
ಖ್ಯಾತಂ ತತ್ಕ್ರಮದಿಂದೆ ಯಾದವರನೇಕರ್ಭೂತಿಸಂಪನ್ನರು ।
ದ್ಯೋತಿತಬಾಹುಪರಾಕ್ರಮಶ್ರಿತಸುಪರ್ವೋರ್ವೀರುಹರ್ಪುಟ್ಟಿದರ್ ॥

ನೀತಿವಿಹಾರಿಗಳ್ಸಕಲಧರ್ಮವಿಚಾರಿಗಳುರ್ವರಾಮರ ।
ವ್ರಾತಸುಪೋಷಕರ್ನಿಖಿಲನಿರ್ಜರತೋಷಕರೆಂಬಗ್ಗವೆತ್ತು ಸಂ ॥
ಜಾತಯಶಃಪ್ರಭಾವಕಲಿತರ್ಲಲಿತರ್ಮಿಹಿರಾಂಶುಬಿಂಬವಿ ।
ದ್ಯೋತದುರುಪ್ರತಾಪರರವಿಂದಶರೋಪಮರೂಪರೊಪ್ಪಿದರ್ ॥೫೪॥

ಅವರ ಪರಂಪರಾಕ್ರಮದೊಳುನ್ನತವಿಕ್ರಮಶೂರನು |
ದ್ಭವಿಸಿದನಾತನಿಂದೆ ವಸುದೇವನುದಾರಚರಿತ್ರನಾದನಂ ||
ದವನಿಸಜಾಭವೇಂದ್ರಮುನಿಮುಖ್ಯಜನಾವನಶೀಲನಾಗಿ ಸಂ |
ಭವಿಸಿದನಚ್ಯುತಂ ಶ್ರುತಿನುತಸ್ತುತಿನಿರ್ಮಳಕೃಷ್ಣನಾಮದಿಂ ||೫೬||

ಶುಕವಂದ್ಯಂ ಸಲೆ ಪೂತನಾಶಕಟವತ್ಸಾರಿಷ್ಟಚಾಣೂರಮು |
ಷ್ಟಿಕಕಂಸಾಸುರಚೈದ್ಯಬಾಣಮುಖದೈತ್ಯವ್ರಾತಮಂ ಕೊಂದು ದೇ ||
ವಕದಂಬಕ್ಕತಿಹರ್ಷಮಂ ಸಲಿಸಿ ಪೃಥ್ವೀಭಾರಮಂ ಕಾಂಕೆ ಪಾಂ |
ಡುಕುಮಾರರ್ಕಳನೋವಿದಂ ಕರುಣದಿಂ ಶ್ರೀಕೃಷ್ಣನುಲ್ಲಾಸದಿಂ ||೫೭||

ಷೋಡಶಸಹಸ್ರತರುಣೀ |
ಕ್ರೀಡಾಪರಿತುಷ್ಟಸಘನಮಹಾಂಬೋನಿಧಿಸ್ಥ |
ದ್ವಾಡಬನೆಸೆದಂ ಯದುಕುಲ |
ಚೂಡಾಮಣಿ ಪುತ್ರಪೌತ್ರಯುತವೈಭವದಿಂ ||೫೮||

ಇರಲಿಂತಾದ್ವಾರಾವತಿ |
ಪುರಮಬ್ಧಿಯೊಳಾಳ್ದುವೇಳೆಯೊಳ್ ನಿಜಮಾಯಾ |
ತರುಣಿಯೊಡನೆಯ್ದೆ ಜನಿಸಿದಂ |
ಭರದಿಂ ಸ್ವಕುಲಾಭಿವೃದ್ಧಿಯೊಳ್ಪೊಸ ತೇಜಸಂ ||೫೯||

ಅನುಜಾತೆಯುಸ್ಮದೀಯಾನ್ವಯಪತಿ ಯಮುನೈಲಾಗ್ರದೊಳ್ಪ್ರಾಂಚಿಕಾಂ ನೀ |
ನನುವಿಂದೀವಂಶ್ಯರಂ ಕೊಂಡೊಸೆದು ಭರದಿನಾಭೂಮಿಭೃದ್ದಕ್ಷಿಣಾಶಾ ||
ವನಿಯೊಳ್ನೀರ್ಚೆ ಮದೀಯಾನ್ವಯಭವನೃಪಬೃಂದಕ್ಕೆ ವಾಂಛಾರ್ಥಸಂವ |
ರ್ಧನಮಂ ಮಾಡುತ್ತೆ ಪೆಂಪಿಂದೆಸೆವವೊಲೆಸಗೆಂದಾಕೆಯೊಳ್ ಕೃಷ್ಣನೆಂದಂ ||

ಎಂದಾಕೃಷ್ಣಾನುಸಾರಂಬಿಡಿದು ಕೆಲಬರಂ ಕೊಂಡವಳ್ಬಂದು ಸಾರಾ |
ನಂದಂಬೆತ್ತಾಯದೂರ್ವೀಧರನ ನಿಕಟದೊಳ್ಪಾರ್ಚೆ ತಾಂ ವೇಗದಿಂದೆ ||
ಯ್ತಂದಾವಂಶೋದ್ಭವರ್ಕಳ್ಗಭಿಮತಮನೊರಲ್ವೀಯುತೊಂದದ್ರಿಯೊಳ್ನಿಲ್ |
ನಿಂದಳ್ಚಾಮುಂಡಿಕಾನಾಮದಿನಿವರವನೀಭಾಗದೊಳ್ ಪೆಂಪುವೆತ್ತರ್ ||೬೧||

ವ || ಇಂತಾಯಾದವಕೃಷ್ಣಾನುಮತಿಯಿಂ ಬಂದು ಯಾದವಭೂಧರಸ್ಥನಾದ ನಿಜಕುಲೇಷ್ಟದೇವತೆಯೆನಿಪ ಶ್ರೀಮನ್ನಾರಾಯಣನ ಪಾದಾರವಿಂದಸೇವಾಧುರಂಧರರಾಗಿ ಕಾವೇರೀದಕ್ಷಿಣದಿಶಾಮಂಡಲದೊಳಖಂಡಿತೈಶ್ವರ್ಯಾ

ವಾಸವೆನಿಪ ಮಹಿಷಪುರವರದೊಳ್ ನೆಲಸಿ ಚಾಮುಂಡಿಕಾವರಪ್ರಸಾದಲಬ್ಧಮಹಾಭಾಗ್ಯೋದಯರನುಪಮಚರಿತ್ರರನವದ್ಯಕಲ್ಯಾಣಗುಣಗಣಭರಿತರನವಧಿಕಶೌರ್ಯರವಿಚ್ಛಿನ್ನದೇವಬ್ರಾಹ್ಮಣಭಕ್ತಿಭಾವರಾಗಿ ಸುಖಸಂಕಥಾವಿನೋದದಿಂದಿರೆ, ತದ್ವಂಶಪರಂಪರೆಯೊಳ್—

ನದಿಗಳೊಳೆಂತು ನಿರ್ಜರತರಂಗಿಣಿ ಭೂಧರಬೃಂದದೊಳ್ಮಹಾ |
ತ್ರಿದಶನಗಂ ತರುವ್ರಜದೊಳೆಂತು ಸುರಾವನಿಜಾತಮಂತೆ ಶೌ ||
ರ್ಯದ ಸಿಧಿವೈರಿರಾಜಕರಿಕುಂಭವಿಭೇದನಸಿಂಹನುರ್ವರಾ |
ತ್ರಿದಶಸುಪರ್ವರತ್ನನೊಗೆದಂ ಪಟು ಬೆಟ್ಟದ ಚಾಮಭೂವರಂ ||೬೨||

ಆತಂಗೆ ತಿಮ್ಮರಾಜಾ |
ಖ್ಯಾತಂ ಶ್ರೀಕೃಷ್ಣರಾಜ ಚಾಮೇಂದ್ರರ್ಸಂ||
ಜಾತಯಶೋಧವಳಿತದಿ |
ಗ್ಪ್ರಾತರ್ ಮೂವರ್ತನೂಜರಾದರುದಾರರ್ ||೬೩||

ಅವರೊಳ್ಬಿರುದಂತೆಂಬಾ |
ಅವನಿಪರ ಗಂಡನೆನಿಪ ಪೆರ್ಬಿರುದಂ ತಾ ||
ಳ್ದು ವಿಶೇಷವಿಕ್ರಮಶ್ರೀ |
ಪ್ರವಿಲಸಿತಂ ತಿಮ್ಮರಾಜಭೂಪತಿಯೆಸೆದಂ ||೬೪||

ಆತಿಮ್ಮರಾಜನನುಜಂ |
ಸೀತಿವಿದಂ ಚಾಮಭೂವಿಸಂಗಾಹವದೊಳ್ ||
ಭೀತಿಯನಾಸದರಾರ್ ಪುರು |
ಹೂತಾತ್ಮಜವಿಕ್ರಮಂಗೆ ಪೃಥ್ವೀತಲದೊಳ್ ||೬೫||

ಎಱದಿಮ್ಮರಾಜನಣುಗಂ |
ನಾಜಾದಂಬಿಸೆನಿಸ್ಪ ರಾಮರಾಜನ ದಂಡಾಯ್ ||
ಬಱಹಮ್ಮಿಂ ಬರೆ ತತ್ತಱ |
ದಱಿದಂ ರಾಮಬಿಯವೆಂಕಟನಾರಣದೊಳ್ ||೬೬||

ಸಿಡಿಲೊರ್ಮೆ ತಾಗಿ ಕೇಶವ |
ಗಿರಿತನುಯುಗ್ದಳದಸುವನಿಟ್ಟುದೆ ಮುನ್ನಂ ||
ತಡೆಯದೆ ನರನಂ ತಾಗಿಯೆ |
ಜಡಿಯದೆ ಕೃಷ್ಣನಂತೆ ದೇಹಿಯ ಕೃಪೆಯಿಂ ||೬೭||

ಇಂತದ್ಭುತಚರಿತಂ ಭೂ |
ಕಾಂತಂ ಚಾಮೇಂದ್ರನುದರವಾರಾನ್ನಿಧಿಯೊಳ್ ||
ದಂತಿರಿಪುವಿಕ್ರಮಗುಣ |
ವಂತರ್ಹರಿಭಕ್ತರೊಗೆದರಣುಗನರ್ನಾಲ್ವರ್ ||೧೯||

ವ|| ಅವರಾರೆಂದೊಡೆ—ರಾಜೊಡೆಯರೆಂದುಂ ಬೆಟ್ಟದ ಚಾಮರಾಜೊಡೆಯರೆಂದುಂ ದೇವರಾಜೊಡೆಯರೆಂದುಂ ಚೆನ್ನರಾಜೊಡೆಯರೆಂದುಮಿಂತಾನಾಲ್ವರ್ನಿಜನಾಮದಿಂ ಪ್ರಸಿದ್ಧರಾಗಿರ್ದರ್. ಈನಾಲ್ವರೊಳ್—

ರಾಜೇಂದ್ರಂ ರಿಪುಕರಿಮೃಗ |
ರಾಜಂ ವಿಲಸತ್ಪ್ರತಾಪರುಚಿಜಿತಭಾಸ್ವ ||
ತ್ತೇಜಂ ಹರಿಪಾದಾಂಬುಜ |
ರಾಜಿತಪಟುಭಕ್ತಿನಿರತನಾಶ್ರಿತಭೋಜಂ ||೨೦||

ಮುದದಿಂ ಕಾರಿಗೆಹಳ್ಳಿಯಾಣ್ಮನಿದಿರಾರೆನ್ನೊಳ್ಪ್ರಣರ್ಚಾಲ್ಕೆ ಯು |
ದ್ಧದೊಳೆಂದಾಳಿಸಿಯಾರ್ಪುವೆತ್ತು ಬರೆ ಸಂಗ್ರಾಮೋರ್ವಿಗಾಗಳ್ದರಾ ||
ಸವ ಶೌರ್ಯಂ ದೃಢತೋತ್ರಘಾತದೊಳೆ ನಾಪಾಟ್ಟೇವಮಂ ಮಾಡೆ ಪಂ |
ತದ ಪಾಡಂ ಮೆಱೆವಂ ಪ್ರತಿಜ್ಞೆಗೆಣೆಯಾರೆಂಬಂತೆ ಲೋಕವ್ರಜಂ ||೨೧||

ತಿರುಮಲರಾಜೇಂದ್ರನನತಿ |
ತರಕುಶಲೋಪಾಯದಿಂದೆ ಗೆಲ್ದಿಬ್ಬರಮಾ ||
ವರರಂಗನಾಥಕೃಪೆಯಿಂ |
ಸರಸಂ ಶ್ರೀರಂಗಪತ್ತನಮನಿರದೀಱ್ದಂ ||೨೨||

ಮುಳಿವರಿಭೂಪರ ಬಲಮಂ |
ಚಲಮಂ ಭಂಗಿಸಿ ತದೀಯರಾಜ್ಯಮನಾರ್ಪಿಂ ||
ಬಲಶೌರ್ಯರಾಜಭೂಪತಿ |
ತಿಲಕಂ ಸೇದನಸಿತಳದೊಳುನ್ನತಿವೆತ್ತಂ ||೨೩||

ತಿರುಪತಿಯಾಣ್ಮನನುಜ್ಞೆಯಿ |
ನಿರದೆಯ್ತಂದಂಧನಾರಿಗೊಂದಕ್ಷಿಯನಿ ||
ತ್ತುರುತರಮಹಿಮೆಯನಾಂತಂ |
ಪರಬಲಗಿರಿವಜ್ರನಂಜನಾರಾಜೇಂದ್ರಂ ||೨೪||

ವರವೈಕುಂಠಕೆ ಪೋಪ ವೇಳೆಯೊಳುದಾರಂ ಯಾದವೋರ್ವೀಧ್ರಭಾ ।
ಸುರನಾರಾಯಣಗೇಹದೊಳ್ ಸಿತಹಯಾರೂಢಂಬೊಲೆಯ್ತಂದು ಗೋ ॥
ಚರಿಸಿಂತಲ್ಲಿಯ ಮಾನವರ್ಗೆ ಮುದದಿಂದಭ್ಯರ್ಣಮಂ ಸಾರ್ದು ಶ್ರೀ ।
ಹರಿಪಾದಾಬ್ಜದೊಳೈಕ್ಯವಾದನೆಣೆಯಾರಾತಂಗೆ ತ್ರೈಲೋಕ್ಯದೊಳ್ ॥೨೫॥

ಆರಾಜೇಂದ್ರಸಹೋದರಂಗೆ ವಿಮಳಶ್ರೀದೇವರಾಜಂಗೆ ಸ ।
ರ್ವಾರಾತೀಭಮೃಗೇಂದ್ರರುದ್ಭವಿಸಿದರ್ ಶ್ರೀದೊಡ್ಡದೇವೇಂದ್ರನುಂ ॥
ಧೀರಂ ದೇವಮಹೀಶನಂತು ಚಿಕದೇವಕ್ಷ್ಮಾವರಾಗ್ರೇಸರಂ ।
ವೀರಶ್ರೀಮರಿದೇವಭೂಪತಿಯುಮೀನಾಲ್ವರ್ತನೂಸಂಭವರ್ ॥೨೬॥

ಆನಾಲ್ವರೊಳಂ ಪಿರಿಯಂ ।
ಭೂನಾಥಂ ದೊಡ್ಡದೇವನೃಪತಿಯ ಗರ್ಭಾಂ ॥
ಭೋನಿಧಿಯೊಳ್ಕೌಸ್ತುಭನೆಂ ।
ತಾನಘಮಣಿಗಳವೊಲಿರ್ವರಾತ್ಮಜರೊಗೆದರ್ ॥೨೭॥

ವ ॥ ಅವರಾರೆಂದೊಡೆ–ಚಿಕದೇವರಾಜೇಂದ್ರನೆಂದುಂ ಕಂಠೀರ
ವೇಂದ್ರನೆಂದುಮಿರ್ವರುಂ ಪ್ರಸಿದ್ಧರಾಗಿರ್ಪನ್ನೆಗಂ;

ಆನೃಪತಿಯನುಜ ದೇವ ।
ಕ್ಷ್ಮಾನಾಯಕನಖಿಳರಾಜಧರ್ಮನಿದಾನಂ ॥
ಭೂನುತಚರಿತಂ ವಿಪ್ರವಿ ।
ತಾನಾಮರಭೂಜನರಿತಿಮಿರದಿನರಾಜಂ ॥೨೮॥

ಕ್ರತುವಿಂ ಸಂತರ್ಪಿಸಿ ಸುರ ।
ತತಿಯಂ ಬಹುದಾನದಿಂ ದ್ವಿಜವ್ರಜಮುಮಂ ॥
ಪ್ರತಿರಹಿತನಿಂತು ಪೂರ್ವ ।
ಕ್ಷಿತಿಪರನಾದೇವನೃಪತಿಯುಂ ಱಿ ಮುಱಿಯಿಸಿದಂ ॥೨೯॥

ರಂಭಾದಿದೇವತರುಣೀ ।
ಸಂಭೋಗನಿಮಿತ್ತಮಮರಲೋಕಕೆ ತ್ರಿಜಗ ॥
ತ್ಸಂಭಾವಿತಚರಿತಂ ಪೋ ।
ದಂ ಭೂಮಿಪತಿಲಕದೇವರಾಜಂ ಮುದದಿಂ ॥೩೦॥

ಆತನನಂತರಂ ಧರೆಗೆ ನಾಯಕನಾದನನೇಕಸಾಹಿತೀ |
ನೀತಿವಿಶಾರದಂ ಶ್ರಿತಸುಪರ್ವನಗಂ ನಿಜವಂಶವಾರ್ಧಿಜಂ ||
ದ್ರಾತಪನಾಪ್ರಸನ್ನಸರಿರಾಜಮಹಾತಿಮಿರಾರ್ಕನುರ್ವಿಯೊಳ್ |
ನೂತನಪುಷ್ಪಬಾಣನೆನೆಸಿದಂ ಚಿಕದೇವನೃಪಾಲಚಂದ್ರಮಂ ||೮೧||

ಕರುಣಾಪಾರಸರಿದ್ವರಂ ಶುಭಕರಂ ಸೌಖ್ಯಾಕರಂ ವೈರಿಭೀ |
ಕರನಾನಂದಸುಧಾಕರಂ ನರವರಂ ಸನ್ಮಿತ್ರಪುತ್ರಾಪ್ತೋತ್ಕರಂ ||
ಹರಿಪಾದಾಬ್ಜಮರಂದಸನ್ಮಧುಕರಂ ಭೂಪಾಲಕಾಗ್ರೇಸರಂ |
ಸ್ಫುರಿಕುಂ ಶ್ರೀಚಿಕದೇವರಾಯನಖಿಳೋರ್ವೀದೇವರಕ್ಷಾಕರಂ ||೮೨||

ತರುಣೀಮೋಹನಪುಷ್ಪಬಾಣನಖಿಳೋರ್ವೀತ್ರಾಣಧೀರಂ ಮಹಾ |
ಧ್ವರಸಂತರ್ಪಿತದೇವವಾರನುರುವಿದ್ಯಾಸಾರವಿಜ್ಞಾನಭೂ ||
ಸುರಬೃಂದಾವನಪೀಲನುತ್ತುಂಗರತಕೀರ್ತಿಜ್ಯೋತ್ಸ್ನಿಕಾಜಾಲನೀ |
ಬಿರುದಂತೆಂಬರಗಂಡನಾದ ಚಿಕದೇವೇಂದ್ರಂ ಸಮಂತೊಪ್ಪುಗುಂ ||೮೩||

ವ|| ಇಂತನೇಕಕಲ್ಯಾಣಗುಣಗಣಮಣಿಭೂಷಿತಕಳೇಬರಂ ಸಕಲದಾನವೋದಿತವಿವಿಧವಿತಾನನಾನತಸಾಮಂತಭೂಪಸ್ತೋಮಕಿರೀಟಮಾಣಿಕ್ಯಪುಂಜಾಂಶುಬಾಲಕಂಜಸಖಾಂಶುವಿರಾಜಿತಪದಾಂಬುಜಂ ನಿಖಿಳರಿಪುನಿವಹಶುಂಡಾಲಖಂಡನಾಖಂಡವಿಕ್ರಮೋದ್ದಂಡಮೃಗರಾಜಂ ಸಂಗೀತಸಾಹಿತ್ಯಪ್ರಸಂಗಶ್ರವಣಾನಂದಕಂದಳಿತಹೃದಯಾರವಿಂದಂ ಶ್ರೀಚಿಕದೇವರಾಯಂ ಸುಖದಿಂ ಶ್ರೀರಂಗಪುರವರಸಾಮ್ರಾಜ್ಯಸಂಪನ್ನನಾಗಿರ್ದೊಂದು ಶುಭವಾಸರದೊಳ್—

ಕಮಲಾಪ್ತೋದಯದಲ್ಲಿ ಸಂಸ್ಮರಿಸುತುಂ ರಂಗೇಶಪಾದಾಬ್ಜಮಂ |
ವಿಮಲಸ್ವಾಂತನುದಾರನೆೞ್ದು ನಲವಿಂದಾದರ್ಶಮಂ ನೋಡಿ ವಿ ||
ಭ್ರಮಸೋಷ್ಣೋದಕದಿಂ ಕರಾನನಪದಪ್ರಕ್ಷಾಳನಂಗೆಯ್ದು ಸಂ |
ಭ್ರಮದಿಂ ಹೇಮದ ಪೀಠದೊಳ್ಕುಳಿಸಿ ಸಸ್ಮೇರಾನನಂ ಬೇಗದಿಂ ||೮೪||

ವರಮಣಿಭೂಷಣಪ್ರತತಿಯಂ ಮಿಗೆ ತಾಳ್ದಿದಿತಾರ್ಕನಂಶುವೊಲ್ |
ಸ್ಫುರಿಸುವ ಕಾಂಚನಾಂಬರಮನೊಯ್ಯನೆ ತಾಂ ತಳೆದಂತು ದೇವಮಂ ||
ದಿರದೆಡೆಗೆಯ್ದಿ ಪಾತ್ರರುಚಿತಾಮಲಕರ್ಪುರಮನೊಲ್ದು ಮಾಡಿ ತಾಂ |
ವಿರಚಿಸಿ ನಾಮತೀರ್ಥಮನೊಡರ್ಚಿ ಬುಧರ್ಗಿತ್ತು ನಿತ್ಯದಾನಮಂ ||೮೫||

ಅನಂತರಂ,

ಮುದದಿಂದಂದಳಮೇಱಿನೂತನಸುವರ್ಣಸ್ತಂಭದೊಲ್ ಮಹಾವಾದ್ಯಬೃಂ
ದದ ನಾದಂ ಮಿಗೆ ತೀವೆ ದಿಕ್ತಟಿಯನೇಱ್ತಂದಾಗಳಾಸ್ಥಾನಮಂ ||
ಪದೆಪಿಂ ಸಾರ್ದಿಭವ್ಯರಿರ್ಪೆಡೆಯೊಳಾದಾರಂ ನೀತಿವಿದ್ಯಾವಿಶಾ |
ರದನುದ್ಯಚ್ಚಿಕದೇವರಾಯನತಿಶೌರ್ಯಂ ಕುಳ್ಳಿರಿರ್ಪನ್ನೆಗಂ ||೮೬||

ನೆರೆದೇಱ್ತಂದರಸಾತ್ಮಸತ್ಕವಿರಸಜ್ಞರ್ವಂದಿಗಳ್ನಾಯಕರ್ |
ಧರಣೀಶರ್ಪರಿಹಾಸಕರ್ಕರಣಿಕರ್ಪಲ್ಕರ್ಕಥಾಕೌಶಲರ್ ||
ಭರತಜ್ಞರ್ಶ್ರುತಿಕೋವಿದರ್ಗಮಕಿಗಳ್ ವೈದ್ಯರ್ವಿಷಜ್ಞರ್ಶುಭಾ |
ಕರನಾಸ್ಥಾನಕೆ ಜೋಯಿಸರ್ಗಣಿಕೆಯರ್ ದಿಗ್ದೇಶಮಂತ್ರೀಶ್ವರರ್ ||೮೭||

ಅ*ಲರ್ಗಣ್ಬೆಳಗಿಡೆ ಸುಣ್ಮಾಲೆ|
ಯುಲುಗೆ ಕರಾಬ್ಜಾಭಿನಯದ ಸೊಗಸೊಂದಿರೆ ಕೋ ||
ಮಲೆಯುವರ್ವಾರಾಂಗನೆಯರ್ |
ನಲವಿಂ ನರ್ತಿಸಿದರೆಸೆವ ಸೆಳೆಮಿಂಚಿನವೊಲ್ ||೮೮||

ಇಂತು ಮಹಾವೈಭವದಿಂ |
ದಂ ತೆಗಳ್ದಿರೆ ಶಕ್ರಸಭೆಯ ಸೊಬಗಂ ವಿದ್ವ||
ತ್ಸಂತತಿಕಲ್ಪಮಹೀರುಹ |
ನಂತಿರ್ದಂ ಮುದಮನೊಲ್ದು ಚಿಕದೇವನೃಪಂ ||೮೯||

ಆ ಸಮಯದೊಳ್—

ಮಿಗೆ ಶ್ರೀರಂಗಾದಿದಿವ್ಯಸ್ಥಳದ ಕಥೆಗಳಂ ಕೇಳುತಿರ್ಪಲ್ಲಿ ಮೋದಂ |
ಪುಗೆ ಹೃತ್ಪಂಕೇಜದೊಳ್ವೈಷ್ಣವಸಮುಚಿತದಿವ್ಯಪ್ರಬಂಧಂಗಳಂ ಸೈ ||
ನೆಗೞ್ದಿ* ಪನ್ನಿರ್ವರಾಳ್ವಾರ್ಗಳ ಚರಿತೆಯನಾಕರ್ಣಿಸಲ್ಕೊಳ್ಪಾಗೆಯಾಗಳ್ |
ಸುಗುಣಂ ಶ್ರೀಚಿಕ್ಕದೇವಕ್ಷಿತಿಪತಿ ಬುಧರಂ ನೋಡಿದಂ ಪ್ರೇಮದಿಂದಂ ||೯೦||

ಮುನ್ನಂ ದ್ರಾವಿಡಭಾಷೋ |
ತ್ಪನ್ನಮನಾಳ್ವಾರ ವಿಮಳಚರಿತೆಯನೀಗಳ್ |
ಕನ್ನಡದೊಳ್ಪ್ರೀತಿಂ ನೆಗ |
ೞ್ವ*ನ್ನತೆಱಂದೆರಗೆ ಕೇಳಿಸಿಂ ವಿಬುಧರಿರಾ ||೯೧||

ಎನೆ ಕೇಳ್ದು ವಾಕ್ಯಮಂ ಯಾಜುಷನಮಳಯಶಂ ಪೌರುಕುತ್ಸಾನ್ವಯೋತ್ಥಂ ।
ವಿನುತಶ್ರೀವೈಷ್ಣವಾಂಭೋನಿಧಿವಿಮಳಸುಧಾಧಾಮನಾನಂದಧಾಮಂ ॥
ಘನರಂಗಾಚಾರ್ಯಪುತ್ರಂ ಸಚಿವಕಮಲಮಿತ್ರಂ ಲಸಜ್ಜೈಕ್ಯಪಾಧ್ಯಾ ।
ಯನುದಾರಂ ವಿಷ್ಣುಪಾದಾಂಬುಜನಿರುಜರುಚಿಚಂದ್ರಾತಪ್ರೋದ್ಯಚ್ಚಕೋರಂ ॥

ಮನವೊಲ್ದು ದಿವ್ಯಸೂರಿಗ ।
ಳನಘಾಚಾರ್ಯರ್ಗಳ ಚರಿತ್ರಮಂ ಬಲ್ಲಂತಾ ॥
ನನುವಿಂ ಪೇಳ್ವೆಂ ವೈಷ್ಣವ ।
ಜನಕಾನಂದಾಬ್ಧಿ ಪ್ರೋನ್ಮೆ ಶ್ರೀಹರಿಕೃಪೆಯಿಂ ||೯೨||

ಅದೆಂತೆನೆ :—

ಶ್ರೀಮತ್ಕಲ್ಯಾಣಭಾಸ್ವದ್ಗುಣಗಣನಿಳಯಂ ನಿತ್ಯಮುಕ್ತಾನುಭಾವ್ಯಂ ।
ಸಾಮಾಮ್ನಾಯಾದಿಸೇವ್ಯಂ ಪ್ರವಿಲಸದುಭಯೈಶ್ವರ್ಯನಿರ್ವಾಹಕಂ ನಿ ॥
ಸ್ಸೀಮಂ ಸರ್ವಾಪ್ತಕಾಮಂ ನಿರತಿಶಯಸದಾನಂದಯುಕ್ತಂ ಗಿರೀಶಾ ।
ಜಾಮರ್ತ್ಯಾಧೀಶ್ವರಾದಿಪ್ರಣಮಿತನೆಸೆದಂ ವಿಷ್ಣು ಲೋಕೈಕನಾಥಂ ||೯೩||

ವ|| ಇಂತಪ್ಪ ಸರ್ವೇಶ್ವರಂ ಸಕಲದೇವತಾಮುಕುಟತಟಘಟಿತಮಾಣಿಕ್ಯಶ್ರೇಣಿಪ್ರಭಾಪುಂಜರಂಜಿತಚರಣಸರಸಿಜ ಗಿರಿಶಸರಸಿಜಭವಸುರಪತಿಮುಖಸುರತರುಣೀಕರವೀಜ್ಯಮಾನಸುರುಚಿರಚಾಮರಜನಿತಮಂದಾನಿಲನಿಂ ತಂಪುವಡೆದು ಶ್ರೀ ವೈಕುಂಠಪುರವರದೊಳ್ ಕ್ಷೀರಪಾರಾವಾರಡಿಂಡೀರ ವಾರಪುಂಜೀಭೂತಮೆನಿಸ ಮಹಾಶೇಷಾಂಗಮೃದುಪರ್ಯಂಕದೊಳಿರ್ದೊರ್ಮೆ ನಿತ್ಯಮುಕ್ತರಂತಖಿಳಜೀವಕೋಟಿಗಮೆಮ್ಮ ಕೈಂಕರ್ಯಯೋಗ್ಯತೆಯುಂಟಾಗಲ್ವೇಳ್ಕುಂದು ಯೋಚಿಸಿ, ಮತ್ತು ಮೆಱಂಕೆಯಿಲ್ಲದ ಪಕ್ಷಿಗಳಂತೆ ಕರಣಕಳೇಬರಾದಿಗಳಿಲ್ಲದುದಱಿಂದೆಯುಂ ವೇದಪ್ರದಾನಮಂ ಮಾಡಿ ಸನ್ಮಾರ್ಗಂಗಳುಮಱಿಯಿಸಬಾರ್ದ ಕಾರಣದಿಂದೆಯುಂ ಇಂತಿರ್ದರಲ್ತೆಯೆಂದಾತ್ಮಕೋಟಿಯುಂ ನೋಡಿ ಕರಣಕಳೇಬರಂಗಳಂ ಘಟಿಯಿಸಲ್,

ಪರಮದಯಾಳುವಾಗಿ ಕಿರಣಾಳಿಕಳೇಬರದಾನಮಂ ಕರಂ ।
ವರಚಿಸಿಯಂತದರ್ಕಮುಪಯೋಗಮೆನಿಪ್ಪ ಶ್ರುತಿಪ್ರತಾನಮಂ ॥
ಸರಸತದರ್ಥಸುಪ್ರಕಟಿತಸ್ಮೃತಿಶಾಸ್ತ್ರವರೇತಿಹಾಸಮಿ ।
ಸ್ಫುರಿತಪುರಾಣಬೃಂದಮುಮನಾಗಿಸಿಯುಂ ಸಲೆ ಜೀವಕೋಟಿಗಳ್ ||೯೪||

ಸ್ಥಿರಕಾಲವರ್ತನತ್ವ |
ಸ್ಥಿರಸುಪ್ರಾಜ್ಞ[1]ದಿಸಾ[1]ಧನಂಗಳವೇನುಂ ||
ಪರಿಭಾವಿಸೆ ಸಾಲದೆ ತಾ |
ಮುರುರಾಜಸಕಾಮಸರ್ಕಳಾದ ನಿಮಿತ್ತಂ ||೯೬||

ವ|| "ಭಜೇತ್ಸಾರತಮಂ ಶಾಸ್ತ್ರಂ ರತ್ನಾಕರ ಇವಾಮೃತಂ" ಎಂಬಲ್ಪಸಾರ ಸಾರತರಶಾಸ್ತ್ರಂಗಳಲ್ಲದೆ ಸಾರತಮಮೆನಿಸಿ ಮೂಲಮಂತ್ರಮಾದಷ್ಟಾಕ್ಷರದ್ವಯಮೆಂಬ ಶರಣಾಗತಿಮಂತ್ರಮುಮಂ ಚರಮಶ್ಲೋಕಮುಮನವತಾರಂಗಳೊಳ್ ಪ್ರಕಾಶನಂ ಮಾಡಿ ಇನ್ನುಮತಿರಹಸ್ಯಮಾದುಪನಿಷದರ್ಥಂಗಳುಮಂ ಸಂಸ್ಕೃತರೂಪಮಾಗಿಯುಂ ಪ್ರಬಂಧರೂಪಂಗಳಾಗಿಯುಂ ತತ್ವಸ್ವರೂಪಮುಮನರಿತುಜ್ಜೀವಿಸವೇಳ್ಕುಮೆಂದು

ಗರುಡಾಹೀಶ್ವರಕೌಸ್ತುಭ |
ದರಬಾಣಾಸನಗದಾಸಿಖಡ್ಗಾದಿಗಳಾ ||
ಗಿರೆ ನಿತ್ಯಸೂರಿಗಳುಮಂ |
ಕರೆದಾಪರವಾಸುದೇವನಿಂತೆಂದಿರ್ದಂ* ||೯೭||

ಲೀಲಾವಿಭೂತಿಯೊಳ್ಸಲೆ |
ಭೂಲೋಕದೊಳಲ್ಲಿಗಲ್ಲಿಗವತಾರಂಗೆ ||
ಯ್ದಾಲೋಕಿಸಿ ಜಡಮಾದಾ |
ತ್ಮಾಳಿಗೆ ಸುಜ್ಞಾನದುದಯಮುಪ್ಪವೊಲೊಲವಿಂ ||೯೮||

ವಿಳಸತ್ಸಕಲಾಮ್ನಾಯಂ |
ಗಳ ಸಾರಂಗಳವೆನಿಪ್ಪ ಬಹುವಿಧತತ್ವಂ ||
ಗಳುಮಂ ಪ್ರಬಂಧರೂಪೋ |
ಜ್ಜ್ವಳಮುಪ್ಪವೊಲೆಸಗಿಮೆಂದು ಮುಗುಳ್ದಿಂತೆಂದಂ* ||೯೯||

ಅವನುಪದೇಶಂಗೆಯ್ದು |
ತ್ಮನಿಕಾಯಮನುಸ್ಯೈದೆ ತಿರ್ದಿ ಸನ್ಮಾರ್ಗಕೆ ಬ ||
ರ್ಪವೊಲೊಡರಿಸಿಮೆಂದಾಶ್ರೀ |
ಧನನ ಮಹಾಸುಜ್ಞಾನವಿತ್ತವರ್ಕಡುನಲವಿಂ ||೧೦೦||

---

ಪಾ—1. ದೀಪ್ತ.

ಯೋನಿಜರಾಗಿ ಕೆಲಂಬರ |
ಯೋನಿಜರೆನಿಸುತ್ತೆ ನಾಲ್ಕುವರ್ಣಂಗಳೊಳಂ ||
ನ್ಯೂನಮದಿಲ್ಲದೆ ವಿಷ್ವ |
ಕ್ಸೇನಗರುತ್ಮದ್ಭುಜಂಗಪತಿ ಮೊದಲಾದರ್ ||೧೦೧||

ವ|| ಆಳ್ವಾರ ರೂಪವಾಗಿಯುಮಾಚಾರ್ಯರೂಪವಾಗಿಯು ಮವತರಿಸಿಯುವನಿಯೊಳ್ಸಕಲಲೋಕೋಜ್ಜೀವನವುಂ ನೆಗಳ್ಚಿದರದೆಂತೆನೆ :—

|| ಗದ್ಯಂ ||

ಇದು ನಮಿತಹಿಮಕರಚೂಡಕಮಲಭವಮುಖಸುರಸಮುದಯಮೌಳಿಮಣಿಗಣಘೃಣಿಸಂಧ್ಯಾರಾಗಾನುಗುಣಪ್ರಚುರರುಚಿತಾರಕಾಯಮಾನ ರಂಗವಿಭುಚರಣಯುಗಳನಖಮಯೂಖಸುಧಾಪೂರವಿಹಾರಮದಮರಾಳೀಕೃತ ಮಹಿಷಪುರವರಸಾಮ್ರಾಜ್ಯಸಂಪನ್ನ ರಾಜಾಧಿರಾಜರಾಜಪರಮೇಶ್ವರಾಪ್ರತಿಮಪ್ರೌಢಪ್ರತಾಪ ಬಿರುದೆಂತೆಂಬರಗಂಡ ಯದುಕುಲನಳಿನದಿನಕರರಾದ ಶ್ರೀಚಿಕದೇವರಾಯಮಹಾರಾಜಪ್ರಸಾದಪರಿಪೂರ್ಣ ಸಚಿವನಿಚಯತಿಲಕ ಶ್ರೀಚಿಕುಪಾಧ್ಯಾಯ ವಿರಚಿತಮಪ್ಪ ದಿವ್ಯಸೂರಿಚರಿತ್ರಮಹಾಪ್ರಬಂಧದೊಳ್ ಕಥಾವತಾರಿಕಾಪೀಠಿಕಾಶ್ವಾಸಂ.

|| ಮಂಗಳಂ ಮಹತ್ ಶ್ರೀ ||

---

## — ದ್ವಿತೀಯಾಶ್ವಾಸಂ —

ಶ್ರೀತನುಕನಕಲತಾಶ್ಲೇ |
ಷಾತನುಕಾಮಂ ಮನರ್ಥಮಂ ಕುಡುಗೆ ಸರೋ ||
ಭೂತಮಹದಾಹ್ವಯರ್ಕಳ |
ನೋತೊಂದವಿದ ವಿಷ್ಣುಲೋಕನಾಥಂ ಸತತಂ |೧|

ವ|| ಈಪೂರ್ವೋಕ್ತಮಾದ ಸಕಲಲೋಕಾಧೀಶ್ವರನುಂ ಕಲ್ಯಾಣಗುಣಗಣನಿಳಯನುಂ ಸಮಸ್ತಪ್ರಪಂಚಸೃಷ್ಟ್ಯಾದಿಕರ್ತವ್ಯನುಂ ನಿಖಿಲಜಡಲೋಕೋಜ್ಜೀವನಕುಶಲನುಮಾದ ಶ್ರೀಮನ್ನಾರಾಯಣಂ ನಿರೂಪಿಸಿದಾಜ್ಞೆ ವಿಡಿದು ಶೇಷಶೇಷಾಶನವಿಷ್ವಕ್ಸೇನಪಂಚಾಯುಧಂಗಳ್ ಮೊದಲಾದ ನಿತ್ಯಸೂರಿಗಳ್ ಭೂತಳದೊಳಲ್ಲಿಗಲ್ಲಿಯವತಾರಮಂ ಮಾಡಿದರದೆಂತೆನೆ :—

ದರವುಂಶದಿಂದವೂದ್ವಾ |
ಪರದೊಳ್ ಕಾಂಚಾಖ್ಯಪುರದೊಳಾಶ್ವಿಜಭಾ ||
ಸುರವೂದ ಶ್ರವಣದೆ ಬಂ |
ಧುರಪೊಯ್ಗಾಳ್ವಾರ್ ಯಥೋಕ್ತಕಾರಿಯ ಬಳಿಯೊಳ್ ||
ಹೇಮಸರೋದ್ಭವಕಾಂಚನ |
ತಾಮರಸದೊಳೊಡನೆ ಯೋಗಿರೂಪದಿನವರು ||
ದ್ದಾಮರವತರಿಸಿ ಬಳಿಕಂ |
ಪ್ರೇಮದಿನೀಭೂಪ್ರದಕ್ಷಿಣಂಗೆಯ್ಯುತ್ತಂ ||೩||

ವ|| ಅಂತವರಿರೆಯಾಸಮಯದೊಳ್

ಕೃತಿನುತಮಲ್ಲಾಪುರಿಯಾ |
ದ ತಿರುಕಡಲ್ಮಲ್ಲೆಯಲ್ಲಿಯಾಶ್ವೀಜದ ರಾ ||
ಜಿತವರಧನಿಷ್ಠೆಯೊಳ್ ವಿಕ |
ಸಿತಕುಂದಪ್ರಸವದಲ್ಲಿ ಪೂಧತ್ತಾಳ್ವಾರ್ ||೪,

ವ || ಗದಾಂಶಭವರಾಗಿಯವತರಿಸಿ ಭೂಪ್ರದಕ್ಷಿಣಮನೆಸಗುತ್ತಿರೆ|| ಮತ್ತಮಾಗಳ್

ಸಲೆ ನಂದಕಾಂಶದಿಂದು |
ಜ್ಜ್ವಲದಾಶ್ವೀಜದೊಳೆ ಶತಭಿಷತಾರೆಯೊಳಂ ||
ತೊಲವಿಂ ಮೈಲಾಪುರಿಯೊಳ್ |
ವಿಲಸತ್ಕೇಶವನ ಸನ್ನಿಧಾನದೊಳೊಲವಿಂ ||೫||
ಕೈರ[1]ವಣಿ[1]ಯೆಂಬ ತೀರ್ಥದ |
ಕೈರವಸುಮಮಧ್ಯದಲ್ಲಿಯವತರಿಸಿ ಮಹೋ ||
ದಾರರ್ ಪೇಯಾಳ್ವಾರ್ ಸಂ |
ಚಾರಮನೆಸಗುತ್ತಮಿಳೆಯೊಳಿರುತಿರೆ ಯಾಗಳ್ ||೬||

ವ|| ಇಂತಿವರನ್ಯೋನ್ಯಭಗವತ್ಕರುಣಾಕಟಾಕ್ಷಪರಿಲಬ್ಧದಿವ್ಯಜ್ಞಾನೋದಯರಾಗಿ ಶ್ರೀಮನ್ನಾರಾಯಣನನಂತಕಲ್ಯಾಣಗುಣಗಣಾನುಭವತತ್ಪರತೆಯಿಂ ಭೂಮಿಯೊಳಲ್ಲಲ್ಲಿ ಸಂಚಾರನುನೆಸಗುತ್ತಿರ್ದು,

ಪಾ—1. ವಣಿ.

ಪದೆದೀಮೂವರುಮೊರ್ಮೆಬಂದು ತಿರುವಲ್ಲಿಕ್ಕೇಣಿಯೊಳ್‌ಕೂಡಿಮೋ
ದನೆ ಯಾದೃಚ್ಛಿಕರಾಗಿಯಲ್ಲಿ ಕೆಲಕಾಲಂ ಯೋಗಸಂಧಾನಸಂ ||
ಪದದಿಂದಿರ್ದು ಬೞಿಕ್ಕಗಲ್ದು ಧರೆಯೊಳ್ ತೀರ್ಥಾಟನಂಗೆಯ್ಯುತಿ |
ರ್ದು ದೃಢಾಂಗರ್ತಿರುಕೋವಿಲೂರನೊಲವಿಂದೀಮೂವರುಂ ಪೊರ್ದಿದರ್ ||

ವ|| ಅಂತು ಪೊರ್ದಿದ ಮೂವರೊಳ್

ಮೞೆಗಾಳಿಗಳುರುತರದುಪ |
ಟಳದಿಂದಿರುಳೊರ್ವ ಗೃಹಿಯ ನಡವೆಯೊಳಾಗಳ್ ||
ಘೞಿಲನೆ ಪೊಯ್ಗ್ಯಾೞ್ವಾರ್ ಮೆ |
ಯ್ವೞಲ್ಕೆಯಂ ಕಳೆಯಲೆಂದು ಶಯನಂಗೆಯ್ದರ್ ||೮||

ಬಡನಾಪೂಧತ್ತಾೞ್ವಾರ್ |
ನಡವೆಯೊಳನಿತೆಡೆಯನೀವುದೆನೆ ಪೊಯ್ಗ್ಯಾೞ್ವಾರ್ ||
ಕಡುನಲಿದೊಳಗಣ್ಗೆಯ್ದಿಸಿ |
ನಡುವಿರುಳೊಳ್‌ಕುಳ್ಳಿರ್ದರಿರ್ವರುಮಾಗಳ್ ||೯||

ಎಡೆಯುಂ ಕೇಳ್ದೊಡೆ ಕೊಟ್ಟವರ್ಬೞಿಕ ಪೇಯಾೞ್ವಾರ್ಗೆ ತಾಮಲ್ಲಿ ನಿಂ|
ದಡಸಿರ್ದರ್‌ತದನಂತರಂ ಹರಿ ಮಹಾಲಕ್ಷ್ಮೀಯುತಂ ಸಂಭ್ರಮಂ ||
ಬಡುತಾವೈಷ್ಣವರಂ ನಿರೀಕ್ಷಿಸಿ ವಿನೋದಂಬೆತ್ತವಕಾರ್ಣವಂ |
ತೊಡನಾತಾಣಕೆ ಬಂದು ಸಂವಣಿಸೆಯಾಶ್ರೀವೈಷ್ಣವರ್ ಚಿತ್ತದೊಳ್ ||೧೦||

ವ|| ಆಳೋಚನೆಯುಂ ಮಾಡಿದರದೆಂತೆನೆ :—

ಸಲೆಯಾಮಲ್ಲದೆ ಬಂದರಾರೆನುತೆ ಪೊಯ್ಗ್ಯಾೞ್ವಾರ್‌ನಿರೀಕ್ಷಿಪ್ಪೆನೆಂ |
ದೊಲವಿಂದಾಯೆಡೆ ಮರ್ಬು ತೀವಿರೆ ಪ್ರದೀಪಾಪೇಕ್ಷೆಯಿಂ ಪಾತ್ರೆಯಂ ||
ವಿಲಸದ್ಭೂತಳದಿಂದೊಡರ್ಚೆ ಘೃತಮಂ ವಾರಾಶಿಯಂ ಮಾಡಿ ಪ್ರ |
ಜ್ವಲಿತಜ್ಯೋತಿಯನರ್ಕನಿಂ ರಚಿಸಿ ನೋಡಲ್ಕಾಶೆಯಂ ತಾಳ್ದಿದರ್ ||೧೧||

ವ|| ಆಸಮಯದೊಳ್

ವರಭಕ್ತಿಯೆಂಬ ಪಾತ್ರೆಯ |
ನುರುತರಸುಶ್ರದ್ಧೆಯೆನಿಪ ಘೃತಮಂ ಮನದಿಂ ||

ಸುರುಚಿರದೀಪವನೊಲ್ದಸ |
ಗಿರದೀಕ್ಷಿಸಲಿರ್ದರೊಡನೆ ಪೂಧತ್ತಾೞ್ವಾರ್ [೧೦]
ಅವರೊಳ್ನಂದಕದಂಶದಿ |
ನವತರಣಂಗೆಯ್ದು ತೋರ್ಪ ಪೇಯಾೞ್ವಾರ್ ಶ್ರೀ ||
ಯುವತಿಯುತ ದರಗದಾಪಾ |
ಣಿ ವಿಷ್ಣುವಂ ಕಂಡು ದರ್ಶನೋತ್ಸುಕರಾದರ್ ||೧೩||
ಬೞಿಕಾಮೂವರುವೊಸೆದು |
ಜ್ವಳಪಾಸರ್ವೇಶದಿವ್ಯಮೂರ್ತಿಯುದುಱಿ[3] ಕ ||
ಣ್ಗೊಳಿಸಿರೆ ಸಾಕ್ಷಾತ್ಕರಿ[1]ಸುತೆ[1] |
ಪುಳಕಾನಂದಾಶ್ರುಗದ್ಗದಸ್ವರರಾದರ್ ||೧೪||
ವ|| ಅಂತು ನಿರವಧಿಕಭಕ್ತ್ಯಾವೇಶಪರವಶತೆಯಿಂ
ಬಂದೆರಡು ಮೂಱನೆಯ ತಿರು |
ವಂದಾದಿಗಳೆನಿಪ ಸುಪ್ರಬಂಧಂಗಳನಾ ||
ನಂದದೆ ವಿರಚಿಸಿ ನುತಿಸಿ ಮು |
ಕುಂದಶ್ರೀಪಾದಯುಗದೊಳೈಕ್ಯಂಬಡೆದರ್ ||೧೫||

|| ಗದ್ಯಂ ||

ಇದು ನಮಿತಹಿಮಕರಚೂಡಕಮಲಭವಮುಖಸುರಸಮುದಯಮೌಳಿಮಣಿಗಣಘೃಣಿಸಂಧ್ಯಾರಾಗಾನುಗುಣಪ್ರಚುರರುಚಿತಾರಕಾಯಮಾನ ರಂಗವಿಭುಚರಣಯುಗಳನಖಮಯೂಕಸುಧಾಪೂರವಿಹಾರಮದಮರಾಳೀಕೃತಮಹಿಷಪುರವರ ಸಾಮ್ರಾಜ್ಯಸಂಪನ್ನ ರಾಜಾಧಿರಾಜ ರಾಜಪರಮೇಶ್ವರಾಪ್ರತಿಮಪ್ರೌಢಪ್ರತಾಪ ಬಿರುದೆಂತೆಂಬರಗಂಡ ಯದುಕುಲನಳಿನದಿನಕರನಾಥ ಶ್ರೀಚಿಕದೇವರಾಯಮಹಾರಾಜಪ್ರಸಾದಪರಿಪೂರ್ಣ ಸಚಿವನಿಚಯತಿಲಕ ಶ್ರೀ ಚಿಕುಪಾಧ್ಯಾಯವಿರಚಿತಮಪ್ಪ ಪನ್ನಿರ್ಛಾೞ್ವರ ಚಾರಿತ್ರದೊಳ್ ಶಂಖಗದಾನಂದಕಾಂಶಭವರಾದ ಪೊಯ್ಗೈಯಾೞ್ವರ್ ಪೂಧತ್ತಾೞ್ವರ್ ಪೇಯಾೞ್ವರ್ಗಳ ವೈಭವಂ, ದ್ವಿತೀಯಾಶ್ವಾಸಂ.

|| ಮಂಗಳಂ ಮಹತ್ ಶ್ರೀ ||

---

ಪಾ—1. ಸಿಂಹ.

## — ತೃತೀಯಾಶ್ವಾಸಂ —

ಶ್ರೀಕರನಾಶ್ರಿತಜನರ |
ತ್ನಾಕರವಿಧು ಭಕ್ತಸಾರಮುನಿಪಾಲಂ ಚಾ ||
ಮೀಕರವಸನಂ ಕಾರು |
ಣ್ಯಾಕರನೀಗೆಮಗೆ ಶಾರ್ಙ್ಗಧರನತಿಮುದಮಂ ||೧||

ಸ್ಫುರಿಸುವ ಸುದರ್ಶನಾಂಶದಿ |
ಪಿರಿದೆ ಮಹೀಸಾರಪುರದ ನಾಮದಿನೆಸೆವಾ ||
ತಿರುಮೞಿಶಿಯೆಂಬ ಗ್ರಾಮದ |
ವರಭಾರ್ಗವಋಷಿಯ ವಧುವ ಗರ್ಭಾಲಯದಿಂ ||೨||

ನೆಲದೊಳ್ಮಾಸಿನ ಚೀಲದಿಂ ಬೆರಸು ಬಿದ್ದಾಪಿಂಡಮಂ ಕಾಣುತಾ |
ಕುಲಮಂ ತಾಳ್ದವರಿರ್ವರುಂ ಬೞಿಕದಂ ಕೊಂಡುಯ್ದು ಪರ್ವಿರ್ದ ವೇ ||
ತ್ರಲತಾಕುಂಜದ ಮಧ್ಯದೊಳ್ ಬಿಸುಡಲಾಗಳ್ಬೀಲದಿಂ ಪೊಣ್ಮಿಯು |
ಜ್ವಲಮಾದರ್ಭಕವೊಂದು ನಿರ್ಗಮಿಸಿ ತಾಂ ಕ್ಷುದ್ಬಾಧೆಯಿಂದಾಕ್ಷಣಂ ||

ಅೞುತಿರೆಯಾಸಮಯದೊಳಾ |
ಪೊೞಲಧಿದೇವತೆಯೆನಿಪ್ಪ ಜಗನ್ನಾಥಂ ಬಂ ||
ದೆಳಸಿ ಸಿರಿಗೂಡಿಯಲ್ಲಿಗೆ |
ವಿಳಸತ್ಕರುಣಾಕಟಾಕ್ಷದಿಂ ವೀಕ್ಷಿಸಿದಂ ||೪||

ವ|| ಅಂತು ತತ್ಕಟಾಕ್ಷರಸದಿಂದಮೆ ಪರಿಪೂರ್ಣಮಾಗಿರೆ,

ತಿರುವಾಳ್ವಾರ್ಗನಿಸಿಪ್ಪ ಮೇನಸಿರದೆಯ್ತಂದಲ್ಲಿ ವೇತ್ರಂಗಳಂ |
ಪಿರಿದುಂ ಕುಯ್ಯುತುಮರ್ಭಕಧ್ವನಿಯನಾಗಳ್ಕೇಳ್ದು ಸಾರ್ತಂದು ಭಾ ||
ಸುರತೇಜೋನಿಧಿಯಾದ ಬಾಲನಿರೆ ಕಂಡತ್ಯಂತಸಂತೋಷದಿ |
ರ್ಭರನಾಗುತ್ತುಮಪುತ್ರನಾದುದಱಿನಾತಂ ನಂದನಸ್ನೇಹದಿಂ ||೫||

ವ|| ಆಶಿಶುವನೆತ್ತಿಕೊಂಡು ನಿಜಗೃಹಕ್ಕೆಯ್ದಿ

ಭರದಿಂ ಪಂಗಯಕೆಲ್ವಿಯಾರೆನಿಪ ತನ್ನಾಸ್ತ್ರೀಯ ಕೈಯ್ಗೀಯಲಾ |
ದರದಿಂದಾಕೆ ತನೂಜರಿಲ್ಲಮುದಱಿಂದಾಬಾಲನಂ ಕೊಂಡು ತಾಂ ||
ಪರಮಸ್ನೇಹಮನಾಂತು ರಕ್ಷಿಸೆ ತದೀಯಸ್ತನ್ಯಮಂ ಬಿಟ್ಟು ವಿ |
ಸ್ಫುರಿಪಾಳ್ವಾರ್ಗಳೆನಲ್ ಮೃಗಾಂಕಕಲೆವೋಲ್ ಕೈಕೊಳ್ಳದೇನಾದೊಡಂ ||

ಅವರುಂ ವಿಸ್ಮಿತರಾಗಿ ದೈವಿಕದ ಪಿಂಡಂ ತಪ್ಪದೆಂದಾಗಳು ।
ತ್ಸವಮಂ ತಾಳ್ದಿರನಿತ್ತುಱಿಳ್ ಪರಿಕಿಸಲ್ಕಾರಾಜ್ಯದಲ್ಲಿರ್ದರಂ ।
ತು ವಿಚಾರಂಬಡೆವಲ್ಲಿಗೆಯ್ದಿ ಶಿಶುವಂ ಕಾಣುತ್ತುಮಾಶ್ಚರ್ಯಮಂ ।
ತವೆಯಂತರ್ಬಳಿಕೊರ್ವ ಪಾದಜನ ಪುತ್ರಂ ವೃದ್ಧನಾನಂದದಿಂ ॥೭॥

ನಿಜಕಾಂತೆಗೂಡಿ ಬಂದಾ ।
ಸುಜನಸ್ತುತಶಿಶುವಿನಿರವನೀಕ್ಷಿಸಿಯೆ ಪಾ ॥
ದಜನಚ್ಚರಿವಟ್ಟು ಕರಂ ।
ಭಜಿಸಿದನಾಬಾಲನಂ ಸದೈನ್ಯೋಕ್ತಿಗಳಿಂ ॥೮॥

ಅದೆಂತೆನೆ :—

ಪಾಲಂ ತಂದವನೀಂಟವೇಟ್ಕೆನುತವಂ ಸದ್ಭಕ್ತಿಯಿಂ ಪ್ರಾರ್ಥಿಸಲ್ ।
ಬಾಲಂ ತಾಂ ಕೃಪೆಯಿಂದಮರ್ಧಮನುಂ ಕೈಕೊಂಡು ಮತ್ತರ್ಧಮಂ ॥
ಲೀಲಾಲೋಕನದಿಂದೆ ನಿನ್ನ ಸತಿಗೀವೆಂದೀಯೆ ತದ್ಭಾರ್ಯೆಯಾ ।
ಪಾಲಂ ಸ್ವೀಕರಿಸುತ್ತುಮೀ ಯುವತಿಯಾದಳ್ ಗರ್ಭಮಂ ತಾಳ್ದು ತಾಂ ॥೯॥

ಬಳಿಕಾವಸಾನಿಸಿ ಪೆತ್ತಳೊಂದು ಶಿಶುವಂ ದೇವಾಂಶಮಂ ಸಂತಸಂ ।
ದಳೆದಾಗಳ್ ಕಣಿಕಣ್ಣನೆಂಬ ಪೆಸರಿಟ್ಟಬ್ಬಾಲಕಂಗಾತನು ॥
ಜ್ವಳಿಪಾಳ್ವರನೆ ಸೇವಿಸುತ್ತಿರೆಯುವರ್ಸಪ್ತಾಬ್ದವಾಗಿರ್ದವು ।
ಗ್ಗಳವಾದಾಋಷಿಗರ್ಭವಾಗೆ ನಿಜಯೋಗಜ್ಞಾನಸಾಮರ್ಥ್ಯದಿಂ ॥೧೦॥

ತಿಳಿದೆಲ್ಲಾಮತಮಂ ವಿಚಾರಿಸೆಯುಸಾರಂ ವಿಷ್ಣುವೇ ದೇವತಾ ।
ವಳಿಪೊಳ್ತಾಂ ಪರತತ್ವಮೆಂದು ಮನದೊಳ್ನಿಶ್ಚೈಸಿಯಾಳ್ವಾರ್ನಿರಾ ॥
ಕುಳದಿಂ ವೈಷ್ಣವದರ್ಶನಸ್ಥಿರತೆಯಂ ತಾಳ್ದೊಳ್ಪಿನಿಂ ತೀರ್ಥಸಂ ।
ಕುಳಯಾತ್ರಾಪರರಾಗಿ ಬಂದು ತಿರುವಲ್ಲಿಕ್ಕೇಣಿಯುಂ ಪೊರ್ದಿದರ್ ॥೧೧॥

ಅಂತು ಪೊರ್ದಿಯಲ್ಲಿರ್ದ ಪೇಯಾಳ್ವಾರ ಸನ್ನಿಧಿಯಲ್ಲಿ—

ವಿಮಳಜ್ಞಾನೋಪದೇಶಂಬಡೆದು ಮುದದಿನೇೞ್ನೂಱುವರ್ಷಂಬರಂಯೋ
ಗಮಹಾಧ್ಯಾನೈಕನಿಷ್ಠರ್ಲವಪ್ರಸಗಲಿರಲ್ ಪ್ರೇಮದೊಳ್ಪಾರ್ವತೀಯು ॥
ಕ್ತಮಹೇಶಂ ಮೇಲೆ ಪೋಗುತ್ತಿವರನೊಸೆದು ಕಂಡಾಕ್ಷಣಂ ತತ್ಪ್ರಭಾವೋ ।
ದ್ಭವಮಂ ನೋಳ್ಪುತ್ಸುಕತ್ವಂ ನೆಗೞ್ವಂದನಾಕಾಶದಿಂ ಭೂಮಿಗಾಗಳ್ ॥೧೨

ವ॥ ಅಂತಱಿಯಲೊಡಂ—

ಮುಂದಿರ್ಪ ಶಿವನನಾಱ್ವ |
ರೊಂದಿನಿಸುಂ ನೋಡದಿರ್ದೊಡಾಂ ಮಾದೇವಂ ॥
ಬಂದಿರ್ಪೆಂ ಕತಿಪಯವರ |
ಮಂ ದಯೆಯಿಂದೀವೆನೊಲ್ದು ಕೈಕೊಳ್ವುದದಂ ॥೧೩॥

ಆದೊಡೆ ಮೋಕ್ಷಮಂ ಸಲಿಸು ನೀನೆನೆ ಶಕ್ಯಮದೆನ್ನೊಳಲ್ತು ಮಿ |
ಕ್ಕಾದ ವರಂಗಳಂ ವಜಿಸು ಕೊಟ್ಟಪೆನಾನೆನೆ ನಕ್ಕ ಮರ್ಮಹಾ ॥
ಹ್ಲಾದದೆ ಕಂತೆಯುಂ ಪೊಲಿವ ಸೂಜಿಯುಮಿರ್ದುವು ಮಾರ್ಗದಲ್ಲಿ ನೂ |
ಲ್ಕೋದುೞ್ ಪೋಪಪೊಲ್ಪುರಮುಸೀಯೆನೆ ಕೋಪದಿ ಫಾಲನೇತ್ರಮಂ ॥

ಬಿಡೆ ಮಾರಾರಿಗಿದಿರ್ಚಿ ವರ್ಕಡುಪಿನಿಂ ವಾಮಾಂಘ್ರಿಯುಂ ತೋೞ್ ಮ|
ತ್ತೊಡನಲ್ಲಿಂ ಪೊಗೆ ಪುಟ್ಟೆ ಪೊಣ್ಮಿರೆ ಮಹಾಗ್ನಿಜ್ವಾಲೆಯಾತೇಜದಿಂ ॥
ಮೃಡನುಂ ತಾನಭಿಭೂತನಾಗಿಯುಪಚಾರಕ್ಷಾನ್ತ್ಯಮಂ ಮಾಡಿ ಕೊಂ |
ಡುಡುಮಾರ್ಗಂಬಿಡಿದೆಯ್ದಿದಂ ನಿಜನಿವಾಸಕ್ಕಾಗಳಾನಂದದಿಂ ॥೧೪॥

ಅನಂತರಂ

ಮುದದಿಂ ಕೊಂಕಣನೆಂಬ ಸಿದ್ಧಪುರುಷಂ ಸಾರ್ತಂದು ದಾರಿದ್ರ್ಯದೊಳ್|
ಪುದಿದಿರ್ಪೀನಿಮಗೊಂದು ಸಿದ್ಧಘುಟಿಕಾಸಂಪರ್ಕದಿಂ ಭಾಗ್ಯಮು ॥
ಪ್ಪುದನಾಂ ಮಾೞ್ಪೆನದಂ ಮಹಾಘುಟಿಕೆಯುಂ ನೀಮೊಲ್ದು ಕೈಕೊಂಡು ಸಂ|
ಪದಮಂ ಭೋಗಿಪುದೀಗಳೊಲ್ದೆನೆಯುವರ್ ನಕ್ಕಿಂತು ಮಾತಾಡಿದರ್ ॥೧೫॥

ಆದೊಡೆ ನೀನೀಘುಟಿಕೆಯ |
ನಾದರಿಸೆನುತಂಗವೃತ್ತಿಕೆಯುನಿತ್ತೊಡೆ ತಾ ॥
ನಾದುದು ಚಿನ್ನದ ಘುಟ್ಟಿವೊ |
ಲಾದಂ ನಾಣ್ಚುತ್ತೆ ಸಿದ್ಧಪುರುಷಂ ಪೋದಂ ॥೧೬॥

ಮತ್ತಮನಂತರವೊರ್ವಂ ವ್ಯಾಘ್ರಪಾದನೆಂಬ ಯೋಗಿಪುರುಷ ನಾೞ್ವರ ಸಮೀಪಕ್ಕೆ ಬಂದು

ಸ್ಫುರಿಪೊಳ್ಮುತ್ತಿನ ಮಾಲೆಯುಂ ಪಿಡಿದಿವಂ ಸ್ವೀಕಾರಮಂ ಮಾೞ್ಪುದಾ|
ದರದಿಂ ನೀಮೆನೆ ಲೇಸೆನುತ್ತಿ ವರಮಂಗಕ್ಷಸ್ರುಜಂದೋೞ್ ಭಾ ॥

ಸುರತಾರಾವಳಿಯಂತೆ ತಾಂ ಪ್ರಚುರತೇಜೋರೂಪದಿಂ ಕಣ್ಗೆದೊ ।
ಪ್ಪಿರೆಯಾತಂ ಮಿಗೆ ನಾಣ್ಚಿ ತನ್ಮಹಿಮೆಯಂ ಕೊಂಡಾಡುತಂತೆಯ್ದಿದಂ ॥೧೮॥
ಶ್ರೀರಂಗಂ ಮೊದಲಾದ ದೇಶಚಯಮಂ ನೋೞ್ಪಾಶೆಯಿಂದಾಗಳಾ ।
ೞ್ವಾರಲ್ಲಿಂ ಪೊಱಮಟ್ಟು ಸಾರ್ದರುತೆ ಕಾಂಚೀಕ್ಷೇತ್ರದೊಳ್ಪೊಯ್ದು ಯಾ ॥
ೞ್ವಾರುತ್ಪತ್ತಿಗೆ ತಾಣವಾದ ವಿಳಸತ್ಸ್ವರ್ಣಾಬ್ಜಕಾಸಾರದೊಳ್ ।
ಧೀರತ್ವಂದಳೆದೊಲ್ದು ವರ್ಷಶತಸಪ್ತಂ ಯೋಗಮಂ ತಾಳ್ದಿದರ್ ॥೧೯॥

ವ॥ ಅಂತು ಯೋಗಾರೂಢರಾಗಿಯಲ್ಲಿ ಇರ್ಪಸಮಯದೊಳ್,

ಇರದಾೞ್ವಾರನದೊರ್ವ ವೃದ್ಧೆ ನಲವಿಂ ಶುಶ್ರೂಷೆಯಂ ಮಾಡಿಕೊಂ ।
ಡಿರೆ ಕಾರುಣ್ಯದಿನೊರ್ಮೆ ನೋಡಿಯವಳಂ ತದ್ವಾಂಛೆಯಂ ಬೇಗದಿಂ ॥
ಪರಿಸಾಸಿತ್ತಪೆನೀಗಳೆಂದೆನೆ ವ್ರತೀಶಾ ಯೌವನಂ ವೇಳ್ಕುದಂ ।
ಭರದಿಂದೀಯೆಸಲಾಗು ನೀನೆನೆ ವಯಸ್ಸಾಮರ್ಥ್ಯಮಂ ತಾಳ್ದಿದಳ್ ॥೨೦॥

ಆನಗರೀಶಂ ಪಲ್ಲವ ।
ಕೋಸಂಗವಳಿಪ್ಪೆಯಾದಳಾಕಣಿಕಣ್ಣಂ ॥
ತಾನಾೞ್ವಾರಲ್ಲಿರ್ಪ ವಿ ।
ಧಾನಮನಾಲಿಸಿ ಸಹರ್ಷನಲ್ಲಿಗೆ ಬಂದಂ ॥೨೧॥

ಅಂತು ಬಂದು,

ಅವನಾೞ್ವಾರ್ಗತಿಭಕ್ತಿಯಿಂದವಿರತಂ ಶುಶ್ರೂಷೆಯಂ ಮಾಡಿಕೊಂ ।
ಡಿವರಿಂ ಪ್ರೇರಿತನಾಗಿಯಾಪುರಿಗುಪಾದಾನಾರ್ಥಮೈತಂದು ಹ ॥
ರ್ಷವಿಷಾದಂಗಳನೆಲ್ಲಮಂ ತೊಱೆದು ತಾನಲ್ಲಲ್ಲಿ ಸಂಚಾರಮಂ ।
ತವೆ ಮಾಡುತ್ತಿರೆಯಾನೃಪಂ ಕರೆದಿವಂಗಿಂತೆಂದನುಲ್ಲಾಸದಿಂ ॥೨೨॥
ಕವಿತಾಸಾರಮನೆಮ್ಮ ಮೇಲೆ ರಚಿಸೀಗಳ್ ನೀನೆನುತ್ತಾತನು ।
ತ್ಸವದಿಂ ಪೇೞೆ ಕವಿತ್ವಮಂ ನರರ ಮೇಲಾಂ ಪೇೞ್ವುದಿಲ್ಲೆಂದೊಡಂ ॥
ತವನೆಮ್ಮರನೆ ಬಿಟ್ಟು ಪೋಗೆನೆ ಮಹಾಸಂತೋಷಮೊಂದೀತನಾ ।
ಯವನೀಶಂ ನೆಗೞ್ದಂದಮಂ ವಚಿಸಿಯಾೞ್ವಾರ್ಗಳಾಂ ಪೋಪೆಂ ॥೨೩॥

ಎನಲಾವುಂ ಬರ್ಪೆವು ನಿ ।
ನ್ನೆ ನುತಾೞ್ವಾರಾಗ್ರಹಾಪ್ರಸನ್ನಮಿಸೆನಿ ।
ಪ್ಪೆನುಪಮಯಥೋಕ್ತಕಾರಿಯು ।
ಸನಿಹಕ್ಕೆತ್ತೆಮ್ಮ ನುಡಿದನಿಂತೆಂದೊಲವಿಂ ॥೨೪॥

ಕಣಿಕಣ್ಣಂ ಪೋಕುಮಾನುಂ ಗಮಿಸಿದಪೆನಿರಲ್ಕಾಗದಿಲ್ಲಿಂದೆ ನೀನುಂ |
ಫಣಿಪರ್ಯಂಕಾನ್ವಿತಂ ಬಾರೆನಲವರೊಡನಾಸ್ವಾಮಿಯುಂ ಬೇಗದಿಂದಾ ‖
ಕ್ಷಣದೊಳ್ ಕ್ಷೀರಾಪಗಾತೀರದೊಳೆಸೆವೊರಲಿಕ್ಕೆಂಬ ಗ್ರಾಮಕ್ಕೆ ಸ |
ಲ್ಲಕ್ಷಣೆಯಾದಾಲಕ್ಷ್ಮಿಯುಂ ತಾನೊಡವರೆ ಬಿಜಯಂಗೆಯ್ದನುಲ್ಲಾಸದಿಂದಂ‖

ವ| ಅಂತು ವಿಜಯಂಗೆಯ್ದ ವೃತ್ತಾಂತಮಂ ತಿಳಿದು,

ಬಹುಚಿಂತಾನ್ವಿತನಾಗಿಯಾನೃಪತಿಯಾಗ್ರಾಮಕ್ಕೆ ತಾಂ ಬಂದು ನಿ |
ಸ್ಪೃಹರಾಳ್ವಾರ ಪದಾಬ್ಜಮಂ ಭಜಿಸಿಯೆನ್ನಿಂದಾದ ತಪ್ಪಂ ಕ್ಷಮಾ ‖
ವಹರೀಗಳ್ ಮಱೆಗೊಳ್ವುದೆಂದೆನಲವರ್ಗಂತಕ್ಕೆ ಸುತ್ತಾಗಳು |
ಮ್ಮಹದಿಂ ಪೋಗಿ ಯಥೋಕ್ತಕಾರಿಯ ಸಮಾಸಕ್ಕಂತು ಮಾತಾಡಿದರ್ ‖
ನಲವಿಂದಂ ಕಣಿಕಣ್ಣನೆಯ್ದಿದಪನಾನುಂಪೋದಪೆಂ ನೀನುಮು |
ಜ್ಜ್ವಲಶೇಷಾಸ್ತರಣಂ ಸಮೇತಮುರದಿಂ ಬಾಯೆಂಬ ತದ್ವಾಕ್ಯಮಂ ‖
ಜಲಜಾಕ್ಷಂ ಮಿಗೆ ಕೇಳ್ದುದಕ್ರಿರದಿನೆಂದುಂ ತಾಂ ಮಲಂಗಿರ್ದನಂ |
ತೊಲವಿಂ ದಕ್ಷಿಣಶೀರ್ಷನಾಗಿ ಶಯನಂಗೆಯ್ದಂ ತದಾರಭ್ಯದಿಂ ‖೨೮‖

ವ‖ ಆಸ್ವಾಮಿಗೆ “ವೈಗಾವೃಳ್'ನೈನಾರ್'” ಎಂಬ ಪೆಸರಿಂದಿರ್ದಂ ಅಂದು ಮೊದಲ್ “ಯಥೋಕ್ತಕಾರಿ” ಯೆಂಬ ನಾಮದಿಂದೊಪ್ಪಿದನನಂತರಂ,

ದಕ್ಷಿಣದೇಶಸ್ಥಲಮನ |
ಪೆಕ್ಷಿಸವೇಳ್ಕೆಂದು ಪೋಳಪೇಕ್ಷೆಯತ್ತಂ ‖
ದಾಕ್ಷಿತಿಯೊಳೊಪ್ಪುತಿರ್ಪ ಮ |
ಹಾಕ್ಷೇತ್ರಂ ವ್ಯಾಘ್ರಪುರಿಗೆ ನಲವಿಂ ಬಂದರ್ ‖೨೯‖

ವ‖ಅಂತು ಬಂದಾಳ್ವಾರೊರ್ವ ಬ್ರಾಹ್ಮಣನ ಬಾಗಿಲ ಜಗಲಿಯೊಳಿರೆ,

ಅರೆಬರ್ವೇದಮನೋದುತಿರ್ಪರಿವರಂ ಕಂಡೀತನಲ್ತ್ವರ್ಣರಾ |
ಸುರನಾಕರ್ಣಿಸಲಾಗದೆಂದು ಶ್ರುತಿಯಂ ಬಾಯ್ಮುಚ್ಚಲಾಬ್ರಾಹ್ಮಣ ‖
ಗಿರದಾಮ್ನಾಯದಪಾತಮೋಮಱಿಯಲಾಂತಾಶ್ಚರ್ಯಮಂ ತತ್‌ಕ್ಷಣಾಂ |
ತರದೊಳ್ ತನ್ಮಹಿಮಾವಿಶೇಷಮಿದೆನುತ್ತೆೞ್ದಾಗಳಾಬ್ರಾಹ್ಮಣರ್ ‖೩೦‖

ವ‖ ಈಯಾಳ್ವಾರ ಶರಣ್ಬುಗೆ ಬೞಿಕಿವರ್ ಕರಿಯಭತ್ತಮನುಗುರಿಂ ಚಿವುಂಟಿ ನೆಲಕಿಡೆಯುಂತು “ಕೃಷ್ಣಾನಾಂ ವ್ರೀಹೀಣಾಂ” ಎಂಬ ಶ್ರುತಿವಾಕ್ಯಮಂ ತಿಳಿದಾಬ್ರಾಹ್ಮಣರ್ ಸಂತುಷ್ಟರಾದರ್. ಅನಂತರಂ,

ಪಾವನಚರಿತ್ರರಾಜ್ಞಾ ।
ರಾವೂರೊಳ್ನಲವಿನಿಂದುಪಾದಾನಕ್ಕಂ ॥
ತಾವಾವ ವೀಥಿಗೆಯ್ದುವ ।
ರಾವೀಥಿಗೆ ಪೋಲ ದೇವರಭಿಮುಖಮಕ್ಕುಂ ॥೨೧॥

ಈವಿಸ್ಮಯಮಂ ಕಂಡಾ ।
ದೇವಲಕಂ ನೃಪತಿಗುಸಿರಲವರ ಮಹಿಮೆಯೆಂ ॥
ದಾವಿಭುವೀಯಾಳ್ವಾರಡಿ ।
ದಾವರೆಯಂ ಭಜಿಸುತೊಲ್ದು ಸತ್ಕೃತಿಗೆಯ್ದಂ ॥೨೨॥

ವ॥ ಅನಿತಱೊಳ್ ಪೆರುಂಬುಲಿಯೂರ ಸ್ವಾಮಿಯೆಂಬೊರ್ವ ಸೋಮಯಾಜಿಯಿವರ ಪ್ರಭಾವಮಂ ಕಂಡಾಳ್ವಾರಂ ಯಜ್ಞಶಾಲೆಗೊಡಗೊಂಡು ಪೋಗಿ,

ಇವರ್ಗಾತಂ ಪದೆದಗ್ರಪೂಜೆಯನೊಡರ್ಚಲ್ಬಿತ್ತಮಂ ಮಾಡೆ ಕಂ ।
ಡು ವಿಷಾದಂದಳೆದಾದ್ವಿಜರ್ಕಲರಾವಿರ್ಗಿತಿವಂಗೀಗುಮೇ ॥
ಇವನುತ್ಕೃಷ್ಟತೆಯೇನೆನುತ್ತೆ ಮುಖವಿಘ್ನಂ ಗೆಯ್ದುತಾಮೆಲ್ಲರುಂ ।
ಸವನಾಗಾರದಿನಂದು ನಿರ್ಗಮಿಸಲಾವಿಪ್ರಂ ಮಹಾಖೇದದಿಂ ॥೨೩॥

ಬಱಿಕಾಳ್ವಾರಡಿಯಲ್ಲಿ ಬಿಲ್ದು ಮುಖಕೇಗಳ್ವಿಘ್ನಮಾದತ್ತೆನು ।
ತ್ತಳವಿಂ ಜಿಂತಿಸೆ ನೋಡಿ ಸರ್ವಹೃದಯಸ್ಥಸ್ವಾಮಿಯುಂ ಕೂರ್ತು ನೀ॥
ನೊಳಗಿರ್ಪಂದದಿಸೀಗಳೊಲ್ದು ಪ್ರೊಱಗುಂ ಸುವ್ಯಕ್ತನಾಗಿ ದ್ವಿಜಾ ।
ವಳಿಗೆಂದುನ್ನತಭಕ್ತಿಯಿಂ ನುತಿಸಲಿಂತಾಸರ್ವಲೋಕೇಶ್ವರಂ ॥೨೪॥

ಅಂತವರ ಕಣ್ಗೆ ಕಾಣಿಸ ।
ಲಾಂತಚ್ಚರಿಯಂ ದ್ವಿಜರ್ಕಳಾಳ್ವಾರಡಿಗೋ ॥
ರಂತೆಱಗಿಯಪರಾಧಮ ।
ನೆಂತಾನುಂ ಕ್ಷಮಿಸಿಮೆನಲದಂ ಕೈಕೊಂಡರ್ ॥೨೫॥

ವ॥ ಅನಂತರಂ ಕುಂಭಕೋಣೆಯನೆಯ್ದಿಯಲ್ಲಿರ್ಪ ಶಾರ್ಙ್ಗಪಾಣಿಯುಂ ಸೇವಿಸಿಯಾಸ್ವಾಮಿಯುಂ ಕೂರ್ತಿಂತೆಂದರಪೆಂತೆನೆ:—

ಅಳೆಯೆ ತ್ರಿವಿಕ್ರಮಾಕೃತಿಯಿನೀಜಗಮಂ ಶ್ರಮಮಾಯ್ತೊ ಪೇಳ್ಮಹೋ।
ಜ್ಜ್ವಳವರಹಾವತಾರದಿಳೆಯಂ ಪಗೆಗೆತ್ತಿ ಬಳಲ್ಕೆಯಾದುದೋ ।

ಚಳಕದಿನೇೞ್ದು ಸೊಲ್ಲಿಸನೆ ಭೋಗಿಪತಲ್ಪದಿನೇೞಲುಜ್ಜುಗಂ ।
ದಳೆಯೆ ರಮೇಶನಂತದಸಿವರ್ಣನಹರ್ಷದೆ ನೋಡಿ ಪೊಣ್ಮಿದರ್ ॥೨೬॥

ವ॥ ಅಂತು ಪೊಣ್ಮಿಯಾಸ್ವಾಮಿಯೊಡನಿಂತೆಂಬರದೆಂತೆನೆ :—

ಇದು ತಾನರ್ಚಾವತಾರಕ್ಕೆಣಿಸಲುಚಿತಮಲ್ತೆಂತಿರೆಂದಾಡೆಯಾೞ್ವಾ ।
ರದಱಿಂದಾಸ್ವಾಮಿ ತಾನುಂ ಮುಲಗಲೆಳಸಿತೋರ್ಪಂತೆಪ್ರೋಲಿರ್ಪವೀಗಳ್ ॥
ಪದೆದಾೞ್ವಾರಲ್ಲಿ ಯೋಗಪ್ರಚುರತೆಯಿರವಿಂ ಧ್ಯಾನಮಂ ಮಾಡಿ ಶ್ರೀರಾ ।
ಟ್ಪದಪಂಕೇಜಾತಮಂ ಹೃತ್ಕಮಲದೊಳಚಲಪ್ರಾಯಮಾನಂದದಿಂದಂ ॥೨೭॥

ಅಂದೆಸಗಿ ನಾಲ್ಕನೆಯ ತಿರು ।
ವಂದಾದಿಯುಮಂ ಚತುರ್ನವತಿಯುಂ ಪಾಟ್ಟಂ ॥
ಸಂದ ತಿರುಚಂದವೃತ್ತಮು ।
ನೊಂದಿಸಿ ಪೇೞ್ದರ್ಕಡಂಗಿ ನೂಱರ್ಪತ್ತಂ ॥೨೮॥

ಅಂತೊಡನೆ ರಚಿಸಿ ಲಕ್ಷ್ಮೀ ।
ಕಾಂತನ ವಿಷಯಾರ್ಥವಾಗಿ ಕತಿಪಯದಿವಸಂ ॥
ಸಂತಸದಿಂದಲ್ಲಿ ದೋರ್ಪ ।
ರಂತಾೞ್ವಾರ್ ಮುಕ್ತಿಪದಕೆ ಸಾರ್ದರ್ನಲವಿಂ ॥೨೯॥

ವ॥ ಅಂತಾತಿರುಮೞಿಶೆಯಾೞ್ವಾರ್ ಭೂಮಿಯೊಳ್ ನಾಲ್ಕಾಸಿರದೇೞ್ನೂಱುವರ್ಷಂಬರೆವಿರ್ದು ಶ್ರೀವಿಷ್ಣುವಿನ ಪರಂಧಾಮಕ್ಕೆಯ್ದಿದರ್. ಇದೀಗ ತಿರುಮೞಿಶೆಯಾೞ್ವಾರ ವೈಭವಂ.

॥ ಗದ್ಯಂ ॥

ಇದು ನಮಿತಹಿಮಕರಚೂಡಕಮಲಭವಮುಖಸುರಸಮುದಯಮೌಳಿಮಣಿಗಣಘೃಣಿಸಂಧ್ಯಾರಾಗಾನುಗುಣಪ್ರಚುರರುಚಿತಾರಕಾಯಮಾನ ರಂಗವಿಭುಚರಣಯುಗಳನಖಮಯೂಖಸುಧಾಪೂರವಿಹಾರಮದಮರಾಳೀಕೃತ ಮಹಿಷಪುರವರಸಾಮ್ರಾಜ್ಯಸಂಪನ್ನ ರಾಜಾಧಿರಾಜರಾಜಪರಮೇಶ್ವರಾಪ್ರತಿಮಪ್ರೌಢಪ್ರತಾಪ ಬಿರುದೆಂತೆಂಬರಗಂಡ ಯದುಕುಲನಳಿನದಿನಕರರಾದ ಶ್ರೀಚಿಕದೇವರಾಯಮಹಾರಾಜಪ್ರಸಾದಪರಿಪೂರ್ಣ ಸಚಿವನಿಚಯತಿಲಕ ಶ್ರೀಚಿಕುಪಾಧ್ಯಾಯ ವಿರಚಿತಮಪ ದಿವ್ಯಸೂರಿಚರಿತ್ರಮಹಾಪ್ರಬಂಧದೊಳ್ ತಿರುಮೞಿಶೆಯಾೞ್ವಾರವೈಭವಂ ತೃತೀಯಾಶ್ವಾಸಂ ಸಂಪೂರ್ಣಂ.

॥ ಮಂಗಳಂ ಮಹತ್ ಶ್ರೀ ॥

---

## — ಚತುರ್ಥಾಶ್ವಾಸಂ —

ಶ್ರೀ ಮಧುರಾಧರಚುಂಬನ ।
ಕಾಮಂ ಶಠಗೋಪಮಧುರಕವಿನೋಕ್ಷದನು ॥
ದ್ದಾಮಂ ಕೇಶವನಮರ ।
ಸ್ತೋಮನುತಂ ಸುಖಮನೆಮಗೆ ಕುಡುಗೊಲವಿಂದಂ ॥೧॥

ವರತಾಮ್ರಪರ್ಣಿಯೆನಿಸುವ ।
ಸರಸನದೀಪ್ರಾಂತದೊಳ್ ತಿರುಕ್ಕುರುಕೂರೆಂ ॥
ಬುರುಸುಕ್ಷೇತ್ರದ ಮೂಡ ।
ತ್ತಿರುಕುರುಕೂರೆಂಬ ತಾಣದೊಳ್ಸಂತಸದಿಂ ॥೨॥

ವ॥ ಸಂತಸಮೆ ಇರ್ಪ ಸಪ್ತಸಂತಾನವೈಷ್ಣವರೆನಿಪಾಪ್ರೊಳಕಾರಿಯಾರೆಂಬ ವೈಷ್ಣವರ್ಗೆ ವಿವಾಹಕಾಲಂ ಪ್ರಾಪ್ತಮಾಗೆ "ತಿರುವಣ್ಪರಿಶಾರ"ಮೆಂಬ ಕ್ಷೇತ್ರದೊಳ್

ತಿರುವಾಜ್ಮೊರ್ಳೆನಿಪ್ಪ ವೈಷ್ಣವರ ಭಾಸ್ವತ್ಪುತ್ರಿ ವೈವಾಹಕೊ ।
ಪ್ಪಿರೆ ತಾಂ ದೊಡ್ಡಮಸಂಗಯಾರೆನಿಪ ಕನ್ಯಾರತ್ನಮಂ ಹರ್ಷದು ॥
ಬ್ಬರದಿಂದಂ ಪ್ರೊಳಕಾರಿಯರ್ನಿಜತನೂಜಕಾರಿಯಾಗೊರ್ಳಪ್ಪವೆ ।
ತ್ತಿರೆ ಕೈಗೆಯ್ದಿ ವಿವಾಹಮಂ ತಿರುಗಿ ಬರ್ಪಾಗಳ್ ಮಹಾನಂದದಿಂ ॥೩॥

ವ॥ ಈಪ್ರೊಳಕಾರಿಯಾರೆಂಬ ವೈಷ್ಣವರ್ ನಿಜತನೂಜಕಾರಿಯಾಗೊರ್ಡಿ ಮಧ್ಯಮಾರ್ಗದೊಳ್

ಮುಂ ಬರೆ ತಿರುಕ್ಕುರುಂಗುಡಿ ।
ಯೆಂಬ ಮಹಾಕ್ಷೇತ್ರಮಾದ ಕಾರಣಮದರೊಳ್ ॥
ನಂಬಿಯನುಱೆ ಸೇವಿಸಿ ಕಮ ।
ಲಾಂಬಕ ನಿಸ್ಸಮಸುಗುಣಗನಂ ಕರುಣಿಸು ನೀಂ ॥೪॥

ಎಂದೊರೆಯೆ ಸಂತಸಂದಳೆ ।
ದಂದಿನಿರುಳ್ ಸ್ವಪ್ನದಲ್ಲಿ ಬಂದಚ್ಯುತನಿಂ ॥
ತೆಂದಂ ನಿಮ್ಮುದರದೊಳಾಂ ।
ಸಂದವತರಿಸುವೆನೆನೆದಕೆ ನಿಸ್ಸಂದೇಹಂ ॥೫॥

ವ॥ ಇಂತೆಂದಾಸ್ವಾಮಿಯ ನಿರೂಪಮಂ ಕೇಳ್ದು ಹರ್ಷಂಬಡೆದು ಮಾಡತ್ತಿರುಕ್ಕುರುಕೂರೆಂಬ ನಿಜಗ್ರಾಮಕ್ಕೆ ಬರೆಯಾತಿರುಕ್ಕುರುಂಗುಡಿ ನಂಬಿಸ್ವಾಮಿಯಾಸಮಯದೊಳ್

ವರಸೇನಾಧಿಪನಾಗಿ ರಂಜಿಸುವ ವಿಷ್ವಕ್ಸೇನನಂ ಪ್ರೀತಿಯಿಂ ।
ಕರೆದಾದೊಡ್ಡಯನಂಗಯಾರುದರದೊಳ್ ನೀಂ ಪುಟ್ಟು ಲೋಕಾವಳೀ ॥
ಪರಮೋಜ್ಜೀವನಶಕ್ತನಾಗಿ ಜನಮೆಲ್ಲಂ ಸತ್ಪಥಕ್ಕೆಯ್ದುವಂ ।
ತಿರೆ ತಿರ್ದೆಂದು ನಿರೂಪವೀಯಲೊಡಮಂತಕ್ಕೆಂದು ಸಂತೋಷದಿಂ ॥೬॥

ಬಳಿಕಾಸೇನಾಧಿಪನು ।
ಜಜ್ವಳತರತಜ್ಜಠರದಿಂದೆ ಸರ್ವಾವಯವಂ ॥
ಗಳನಿತ್ತುಂ ಕಾಣಿಸದಂ ।
ತಿಳಿಯೊಳ್ ಮಿಗೆ ಬೀೞೆ ಗರ್ಭಕೋಶದಿನಾಗಳ್ ॥೭॥

ಪರಿಕಿಸಿ ಮಾತಾಪಿತೃಗಳ್ ।
ಪುರತಸ್ಸ್ಥಿತಗರ್ಭಕುಂಭಮಂ ಕಟಕಟಿದೇಂ ॥
ಹರಿಯ ವರದಿಂದೆ ಜನಿಯಿಸಿ ।
ಹರಿಹರಿ! ಇಂತಾಗ ಬಕುರ್ವಮೇಯಮಾದೊಡಮೇಂ ॥೮॥

ಇದನಾಸ್ವಾಮಿಗೆ ಸಾರ್ಚಿಮಾಣ್ಬ ಮನುತಾಗಳ್ ತೊಟ್ಟಿಲೊಳ್ಮಚ್ಛಿತಂ ।
ದದನಾದೇವನ ಮುಂದೆ ತಾಮಿರಿಸೆ ಶೇಷಾಂಶಾಮ್ಲಿಕಾವೃಕ್ಷಕಂ ॥
ಜಗೊಳಾಚೇಲದಿನುಣ್ಮೆಯೊಂದು ಶಿಶುವಿತ್ತಲ್ ಬಂದು ತಾಂ ಪೋಗಿ ಪೊ ।
ಕ್ಕುದು ತತ್ಕೋಟರಮಂ ಕುತೂಹಲಮಿವರ್ಗಪ್ಪಂತೆವೋಲ್ ಬೇಗದಿಂ ॥೯॥

ಆಸಮಯದೊಳ್

ಆಮಾತಾಪಿತೃಗಳದಾ ।
ಸ್ವಾಮಿಯ ವಿಮಲಾವತಾರಮೀಶಿಶು ತಾನ ॥
ಲ್ತೀಮಾನುಷ್ಯವ್ಯಕ್ತಿಯೆ ।
ಆಮೇಸೀಯೋಗಿ ಪುರುಷನೆಮಗಾತ್ಮಜನೇ ॥೧೦॥

ಎಂದೆಱಗಿ ದೇವ ಯುಷ್ಮ ।
ನ್ನಂದನನುಮನೊಪ್ಪಿಸಿದೆವು ನಿನಗೆನುತಾತಾ ॥

ಯ್ತುಂದೆಗಳಾಗಳ್ ತಮ್ಮೊ |
ರ್ಗಂದೆಯ್ದಿ ವಿಷಾದವಿಲ್ಲದೊಲವಿಂದಿರ್ದರ್ ||೧೧||

ಅಂತುಮಲ್ಲದೆಯುಂ,

ಇವರವತಾರಂ ಕಲಿಯುಗ |
ಮವತರಿಸಿದ ಮೇಲೆ ಪಂಚಚತ್ವಾರಿಂಶ ||
ದ್ದಿವಸದ ವೈಶಾಖದ ಹು |
ಣ್ಣಿಮೆಯು ವಿಶಾಖಾಕ್ಷದಲ್ಲಿಯಾದುದು ಪ್ರಕಟಂ ||೧೨||

ತಿರುಪ್ಪುರಿಗೆ ಮೂಡಲೊಪ್ಪುವ |
ತಿರುಕೋಳೂರೆಂಬ ಗ್ರಾಮದೊಳ್ ಮುನ್ನಂ ದ್ವಾ ||
ಪರಯುಗದ ಚೈತ್ರಸಿತಪ |
ಕ್ಷರುಚಿರಪೌರ್ಣಮಿಯೊಳೆಸೆವ ಚಿತ್ರೋಡುವಿನೊಳ್ ||

ಬಗೆದರ್ಲವಿಂ ಕುಮುದಾ |
ದಿಗಣಾಂಶರಾದ ಮಧುರಕವಿಯಾಳ್ವಾರ್ರ್ಗಂ ||
ನೆಗಳ್ದಿ* ಪುರಶೂಡಾಹ್ವಯು |
ಸುಗಮು ಶ್ರೀವೈಷ್ಣವರ ನಿಕೇತನದೆಡೆಯೊಳ್ ||೧೪||

ವ|| ಅಂತವತರಿಸಿ ಯೋಗಿಪುರುಷರಾಗಿ,

ಕೆಲವು ಪಗಲ್ಯೋಗದೊಳ |
ರ್ದಲಸದೆ ಭೂಪ್ರದಕ್ಷಿಣಂಗೆಯ್ವೇೞ್ಕೆಂ ||
ದೊಲವಿಂ ಗಂಗಾತಟದೊಳ್ |
ನೆಲಸಿರಲೊಂದಿರುಳದೊರ್ಮೆ ತೆಂಕಣ ದೆಸೆಯೊಳ್ ||೧೫||

ಅಮಿತಾದಿತ್ಯಪ್ರಕಾಶಂಬಡೆದುರುತರತೇಜಸ್ಸು ನೇತ್ರಾಧ್ವದೊಳ್ ತೀ |
ವೆ ಮಹಾಕೌತೂಹಲಂಜೆತ್ತವರೊಡಸಿರುತಾನೇನಿದಂ ನೋಡವೇೞ್ಕೆಂ ||
ದು ಮುದಂದಾಳ್ದರ್ಕಜಾತಾಶೆಯೊಳತಿವಿಲಸತ್ತಾಮ್ರಪರ್ಣೀಸಮೀಪ |
ಕ್ಕಮರ್ದೆ*ಯ್ತುಂದಲ್ಲಿಯಾ*ಪೆರ್ಗರಳುರ್ದಿರೆಯೊಳ್ಪಂತುೞಲ್ದೆಯ್ದರಾಗಳ್

ವ|| ಅಂತಾಸ್ಥಳಕ್ಕೆ ಬಲವಂದು ತುೞಲ್ದೆಯ್ದಿ,

ಅತಿಂತ್ರಿಣಿಯೆನಿಪ ಮಹೀ |
ಜಾತದ ಕೋಟರದೊಳೆಸೆವ ತೇಜಸ್ಸಂ ಕಂ ||

ಡಾತಂಗಳ್ ಕೆಲವು ಪಗಲ್ |
ಪ್ರೀತಿಯಿನುಱೆ ಸೇವಿಸುತ್ತುಮಿರ್ದೊಂದು ದಿನಂ ||೧೭||

ವ|| ಈ ತೇಜಸ್ಸ್ವರೂಪಮಾದ ವ್ಯಕ್ತಿಯೊಳ್ ಚೈತನ್ಯಮುಂಟೆ ಇಲ್ಲವೆ ಎಂಬ ಶಂಕೆಯಿಂದಾಮಧುರಕವಿಯಾಳ್ವಾರೊಂದು ಕಲ್ಲಂ ಶಬ್ದಮಪ್ಪಂತೆ ಕೆಳಗಣ್ಗಿಡೆ ಯಾಸಮಯದೊಳ್,

ಆರವಮಂ ಕೇಳ್ದಾಯಾ |
ಳ್ವಾರಿವರಿಂದೆಮ್ಮನೊಲ್ದು ಪರಿಕಿಸವೇೞ್ಕುಂ ||
ದೋರಂತೆ ಬಂದರೆಂದು ವಿ |
ಚಾರಂಬಡೆದಕ್ಷಿದೆಱೆದು ನೋಡಿನರವರಂ ||೧೮||

ನೋಡಿದ ಮೇಲವರ್ಸ್ಥಿತಿಸವೇೞ್ಕನುಶೋಗಟೆಯಾದ ಮಾತನೊಂ |
ದಾಡಲದರ್ಕವರ್ಗೆ ಸದುತ್ತರಮಾಗಿ ನಿರೂಪವಿನಾಯಲೋ ||
ಲಾಡಿ ಮುದಬ್ಧಿಯೊಳ್ ನುಡಿಯುಮುಂಟೆನುತಿಂತಿವರಂಘ್ರಿಸೇವೆಯುಂ |
ಮಾಡಿ ಪ್ರಸನ್ನರಪ್ಪವೊಲೊಡರ್ಚುವೆನಾಮೆನುತಾತ್ಮಬುದ್ಧಿಯಿಂ ||೧೯||

ಕ್ರಮದಿಂ ತದ್ವಿಷಯಾರ್ಥಮೊಲ್ದಸಗಿ ಕಣ್ಣಿಱಿರುತ್ತಂಬುಯೆಂ |
ಬಮಲಾರ್ಥಾತ್ಮಕಸುಪ್ರಬಂಧಮನದಂ ಪೇೞುತ್ತೆ ಮತ್ತಂ ಸಸಂ ||
ಭ್ರಮಮೇಕಾದಶದಿಂ ಶತೋತ್ತರಸಪಸ್ರಾವೃತ್ತಿಯಿಂ ಸ್ತೋತ್ರದು |
ದ್ಯಮದಿಂದಂ ತದುಪಾಸನೋತ್ಸುಕತೆಯಂ ತಾಳ್ದರ್ ಮಹಾಭಕ್ತಿಯಿಂ ||೨೦||

ತದನಂತರಂ,

ಮುದದಿಂದೀನಮ್ಮಾಳ್ವಾ |
ರ್ದಿನಾಱಬ್ದಂಬರಂ ಪರಾತ್ಮಧ್ಯಾನಾ ||
ಸ್ಪದರತರಾಗಿಹ ಸಂಬಂ |
ಧದ ವೃತ್ತಿಯದೇನುಮಿಲ್ಲದುಱೆ ಸೊಗಯಿಸಿದರ್ ||೨೧||

ವ || ಅಂತಿರ್ದಾಅನುಭವಮೆ ಸ್ತೋತ್ರರೂಪಮಾಗಿ ಪರಿಣಮಿಸೆ, "ತಿರುವೃತ್ತ" ಮೆಂಬ ಪ್ರಬಂಧಮಂ ರಚಿಸಿಸಿತ್ತುಮಂ ಸ್ತೋತ್ರಮಂ ಮಾಡೆ ನಾಲ್ಕುಂ ವೇದಂಗಳುಪನಿಷತ್ತುಗಳರ್ಥಮಾದೀದಿವ್ಯಪ್ರಬಂಧಂಗಳ ನಾಮಧುರಕವಿಯಾಳ್ವಾರಾವೃತ್ತಿಯಂ ಮಾಡಿಕೊಂಡಿರ್ಪಿನಮನ್ನೆವರಂ ನಮ್ಮಾಳ್ವಾರ್ಗೆ ದ್ವಾತ್ರಿಂಶತ್ಸಂವತ್ಸರಂ ಪೂರ್ತಿಯಾಗಿ ಯಾ ಪ್ರಬಂಧಸಮಾಪ್ತಿಯ ಪದ್ಯಾನುಸಂಧಾನಸಮಯದೊಳ್.

ಸಿರಿಯಾಳ್ವಾಂ ಸಕಲೇಶ್ವರಂ ಪದೆದು ನಮ್ಮಾಳ್ವಾರ್ಗೆ ಪ್ರತ್ಯಕ್ಷನಾ |
ಗಿರದಾಗಳ್ ಚರಮಾಂಗಮಂ ಬಿಡಿಸಿ ತಾಂ ತನ್ನಂಘ್ರಿಸಾನ್ನಿಧ್ಯಕೊ ||
ಪ್ಪಿರಲೊಯ್ದೆಯ್ದಿದನಂತಱಿಂದಮವತಾರಂ ಪೂರ್ತಿಯಾದತ್ತಿದಂ |
ನರನಾವಂ ಮಿಗೆ ಕೇಳ್ದು ಮಾತನೆ ಮಲಂ ಶ್ರೀಧಾಮಮಂ ಪೆತ್ತವಂ ||೧೦||

ವ| ಬಳಿಕಂ ಮಧುರಕವಿಯಾಳ್ವಾರ್ ನಮ್ಮಾಳ್ವಾರ ವಿಶ್ಲೇಷಮಂ ಸಹಿಸಲಾಱದೆ,

ಭಾವಿಸಿ ನಮ್ಮಾಳ್ವಾರ |
ರ್ಚಾವಿಗ್ರಹಮಂ ಪ್ರತಿಷ್ಠೆಯಂ ಮಾಡಿಸಿ ಭ ||
ಕ್ತ್ಯಾವೇಶದೆ ಚಿರಮುಂ ಪೂ |
ಜಾವಿಧಿಯನೆಸಗುತ್ತಿರ್ದಂ ಪ್ರಬಂಧಂ ನಾಲ್ಕಂ ||೧೧||

ಲೇಸಾಗಿರೆ ಕುರುಕಾವಲ |
ದಾಸರ್ ಮೊದಲಾದ ಶಿಷ್ಯಸಂದೋಹಕ್ಕೊ ||
ಲ್ದಾಸಕ್ತಿಯಿನುಪದೇಶಿಸಿ |
ಸಾಸದಿನವತಾರಪೂರ್ತಿಗೆಯ್ದರ್ ಬಳಿಕಂ ||೧೨||

|| ಗದ್ಯಂ ||

ಇದು ನಮಿತಹಿಮಕರಚೂಡಕಮಲಭವಮುಖಸುರಸಮುದಯಮೌಳಿಮಣಿಗಣಘೃಣಿಸಂಧ್ಯಾರಾಗಾನುಗುಣಪ್ರಚುರರುಚಿತಾರಕಾಯಮಾನ ರಂಗವಿಭುಚರಣಯುಗಳನಖಮಯೂಖಸುಧಾಪೂರಪರಿಪಾಲನಾದನುರಾಗೀಕೃತ ಮಹಿಷಪುರವರಸಾಮ್ರಾಜ್ಯಸಂಪನ್ನ ರಾಜಾಧಿರಾಜರಾಜಪರಮೇಶ್ವರಾಪ್ರತಿಮಪ್ರೌಢಪ್ರತಾಪ ಬಿರುದಂತೆಂಬರಗಂಡ ಯದುಕುಲನಳಿನದಿನಕರರಾದ ಶ್ರೀಚಿಕದೇವರಾಯಮಹಾರಾಜಪ್ರಸಾದಪರಿಪೂರ್ಣ ಸಚಿವನಿಚಯತಿಲಕ ಶ್ರೀಚಿಕುಪಾಧ್ಯಾಯವಿರಚಿತಮಪ್ಪ ದಿವ್ಯಸೂರಿಚರಿತ್ರಮಹಾಪ್ರಬಂಧದೊಳ್ ನಮ್ಮಾಳ್ವಾರ, ಮಧುರಕವಿಯಾಳ್ವಾರ ವೈಭವಂ ಚತುರ್ಥಾಶ್ವಾಸಂ ಸಂಪೂರ್ಣಂ.

|| ಮಂಗಳಂ ಮಹತ್ ಶ್ರೀ ||



## — ಪಂಚಮಾಶ್ವಾಸಂ —

ಶ್ರೀತರುಣೀತನುರುಚಿಬಾ |
ಲಾತಪಸಂದರ್ಶನಾತಿಹೃಷ್ಟರಥಾಂಗಂ ||
ಖ್ಯಾತ ಕುಲಶೇಖರೇಷ್ಟದ |
ನೋತಸ್ಮದ್ವಾಂಛೆಯುಂ ಕುಡುಗೆ ರಂಗೇಶಂ ||೧||

ಘನ ಚೋಳ ಚೇರ ಪಾಂಡ್ಯರು |
ಮನಿಪವರೊಳ್ ಧುರ್ಯನಪ್ಪ ಚೇರಾನ್ವಯದೊಳ್ ||
ಜನನುತ ಕೇರಳದೇಶಾ |
ವನಿಯೊಳ್ ವಿಸ್ಫುರಿಸುತಿರ್ಪ ವಂಜಿಕ್ಕಳದೊಳ್ ||೨||

ಪದೆಪಿಂ ಕೌಸ್ತುಭಮಣಿಯುಂ |
ಶದಿನೊಪ್ಪುವ ಕುಂಭಮಾಸಪುನರ್ವಸುಋ ||
ಕ್ಷದೊಳವತರಿಸಿದರೊಲವಿಂ |
ಸದಮಲಕುಲಶೇಖರಾಖ್ಯೆಯುಂ ಪಡೆದಾಳ್ವರ್ ||೩||

ಅಂತವತರಿಸಿ,

ತವೆ ಬಾಲ್ಯಂ ಮೊದಲಾಗಿ ಸಂದ ಭಗವಚ್ಛ್ರೀಪಾನಸಂಸಕ್ತವೈ |
ಷ್ಣವರೊಳ್ ತಾಂ ಸಹವಾಸಮಲ್ಲದಿತರವ್ಯಾಪಾರಮಂ ಮಾಣ್ದುವೈ ||
ಭವಮುಂ ತಂದೆಗಳಂತು ಕಂಡಿವರ್ಗೆ ಪಟ್ಟಂಗಟ್ಟೆ ರಾಜ್ಯಕ್ಕೆ ರಾ|
ಘವಚಾರಿತ್ರಮನೊಲ್ದು ಭಕ್ತಿಯೊದವಿಂದಾಕರ್ಣಿಕುಂ ಸಂತತಂ ||೪||

ಅಂತಾಕರ್ಣಿಪ ಸಮಯದಲ್ಲಿ,

ರಾವಣನುಯ್ಯೆ ಭೂಮಿಜೆಯನಾದಶಕಂಠವಧಾರ್ಥಮಾಗಿ ಸು |
ಗ್ರೀವಜಮೂ ಸಹಾಯಮನೆ ಮಾಳ್ಪುದನಾಲಿಸಿ ಕೇಳ್ದು ಭಕ್ತಿಯಿಂ ||
ತೀವಿದ ಪಾರವಶ್ಯದೆ ಮದೀಯಪತಾಕಿನಿಯಿರ್ದು ಕಜ್ಜಮೇಂ |
ಭೂವಿಭು ರಾಘವಂಗುಱೆ ಸಹಾಯಮನಾಗಿಸಮೇಳ್ಕೆ ವೇಗದಿಂ ||೫||

ಎಂದು ಪೋಱಮಡುವನಿತಱೊಳಾಮಂತ್ರಿಗಳೆಲ್ಲರುಂ

ಅರಸಂ ಭಕ್ತಿಪರವಶತೆ |
ಯಿರಹಿಂದಿಂತೆಸಗಿದಪನೆನುತ್ತುಮುಪಾಯಮಾಂ ||

ತರದಿಂ ತಿರುಗಿಪ ತೆಱನಂ ।
ಪರಿಭಾವಿಸಿಯಾಪುರಾಣವಕ್ತೃವನಾಗಳ್ ‖೭‖

ಕರೆದೀಗಳ್ ಸ್ವಾಮಿಯರಾವಣವುಖದನುಜವ್ಯೂಹಸಂಹಾರವಂ ಮಾ।
ಡಿರದಾಸೀತಾಸಮೇತಂ ನಿಜನಗರಿಗೆ ತಾಂ ಪೋಗಿ ಪಟ್ಟಾಭಿಷೇಕ ‖
ಸ್ಫುರಣಂಬೆತ್ತಿರ್ಕುವೆಂದೆನ್ನಿಮೆನೆ ನುಡಿದನಂತಾತನಂತರ್ಕವರ್ ಸಾ ।
ದರಮುಸ್ಮತ್ಸ್ವಾಮಿಗಾಯ್ತೇ ಜಯಮೆನುತೆ ಪುರಕ್ಕಾಗಳೊಳ್ಪಂ ಮರಳ್ದರ್‖

ಬಳಿಕಂ ಭಕ್ತ್ಯುದ್ರೇಕತೆ ।
ಒಳೆಯಲ್ ರಾಜನ್ಮುಕುಂದಮಾಲೆಯೆನಿಪ್ಪ ‖
ಜ್ವಳಸುತಿಯನೆಸಗೆ ಲಕ್ಷ್ಮೀ ।
ನಿಳಯಸ್ತೋತ್ರಾನುರಕ್ತಿವೆತ್ತರ್ ಸಂತತಂ ‖೮‖

ಅಂತು ಸ್ತೋತ್ರಾನುಸಂಧಾನತತ್ಪರರಾಗಿ,

ಕ್ರಮದಿಂ ಸ್ವಾಮಿಯ ಸದ್ಗುಣಾನುಭವಕಾಲಕ್ಷೇಪದೊಳ್ ರಾಜ್ಯಭಾ।
ರಮುಮಂ ನಿರ್ವಹಿಸುತ್ತೆ ಪ್ರತ್ಯಹಮುಮಂ ಪೌರಪ್ರಜಾಸೈನ್ಯಮೆ ‖
ಲ್ಲಮುಮಂ ಪೋಜತ್ತೆಱಿಯೆಬ್ದು ತಾಂ ಸಮನಿಕುಂ ಶ್ರೀರಂಗಯಾತ್ರಾಸುಸಂ।
ಭ್ರಮದಿಂದೇೞಿಮೆನುತ್ತೆ ಸಾಱುವಪ್ರೊಲಂತಾಜ್ಞಾಪಿಕುಂ ಭೃತ್ಯರಂ ‖೯‖

ಅಂತಾಜ್ಞಾಪಿಸಿಯಾನೆಯಮೇಲೆ ಭೇರೀರವಂ ದಿಕ್ತಟಂದೀವುವಂತೆ ಪಸರಿಸಿ ತಾಮುಂ ನಿಜಚತುರಂಗಸಂಘಸಮೇತರಾಗಿ ಪೊಱಮಡುವ ಸಮಯದೊಳ್

ತನಕದೆ ಬಂದೊರ್ವಂ ವೈ ।
ಷ್ಣವನಿದು ಸಾವಮಾನ್ಯದಿನಸದೊಳ್ ಪಗಲೊಳ್ ತಾಂ ‖
ಸವನಿಸುಗೆನಲೊಡಮುೞಿದು ।
ತ್ಸವದಿಂ ಪುಗುಗುಂ ಮರಳ್ದು ನಿಜಪತ್ತನಮಂ ‖೧೦‖

ಇಂತು ಪ್ರತ್ಯಹಮುಮುಪಾ ।
ಯಾಂತರದಿಂ ಬಿಡಿಸಿ ಪಯಣಮಂ ಮಂತ್ರಿಗಳೀ ‖
ರಂತಾರಾಜ್ಯದ ಭರಣಮ ।
ನೆಂತಾನುಂ ನಡೆವ ತೆಱದಿನೊಡರಿಸಿ ಮತ್ತಂ ‖೧೧‖

ಆಮಂತ್ರಿಗಳೊಳಾಲೋಚಿಸಿ ।
ಭೂಮಿಪನೀವೈಷ್ಣವರ ಮಹಾಬೋಧನೆಯಿಂ ॥
ದೀಮರ್ಯಾದೆಯನೆಸಗುಗು ।
ನಾಮಿವಸಂ ಸಂಬವಂತೆ ಮಾಡಲ್ವೇೞ್ಕುಂ ॥೧೨॥

ಎನುತಿಂತೊಂದುದಿನಂ ಮ ।
ಜ್ಜನಸಮಯದೊಳರಸನಾಭರಣಮಂ ಬೈತಿ ।
ಟ್ಟನಿತಾನುಮುೞಿಯದಂತಿರೆ ।
ಜನಪಾಲಂ ನಾನುತೀರ್ಥವೇಳೆಯೊಳೊಲವಿಂ ॥೧೩॥

ಪಸದನಮೆಲ್ಲಿ ತನ್ನಿಮನೆ ವೈಷ್ಣವರೆಲ್ಲರುಮಿರ್ದರಿಲ್ಲಿಯೇ ।
ನೆಸಗಿದರೋ ಇವರ್ ನೃಪನಿಕೇತನಕಾರ್ ಮಿಗೆ ಬರ್ಪರೆಂದು ತಾ ॥
ಮುಸಿರಲೊಡಂತವಂ ಕಟಕಟೆಂತುಟು ವೈಷ್ಣವರಾಸೆಬಟ್ಟವರ್ ।
ಮಿಸುಕರಿದರ್ಕೆ ಮಾೞ್ಪೆನಿರವಾನೆ ಪ್ರಮಾಣಮನೆಂದು ಭೂಧವಂ ॥೧೪॥

ನಿಜಹಸ್ತದಿಂದೆ ತಾಮೋ ।
ಭುಜಂಗಮಂ ಮುಟ್ಟಿ ಕಂಡು ಕಂಗೆಟ್ಟವರಾ ।
ಸುಜನೇಂದ್ರನ ಮುಂಗಡೆಯೊಳ್ ।
ನಿಜಕೃತ್ಯಂಗಳನೆ ನನ್ನಿಯಪ್ಪಿನಮುಸಿರ್ದರ್ ॥೧೫॥

ಅಂತಾಮಂತ್ರಿಗಳುಸಿರಲೊಡಮಂ ಕೇಳ್ದು ಕುಲಶೇಖರಾೞ್ವಾರ್
ಬೞಿಕಿನ್ನಂ ಸಹವಾಸಮಿನ್ನಮಗೆ ತಾನೇತರ್ಕಿದುಂ ಯೋಗ್ಯಮ ।
ಲ್ತೆಳುಗರ್ಗಂ ಕ್ಲೇಶಮೆನುತ್ತೆ ಸೂನುಗೊಡನಾಸಾಮ್ರಾಜ್ಯಮಂ ಕೊಟ್ಟುಬಿ॥
ಟ್ಟೆಳವಿಂದಂ ಕೆಲವರ್ಂ ಬಲಂಬೆರಸು ಶ್ರೀರಂಗಕ್ಕೆ ತಾಮೆಯ್ದಿ ನಿ ।
ಶ್ಚಲತಾಭಾವದೆ ನಿತ್ಯವಾಸಮನನೇಕಾನಂದದಿಂ ಮಾಡಿದರ್ ॥೧೬॥

ಅಂತು ಮಾಡಿ,

ಪೆರುಮಾಳ್ ತಿರುಮೊೞಿಯೆಂಬೊಂ ।
ದುರುತರದಿವ್ಯಪ್ರಬಂಧಮಂ ಪೇೞ್ದು ಚಿರಂ ॥
ವರಭಗವದ್ಭಾಗವತ ।
ಸ್ಫುರದಾಚಾರ್ಯಾಂಘ್ರಿ ಕಿಂಕರತ್ವದೊಳಸಿತಂ ॥೧೭॥

ಸಿರತತ್ವಂಬೆತ್ತಿರ್ದಾ |
ಚರಮದ ದಶೆಯಲ್ಲಿ ನಲಿದು ವೈಕುಂಠಪುರ ||
ಕ್ಕಿರದೆಯ್ದಿದರಿದನಾವಂ |
ಪರಿಭಾವಿಸಿ ಕೇಳ್ಗುಮವನೆ ಸುಕೃತಿಯೆನಿಕ್ಕುಂ ||೧೯||

|| ಗದ್ಯಂ ||

ಇದು ನಮಿತಹಿಮಕರಚೂಡಕಮಲಭವಮುಖಸುರಸಮುದಯಮೌಳಿಮಣಿಗಣಘೃಣಿಸಂಧ್ಯಾರಾಗಾನುಗುಣಪ್ರಚುರರುಚಿತಾರಕಾಯಮಾನ ರಂಗವಿಭುಚರಣಯುಗಳನಖಮಯೂಖಸುಧಾಪೂರವಿಹಾರಮದಮರಾಳೀಕೃತ ಮಹಿಷಪುರವರಸಾಮ್ರಾಜ್ಯಸಂಪನ್ನ ರಾಜಾಧಿರಾಜರಾಜಪರಮೇಶ್ವರಾಪ್ರತಿಮಪ್ರೌಢಪ್ರತಾಪ ಬಿರುದಂತೆಂಬರಗಂಡ ಯದುಕುಲನಳಿನದಿನಕರರಾದ ಶ್ರೀಚಿಕದೇವರಾಯಮಹಾರಾಜಪ್ರಸಾದಪರಿಪೂರ್ಣ ಸಚಿವನಿಚಯತಿಲಕ ಶ್ರೀಚಿಕುಪಾಧ್ಯಾಯ ವಿರಚಿತಮಪ್ಪ ದಿವ್ಯಸೂರಿಚರಿತ್ರಮಹಾಪ್ರಬಂಧದೊಳ್ ಕುಲಶೇಖರಾಳ್ವಾರ ವೈಭವಂ ಪಂಚಮಾಶ್ವಾಸಂ ಸಂಪೂರ್ಣಂ.

|| ಮಂಗಳಂ ಮಹತ್ ಶ್ರೀ ||

---

## — ಷಷ್ಠಾಶ್ವಾಸಂ —

ಶ್ರೀಗುರುಕುಚಸಂಸ್ಪರ್ಶನ |
ರಾಗಾನ್ವಿತನೊಸೆದು ಭಟ್ಟನಾಥಾಖ್ಯಮಹಾ ||
ಯೋಗೀಂದ್ರಮೋಕ್ಷದಾಯಕ |
ನಾಗೆಮಗೀಪ್ಸಿತಮನೀವಗಂ ರಂಗೇಶಂ ||೧||

ಗರುಡಾಂಶದೆ ಪೆರಿಯಾಳ್ವಾರ್ |
ನರಿದೊಳ್ಪಿಂದಿರದೆ ವಿಲ್ಲಿಪುತ್ತೂರೆಂಬಾ ||
ತಿರುಪತಿಯೊಳ್ ಮಿಗೆ ವೇದ |
ಸ್ಥಿರಾನೆನಿಪ್ಪವರ ವಂಶದೊಳ್ ಜನಿಯಿಸಿದರ್ ||೨||

ಅಂತೊಗೆದು ಬಾಲ್ಯದಲ್ಲಿಯೆ |
ಸಂತತಮುಂ ಕಲ್ತು ವೇದಶಾಸ್ತ್ರಂಗಳನಾ ||
ದ್ಯಂತಮನವರ್*ದುದು ಭಗ |
ವಂತನ ನಿಜಮಾಪಭಕ್ತಿವೃದ್ಧಿ ಮುಜಸ್ರಂ ||೩||

ವ॥ ಅಂತು ಭಕ್ತಿಯ ಪೆಂಪಿನಿಂ ವಟಪತ್ರಶಾಯಿಯೆನಿಪಾಪೂರ
ಸ್ವಾಮಿಗೆ

ಸತತಂ ನಂದನದಿಂದೆ ತರ್ಪ ತಿರುಮಾಲಾನಾಮುಕೈಂಕರ್ಯದು ।
ಸ್ನತಿವೆತ್ತಂತಿರೆಯೊರ್ವಗಲ್ ಧರಣಿಯುಂ ಸಂಶೋಧಿಪಾಗಳ್ ಕರ ॥
ಸ್ಥಿತಕುದ್ದಾಲಕೆ [ಸಿಲ್ಕೆ ಪೇಟಿವರ] ಭಾಸ್ವತ್ಕನ್ಯಕಾರೂಪರಂ ।
ಜಿತಮೊಂದುಂ ಶಿಶು ಸಿಲ್ಕೆ ನೋಡಿಯುಧನಂ ನಿಕ್ಷೇಪಮಂ ಕಂಡವೋಲ್ ॥೪॥

ಜನಕಂಗೆ ಯಾಗಶಾಲೆಯೊ ।
ಳನುಪಮೆ ಭೂಜಾತೆ ಸುಪ್ರಸನ್ನೆಯುಮಾದಂ ॥
ತೆನಗೆಂತಿದೀಗ ದೊರೆದ ।
ತ್ತೆನುತತಿವಿಸ್ಮಯಮನಾಂತುಕೊಂಡಾಶಿಶುವಂ ॥೫॥

ಇದು ಭೂದೇವ್ಯವತಾರವೆಂದು ನಿಜಪತ್ನೀಹಸ್ತಕೊಳ್ದಿತ್ತು ಕೇ ।
ಳದಮಾನುಷ್ಯಮೆನಿಪ್ಪುದೀಶಿಶುವೆ ಸಾಕ್ಷಾದ್ದೇವತಾರೂಪೆ ತ ॥
ಪ್ಪದು ಸಂಪ್ರೀತಿಯಿನೋವಿಕೊಂಡಿರೆನೆ ಕಾಂತಂ ಪೇಳ್ದವೋಲ್ ಜಾತವೇ ।
ಹದೆ ಬಾಲಾವನಪ್ರೀತಿಯಿಂ ಸಲಹುತಿರ್ದಾಳ್ ಕಾಂತೆಯಾಕನ್ನೆಯಂ ॥೬॥

ಅಂತು ಸಲಹುತ್ತಿರೆ,

ಪದೆಪಿಂ ವಿವಾಹಕಾಲಮು ।
ದೊದವಿರೆ ಯೆಂಟಬ್ದದಲ್ಲಿ ಯಾಕನ್ನಿಕೆಗಂ ॥
ತುದಯಿಸಿದುದು ಭಗವದ್ಭ ।
ಕ್ತಿದೃಢಜ್ಞಾನಂಗಳೆರಡುಮುಜ್ಜ ಪೆರ್ಚುಗೆಯಿಂ ॥೭॥

ಇಂತು ಭಗವದ್ಭಕ್ತಿಸಂಪನ್ನೆಯಾಗಿರ್ಪಿನಮಾಸಮಯದೊಳ್

ಪುರಶೋಧನಪ್ರಯೋಜನ ।
ಕರಸಂ ಪಾಂಡ್ಯೇಶನಗ್ರಹಾರಮನೊಂದ ॥
ಕ್ಕಿರದೇಜ್ಜಿಂದೊರ್ವ ಧರಾ ।
ಮರವೇದಿಕೆಯಲ್ಲಿ ಪನೆದು ಮಲಗಿರ್ದವರೊಳ್ ॥೮॥

ಬರ್ಪ ವಿಪ್ರನಂ ಕರೆದು ಹಿತಮಪ್ಪುದೇನೆಂದು ನುಡಿಯೆ,

ಶ್ಲೋಕ॥ ವರ್ಷಾರ್ಥಮಷ್ಟೌ ಪ್ರಯತೇತ ಮಾಸಾನ್ ।
ನಿಶಾರ್ಥಮರ್ಧಂ ದಿವಸಂ ಯತೇತ ।

ವಾರ್ಧಕ್ಯಹೇತೋರ್ವಯಸಾ ನವೇನ।
ಪರತ್ರಹೇತೋರಿಹ ಜನ್ಮನಾ ಚ॥

ಎಂಬ ಶ್ಲೋಕಮನಾತಂ ಪೇೞಲೊಡಂ;

ಅದನಾಕರ್ಣಿಸುತಾನೃಪಂ ಸಕಲಸಾಮಗ್ರ್ಯಂಗಳೊಳ್ ನೋಡೆ ಕಾ।
ಮದಿನಾವಾರ್ಜಿಪುದಿನ್ನದೇನೊಳವಮುತ್ರಾರ್ಥೈಕಸಂಚಿಂತೆಗೆ॥
ಯ್ಯುವದದೊಂದಲ್ಲದೆ ಜೇೞೆನುತ್ತೆ ಪುರಿಗಂತೇೞ್ತಂದು ತನ್ನಲ್ಲಿ ನೇ।
ಹದ ಪೆಂಪೊಂದಿರೆ ಚೆಲ್ವನಂಬಿಯೆನಿಪಾತಂಗಾತಸಂ ಬೇಗದಿಂ ॥೯॥

ಕರೆದು ಪುರೋಹಿತನಂ ಕೇಳ್।
ಪರತತ್ವಂಗಳ್ಗೆ ನಲಿದು ನಿಷ್ಕರ್ಷೆಯನಾ॥
ದರಿಸಿನ್ನಾಮುಂ ತನ್ನಿ।
ಷ್ಟರಾಗಿ ಸದ್ಗತಿಯನಾರ್ಜಿಸಲ್ವೇೞ್ಕುಗಱಿಂ ॥೧೦॥

ವ॥ ಅದುಕಾರಣದಿಂ ಷಡ್ದರ್ಶನಪಾರಂಗತರಾದ ವಿದ್ವಾಂಸರಂ ಕರೆಯಿಸಿ "ತತ್ವಜ್ಞಾನಂ ಸಂಪಾದನೀಯಂ" ಎಂದರಸಂ ನುಡಿಯಲೊಡಂ,

ಸುವಿವೇಕಿಯಾದ ಕಾರಣ।
ಮವನರಸಂಗಿಂತು ನುಡಿದನೆಲೆ ಪೃಥ್ವೀಶಾ॥
ಸವನಿಸದು ವಿಬುಧಮುಖದಿಂ।
ಪ್ರವಿಮಲನಿಷ್ಕರ್ಷೆ ಕೃತ್ಸ್ನಮಾಧಾನತೆಯುಂ ॥೧೧॥

ಮತ್ತಂ "ಶಾಸ್ತ್ರಜ್ಞಾನಂ ಬಹುಕ್ಲೇಶಂ ಬುದ್ಧೇಶ್ಚಲನಕಾರಣಂ" ಎಂದುಂಟಲ್ಲದೆಯುಂ,

ಅವನೀವಲ್ಲಭ ಕೇಳ್ ಯಥಾರ್ಥಮಿದು ತತ್ತದ್ದರ್ಶನಾಚಾರ್ಯರೊ।
ಪ್ಪುವ ತತ್ತತ್ಸ್ವಮತದೇವತಾಪರತೆಯಂ ಪೇೞ್ಗುಂ ಮನಕ್ಕಂತು ಸಂ॥
ಭವಿಕುಂ ತಾಸದಱಿಂದೆ ನಿಶ್ಚಲತೆ ಸ್ವಾರೋಪಾಯವೊಂದುಂಟದ।
ರ್ಕೆ ವಿಚಾರಂಬಡೆದೀಗಳಾನುಸಿರ್ವೆನೆನ್ನೊಳ್ ತೋರ್ಪ ವೈಶೇಷ್ಯಮಂ॥

ಅದೆಂತೆನೆ—

ಪುರಮಧ್ಯದಲ್ಲಿ ನಟ್ಟಂ।
ದುರುತರವಾಗಿರ್ಪ ಕಂಭವಾತುದಿಯೊಳ್ ಸಾ॥

ಸಿರವರಹದ ಜಾಳಗೆಯುಂ |
ಸರಪೞಿಯೊಳ್ ಕಟ್ಟಿ ನೇಲ್ವ ತೆಱನಂ ಮಾಳ್ಪಂ ||೧೪||
ವರಧರ್ಮದೇವತೆಯುನಾ |
ದರದಿಂ ಪೂಜಿಸಿ ಸಮಸ್ತದರ್ಶನದವರಂ ||
ಕರೆಯಿಸಿ ತತ್ತದ್ದರ್ಶನ |
ಪರದೇವತೆಗಳ ಪರತ್ವಮಂ ಸ್ಥಾಪಿಸುವಂ ||೧೫||

ಆಸಮಯದೊಳ್,

ಆವುದು ಸತ್ಯವೊ ಮಿಗೆ ಭುವ |
ನಾವಳಿ ಕಾರಣದ ವಸ್ತುವಾವುದೊ ಸಿಜದಿಂ ||
ದಾವನೊ ಸರ್ವಸ್ಮಾತ್ಪರ |
ನಾವನೊ ಸಕಲಾರ್ಥದಾಯಿಯಾಗಿಯುಮೀಗಳ್ ||೧೬||
ಪರಮೋಕ್ಷದನಾದಾತ್ಮೇ |
ಶ್ವರನಾವನೊ ಅದುವೆ ಸತ್ಯಮಾದೊಡೆ ನೇಲ್ವೀ |
ಸರಪಳಿಯಿಂ ಜಾಳಿಗೆಯು |
ರ್ವರೆಯೊಳ್ ಬೀೞ್ಗಾಮತಸ್ಥರೆಡೆಗೆಯ್ತರಲಿಂ ||೧೭||
ಇಂತೆಂದುಸಿರೆ ಪುರೋಹಿತ |
ಸಂತರ್ಕತ್ಯಂತರುಪರ್ವಮಂ ತಾಳ್ದವನೀ ||
ಕಾಂತನೊಡರ್ಚಿಸಿ ನೇಮಿಸಿ |
ದಂ ತಾನವಱಿಂಗೆ ಕರೆಯಿಸಿಂ ಬುಧಜನರಂ ||೧೮||

ಅಂತು ಸಕಲವಿದ್ವಾಂಸರಂ ಕರೆಯಿಸಿ ಸುದಿವಸಸುಮುಹೂರ್ತದೊಳ್ ಸ್ತಂಭಪ್ರತಿಷ್ಠೆಯಂ ಮಾಡಿಸಿ ಪೂರ್ವೋಕ್ತಪ್ರಕಾರಮುಜ್ಜುಗಿಪ ಸಮಯದೊಳ್,

ತಿರುವಿಲ್ಲಿಯ ಪುತ್ತೂರೊಳ್ |
ಪೆರಿಯಾೞ್ವಾರ್ ಸುಪ್ತರಾಗೆ ತತ್ಸ್ವಪ್ನದೊಳಾ ||
ಪುರದೇವತೆಯೆನಿಸುವ ಸಿರಿ |
ಯೊಱೆಯಂ ವಟಪತ್ರಶಾಯಿ ಬಂದಿಂತೆಂದಂ ||೧೯||

ಆದೆಂತೆನೆ—

ಧರಣೀಶಂ ಪಾಂಡ್ಯಂ ನಿಜ।
ಪುರೋಹಿತಹಿತೋಪದೇಶದಿಂ ಯತ್ನಮನಿಂ॥
ತಿರದೆಸಗಿದಪಂ ನೀಮುಂ।
ತುರಿಪದೊಳಾಯೆಡೆಗೆ ಪೋಪುದೆನ್ನನುಮತಿಯಿಂ ॥೨೦॥

ಜಯಮಕ್ಕುಂತತ್ವನಿಷ್ಕರ್ಷೆಯನೆಸಗಲೊಡಂಸರ್ವಮಂ ನೀವೆನುತ್ತುಂ।
ಪ್ರಿಯದಿಂದಂ ಪೇೞಲೀತೊಂಟನುನಗುಜ್ಜ್ವನದೆಂತೆಯಿದ್ದಯಾಂ ತತ್ವನಿಷ್ಕ॥
ರ್ಷೆಯನಾಂ ಮಾೞ್ಪಿಂ ಸುವಿದ್ಯಾವಿಷಯಮಿನಿತುಮಂ ಬಲ್ಲೆನೇ ಎನ್ನನಿಂತೀ।
ದಯೆಯಿಂ ಪೋವೇೞ್ಪ ಲಕ್ಷ್ಮೀಪತಿಯೆನಲೊಡಮಿಂತೆಂದನಾದೇವದೇವಂ॥

ತಿಳಿಗುಂ ಕೇಳ್ ನಿಮಗೆನ್ನನುಗ್ರಹದಿನೆಲ್ಲಾ ವಿದ್ಯೆಯುಂ ಪೋಗಿಮೆಂ।
ದಳವಿಂ ಪೇೞೆಯುದಕೊಡಂಬಡುತವರ್ ಸಂತೋಷಮಂ ಚಿತ್ತದೊಳ್॥
ತಳೆದಾಗಳ್ ಪದೆದೆಯ್ದಿ ಪಾಂಡ್ಯನೃಪಸೇವೃತ್ತಾಂತಮಂ ಕೇಳ್ದು ಪೋಂ।
ಪುಳಪ್ರೋಗುತ್ತಿದಿರ್ವಂದವರ್ಗೆ ಬಹುಸನ್ಮಾನಂಗಳಂ ಮಾಡಿದಂ ॥೨೨॥

ಅಂತೆಸಗಿ ದರ್ಶನಸ್ಥರ।
ಮುಂತಾಸನದಲ್ಲಿ ಕುಳ್ಳಿರಿಸೆಯವರ್ಗಳ್ ತಾಂ॥
ತಂತಮ್ಮ ದರ್ಶನಸ್ಥಿತಿ।
ಯೆಂತಿರ್ಪುದಂತೆ ತತ್ವನಿಷ್ಕರ್ಷಾರ್ಥಂ ॥೨೩॥

ಕ್ರಮದಿನುಪನ್ಯಾಸಂಗೆ।
ಯ್ದಮರಿಸಿ ತಂತಮ್ಮ ದೇವತಾಸ್ಥಿತಿಪರ॥
ತ್ವಮನುಸಿರೆಯಾಧನದ ಗಂ।
ಟುಮಿರ್ದಪ್ರೋಲಿರ್ದುದಾಗಳೀಯಾೞ್ವಾರಂ ॥೨೪॥

ವ॥ ಕರೆದಾಪಾಂಡ್ಯನೃಪಂ ನೀಮುಮುಪನ್ಯಾಸಮಂ ಮಾಡಿಮೆನಲವರ್ ಶ್ರುತಿ॥ "ಏಕೋವೈ ನಾರಾಯಣ ಆಸೀತ್", "ನಾರಾಯಣಾದ್ಬ್ರಹ್ಮಾಜಾಯತೇ ನಾರಾಯಣಾದ್ರುದ್ರೋಜಾಯತೇ" ಎಂಬ ಶ್ರುತಿವಾಕ್ಯಗಳಿಂದೆಯುಂ, "ನವಾಸುದೇವಾತ್ ಪರತರಮಸ್ತಿ ಕಿಂಚಿತ್", "ಮತ್ತಃ ಪರತರಂ ನಾಸ್ತಿ", "ನ ದೈವಂ ಕೇಶವಾತ್ಪರಂ" ಎಂಬಿವು ಮೊದಲಾದ

ಸ್ಮೃತಿಪುರಾಣವಾಕ್ಯಂಗಳಿಂದೆಯುಂ ಕೈಯೆತ್ತಿ ಇದುವೆ ಸತ್ಯವಾದೊಡೆ ಪೊನ್ನಜೋಳಿಗೆ ಪತನಮಕ್ಕೆಂದು ನುಡಿಯಲಾಸಮಯದೊಳ್—

ಸರಪಳಿಯಿಂ ಸಡಿಲ್ದಿಳಿಗೆ ಜೋಳಗೆ ಬಿರ್ದವರಿರ್ಪ ತಾಣಕಂ ।
ದುರುಳುತೆ ಸಾರ್ದು ಬಂದುದನಭೀಕ್ಷಿಸಿ ಪೌರಜನಾವನೀಂದ್ರನು ॥
ಖ್ಯರಿವರ ನೋಳ್ಪಿನಿಂ ಜಯಜಯಾರವದಿಂ ನುತಿಗೆಯ್ದು ಹಸ್ತಕಂ ।
ಧರದೆಡೆಯಲ್ಲಿ ಕುಳ್ಳರಿಸಿವರ್ಗೆ ಮಹೋತ್ಸವಮಂ ನೆಗಳ್ಚಿದರ್ ॥೭೫॥

ಅಂತುತ್ಸವಮಂ ಮಾಳ್ಪ ಸಮಯದೊಳ್

ಸ್ಫುರಿಸುತ್ತುಂ ಗಗನಾಧ್ವದೊಳ್ ಗರುಡವಿಷ್ವಕ್ಸೇನಶೇಷಾದಿಗಳ್ ॥
ಬೆರಸಾಶ್ರೀಪತಿ ಸುಪ್ರಸನ್ನನಿರೆ ಕಂಡಾಭದ್ರವೇದಂಡಭಾ ॥
ಸುರಘಂಟಾಧ್ವನಿಗೆಯ್ಯುತುಂ ಪವೆದು ಪಲ್ಲಾಂಡೆಂಬ ಸನ್ಮಂಗಳಾ ॥
ಕರಮಾಗಿರ್ದ ಪ್ರಬಂಧಮಂ ರಚಿಸುತಾಳ್ವಾರಿಂದಿರಾಕಾಂತನಂ ॥ ॥೭೬॥

ದೃಷ್ಟಿಪರಿಹಾರಾರ್ಥವಾಗಿ ಸ್ತುತಿಗೆಯ್ವ ವೇಳೆಯೊಳ್:—

ಜನಪಾಲಂಗೆಯುಮಾಚೆ ।
ಲ್ವನಂಬಿಗಮಿವರ್ಗೆವೊಡನೆ ಕಾಣಿಸೆಯಾಪಾಂ ॥
ಡ್ಯನೃಪಂ ತಾಳ್ದಚ್ಚರಿಯಂ ।
ಘನತರನಾದಿನರ ಮೈಮೆಯುಂ ಬಣ್ಣಿಸುತುಂ ॥೭೭॥

ನಾರಾಯಣನೊರ್ವನೆ ದಲ್ ।
ಸಾರಂ ಪರತತ್ವಮೆಂದು ನಿಶ್ಚಯಿಸಿ ಕರಂ ॥
ಭೂರಿಮುದದಿಂದವೊಡನಾ ।
ಶ್ರೀರಮಣನ ದಿವ್ಯಮೂರ್ತಿಯಂ ಜಾನಿಸುತುಂ ॥೭೮॥

ಅಂತು ಜಾನಿಸಿ "ಮಲ್ಲಾಂಡು ಪೆರುಮಾಳ್" ಎಂಬ ನಾಮದಿಂದಾಪ್ರತ್ಯಕ್ಷವಾದ ಸ್ವಾಮಿಯನಲ್ಲಿ ಪ್ರತಿಷ್ಠೆಯಂ ಮಾಡಿಸಿ, ಪರಮಭಕ್ತನಾಗಿ ಭಗವದ್ಭಾಗವತಸೇವೆಯುಂ ಮಾಡಿಕೊಂಡು ಧರ್ಮದಿಂದಮೆ ರಾಜ್ಯಪರಿಪಾಲನಂಗೆಯ್ದು ವೈಕುಂಠಯಾತ್ರೆಯುಂ ಮಾಡಿದನಾತವಾಯದೊಳ್

ಪೆರಿಯಾಳ್ವಾರ್ನಿಜಸತ್ತ್ವನಕ್ಕೆ ಮಿಗೆ ಬಂದಾದೇವಸೇವಾಧುರಂ ।
ಧರರಾಗೀನೃಪನಿತ್ತ ವಸ್ತುಚಯಮೇನುಂಟೆಲ್ಲಮಂ ಸ್ವಾಮಿಗಾ ॥

ದರದಿಂದರ್ಪಿಸಿ ನಿನ್ನನುಗ್ರಹದಿನಿಂತೀವೈಭವಂ ಪ್ರಾಪ್ತಮಾ |
ಯ್ತುತ್ತರದಿಂದೆನ್ನೊಳೆನುತ್ತೆ ಹರ್ಷಿಸುತವರ್ ಮತ್ತಂ ಮಹಾಭಕ್ತಿಯಿಂ||೧೯||

ತಿರುವೊಟಿಯೆನಿಪುದು ಮೊದಲಾ |
ದುರುತರದಿವ್ಯಪ್ರಬಂಧಮಂ ವಿರಚಿಸಿ ಭೂ ||
ಸುರಬೃಂದಾವನಸೇವಾ |
ಸ್ಫುರಣೆಯನೆಸಗುತ್ತುಮಿರ್ದರಲಸದೆ ಸತತಂ ||೨೦||

ಅಂತಾಳ್ವಾರ್ ನಿರಂತರಂ ಬೃಂದಾವನಕೈಂಕರ್ಯಮನೊಡರ್ಚುತ ದಲ್ಲದೆ ಮತ್ತಂ

ಮಿಗೆ ನಾನಾವಿಧಪುಷ್ಪಮಂ ತಿರಿದು ತಂದಾನಂದದಿಂ ಕಟ್ಟಿ ಮಾ |
ಲೆಗಳಂ ಕೌಶಲದಿಂದಮರ್ಪಿಸಮಿರುಳ್ ಮತ್ತಾಮಿಗೆಂದೊಂದು ಪೇ ||
ಟಿಗೆಯೊಳ್ ತೀವಿ ಮಡಂಗಿ ಪೋಗಲೊಡನಾಬೃಂದಾವನಕ್ಕಂತವಂ |
ತೆಗೆದಾಕನ್ನಿಕೆ ಸೂಡಿ ದರ್ಪಣದೆ ನೋಳ್ಪಳ್ ತನ್ನಲಂಕಾರಮಂ ||೨೧||

ಅಂತು ನೋಡಿ,

ಮೊದಲಂತಾಸ್ರಜಮೆಲ್ಲಮಂ ತೆಗೆದು ಪೇಟೀಮಧ್ಯದೊಳ್ ತುಂಬಿ ಮೋ|
ದದಿನಿರ್ಪಳ್ ಬಹುಕಾಲಮಿಂತಿರಲೊಡಂ ತಾಮೊರ್ಮೆಯಾಕನ್ನೆ ಸೂ||
ಡಿದ ಮಾಲಾಸ್ರಜಮಂ ನಿರೀಕ್ಷಿಸುತೆ ಪಶ್ಚಾತ್ತಾಪಮಂ ಮಾಡಿ ಕೊಂ |
ಡಿದು ಮತ್ಸ್ವಾಮಿಗೆಯೋಗ್ಯಮಲ್ತೆನುತೆಸೋರ್ಚಲ್‌ಮಾಣೆಯಾರಾತ್ರಿಯೊಳ್

ಕನಸಿನೊಳೊಲ್ದು ಬಂದು ಹರಿಯಿಂದೆನಗರ್ಪಿಪ ಪುಷ್ಪಮಾಲೆಯಂ |
ಮನೆಯೊಳದೇಕೆ ಬಿಟ್ಟರೆನೆ ಕನ್ನಿಕೆಯಾಸೆಯಿನಿಂದು ಸೂಡೆಯಾ ||
ಸನುಚಿತಮೆಂದು ಬಿಟ್ಟೆನೆನೆ ಕೇಳಮಗಿಂತಿದು ಭೋಗ್ಯಮಕ್ಕುಮಿಂ |
ದೆನಲೊಡಮಾಳಿಸುತ್ತಿ ವರದರ್ಕತಿಹರ್ಷಮನಾನುತುರ್ವುತುಂ ||೨೨||

ಅಂತು ಹರ್ಷಿತರಾಗಿಯಾಕನ್ನಿಕೆಯಂ "ಶೂಡಿಕ್ಕುಡುತ್ತಾಳ್" ಎಂಬ ನಾಮದಿಂ ಕರೆದನಂತರಮೆಬ್ಬಾಕೆಯಂ ನೋಡಿ,

ನಿನಗಾನಾರಾಯಣಾ ವಲ್ಲಭನೆ ಸರಿಯೆನುತ್ತಾತ್ತಕೆಗೊಲ್ದಾಗಳೇ ಗ |
ಳ್ಳನೆ ಸುಜ್ಞಾನೋಪದೇಶಂಗಳನೆಸಗುತುಮಿಂತಿರ್ದಡಾಕನ್ಯೆ ಲಕ್ಷ್ಮೀ||
ಶನ ಭಾಸ್ವದ್ಭಕ್ತಿ ಪೆರ್ಚುತ್ತಿರೆಯಮದಿಪಮಂ ವಿಷ್ಣುವಿಶ್ಲೇಷಮಂ ತಾ |
ನಿನಿತಾನುಂ ಚಿತ್ತದೊಳ್‌ಸೈರಿಸದೆ ಧರಣಿದೇವ್ಯಂಶಮಾದೊಳ್ಪಿನಿಂದಂ ||೨೪||

ಶ್ರೀಮನ್ನಾರಾಯಣನಂ |
ಕಾಮಿಸಿ ಪತಿಯಾಗಿ ವರಿಸಿಯಾನಾತನನು ||
ದ್ದಾಮತೆಯಿನೆಯ್ದೆ ವೇೞ್ಕುನು |
ತಾವಾನಿನಿ ತತ್ಪರತ್ವದತಿಶಯದಿಂದಂ ||೩೫||

ಘನದೇವತಾಂತರದ ಪೂ |
ಜನೆಯುಂ ನಾಂ ಮಾಡಿಮಾದೊಡಂ ಹರಿಯುಮನಿಂ||
ಮನವೊಲ್ದೆಯ್ದಲ್ವೇೞ್ಕುಂ |
ದೆನುತುಂ ಯೋಚಿಸಿದಳೊಂದುಪಾಯಾಂತರಮಂ ||೩೬||

ನಲಿದಾಗೋಕುಲದಲ್ಲಿ ಗೋಪಸುತೆಯರ್ ಶ್ರೀಕೃಷ್ಣನೇ ಕಾಂತನಾ |
ಗಲೆ ವೇೞ್ಕೆಂದು ವಿಚಾರಿಸುತ್ತೆ ಕರವಿಖ್ಯಾತಾಮವ್ರತಂಗೆಯ್ದೆ ಮಂ ||
ಜುಲವಾಂಛಾರ್ಥಮನಾಂತರೆಂಬ ತೆಱನಂ ಕೇಳ್ದಂತು ತಾನುಂ ಸಮು |
ಜ್ವಲತದ್ರೂಪಮನಂಗಧಾರಣನಿಮಿತ್ತಂ ಕೊಳ್ವೆನೆಂದೞ್ಕಱಿಂ ||೩೭||

ಶ್ರೀವಿಲ್ಲಿಯ ಪುತ್ರೂರಂ |
ಭಾವಿಸಿ ಗೋಕುಲಮೆನುತ್ತುಮಲ್ಲಿರ್ಪ ಮಹಾ ||
ಶ್ರೀವೈಷ್ಣವಪುತ್ರಿಯರಂ |
ಗೋವಳಕನ್ನೆಯರೆನುತ್ತೆ ಯೋಜಿಸಿ ಮನದೊಳ್ ||೩೮||

ತಾನೊರ್ಮೆ ಗೋಪಕನ್ಯಾ |
ನೂನತ್ವಮನಪ್ಪುಕೆಯ್ದು ನೋಂಪಿಯನೆಸಪಂ ||
ತಾನಂದದಿನವರಂ ಸ |
ನ್ಮಾನಿಸುತೆ ವ್ರತಾರ್ಥಮೆೞ್ಬಿಸುವ ತೆಱದಂತುಂ ||೩೯||

ಬಡಗೊಂಡಾಕನ್ನಿಕೆಯರ |
ನೊಡನಾವಟಪತ್ರಶಾಯಿಸನ್ನಿಧಿಯನೆಯು ||
ಗ್ಗಡಮಾದ ನಂದಗೃಹಮಂ |
ದೊಡರಿಸಿ ತಾಮೆೞ್ಬಿಪಂತುಮಾಕೃಷ್ಣನುಮಂ ||೪೦||

ತಮಗೆಲ್ಲರ್ಗೆಯುಮಾತನೆ |
ಕ್ರಮದಿಂ ವಾಂಛಿತಮನೀವ ತೆಱದಿಂದಂ ಸಂ ||

ಭ್ರುವುದೆ ತಿರುಪ್ಪಾವೆಯೆನಿ ।
ಪ್ಪವುಲಾಪ್ಪಯುಸುಪ್ರಬಂಧಮಂ ವಿರಚಿಸಿದಳ್ ॥೪೧॥

ಅಂತಲ್ಲದೆಯುಂ ಮೂವತ್ತುಂ ಪದ್ಯರೂಪವಾಗಿ ಮಾಡಿ "ನಾಚ್ಚಿಯಾರ ತಿರುವೊೞಿ" ಯೆಂಬ ನೂಱ ನಾಲ್ವತ್ತ ಮೂಱು ಪದ್ಯರೂಪವಾದ ಪ್ರಬಂಧಮಂ ರಚಿಸಿ ತತ್ಪರತ್ವದತಿಶಯದಿಂದಿರೆಯಾಸಮಯದೊಳ್

ಪೆರಿಯಾೞ್ವಾರೀಕನ್ನೆಗೆ ।
ಪರಿಣಯಕಾಲಂ ಸಮೀಪಮಾಯ್ತೆಂದು ಪರಾ ॥
ಮರಿಸಿ ವಿವಾಹಾರ್ಥಂ ಸ ।
ಚ್ಚರಿತರ್ ಯತ್ನಮನೊಡರ್ಚುತಿರಲೊಡಮಾಗಳ್ ॥೪೨॥

ಕರೆದಾತಂದೆಯನಾಗದಿಂತೆನಗೆ ಮಾನುಷ್ಯಂ ವಿವಾಹಂ ಪರಾ ।
ಮರಿಸೆಂಬಾಕೆಯ ಮಾತನಾಲಿಸಿ ವಿಚಾರಾಕ್ರಾಂತರಾಗೀಗಳಾ ॥
ದರಿಸೀಕನ್ನೆಯನೀವುದೆಂತು ಮಿಗೆಯರ್ಚಾವಿಗ್ರಹಕ್ಕೆಂದವರ್ ।
ಪಿರಿದಾಳೋಚಿಸಿಯಾಗಳೊಂದು ತೆಱನಂ ಪೇೞ್ವಿಚ್ಛೆಗಂದಾಳ್ದರ್ ॥೪೩॥

ಅದೆಂತೆನೆ:—

ತಿರುಪತಿ ನೂಱೆಂಟರೊಳಂ ।
ಪರಮಾತ್ಮನ ದಿವ್ಯಮೂರ್ತಿಗಳ್ ಸ್ಫುರಿಕುಂ ನೀಂ ॥
ಪರಿಭಾವಿಸಿಯಾವುದಱೊಳೆ ।
ಪರಿಣಯಕನುಕೂಲಮಕ್ಕುಮಾಮೂರ್ತಿಗಳೊಳ್ ॥೪೪॥

ಎನೆ ತತ್ತದ್ಗುಣವೈಭವಾಖಿಳಮುಮಂ ಚೇರ್ಪೇಱೆ ಪೇೞ್ವಂ ಪೊದ ।
ಱ್ದಿಸಗತ್ಯಾದರದಿಂದಮೆಂಬ ನುಡಿಯಂ ಕೇಳ್ದಂತವರ್ ದಿವ್ಯಕೀ ॥
ರ್ತನೆಯೊಳ್ ತತ್ತದುದಾರಸನ್ಮಹಿಮೆಯಂ ಪೇೞ್ವಾಗಳಾರಂಗಧಾ ।
ಮನ ಚಾರಿತ್ರಮನಾಲಿಸುತ್ತ ತನುಪೋಹಾಂಭೋಧಿಯೊಳ್ ತೇಂಕಿನಳ್ ॥೪೫

ಮತ್ತಂ,

ನಮಿತಾನನೆ ಲಜ್ಜಾನಿ ।
ಷ್ಠೆ ಮೋಹಪರವಶತೆಯಿಂದೆ ಮಾಱುತ್ತರಮಂ ॥
ಸಮನಿಸದಿರಲೊಡಪಿತಾಕೆಗೆ ।
ರಮಣೀಯಂ ರಂಗಧಾಮನೊಳ್ ಮನಮಕ್ಕುಂ ॥೪೬॥

ಎಂದನುಮಾನಿಸಿ ತಿಳಿದಾ ।
ಮಿಂದೆಸಪುದ್ಯೋಗಮೇಸಿದರ್ಕನುತಿರೆ ತಾ ॥
ನಂದಿರುಳೊಳ್ ತತ್ಸ್ವಪ್ನಕೆ ।
ಬಂದಾಶ್ರೀರಂಗಧಾಮನಿಂತೆಂದ ಸಿರ್ದಂ ॥೪೭॥

ನಿಮಗೆ ವಿಚಾರಮೇಕಿವಳ ಮತ್ಸತಿಯೆನ್ಮಯ ತಾಣಕೀಕೆ ಬಂ ।
ದಮದೊಡೆ ನಲ್ಮೆಯಿಂ ಕರೆದುಕೊಂಡಪೆವಾಮೆನೆ ರಂಗಧಾಮನಾ ॥
ಸಮುಚಿತವಾಕ್ಯಮಂ ಪದೆಮ ಕೇಳ್ದತಿಹರ್ಷಮನಾಂತತಾಗಳಾ ।
ಕ್ಷಮೆಯರಸಂಗೆ ತಾಂ ಕನಸಿನೊಳ್ ನುಡಿದಂ ಸವಿದೀವಿಶೇಷಮಂ ॥೪೮॥

ಮತ್ತಮಾದೇವಸ್ಥಾನದಧಿಕಾರಿ ಮೊದಲಾದರ ಕನಸಿನೊಳಮಿಂತೆಂದ ನದೆಂತೆನೆ :—

ಪೆರಿಯಾಳ್ವಾರಣುಗೆ ಮನೋ ।
ಹರಿಯಂ ಶೂಡಿಕ್ಕುಡುತ್ತನಾಚ್ಯಾರಂ ಸಾ ॥
ದರಮಧಿಕಪರಿಕರಂಗಳ್ ।
ಬೆರಸುಪಚಾರಂಗಳಿಂದೆ ನೀಮೆಲ್ಲರುಮಿಂ ॥೪೯॥

ತಿರುವಿಲ್ಲಿಯ ಪುತ್ತೂರಿಂ ।
ಕರೆದೊಡಗೊಂಡಿಲ್ಲಿಗೊಲ್ದು ಬರ್ಪುದೆನುತ್ತುಂ ॥
ಚರಿಸಲೊಡಮಾನಿರೂಪಮ ।
ನಿರದಾಲಿಸಿಯುಮರವರ್ಕನುಗುಣಮನಾಂತರ್ ॥೫೦॥

ಮತ್ತಮದರ್ಕೆ ಮೊದಲೆ ದಿವ್ಯದೇಶಸ್ಥಸ್ವಾಮಿಗಳುಮೆನಗೆ ತನಗೆಂದಾಸ್ಥಳಕೆ ಪೋಗಿಯಾವಿರ್ಭಾವಮಂ ಮಾಡಿಕೊಂಡಿರೆಯನಂತರಂ,

ಈದೇಶಾಧೀಶ್ವರನಾ ।
ಹ್ಲಾದದೆ ಶೂಡಿಕ್ಕುಡುತ್ತನಾಚ್ಯಾರಂ ನೀ ॥
ಮೆಯ್ದೊಡಗೊಂಡೈತನ್ನಿಂ ।
ಸಾದರಮೆಂದೊಡನೆ ಭೃತ್ಯತತಿಗಿಂತೆಂದಂ ॥೫೧॥

ಎಂದು ನಿಯಾಮಿಸಿ ಪರಿಕರ ।
ಬೃಂದಂ ಬೆರಸೆಯ್ದಿ ಭೃತ್ಯರಾಯಾಳ್ವಾರ್ಗಿಂ ॥

ತೆಂದರ್ ಮತ್ಸ್ವಾಮಿ ಭವ ।
ನ್ನಂದನೆಯುಂ ತನ್ನ ಬೞಿಗೆ ತರವೇೞಿಲೊಡಂ ॥೫೧॥
ಬರವಾದುದೆನೆಯುವರ್ ತಾಂ ।
ಪರಿಭಾವಿಸುತೆಮ್ಮ ಕನಸು ನಿಜವಾಯ್ತೆನುತಾ ॥
ದರಿಸಿಯುವರೆಲ್ಲರುಮನಾಂ ।
ತುರುಹರ್ಷಮನಾಕುಮಾರಿಗಿಂತೆಂದುಸಿರ್ದರ್* ॥೫೩॥

ಎಲೆ ಕೇಳ್ ಮಾತೆಯನೇಕಸತ್ಪರಿಕರಂಗಳ್ ಕೂಡಿ ರಂಗೇಶನಂ ।
ತೊಲಿವಿಂದಟ್ಟೆ ತದೀಯಭೃತ್ಯರೊಡಗೊಂಡೆಯ್ದಲ್ಕೆ ನಿನ್ನಂ ಸುಮಂ ॥
ಗಲೆ ಬಂದಿರ್ಪರೆನಿಪ್ಪ ಸದ್ವಚನಮಂ ಕೇಳ್ದಾಗಳುರ್ಬುತ್ತೆ ತಾಂ ।
ನಲವಿಂದಂದು ವಿವಾಹಯೋಗ್ಯಮೆನಿಪಾನೈಪಥ್ಯಮಂ ತಾಳ್ದಿದಳ್ ॥೫೪॥

ಅಂತಲಂಕೃತೆಯಾಗಿ,

ಆತಾಯ್ ಮೊದಲಾದರುಮಂ ।
ಪ್ರೀತಿಯಿನೊಡಗೊಂಡು ಪಯಣದೊದವಿಂದವರ್ಗಳ್* ॥
ಸಾತಿಶಯಂ ಬರ್ಪನ್ನೆಗ ।
ಮಾತೆಱಸಂ ರಂಗನಾಯಕಂ ತಿಳಿದಾಗಳ್ ॥೫೫॥

ತಮ್ಮ ದೇವಸ್ಥಾನದಧಿಕಾರಿಯ ಕನಸಿನೊಳ್ ಬಂದು ನಾಳೆಯೆಮಗೆ ವಿವಾಹಮಕ್ಕುಮದರ್ಕೆ ದಿವ್ಯನಗರಮನಲಂಕರಿಪುದೆಂದು ನಿರೂಪಿಸೆ—

ಮಿಳಿರ್ವ* ಪತಾಕೆ ರತ್ನಮಯತೋರಣದೋಳಿ ಚಲದ್ಧ್ವಜಾಳಿ ಪೊಂ ।
ಗಳಸದ ಸೌಧರಾಜಿ ಮಣಿಸಂತತಮಂಜುಳರಂಗವಲ್ಲಿಯು ॥
ಜ್ಜ್ವಳಮೃಗನಾಭಿಸಾರಣೆ ಸುಧೂಪದ ಧೂಮದಲಂಪು ಕಾಂಚನೋ ।
ಜ್ಜ್ವಲತರಮಂಡಪಂ ಮೆಱೆವುಜಲ್ಲೆಸೆಮಲ್ಲಿಯುಮೊಪ್ಪಿತಾಪುರಂ ॥೫೬॥

ಅಂತು ಸಿಂಗರಂಗೆಯ್ದು,

ಪರಿಕರಮೆಲ್ಲಮನೊಡಗೊಂ ।
ಡಿರದಾಪುರದೆಱೆವನಾಗಳಿದಿರ್ವಂದು ಮಹಾ ॥
ದರಣೆಯಿನವರಂ ಕರೆದು ।
ಯ್ದಿರಿಸಿಪನಂಪೊಳ್ಪಿಂದೆ ಮಂಟಪದೆಡೆಯೊಳ್ ॥೫೭॥

ಅಂತಿರೆ ದಡ್ಡಿಯನುಗಿಪ್ಪೊಲ |
ವಂತಾಶೂಡಿಕ್ಕುಡುತ್ತನಾಚ್ಚ್ಯಾರಿಜೀಗೋ ||
ರಂತಂದಳದಿಂ ಪೊಱಮ |
ಟ್ಟಂತಿಂತೀಕ್ಷಿಸುತುಮಿರ್ಕೆಲದ ಜನತತಿಯುಂ ||೫೮||

ಸಲೆ ಮುಕ್ತಂ ಪರವಾಸುದೇವನ ಮಹಾಶೇಷಾಹಿಪರ್ಯಂಕಮಂ |
ನಲವಿಂದೈದಿ ತದಂಘ್ರಿಪೀಠದೆಡೆಯೊಳ್ ತಾಸಿರ್ಕುಮಂತಂತು ಮಂ ||
ಜುಲಪಾದಾಬ್ಜಸಮೀಪದೊಳ್ ಪದೆದಿವರ್ ಕುಳ್ಳಿರ್ದು ತಾವಂತೆ ಭೂ |
ಲಲನಾರೂಪಮನಾಂತು ಕಾಣಿಸದದೃಶ್ಯಂ ಚಿತ್ರಳಾವೇಳೆಯೊಳ್ ||೫೯||

ಈಯುಚ್ಚರಿಯುಂ ಜನಸಮು |
ದಾಯಂ ನಡೆನೋಡಿ ಕೌತುಕಂಬಟ್ಟಿದು ಮು ||
ತ್ತಾಯರಾಜ್ವಾರಂ ಕರೆದಾ |
ಶ್ರೀಯರಸಂ ಪ್ರೀತಿಯಿಂದೆ ತಾನಿಂತೆಂದಂ || ||೬೦||

ನೀಮೆಮಗಿಂದು ಮೊದಲ್ ಸು |
ಪ್ರೇಮದಿನಾಜನಕನಂತೆ ಮಾವಂದಿರೆನು ||
ತ್ತಾಮೋದದಿನಮೃತರಸ |
ಸ್ತೋಮಶ್ರವಣೋಕ್ತಿಯಿಂದೆ ಸಮ್ಮಾನಿಸಿದಂ ||೬೧||

ಮತ್ತಂ ಪರಿವಟ್ಟ ತಿರುಮಾಲೆ ಮೊದಲಾದ ಬಹುಮಾನಂಗಳಂ ಮಾಡಿಸಿ ಕಳಪಲೊಡಮನಂತರಂ,

ಇವರಾಶ್ರೀರಂಗಧಾಮುಶ್ವಶುರತೆವಡೆದಾನಂದದಿಂ ದಿವ್ಯಮಪ್ಪಾ |
ಭವನಕ್ಕೊಳ್ಪಂದೆ ಸುತ್ತಲ್ ತಿರುಗಿ ನಮಿಸುತುಂ ವಿಲ್ಲಿಪುತ್ತೂರ್ಗೆ ಬಂದಿಂ||
ತು ವಿಶೇಷಸ್ತೋತ್ರದಿಂ ಸ್ವಾಮಿಗೆ ಸಕಲಮುಮಂ ಬಿನ್ನಸಂಗೆಯ್ದು ತತ್ಪಾ|
ದವನೇಜಾತಕ್ಕೆ ಭಕ್ತ್ಯುತ್ಕಟದಿನೆಱಗಿ ತತ್ಸೇವೆಯುಂ ಮಾಡುತಿರ್ದರ್ ||೬೨||

ಅನಂತರಂ ಶ್ರೀರಂಗಧಾಮನ ವಿವಾಹವೇಷನಾದ ಮನ್ನಾರೆಂಬೀ ಶ್ರೀಕೃಷ್ಣನುಮಂ ಶೂಡಿಕ್ಕುಡುತ್ತನಾಚ್ಚಿಯಾರುಮಂ ನಿಜಮಂದಿರದೊಳ್ ಪ್ರತಿಷ್ಠೆಯುಂ ಮಾಡಿ,

ಅವರಿರ್ವರ್ಗೆಯುಮಂತಿವರ್ ಸಕಲಕೈಂಕರ್ಯಂಗಳಂ ಮಾಡುತು ।
ತ್ಸವದಿಂನಂ ತಿರುಮಾಲೆಯುಂ ನಡೆವವ್ರೊಲ್ ಕೈಕೊಂಡು ಮಾಮಾನಿನೀ ॥
ಧವಲೋಕಕ್ಕತಿಭಕ್ತಿಯಿಂದೆ ಬಿಜಯಂಗೆಯ್ದರ್ ಮಹಾಭಕ್ತಿಯಿಂ ।
ಶ್ರವಣಾನಂದಮನಾಂಪನಾವನಿದಱಿಂದಾತಂ ರಮೇಶಪ್ರಿಯಂ ॥೬೨॥

॥ ಗದ್ಯಂ ॥

ಇದು ನಮಿತಹಿಮಕರಚೂಡಕಮಲಭವಮುಖಸುರಸಮುದಾಯಮೌಳಿಮಣಿಗಣಘೃಣಿಸಂಧ್ಯಾರಾಗಾನುಗುಣಪ್ರಚುರರುಚಿತಾರಕಾಯಮಾನ ರಂಗವಿಭುಚರಣಯುಗಳನಖಮಯೂಖಸುಧಾಪೂರವಿಹಾರಮದಮರಾಳೀಕೃತ ಮಹಿಷಪುರವರಸಾಮ್ರಾಜ್ಯಸಂಪನ್ನ ರಾಜಾಧಿರಾಜರಾಜಪರಮೇಶ್ವರಾಪ್ರತಿಮಪ್ರೌಢಪ್ರತಾಪ ಬಿರುದಂತೆಂಬರಗಂಡ ಯದುಕುಲನಳಿನದಿನಕರರಾದ ಶ್ರೀಚಿಕದೇವರಾಯಮಹಾರಾಜಪ್ರಸಾದಪರಿಪೂರ್ಣ ಸಚಿವನಿಚಯತಿಲಕ ಶ್ರೀಚಿಕುಪಾಧ್ಯಾಯವಿರಚಿತಮಪ್ಪ ದಿವ್ಯಸೂರಿಚರಿತ್ರಮಹಾಪ್ರಬಂಧದೊಳ್ ಶೂಡಿಕ್ಕುಡುತ್ತನಾಚ್ಚಿಯಾರಮ್ಮನವರ ವೈಭವಂ ಷಷ್ಠಾಶ್ವಾಸಂ ಸಂಪೂರ್ಣಂ.

---

## — ಸಪ್ತಮಾಶ್ವಾಸಂ —

ಶ್ರೀವನಿತಾವಿದ್ಯುದ್ವ ।
ಲ್ಲೀವಿಲಸನ್ನೀಲಮೇಘರುಚಿತನುವೊಲವಿಂ ॥
ದೋವುಗೆ ಕರುಣಾಂಬುಧಿಷಂ ।
ಭಾವಿತಭಕ್ತಾಂಘ್ರಿರೇಣುಮುನಿ ರಂಗೇಶಂ ॥೧॥

ಕಡುಮೆಱೆವ ಚೋಳದೇಶದ ।
ಪೊಡವಿಯು ಕಾವೇರಿಗೆಣೆಸೆ ಬಡಗಲ್ ಮಂಡಂ ॥
ಕುಡಿಯೆನಿಸುವಗ್ರಹಾರದೊ ।
ಳೊಡನೆ ಪುರಶ್ಚೂಡವೈಷ್ಣವರ ಸತ್ಕುಲದೊಳ್ ॥೨॥

ಸಿರಿಯುರಸನುರಸೆ ಲದೊಳ್ ।
ಸ್ಫುರಿಸುವ ವರವೈಜಯಂತಿಯಂಶದಿನಾತೊಂ ॥
ಡರಡಿಪ್ಪೊಡಿಯಾಳ್ವಾರವ ।
ತರಿಸಿದರಭಿನವಚರಿತ್ರಮಂ ಧರೆಗಱಿಪಲ್ ॥೩॥

ಖ್ಯಾತಧನುರ್ಮಾಸಜ್ಯೋ |
ಷ್ಮಾತಾರೆಯೊಳೊಗೆದು ಜಾತಕರ್ಮಾದಿಶುಭ ||
ವ್ರಾತಕಲಿತಕರ್ಮಂಗಳ |
ನೋತಂಗೀಕರಿಸಿ ರಂಜಿಸಿರ್ಪಿನಮಾಗಳ್ ||೪||

ವಿಲಸತ್ಸ್ವಾಮಿಯ ಜಾಯಮಾನಸುಕಟಾಕ್ಷಾಧಿಕ್ಯದಿಂದಂ ಸಮು |
ಜ್ಜ್ವಲಿಪಾಜ್ಞಾನದೆ ಪೂರ್ಣರಾಗಿ ತಿಳಿದೆಲ್ಲಾತತ್ವಸಾರಂಗಳಂ ||
ನೆಲಸಲ್ಕಾವುದು ದಿವ್ಯದೇಶಮೆನುತಂತಾಳ್ಗೋಚಿಸಿನ್ನೀಧರಾ |
ತಲವೈಕುಂಠಮಿದೆಂದು ಸಮ್ಮತಿಸಿದರ್ ಶ್ರೀರಂಗಮಂ ಚಿತ್ತದೊಳ್ ||೫||

ಜನಕಂಗಂ ಮಾತೆಗಂ ಪೇಳದೆ ಮಿಗೆ ಪ್ರೇಮಮುಟ್ಟಿಯಿದ್ದು ಶ್ರೀರಂಗಮಂ ಸ|
ದ್ವಿನುತ ಶ್ರೀರಂಗನಾಮಂಗೊಡನೆಱಗಿ ಮಹಾಭಕ್ತಿಯಿಂದೀತನೇ ಕೃ ||
ಷ್ಣನೆನುತ್ತಂದಾಸುದಾಮಂ ಮಧುರೆಯೊಳೊಲವಿಂ ಮಾಲೆಯಂಸಾರ್ಚಿದಂತಾ
ನನಿಶಂ ಶ್ರೀಮಾಲಿಕಾಸೇವೆಯನೊಡರಿಸಮೇಳ್ಕೆಂದು ನಿರ್ಣೀತರಾದರ್ ||೬||

ಪರಿಭಾವಿಸಿಂತು ನಿಜಾಳಾ |
ಪುರಿಯಾದೊರೆಯಾರ್ಗೆ ಪ್ರೀಪ ದಾಱಿಗೆ ಪಡುವಲ್ ||
ಸಿರಿನಂದನವನವೊಂದಂ |
ವಿರಚಿಸಿದರ್ ಸ್ವಕರಕರ್ಮಕೌಶಲದಿಂದಂ ||೭||

ವನದೊಳ್ ಪುನ್ನಾಗಜಾತೀಕುರವಕ ಕುಟಜಾಶೋಕ ಬಂಧೂಕಮಲ್ಲೀ|
ಘನಯೂಥೀ ಕೇತಕೀ ಚಂಪಕ ವಕುಳಲಸತ್ಪಾರಿಜಾತಾದಿಗಳ್ ಕ ||
ಣ್ಗೆನಿತಾನುಂ ಪೆಂಪುವೆತ್ತೊಪ್ಪಿರೆ ರಚಿಸಿದರಾಗಾರಮಂ ಮಾಡಿಕೊಂಡಂ |
ತನಿಶಂ ಸದ್ಬ್ರಹ್ಮಚರ್ಯವ್ರತವಿಜಿತಮನೋವೃತ್ತಿ ಸಂಶುದ್ಧರಾದರ್ ||೮||

ಪ್ರತಿದಿನಮುಂ ತಿರುಮಾಲಾ |
ತತಿಕೈಂಕರ್ಯಮನೊಡರ್ಚುತುಂ ವೈರಾಗ್ಯೋ ||
ನ್ನತಿಯಿಂದೆಣಿಸದೆ ಚಿತ್ತದೊ |
ಳಿತರವ್ಯಾಪಾರಮಿನಿತುಮಂ ಸುಖಮಿರ್ದರ್ ||೯||

ಅಂತು ಕತಿಪಯಕಾಲಮಿರೆ ;

ಅಲ್ಲಿಯ ದೇವದಾಸಿ ವಿಟಕಂಟಕಿಯೆಂಬಳ ಪುತ್ರಿಯರ್ ಲಸ |
ತ್ಪಲ್ಲವಪಾಣಿಯರ್ ಭುಜಗವೇಣಿಯರುತ್ಪಲನೇತ್ರೆಯರ್ ಸಮು ||

ತ್ಫುಲ್ಲಸರೋಜರಮ್ಯಮುಖಿಯರ್ ಮೃದುಹಾಸೆಯರೊಳ್ಪುವೆತ್ತ ಹೇ |
ಮೋಲ್ಲಸಿತಾಂಗಿಯರ್ ಕಳಭಯಾನೆಯರಂಗಜಕೇಳ್ಯಧೀನೆಯರ್ ||೧೦||

ದೇವಿಯೆನಿಪ್ಪಳದೊರ್ವಳ್ |
ಭೂವಿನುತೆ ವರಾಂಗಿ ದೇವದೇವಿಯೆನಿಪ್ಪಳ್ ||
ಭಾವಿಸಲೊಡವಾರಂಭಾ |
ಲಾವಣ್ಯದ್ವಿತಯರೂಪಕಲಿತೆಯರೆಸೆದರ್ ||೧೧||

ಪರಿಣತೆಯರ್ ಭರತದೊಳತಿ |
ತರಕುಶಲೆಯರೆಸೆವ ಗಾನದೊಳ್ ಸಾಹಿತ್ಯ ||
ಸ್ಫುರಣೆಯೊಳುರುನಿಪುಣೆಯರವು |
ರರ ತರುಣಿಯರಿವರ ಷೋಡಶಾಂಶಕ್ಕೆಣೆಯೇ ||೧೨||

ಎನಲೊಡವಂತೇಱುಂಜ |
ಪ್ಪನೆಯರ್ ತಾಂ ಸಕಲದೇಶದೊಳಮತಿಬಿರುದಂ ||
ಜನಮಱಿಯೆ ಪಡೆದು ನಿಚುಳಾ |
ಪ್ಪನಗರಿಯಧಿನಾಥ ಚೋಳಪೃಥ್ವೀಪತಿಯಂ ||೧೩||

ಎಸೆವಾಟಪಾಟದಿಂ ಮೆ |
ಚ್ಚಿಸನೇಱಿಂದಾತ್ಮಸಖಿಯರೊಡವರೆ ಪೊಱಮ ||
ಟ್ಟೊಸೆದಲ್ಲಿಗೆಯ್ದಿ ಬೞಿಕಾ |
ವಸುಧೇಶನನಾಟಪಾಟದಿಂ ಮೆಚ್ಚಿಸಿದರ್ ||೧೪||

ಅಂತು ಮೆಚ್ಚಿಸಿ ಕೆಲವು ಪಗಲ್ಗಳಿರ್ದು ಸಕಲಬಹುಮಾನಂಗಳನಾತ
ಸಿಂ ಪಡೆದು ತಿರಿಗಿ ಶ್ರೀರಂಗಕೆಯ್ತರ್ಪ ಸಮಯದೊಳ್

ಮಿಗೆ ಚೈತ್ರಾತಪತಪ್ತೆಯರ್ ಶ್ರಮದಿನಾಪ್ರದ್ಯಾನಮಂ ನೋಡಿ ಮೆ |
ಲ್ಲಗೆವಾಸೇದೆಯುಮಿಲ್ಲಿ ವಿಶ್ರಮಿಸಿಕೊಂಡಾಂ ಪ್ರೋಪವೊಂದಾಗಳೇ ||
ತ್ತೆರೆವಾತೆರೋಟದ ಬಾಗಿಲಿಂ ಬನದ ಮಧ್ಯಕ್ಕೆಯ್ದಿಯಲ್ಲಿರ್ಪ ಪ |
ದ್ಮಗಣಾಕೀರ್ಣಸರಸ್ಥಳೀಸಿಕಟಮಂ ಸಾರ್ದರ್ ಮಹೋಲ್ಲಾಸದಿಂ ||೧೫||

ಅಂತು ಸಾರ್ದು

ಕುಳಿರ್ಪೊತ್ತಂಬುಜಸಂಗಿ ಪಲ್ಲವಿತಭೂತಚ್ಛಾಯೆಯುಂ ಪ್ರೋರ್ವಿ ಕೋಂ |
ಕಿಳಗಾನಂಗಳನಾಲಿಸುತ್ತಳಿನಾದಂಗಳ್ಗಂ ತಾವನ ||

ಸ್ಥಳದೊಳ್ ತಣ್ಣೆಲರಿಂದೆ ತಂಪುವಡೆದಾಂತಾನಂದಮಂ ಮಲ್ಲಿಕಾ ।
ವಳಿಯಂ ವಾಸಿಸಿ ಪಾಡುತುಂ ನಟಿಸುತುಂ ಸಂಚಾರಮಂ ಮಾಡಿದರ್ ॥೧೬॥

ಅಂತವರಿರೆ—ಈವಿಪ್ರನಾರಾಯಣನಾದಾತೊಂಡರಡಿಪ್ಪೊಡಿಯಾಳ್ವಾ ರಾಸಮಯದೊಳ್

ದಳಭಾಸ್ವಚ್ಛಾಲೆಯಿಂ ನಿರ್ಗಮಿಸೆ ಸಲಿಲಮಂ ತಪ್ಪುದರ್ಕಾಗಳೇ ಸ ।
ನ್ಮಿಳಿತೋದ್ಯದ್ದ್ವಾದಶೋರ್ಧ್ವಸ್ಫುರಿತವಿಮಲಪುಂಡ್ರಂಗಳಂ ಸೂರ್ಯಭಾನೂ
ಜ್ಜ್ವಳತದ್ವರ್ಚಸ್ಕಮಂ ಕಂಠದೊಳ ವಿಃಜಾಸ ಪದ್ಮಾಕ್ಷಮಾಲಾಳಿಯಂ ತ।
ತ್ತುಳಸೀದಾಮಂಗಳಂ ಕಂಡು ಮುದದಿನಿವರಾಸ್ವಾಮಿಯೋ ತಪ್ಪದೆಂದರ್॥

ಮತ್ತಮಾದೇವಿ ತನ್ನ ತಂಗೆಯ ಮೊಗಮಂ ನೋಡಿ,

ಶ್ರೀರಂಗನಾಥನೀಯಾ ।
ಕಾರದೊಳೆಸೆದಿರ್ಕುಮೆನುತುಮಿಂತಪ್ಪ ಮಹಾ ॥
ವೈರಾಗ್ಯಪುರುಷರಂ ನೀಂ ।
ಧಾರಿಣಿಯೊಳ್ ತಂಗೆ ಕಂಡೆಯಾ ಎನಲಾಗಳ್ ॥೧೮॥

ಆದೇವದೇವಿಯಕ್ಕನಂ ಕುಱಿತಿಂತೆಂದಳೆಂತೆನೆ :—

ಕೇಳಕ್ಕ ಕಾಲವಲ್ಲಿರ್ಪ ಜನಕೆಳವೆ ವೈರಾಗ್ಯವಿಖಾತಂಗಳೊಳ್ ನೀಂ ।
ಪೇಱಿಂ ವೈರಾಗ್ಯಮಂ ಕಂಡೆಯೆನೆಯನುಜೆ ನೀಂ ಮಾನುಷವ್ಯಕ್ತಿಯಿಂದೇ॥
ಪೇೞಲ್ವೇಡಿಂತು ರಂಗೇಶ್ವರನಧಿಕತರವ್ಯಕ್ತಿಯೋ ತಪ್ಪದೆಂದಾ ।
ಯಾಳಾಪಂಗೇಳುತಾಯಗ್ರಜೆಗೆ ನುಡಿವಳಾತಂಗಿ ತಾನೊಂದುಮಾತಂ ॥೧೯॥

ಇವರಂ ಮದ್ವಶರಪ್ಪರೋಲೆಸಗುವೆಂ ನೋಡಕ್ಕ ನೀಂ ಪ್ರಾರ್ಥಿಯಂ ।
ಧ್ರುವವಿನ್ನೀಬಹುವಾಕ್ಯದಿಂದೆ ಫಲಮೇನೆಂಬಾಕೆಗಾದೇವಿ ತಂ ॥
ಗಿ ವಿಲಾಸಂಬಡೆದೀಸ್ವರೂಪದೊಳೆ ಯತ್ನಂಗೆಯ್ಯೆ ತಾನೊರ್ಡಂ ।
ದ ವಚಂ ಕರ್ಣವ ತಾಗೆಯಾಕೆಱಿಯಳಿಂತೆಂದಳ್ ಮಹಾದರ್ಪದಿಂ ॥೨೦॥

ಇವರಂ ವಶಮಂ ಮಾಡಿದೊ ।
ಡವಧರಿಸೆಲೆ ದಾಸಿಯಾದಪೆಂ ನಿನಗೆನಲಂ ॥
ತವಳುಂ ನಿನ್ನೀಶಪಥಮೆ ।
ಸನಸಿಸುಗಾನಿಂತು ಮಾಡದಿರಲೆನಗನುಜೇ ॥೨೧॥

ಎಂದುಸಿರ್ದಾಗಳವಳ್ ದಳ |
ಮಂದಿರದ ಸಮೀಪಕೆಯ್ದಿ ನಿಜರೂಪವಿಳಾ ||
ಸಂದೋಹಿ ವಶಮನಾಗಿಸ |
ಲೆಂದೆನಿತೆನಿತೋ ಪ್ರಯತ್ನಮಂ ಮಾಡಲೊಡಂ ||೨೨||

ಅವರುಂ ಸುಸ್ಥಿರಚಿತ್ತರಾಗಿಯೆರ್ದೆಯೊಳ್ ರಂಗೇಶನಂ ಜಾನಿಸು |
ತ್ತವಳಂ ಕಾಮಿಸಿ ನೋಡದಂತಿರಲವಳ್ ಮದರೂಪಮಂ ನೋಡದೆ ಮಾ ||
ನವರೇಂ ಪೇಟೆ ಸುಪರ್ವರುಂ ಮುನಿಗಳುಂ ದಲ್ ಮೋಹಿಪರ್ ವ್ಯರ್ಥಮೆಂ|
ದು ವಿಶೇಷಂ ತೃಷೆಯೆಂದು ತಾನನುಜೆಯಿರ್ಪಾತಾಣಮಂ ಪೊರ್ದಿದಳ್ ||೨೩||

ಅಂತು ಪೊರ್ದಿ

ತಂಗೆಯುಸಾಧ್ಯದ ಕಜ್ಜ |
ಕ್ಕಂಗೈಸಲ್ ವೇಡ ಮಾಣ್ ಮನೋವ್ಯಥೆಯುಂ ನೀಂ ||
ಸಂಗಳಿಸಿದ ಶಪಥಮದೇ |
ನಂದಮ ಬಿಡು ಬಾರ ನಗರಿಗೆಯ್ದುವಮೆಂದಳ್ ||೨೪||

ಆನುಡಿಯಂ ಕೇಳ್ದವರುಮ|
ನೇನಾನುಂ ನೆಪದೆ ವಶಕೆ ತಂದಲ್ಲದೆ ಮೇ||
ಣಾನುಂ ಬಾರೆಂ ಮಿಗೆ ನಿ |
ನ್ನಾನನಮುಮಕ್ಕ ನೋಳ್ಪುದಿಲ್ಲೆಂದಾಗಳ್ ||೨೫||

ನೀಂ ಮೆನ್ನರುಮೆಯ್ದಿಪುರ್ಗೆನೆ ಮರಳ್ದಾಗೀವಿಯೆಂಬಳ್ ಸಖೀ |
ಸ್ತೋಮಂಗೂಡಿವಳೀಯಸಾಧ್ಯವಿಷಯಾತ್ಯಾಸಕ್ತಿಯಂ ಮಾಳ್ಪುವಿ |
ನ್ನಾಮೋಸೆಂಬಮೆಪುತ್ತುಪುರ್ಗೆ ತಳರ್ದಳ್ ಮತ್ತಿತ್ತಲತ್ಯಂತಚಿಂ |
ತಾಮಗ್ನಾಂಗಿಯಿದೇಕೆ ಬಂದುದೊ ಚಲಂ ತಾನೆನ್ನೊಳೆಂದಗ್ರದಳ್ ||೨೬

ಅನಂತರಂ

ಸಕಲಾಪತ್ತುಗಳಲ್ಲಿಯುಂ ಪದಮ ಶ್ರೀರಂಗೇಶ ನೀಂ ರಕ್ಷಿಸೆಂ |
ದು ಕರಂ ಪ್ರಾರ್ಥಿಸಿಯುಳ್ಳಿರೆ ಮುಳಗೆಪಾಗಳ್ ಸ್ವಪ್ನದೊಳ್ ರಂಗನಾ ||
ಯಕನೆಯ್ತಂದೆಲೆ ನಾರಿ ಚಿಂತಿಸದಿರಿಂತ್ಯುದಂ ಪಡೆಂಗೆಯ್ವೆನೆಂ |
ವಿಕಲತ್ವಂ ನಿನಗೇಕೆ ಪೋಗೆನೆಯುಮಾ ಸಂತೋಷಮಂ ತಾಳ್ದಿದಳ್ ||೨೭||

ಅಂತು ಹರ್ಷಿಸುತ್ತೆೞ್ದು ಮುನ್ನಿನ ವೇಷಮಂ ಮಾಣ್ದು ಕಾಷಾಯವಸನ ತಿರುಸುತ್ತು ಪಟ್ಟೆನಾಮ ಪದ್ಮಾಕ್ಷ ತುಳಸೀಮಾಲಾದಿ ಚಿಹ್ನಂಗಳಂ ತಳೆದಾಪರ್ಣಶಾಲೆಯ ಸಮೀಪಕೆಯ್ದಿ ಪ್ರಬಂಧಾನುಸಂಧಾನಗಳಿಂ “ತಿರುವರಂಗನಡಿಯೇನ್ ಅಡಿಯೇನ್” ಎಂಬುದು ಮೊದಲಾದ ಪರಿಭಾಷೆಗಳಿಂ ದಂಡಪ್ರಣಾಮಮಂ ಮಾಡಿ,

ನಮಿತಶಿರಸ್ಕೆಯಾಗಿ ನಸುದೂರದೊಳಂಜಲಿಹಸ್ತದಿಂ ನಸಂ |
ಭ್ರಮಮಿರೆಯಾಕೆಯುಂ ದಯೆಯಿನೀಕ್ಷಿಸಿಯೆತ್ತಣಿಂದೆ ಬಂದೆನಿ ||
ನ್ನ ಮನದ ವಾಂಛೆಯೇಂ ಪಡೆವುದಿಂತು ವಿರಾಗತೆ ನಿನ್ನೊಳೇಕೆ ಸಂ |
ಕ್ರಮಿಸಿದುದೆಂದು ಕೇಳಲವರಾಕೆ ಕಡಂಗುತೆ ಮಾತನಾಡಿದಳ್ ||೨೮||

ಬಗೆವೊಡೆ ವಿಟಕಂಟಕಿಯೆಂ |
ಬ ಗಣಿಕೆಯುದರದೊಳ್ ಪುಟ್ಟಿ ಪರವಂಚನೆಯಿಂ ||
ನೆ*ಗೞ್ದೆಂ ಸರ್ವರ ಧನಮಂ |
ತೆಗೆದಾಪಾದಿಸುವ ವಿಷಯದೊಳ್ ಚದುರಿಂದಂ ||೨೯||

ಕೃತ್ಯಾಕೃತ್ಯವಿವೇಕ |
ವ್ಯತ್ಯಯದೊಳ್ ನರಕಕೆ ಸಲ್ಲದಿರ್ಪ ಮಹಾದು ||
ಷ್ಕೃತ್ಯಮಿತಂಗಳೊಳಿರ್ದೆಂ |
ಸತ್ಯಪ್ರತಿಬಿಂಬರೂಪ ಕೇಳೊಲವಿಂದಂ ||೩೦||

ಬೞಿಯುಂ ಸ್ವಾಮಿಯ ಸತ್ಕಟಾಕ್ಷರುಚಿಯಿಂ ಸುಜ್ಞಾನಮುಂ ಪುಟ್ಟಿಯು |
ಜ್ಜ್ವಳವೈರಾಗ್ಯದೆ ವಸ್ತ್ರವಾಹನಮಹಾಲಂಕಾರಸರ್ವಸ್ವಮಂ ||
ಕಳೆದಾತಾಯ್ ಮೊದಲಾದರಂ ತ್ಯಜಿಸಿ ದಾಸೀವೇಷಮಂ ತಾಳ್ದಿಯೊ |
ರ್ವಳೆ ಮಾಧೂಕರವೃತ್ತಿಯಿಂದೆ ಪೊರೆಯುತ್ತೀದೇಹಮಂ ಸಂತತಂ ||೩೧||

ಪದವೇನಾದೊಡಮಾ ಭವತ್ಸದನದೊಳ್ ತಾಂ ಕೈಂಕರ್ಯಮಂ ಮಾಳ್ಪೆನೆಂ |
ಬುದನೇ ಯಾಚಿಸಿ ಬಂದೆನೆಂದೆನಲೊಡಂ ತದ್ವಾಕ್ಯಮಂ ಕೇಳ್ದು ಸ ||
ನ್ಮುದದಿಂದಿಂತು ವಿರಕ್ತಿ ಸಂಭವಿಪುದೀ ಜನ್ಮಕ್ಕೆ ತಾಂ ಚೋದ್ಯಮೆಂ |
ದದನೀ ನಂಬಿವರಿಲ್ಲಿ ಯಾಚಿಸಿತು ಸತ್ಕೈಂಕರ್ಯಮಂ ಮಾಡು ನೀಂ ||೩೨||

ಎಂದು ನಿಯಾಮಿಸಲೊಡಮಾ |
ಸುಂದರಿ ಮಿಗೆ ನೈಜವೇಷಭಾಷೆಗಳಿಂದಾ ||

ಸಂದನಕೈಂಕರ್ಯಂಗಳ |
ನಂದುಮೊದಲ್ ಕೆಲವು ದಿನಗಳಂ ನಡೆಯಿಸಿದಳ್ ||೩೪||

ಅಂತು ನಡೆಯಿಸುತಿರಲೊಂದು ದಿವಸದೊಳ್

ನೆಱೆ ಮೇಘಾಡಂಬರಂ ರಂಗವಿಭುವಿನುರುಸಂಕಲ್ಪದಿಂದಾಗೆ ವರ್ಷಂ |
ಸುಱಿದತ್ತಾಕಸ್ಮಿಕಂ ನಾಂದೊಡಸವಳದೞಿಂ ಕೂಡಿ ತೋಯ್ದಂಬರಂ ತಾಂ ||
ಪೊಱಗಾಗಳ್ ಕಂಪಸಂಜೆತ್ತಿರೆಯುಕಟೊಳಗಣಾ ದೊಡಂ ಬಂದು ನೀ |
ನುಱದಿಂದೀಧೌತ್ರಮಂ ಕೊಳ್ಳೆನುತೆಕುಡೆವಸಾಲ್ವ್ವರವಳ್ವೋದದಿಂದಂ ||

ಆಗಳಿಂತೆಂದಳದೆಂತೆನೆ :—

ಸ್ವಾಮಿ ಮಹಾನುಭಾವ ಕಿರಿದೊಳ್ ವಸಿಪಂಬರಮುಲ್ಲಿದಾನುಡಲ್ |
ನೀವೊಸೆದೀಯುತಕ್ಕುದೆಯಿದಾಂ ಮೊದಲಿಲ್ಲಿಗೆ ಬರ್ಪ ವೇಳೆಯೊಳ್ ||
ಪ್ರೇಮದೆ ತಂದ ಚೇಲಮೊರಡಿರ್ಕುಮನಂ ತೆಗೆದುಟ್ಟು ಬರ್ಪೆನೆಂ |
ದಾಮನೆಯಿಂದಮಾಸುದತಿಯಾಚೆಗೆ ಪೊಣ್ಮುತೆ ಪೋದಳಙ್ತ್ಯಿಯಿಂ ||೩೫||

ಅಂತು ಪೋಗಿಯಾರ್ದ್ರಾಂಬರಮಂ ಸಡಿಲ್ಚಿ ಮುನ್ನಿನ ವೇಷಮಂ ಬಿಟ್ಟು

ಅಲರ್ಗಳನೊಲ್ದು* ಸೂಡಿ ಮಣಿಮಂಜುಲಭೂಷಣಮೆಲ್ಲಮಂ ಸಮು |
ಜ್ಜ್ವಲಿಸೆ ಕಡಂಗಿ ತಾಳ್ದು ಮಿಱುಪಂಬರಮಂ ತೆಗೆದುಟ್ಟು ಫಾಲದೊಳ್ ||
ತಿಲಕಮನಿಟ್ಟು ನೇತ್ರಯುಗಕಂಜನಮಂ ಪದೆದೆಚ್ಚಿ ತಾಳ್ದಯಂ |
ಗುಲಿಗಳೊಳಂಗುಳೀಯಕಮನಂಘ್ರಿಗಚಕ್ರಕಮಂ ತಗುಳ್ಚಿದಳ್ ||೩೬||

ಅತಿಸೌಂದರ್ಯದೆ ರಂಭೆಯುರ್ವಶಿಯುಮಂ ಧಿಃಕ್ಕರಿಪಾಕಾಂತೆಯು |
ನ್ನತಮಾಸರ್ಣಗೃಹಕ್ಕೆ ಸಾರ್ದರಲವರ್ ತದ್ರೂಪಮಂ ಕಂಡು ಮೋ ||
ಹಿತರಾದಂದಮನಾಲಿಸುತ್ತೆ ನೊಸಪ್ರೋಕ್ಷ್ಯಾನುಸಾರಿ ತತ್ಪ್ರಾದಕಾ |
ಸತಿ ತಾನಾಗಿ ಭವತ್ಪದಾಬ್ಜಕೊಲವಿಂ ಸಂವಾಹನಂಗೆಯ್ದಪೆಂ ||೩೭||

ಎನೆ ನೀಂ ಸ್ವೀಕರಿಸಾಗನೆಂದುಸಿರೆ ಪಾದಾಬ್ಜಾಗ್ರಮಾತ್ರಾಂ ಕೃಪಾ |
ವಸಧೀ ಸೇವಿಸೆನೆಂದು ತಾಂ ರಪಟಮಂಘ್ರಿದ್ವಂದ್ವಮಂ ಮುಟ್ಟಿ ಮೆ ||
ಲ್ಲನೆವಗಾರ್ಗಗಳ ಧೈರ್ಯವಿಂಗಿದುದು ಕಾಮೋದ್ರೇಕಮುನ್ಮತ್ತದೇಂ |
ವನಿತಾಸಂಗದಿನಾರ ಬುದ್ಧಿ ಕೆಡದೆಂಬಂತಂತಾದರಾಕಸ್ಮಿಕಂ ||೩೮||

ಚರಣಾಗ್ರಂ ಮೊದಲಾಗಿ ಮೆಲ್ಲನೆ ಶರೀರಸ್ಪರ್ಶಮಂ ಮಾಡಿ ತ |
ತ್ಕರಮಂ ಫಾಲದೊಳಿಟ್ಟು ಸೋಂಕಿಸೆ ನಿಜೋರೋಜಾತಮಂ ಬುದ್ಧಿ ಕಾ ||
ತರಿಸಿತ್ತಂಗಭವಾಂಧಕಾರಮುಳ*ರ್ದತ್ತಂಗಂ ಮನಂವಾಕ್ಯಮೇ |
ಕರಸಂಬೊರ್ದಿದುದಿಂದ್ರಿಯಂಗಳ ಧೃಡತ್ವಂ ಪೋಱಿದತ್ತಾಗಳೇ ||೩೯||

ಸ್ಮರನಾವೇಶದೆ ರತಿರಾ |
ಗರಹಸ್ಯಂದೋಱಿ ತಾಂ ಪರಸ್ಪರಮುತ್ಕಂ ||
ತರಸಾನುಭವದ ಸೊಗಸಿಂ |
ಪರಿಭಾವಿಸದಿತರಮೇನುಮಂ ಕೆಲದಿವಸಂ ||೪೦||

ಈತೆಱದಿಂದಮಿರ್ದವಳವರ್ ವಶಮಾದುದನಾಲಿಸುತ್ತೆ ಸಂ |
ಪ್ರೀತಿಯಿನಿರ್ದಳಾಲಯದೊಳೇಂ ಸುಖಮೆಮ್ಮ ಗೃಹಕ್ಕೆ ಪೋಗಿ ವಿ ||
ಖ್ಯಾತಿಗೆ ಬರ್ಹಿನಂ ಮಿಸುಪಮಂಚದರಲ್ವಸೆ ಕೀರಶಾರಿಕಾ |
ವ್ರಾತಕಳಸ್ವನಾದಿಗಳಿನೊಪ್ಪುಗುಮಂತದು ವೈಷ್ಣವಾಗ್ರಣೀ ||೪೧||

ಅದಱೊಳ್ ಮಂಡಿಸಿ ಗಾನದಿಂ ಭರತದಿಂ ಕಾವ್ಯಂಗಳೊಳ್ಪಿಂದೆ ಕಾ |
ಮದ ಸಾರಂಗಳನೆಲ್ಲಮಂ ತಿಳಿದು ಶೃಂಗಾರಾಬ್ಧಿಯೊಳ್ ತೇಂಕುವಂ ||
ಮುದದಿಂದೇಱಿಮೆನುತ್ತಿರುಳ್ ಮುಸುಕಿನೊಳ್ ತಾನಪ್ಪಿ ತತ್ಕಾಯಮಂ |
ಸದನಕ್ಕಾಗಣಿಕಾಶಿರೋಮಣಿ ಕಡಂಗುತ್ತುಬ್ಬಿಳತ್ಯಾಸುವಿಂ ||೪೨||

ಅಂದೊಡಗೊಂಡು ಪೋಗಿ ಮನೆಯಂ ಪೊಕ್ಕಿರ್ದು ನಿಜದಾಸಿಯರಂ ಕರೆದು,

ಕದಮಂ ಪಿಂತಣ್ಗೆ ಬೇಗಂ ತೆಗೆಯಿಮೆನಲೊಡಂ ತಂಗಿ ತಾನಕ್ಕಮೆಂದಾ |
ಕದಮಂ ಸಾರ್ದಂದು ತಾನೇ ತೆಗೆವಳೊಡನಿರ್ದಾತನಂ ಕಂಡು ಸಂತೋ ||
ಷದೆಯುಷ್ಮದ್ದಾಸಿಯಾಗಿರ್ದಪೆನಿದುಮೊದಲೆಂಬಗ್ರಜಾತೋಕ್ತಿಯಂ ಕೇ |
ಳ್ದುಮೇಂ ತ್ವತ್ಕಾರ್ಯಮಲ್ತೇಂ ನುಡಿದಪೆ ಪದೆದಿಂತಕ್ಕ ತಾಯಲ್ತೆ ನೀನುಂ ||

ಇಂತೊಂದುಂ ಬೇಡದೆಲ್ಲಂ ಜಿನದಮೆಮಗೆನುತ್ತಾಕೆ ಶಯ್ಯಾಲಯಂ ಬೊ |
ಕ್ಕಂತಾಱ್ವರಂ ಮಹಾಸಂಭ್ರಮದೊಳಖಿಳಭೋಗೋಪಚಾರಂಗಳಿಂದಂ ||
ಸಂತೈಸುತ್ತಿರ್ದಳಾಕಾಮಿನಿ ಕತಿಪಯಕಾಲಂ ಬೞಿಕ್ಕೊರ್ವಗಲ್ ಭೇ |
ದಂ ತೋರ್ಪಂತೊಂದುಮಾತಂನುಡಿದಳಣುಗೆಯಂ ಕೂರ್ತುತನ್ಮಾತೆ ಬಳ್ಪಿಂ ||

ಧರಣೀಪಾಲಕನಲ್ಲಿಮಂ ವಸನಭೂಷಾರ್ಥಾದಿ ಚಿಹ್ನಂಗಳಂ |
ತರಲೇನಾರ್ಪನೆಯಿಾದರಿದ್ರನೊಳೆ ಕಾಲಕ್ಷೇಪಮಂ ಮಾಡಿಯಾ ||

ಪರಿಯಿಂದೆಂತು ಬರ್ದುಂಕು ಮುಂದೆ ನಡೆಗುಂ ತಾನೆಂದವಳ್ ಕಾಯ್ದುನೀ |
ಳ್ಕರಿಸುತ್ತಾತ್ಮಜೆಯುಂ ಮರ್ಘೂರೆ ಕಡುಲೇಸಾಯಿತ್ತೆಂತು ಮಾಬ್ಬುಜ್ಜುಗಂ ||೪೫||

ಎನುತೆಲೆ ವೈಷ್ಣವ ಮರುಳೇ |
ಧನಮಿನಿತುಂ ಕರದೊಳಿಲ್ಲ ಬಂದಿರ್ದೊಡೆ ನೀಂ ||
ಮನೆಯೊಳ್ ಬರ್ದುಕಪ್ಪುದೆ ಪೋ |
ಗಿನಿತಾನುಂ ತಡೆವಳಲ್ತು ಪೊಱಮಡು ಬೇಗಂ ||೪೬||



ಎಂದು ಪೊಱಮಡಿಸೆ ನಡವೆಗೆ |
ಬಂದಾವೇಂ ಕಜ್ಜಕಾಗಿ ನಿರ್ನೆರಮಿರದೇ ||
ಬಿತ್ತಿಂದೇನೆಸಗಿದೆನಾತಿರು
ನಂದನಕೈಂಕರ್ಯಮುಂ ನಿರಾಕರಿಸೀಗಳ್ ||೪೭||

ಏವೆನಿದೇಕೆ ಬಂದುದಕಟೇಸರಿ ಸಲ್ಲದ ಪಾಪಕೃತ್ಯಮು |
ದ್ಭಾವಿಸಿತೆನ್ನೊಳಾವ ಗತಿಯೀತೆಱನಯ್ಯೊ ಮನೋಭವಾಗ್ನಿದ ||
ಗ್ಧಾವಯವಂಗಿದೇನರಿದೆ ಕೃಷ್ಣಜನಾರ್ದನ ಕೆಟ್ಟೆನೆಂದು ಚಿಂ |
ತಾವನರಾಶಿಯೊಳ್ ಮುಳುಗಿ ದೂಱುವೆನಾಗಿರ್ದನಾರ್ ವಿಚಾರಿಪರ್ ||೪೮||

ಇನಳೆತ್ತಾನೆತ್ತಲೇನಂ ಬಯಸಿದೆನೊ ಮರಲ್ದೋಂಟದಲ್ಲಿರ್ದವಂ ನಾಂ |
ಭವನಕ್ಷೇತ್ರಕ್ಕೆ ಬಂದಳ್ ಮಱಿಗಱಿದುದಿದೇತಕ್ಕವಳ್ ತೋಱಿದೊಡೇಕು |
ದ್ಭವಿಸಿತ್ತೋ ಪ್ರೀತಿಮಾನೇಕಿವಳ್ಗೆ ಕಡುಮರುಳ್ಗೊಂಡೆನಿಂತಪ್ಪ ಕೇಡುಂ |
ತವಿದತ್ತಿಂತೆಲ್ಲಮುಂ ದೈವಘಟನೆಯೆ ಮಲಮೆನ್ನಿಂದೆ ತಾನಪ್ಪುದಿನ್ನೇಂ ||೪೯||

ಇರಲಿಂತಾರಂಗಧಾಮಂ ನಿಜನಿಕಟದ ಪೊಂಬಟ್ಟಲಂ ಕೊಂಡು ತಾನೇ |
ಭರದಿಂದಂ ಬ್ರಹ್ಮಚರ್ಯಾಕೃತಿಯನೆ ತಳೆದಿಯ್ತಂದು ತನ್ಮಾತೆಗಿತ್ತ್ಯಾ ||
ದರದಿಂದಾವಿಪ್ರನೊಳ್ನೀಂ ಮುನಿಯೆ ಕಳುಪಿದಂ ಕೊಳ್ಳೆನುತ್ತೀಯೆ ಸಂತೋ |
ಷರಸಂ ಸ್ಫೈತುವರ್ಗೆ ಬರ್ಕಿಲ್ಲಿಗವರೆನುತವಳ್ ತಾನಿದಿರ್ದಂದು ಕೂರ್ಪಿಂ ||೫೦||

ಆೞ್ವಾರಂ ಕೂರ್ತಿಂತೆಂದಳದೆಂತೆನೆ:—

ಅಪರಾಧಂ ಬಂದುದೆಮ್ಮಿಂ ಕ್ಷಮಿಪುದೆನುತದಭ್ರೋಪಚಾರಂಗಳಂ ಮಾ |
ಡೆ ಪರಾಮರ್ಶೆಯಿಂದಾಗಳಂದಿನಸ್ವಪ್ನದಲಂದೆಯ್ದಿ ಗೇಹಕ್ಕೆ ಕೇಳೀ ||
ನಿಪುಣತ್ವಂ ಪೆರ್ಜೆಯಾಕಾಂತೆಯೊಳರಿಯಿಮವಳಾರಂಗಧಾಮಾರ್ಚಕಂ ಪೂ |
ಜೆಗ ಕಜ್ಜಕ್ಕಾಗಿ ಬಾಗಿಲ್ತೆಗೆದು ಮಿಸುಪ ಪೊಂಬಟ್ಟಲಂ ಕಾಣದಾಗಳ್ ||೫೧||

ಬೆಗಡಿಂದಾಮುದ್ರಾಕ |
ರ್ತೃಗುಸಿರಲವನರ್ಚಕಾದಿಗಳ್ಗರಡಿಯಂ ‖
ನೆಗೞ್ಸುತಿರೆ ತದ್ಘಟಚೇ |
ಟಿ ಗಲಬೆಯಂ ಕೇಳ್ದು ಬಂದು ದೇವಾಲಯದೊಳ್ ‖೫೨‖

ತನಗೆ ಸಖನಾದ ಬಾಣಸಿ |
ಗನನಿದು ತಾನೇನೆನುತ್ತುಮಾಕ್ಷೇಪಿಸೆಯಾ ‖
ತನವಳ್ಗ ತೆಱನೆಲ್ಲಮು |
ನನುವಪ್ಪಿನಮುಸಿರಲವನವಂಗಿಂತೆಂದಳ್ ‖೫೩‖

ಇರುಳೆಮ್ಮಾಲಯಕೊರ್ವ ವೈಷ್ಣವವರಂ ಪೊಂಬಟ್ಟಲಂ ಕೊಂಡು ಬಂ|
ದಿರದಿತ್ತಂ ಪಿಟಕಂಟಕೀವಶದೊಳಲ್ಲಿರ್ಕುಂ ದಲೆಂದಾಡೆ ತಾಂ ‖
ಭರದಿಂ ಕರ್ತೃಗೆ ಪೋಗಿ ಪೇೞಲವನಾಗಳ್ ಭೃತ್ಯರಿಂದಾಕೆಯಂ |
ಪಿರಿದುಂ ಬಾಧಿಸಲಳ್ಕಿಯಾಸುದತಿಯಿತ್ತಾ ಬಟ್ಟಲಂ ಬೇಗದಿಂ ‖೫೪‖

ಮೊದಲೇ ಮದ್ಗೃಹದಿಂದ ನೂಂಕಿದೊಡಮಾ ಪೊಂಬಟ್ಟಲಂ ಕೊಟ್ಟು ದೈ|
ನ್ಯದೆ ಮಾತಾಡಿಸಲಾಗಳೇ ಹೃದಯದೊಳ್ ತೋಱಿತ್ತಿವಂಗೆಲ್ಲಿ ಬಂ ‖
ದುದೊ ತಾನೆಂದುಱೆ ಶಂಕೆಯಿಂದಿದನಿವಂ ತಂದಾತನಿಂದಿಂತು ಬ|
ರ್ಪುದನಾಂ ಬಲ್ಲೆನೆ ಎಂದು ಕೈಗೊಳಿಸಿದಳ್ ಶ್ರೀವೈಷ್ಣವಶ್ರೇಷ್ಠನಂ ‖೫೫‖

ಅಂತೊಪ್ಪಿಸಿ ಬಿಡಲೊಡಂ—

ಅವರಂ ಕೈಸೆಱೆಗೊಂಡು ಬಂದು ನಿಜಭರ್ತಾಂಗೆ ದೂತಾಳಿಯು |
ತ್ಸವದಿಂದೊಪ್ಪಿಸೆ ಕಟ್ಟಿಕೊಂಡಿದನಿವಳ್ಗಂತುಯ್ದು ನೀನಿತ್ತೆ ಪೇೞ್ ‖
ಜವದಿಂ ಹುಯ್ಯೆನಲಾನಿದಂ ತಿಳಿದನಲ್ತೀ ಬಟ್ಟಲಂ ಕಳ್ದನ |
ಲ್ತುವಲಂ ಸ್ವಾಮಿಯೆ ಬಲ್ಲೆನೆನ್ನ ಪೆಸರ್ವೇೞ್ದಿರಿತ್ತರೋ ಕಾಣೆನಾಂ ‖೫೬‖

ಎನಲಿಂ ಸುಮ್ಮನೆ ಪೇೞ್ಗುಮೇ ಇವನವೇಂ ಪಂಚಾಂಗಮಂ ಪೇೞೆಮಾ|
ವಿನ ಪಶ್ ಬೀೞ್ವದೆ ಕೊಲ್ಲಿಮೆಂಬನಿತಱೊಳ್ ರಂಗೇಶನಾರ್ತವ್ರಜಾ ‖
ವನಶೀಲಂ ನಿಜಭಕ್ತವತ್ಸಲತೆಯಿಂದಾವೇಶದೊಳ್ ಬಂದು ಕೊ |
ಟ್ಟನದಂ ಮದ್ಭುಜಕಂಗೆ ಭಕ್ತೆಯಿವಳೆಮ್ಮಾಯಿರ್ವರಂ ಕೋಪದಿಂ ‖೫೭‖

ಕೊಂದೊಡೆ ನೀವೆಮ್ಮಂ ಮಿಗೆ |
ಕೊಂದಿರೆನುತ್ತುಸಿರೆ ಕೇಳ್ದು ಭಯದಿಂದವರಂ ‖

ಬಂಧಿಸಿಯುಪರಾಧಕ್ಷಮೆ |
ಯಂ ದೃಢಮೆನೆ ಪಡೆದು ಮಣಿದನಾಕರ್ತಾರಂ ||೫೮||

ಅಂತು ಮಣಿದನಂತರಂ—

ತಿರುನಂದವನಕೆ ಕಳುಹಿಸ |
ಲುರುತರಸಂತಾಪದಿಂದಿದೇಂ ಬಂದುದೊ ಶ್ರೀ ||
ವರ ನಿನ್ನ ಮಾಯೆಯಿದು ತಾಂ |
ದುರತ್ಯಯಂ ಮಾಱಲೆನ್ನಳವೆ ಎನುತಾಗಳ್ ||೫೯||

ಅತಿವೈರಾಗ್ಯದೆ ರಂಗನಾಯಕನ ಸತ್ಕೈಂಕರ್ಯತಾತ್ಪರ್ಯಸಂ |
ಗತರಾಗಿರ್ದೊಲವಿಂ ತಿರುಪ್ಪಳ್ಳಿಯೆೞುಚ್ಚಿಯೆಂದು ಪಾಟ್ಟಂ ವಿರಾ ||
ಜಿತಮಪ್ಪಂತೆ ಪ್ರಬಂಧಮಾಗಿ ತಿರುಮಾಲಾನಾಮದಿಂ ಮಾಡಿ ಶ್ರೀ |
ಪತಿಯಂ ಸನ್ನುತರಾಗಿ ಭಕ್ತಿರಸಪಾಥೋರಾಶಿಯೊಳ್ ತೇಂಕಿದರ್ ||೬೦||

ಕತಿಪಯದಿನಮಿಂತಿರ್ದ |
ಚ್ಯುತಧಾಮಕೆ ಸಾರ್ದರವರಘಾಸಹಮಪ್ಪ ||
ನ್ನತಚರಿತೆಯನಿದನಾವಂ |
ಸತತಂ ಲಾಲಿಸುಗುಮವನ ಜನ್ಮಮೆ ಸಫಲಂ ||೬೧||

ಮತ್ತಮಿತ್ತಲ್ ಕೆಲವು ದಿನದ ಮೇಲೆ—

ಜ್ಞಾನೋದಯದಿಂದಾವೇ |
ಶ್ಯಾನಾರಿಯುಮರ್ಜಿತಾಖಿಲಮನರ್ಪಿಸಿ ಲ ||
ಕ್ಷ್ಮೀನಿಲಯಂಗವಳೆಯ್ದಿದ |
ಳಾನಂದದೆ ವಿಷ್ಣುಲೋಕಮಂ ಪೊಗೞ್ಗೆ ಜನಂ ||೬೨||

|| ಗದ್ಯಂ ||

ಇದು ನಮಿತಹಿಮಕರಚೂಡ ಕಮಲಭವಮುಖಸುರಸಮುದಯ ಮೌಳಿಮಣಿಗಣಘೃಣಿ ಸಂಧ್ಯಾರಾಗಾನುಗುಣಪ್ರಚುರರುಚಿತಾರಕಾಯಮಾನ ರಂಗವಿಭುಚರಣಯುಗಳನಖಮಯೂಖಸುಧಾಪೂರ ವಿಹಾರಮದಮರಾಳೀಕೃತ ಮಹಿಸೂರವರಸಾಮ್ರಾಜ್ಯಸಂಪನ್ನ ರಾಜಾಧಿರಾಜ ರಾಜಪರಮೇಶ್ವರಾಪ್ರತಿಮ ಪ್ರೌಢಪ್ರತಾಪ ಬಿರುದಂತೆಂಬರಗಂಡ ಯದುಕುಲನಳಿನದಿನಕರರಾದ ಶ್ರೀ ಚಿಕದೇವರಾಯಮಹಾರಾಜ ಪ್ರಸಾದಪರಿಪೂರ್ಣ ಸಚಿವನಿಚಯತಿಲಕ ಶ್ರೀಚಿಕುಪಾಧ್ಯಾಯವಿರಚಿತಮಪ್ಪ ದಿವ್ಯಸೂರಿಚರಿತ್ರಮಹಾಪ್ರಬಂಧದೊಳ್ ವೈಜಯಂತ್ಯಂಶೋದ್ಭೂತರಾದ ತೊಂಡರಡಿಪ್ಪೊಡಿಯಾೞ್ವಾರ ವೈಭವಂ ಸಪ್ತಮಾಶ್ವಾಸಂ ಸಂಪೂರ್ಣಂ.

|| ಮಂಗಳಂ ಮಹತ್ ಶ್ರೀ ||

## —ಅಷ್ಟಮಾಶ್ವಾಸಂ—

ಶ್ರೀನವಯೌವನರುಚಿರೋ |
ದ್ಯಾನಕ್ರೀಡಾವಿಲಾಸಿ ರಾಜಶುಕಂ ನಿ ||
ತ್ಯಾನಂದಂ ಮುನಿವಾಹ |
ಜ್ಞಾನಪ್ರದನೀಗೆ ರಂಗವಿಭುವೆನಗೊಲವಂ ||೧||

ವಿಲಸತ್ಕಾರ್ತಿಕಮಾಸ ರೋಹಿಣಿಯೊಳಾಕಾವೇರಿಪರ್ಯಂತೋರ್ವಿಮಂ|
ಡಲದೊಳ್ತಾಂ ನಿಚುಳಾಭಿಧೇಯದೊಱೆಯೂರೆಂಬಾ ಮಹಾಗ್ರಾಮದೊಳ್||
ನಲವಿಂತಂತ್ಯಜರಲ್ಲಿ ಜನ್ಮಿಸಿ ತಿರುಪ್ಪಾಣಾಳ್ವೆಯಾಳ್ವಾರ್ ಸಮು |
ಜ್ಜ್ವಲಸಂಗೀತರಸಾತಿತತ್ಪರತೆಯಿಂದಿರ್ದಾವಗಂ ಮೋದದಿಂ ||೨||

ಭಗವದ್ದಿವ್ಯಮಹಾಗುಣಾನುಭವದೊಳ್ ತಾತ್ಪರ್ಯಮಂ ತಾಳ್ದು ಶ್ರೀ |
ಭಗವಚ್ಚಾರುಕಟಾಕ್ಷದಿಂ ಪಡೆದು ತಾಂ ವೈರಾಗ್ಯಮಂ ಪೂರ್ವದೊಳ್ ||
ಸೊಗಸಿಂ ಕೈಶಿಕಿಯಿರ್ದವೋಲ್ ಭಗವದುದ್ಯದ್ಧೃ*ದ್ಯಸಂಗೀತಪಾ |
ರಗಕೈಂಕರ್ಯದೊಳೊಂದಿ ನೈನೆಗಬ್ಬೂರಾಯಾಚಾರ್ಯರ್ ಮಹಾನಂದದಿಂ ||೩||

ಅಂತು ಗಾನಕೈಂಕರ್ಯತತ್ಪರರಾಗಿ ತಿರುಮುಕತ್ತುಱೈಯೆಂಬ ಕಾವೇರೀತೀರಕ್ಕೆ ಬಂದು—

ಇದಿರಪ್ಪಂತಿರೆ ನಿಂದು ದೂರದೊಳೆ ರಂಗಕ್ಷೇತ್ರಮಂ ಮೆಟ್ಟಲಾ |
ಗದೆನುತ್ತುಂ ಪ್ರತಿವಾಸರಂ ಬಿಡದೆ ಗಾನಂಗೆಯ್ದು ತಾತ್ಪರ್ಯದಿಂ ||
ದದನೊಲ್ದಾಲಿಸುತಿರ್ದರೊಂದು ದಿನಮಾಶ್ರೀರಂಗನಾಚ್ಚಾರ್ ವಿನೋ |
ದದಿನೇಂ ನಿಮ್ಮಯ ಚಿತ್ತವೃತ್ತಿಯಿತರವ್ಯಾಪಾರದೊಳ್ ಮಗ್ಗತೋ ||೪||

ಆರಯಲೆನ್ನೊಳದೇಂ ಶೃಂ |
ಗಾರಾದಿಗಳಲ್ಲಿ ತತ್ಪರತೆಯಿಲ್ಲೆನಲಾ ||
ಶ್ರೀರಂಗನಾಯಕಂ ನಗು |
ತಾರಮಣಿಗೆ ಪ್ರೀತಿಪೂರ್ವಕಂ ಸೊಲ್ಲಿಸಿದಂ ||೫||

ಸತಿ ಕೇಳ್ ಪೂರ್ವದೊಳೆಮ್ಮ ಭಕ್ತನೆನಿಪಾಭೀಷ್ಟಂ ಮಹಾಬಾಣನಂ |
ತತಿಕೃತ್ತಲ್ಪದೊಳರ್ಪವೇಳೆಯೊಳದೆಂತೀ ಚಿತ್ತಮಿರ್ದತ್ತು ತ ||
ದ್ಗತಮಾಗೀಗಳುಮಂತೆ ಗಾಯಕವರಂ ಮದ್ಭಕ್ತನೊರ್ವಂ ಸುಖೋ |
ನ್ನತಿಯಿಂ ನಿಂದಿದಿರಾಗಿ ಸಹ್ಯಜೆಗೆ ತೆಂಕಲ್ ಗಾನಮಂ ಪಾಡುತುಂ ||೬||

ಅವನೊಳ್ ಮಸ್ಮನಮಿರ್ಕುವಮಾಲಿಸೆನಲಾಶ್ರೀರಂಗನಾಚ್ಚಾರ್ ಜಗ ।
ದ್ಧವ ಕೇಳ್ ಶಾದ್ರಶಭಕ್ತನೆಮ್ಮ ಬಳಿಯೊಳ್ ಸಂಗೀತಕೈಂಕರ್ಯದು ॥
ತ್ಸವಮಂ ಮಾಡುತೆ ನಿಚ್ಚಲುಂ ಪಡೆದಿರಲ್ ವೇಳ್ಕುಂದೊಡೀಕ್ಷೇತ್ರಮಂ ।
ಯುವತೀ ಮೆಟ್ಟುವನಲ್ತು ತಾನೆನಲಪರ್ಕಿಂತೆಂದು ಮಾತಾಡಿದಳ್ ॥೭॥

ಅವನೆಂತಾನೊಡಮಿಲ್ಲಿಗತ್ತಿತ ಬರಲ್ವೇಳ್ಕುಂದು ನಿರ್ಬಂಧಿಪಾ ।
ಯುವತೀಪ್ರೇಮಸಿಮಿತ್ತಮಾಗಿಯಧಿಕಾರಿಸ್ವಪ್ನದೊಳ್ ಸಪ್ಯಸಂ ॥
ಭವೆಯಾ ದಕ್ಷಿಣಶೀರದೊಳ್ ವಿಪುಲಗಾನಾಸಕ್ತಿಯಿಂ ಭಕ್ತನೆ ।
ಮ್ಮವಸಿರ್ಕುಂ ಸಕಲೋಪಚಾರಸಹಿತಂ ನೀಮಾತನಂ ಬೇಗದಿಂ ॥೮॥

ಕರೆದೊಡಗೊಂಡು ಬರ್ಪುದೆಸೆ ರಂಗವಿಭೂಕ್ತಿಯನಾಲಿಸುತ್ತವಂ ।
ಪರಿಕರಮೆಲ್ಲಮುಂ ಬೆರಸು ತನ್ನಿಕ್ಕಟಕ್ಕೊಡನೆಯ್ದಿ ಯಾತನೀ ॥
ಪರಿಕರಮುಂ ನಿರೀಕ್ಷಿಸಿರಲಾಗದೆಸುತ್ತಿರದೋಡಿ ಪೋಗೆ ಸಾ ।
ದರವಿನಯಾತನಂ ಕರೆದು ಸೊಲ್ಲಿಸಿದರ್ ಹರಿ ಪೇಳ್ದ ರೀತಿಯಂ ॥೯॥

ಅದಱಿಂ ಬಾರೆನಲೀದೇ ।
ಪದೊಳಾಕ್ಷೇತ್ರಮನೆ ಮೆಟ್ಟೆನಾಂ ನೀಮೆಲ್ಲರ್ ॥
ಪಡೆದೆಯಿದ್ದೆಂದುಸಿರೆಯುವ ।
ರಿದಸಾಧ್ಯಮೆನುತ್ತೆ ತಿರಿಗಿಯೂರ್ಗೆಯ್ತಂದರ್ ॥೧೦॥

ಅಂತೆಯ್ತಂದಾಲಕ್ಷ್ಮೀ ।
ಕಾಂತಶ್ರೀರಂಗವಿಭುಗೆ ಬಿನ್ನವಿಸಲದಂ ॥
ತಾಂ ತವೆ ಕೇಳ್ದಾಳೋಚಿಸಿ ।
ಯೆಂತಾನುಂ ಬರ್ಪ ತೆಱನದೆಸಗಲ್ವೇಳ್ಕುಂ ॥೧೧॥

ಎಂದಾರಾತ್ರಿಯೊಳ್ ಚೆಂಗೋಲ್‌ಕರ್ತ್ರುವಾದ ತ್ರಿಲೋಕಸಾರಂಗಮಹಾಮುನಿಯೆಂಬ ಜೀಯರ ಕನಸಿನೊಳ್ ಬಂದು ರಂಗಧಾಮನಿಂತೆಂದ ನದೆಂತೆನೆ :—

ಮುನಿ ಕಾವೇರಿಗೆ ತೆಂಕಲೆಮ್ಮ ನಿಜಭಕ್ತಂ ಗಾನಮಂ ಮಾಳ್ಪನಾ ।
ತನುಮಿಾಕ್ಷೇತ್ರಮನೆಂದು ಮೆಟ್ಟನದಱಿಂ ಪೋಗಿಂಗಳೀ ನಿಮ್ಮ ತೋ ॥
ಳಿನ ಮೇಲಾಂತೊಡಗೊಂಡು ಸನ್ನಿಧಿಗೆ ಬೇಗಂ ಬರ್ಪುದೆಂದಾಡಲಾ ।
ಕನಸಂ ವಿಸ್ಮಯಮೆಂದು ತಾಂ ಪರಮಹರ್ಷಂಬೆತ್ತವರ್ ಶೀಘ್ರದಿಂ ॥೧೨॥

ದಕ್ಷಿಣಕಾವೇರಿಗೆ ಬಂ |
ದಾಕ್ಷಣದೊಳ್ ನಿತ್ಯಕರ್ಮವಿಧಿಯಂ ನೆಗಳ್ದಾ* ‖
ಸಕ್ಷಮರಾಭಾಗವತ ಸ |
ಮಾಕ್ಷಮುಮಂ ಸಾರ್ದು ನೋಡುತಿರ್ದುದುಮಾಗಳ್ ‖೧೩‖

ಭಗವದ್ಗುಣಾನುಭವದಿಂ |
ವಿಗತೇಹಂ ಪರವಶತೆಯೊಳಾಭಾಗವತಂ ‖
ಸೊಗಯಿಸೆ ಸಮಯಮಿದೆಂದಿವ |
ರಗಿಯದೆ ತತ್ಪಾದಯುಗ್ಮಮಂ ಪಿಡಿದೊಲವಿಂ ‖೧೪‖

ನಳಿತೋಳೊಳಾಂತು ತರುತಿರೆ |
ತಿಳಿದಾತಂ ಸುಗಿದು ತಾಂ ನಿರಂಕುಶಮಪ್ಪ ‖
ಜ್ವಳಿತಸ್ವತಂತ್ರಮುಳ್ಳಂ |
ಗಳವಿಂ ಪರತಂತ್ರನಾದನಾಂ ಮಾಳ್ಪುದೇಂ ‖೧೫‖

ಎನುತುಂ ಸ್ವವಸ್ತುವಂ ನಿಜ |
ಮನವೊಲ್ದಂತೆಸಗುಗೆಂದು ವಿನ್ಯಸ್ತಭರಂ ‖
ಗನುಮಾಗಿರೆಯಿವರಾತನ |
ನನುನಯದಿಂ ಪೊತ್ತು ತಂದು ದೇವಾಲಯಮಂ ‖೧೬‖

ಪುಗುತುಂ ನಾಲ್ದೆಸೆಯಲ್ಲಿ ಹೇಮಕಲಶದ್ಯೋತಿಸ್ಫುರದ್ಗೋಪುರಾ |
ದಿಗಳಂ ನೋಡುತೆ ರಂಜಿಸಾವರಣವೇಳ್ವಾಗಿಲ್ಗಳಂ ದಾಂಟ ನ ‖
ಲ್ಯೋಗರಿಂದೊಪ್ಪುವ ರಂಗಮಂಟಪಮುಮಂ ಪಿಂದಿಕ್ಕಿಯಾಮೋದನಾ |
ಮಗುರುಸ್ತಂಭದುಪಾಂತದಲ್ಲಿಳಿಪಿದರ್ ತಾಮಾತನಂ ಹರ್ಷದಿಂ ‖೧೭‖

ಅಂತಿಳಿಪಲೊಡಮಿವರ್ ಸ್ತಂಭಯನೆಂತು ತಾಯ ಇತರ ಅವಯವಂಗಳನುಳಿದು ಸ್ತನಕ್ಕೆಳಗುವಂತೆ ತನಗೆ ರಕ್ಷಕನಾದ ಸ್ವಾಮಿಯ ಶ್ರೀಪಾದಕ್ಕೆ ದಂಡಪ್ರಣಾಮಮುಮಂ ಸಮರ್ಪಿಸಿ—

ಅರುಣಾಂಭೋರುಹಪಾದನಂ ಭಜಕಚೇತಸ್ತಾಪಹೃಚ್ಚಂದ್ರಿಕಾ |
ಸ್ಫುರಿತೋದ್ಯನ್ನಖನಂ ಮನೋಭವನಿಷಂಗಾಕಾರಭಿಜ್ಜಂಘನಂ ‖
ಕರಿಶುಂಡಾಭಶುಭೋರುವಂ ಪೃಥುನಿತಂಬದ್ವಂದ್ವನಂ ನಿಮ್ನಭಾ |
ಸುರನಾಭೀಪುಟನಂ ವಳಿತ್ರಯವಿರಾಜತ್ಕುಕ್ಷಿಯಂ ನೋಡಿದಂ ‖೧೮‖

ಘನವಕ್ಷಸ್ಥಳನಂ ಸುಕಂಬುಗಲನಂ ಬಿಂಬೋಷ್ಠನಂ ಕುಂದದಂ |
ತನನುದ್ಯತ್ಪರಿಫುಲ್ಲಚಂಪಕಸುಮಾಭಘ್ರಾಣನಂ ಚಾರುಗಂ ||
ಡನನಂಭೋಜದಳಾಕ್ಷನಂ ಮದನಚಾಪಭ್ರೂಲತಾಯುಗ್ಮನಂ |
ಮಿನುಗುತ್ತಿರ್ಪ ಕಿರೀಟಕುಂಡಲಮುಖಾಲಂಕಾರರಮ್ಯಾಂಗನಂ ||೧೯||

ಮೋದದಿನೀಕ್ಷಿಸುತಿಂತು ಪ |
ದಾದಿಶಿರಂಬರೆಗಮನುಭವೋನ್ನತಿಗಮಲಾ ||
ನಾದಿಪಿರಾನೆಂದೆಂಬೀ |
ರೈದುಂ ಪದ್ಯಾನ್ವಿತಪ್ರಬಂಧಮನುಸಿರ್ದಂ ||೨೦||

ಬಳಿಕರ್ಚಕಾದಿಜನಸಂ |
ಕುಳಮೀಕ್ಷಿಸುತಿರೆಯುವರ್ಗೆ ಕಾಣಿಸದಿರ್ಪಂ ||
ತೊಳಪೊಕ್ಕು ರಂಗವಿಭುಮಂ |
ಜುಳತರಪಾದಾಂಬುರುಹದೊಳೈಕ್ಯತೆವೆತ್ತಂ ||೨೧||

ಸಾರತರದ ತಿರುಪಾಣಾ |
ಳ್ವಾರಿಂತೀವೈಮೆವೆತ್ತ ಚಾರಿತ್ರಮನಾ ||
ರಾರಯ್ದಾಲಿಕುಮವರಾ |
ನಾರಾಯಣಸುಪ್ರಸಾದಮಂ ದಲ್ ಪಡೆಗುಂ ||೨೨||

|| ಗದ್ಯಂ ||

ಇದು ನಮಿತಹಿಮಕರಚೂಡಕಮಲಭವಮುಖಸುರಸಮುದಯಮೌಳಿಮಣಿಗಣಘೃಣಿಸಂಧ್ಯಾರಾಗಾನುಗುಣಪ್ರಚುರರುಚಿತಾರಕಾಯಮಾನ ರಂಗವಿಭುಚರಣಯುಗಳನಖಮಯೂಖಸುಧಾಪೂರವಿಶಾರಮದಮರಾಳೀಕೃತ ಮಹಿಷಪುರವರಸಾಮ್ರಾಜ್ಯಸಂಪನ್ನ ರಾಜಾಧಿರಾಜರಾಜಪರಮೇಶ್ವರಾಪ್ರತಿಮಪ್ರೌಢಪ್ರತಾಪ ಬಿರುದಂತೆಂಬರಗಂಡ ಯದುಕುಲಸಳಿನದಿನಕರರಾದ ಶ್ರೀಚಿಕದೇವರಾಯಮಹಾರಾಜಪ್ರಸಾದಪರಿಪೂರ್ಣ ಸಚಿವಸಿಚಯತಿಲಕ ಶ್ರೀಚಿಕುಪಾಧ್ಯಾಯ ವಿರಚಿತಮಪ್ಪ ದಿವ್ಯಸೂರಿಚರಿತ್ರ ಮಹಾಪ್ರಬಂಧದೊಳ್ ತಿರುಪ್ಪಾಣಾಳ್ವಾರವರ ವೈಭವಂ ಅಷ್ಟಮಾಶ್ವಾಸಂ ಸಂಪೂರ್ಣಂ.

|| ಮಂಗಳಂ ಮಹತ್ ಶ್ರೀ ||



## —ನವಮಾಶ್ವಾಸಂ—

ಶ್ರೀರಮಣೀಕೇಕರರುಚಿ ।
ಸಾರತಟದ್ದರ್ಶನಾತಿಹೃಷ್ಟಮಯೂರಂ ॥
ಧೀರಪರಕಾಲಮುಕ್ತಿದ ।
ನಾರ್ಯೆದೀಗೆಮಗೆ ಸೌಖ್ಯಮಂ ರಂಗೇಶಂ ॥೧॥

ವಿಮಲಶ್ರೀಕರಶಾರ್ಙ್ಗದಂಶದೊಳೆ ಕಾವೇರೀಪಯೋರಾಶಿಸಂ ।
ಗಮಚೋಳಾವನಿಯೊಳ್ ತಿರುಕ್ಕುರೈಯಲೂರೊಳ್ ಶೂದ್ರವರ್ಣೋತ್ತ
ಮೋ॥ತ್ತಮನಾದಾನೆಲದಾಣ್ಮನಾವಸಥದೊಳ್ ಶ್ರೀಮಂಗೆಯಾಳ್ವಾರ್ಸಸಂ ॥
ಭ್ರಮವಾವಿರ್ಭವರಾಗಿ ತಾಂ ಬಳೆಯುತಿರ್ದರ್ ಚಂದ್ರಮೋಲ್ಲೇಖೆವೊಲ್॥

ಅಂತು ಬಳೆವ ಸಮಯದೊಳಾಗುಣಕಾರಂ ಸಂತೋಷಯುಕ್ತನಾಗಿ,

ಸುತನಂ ನೀಲನಿಱತ್ತನೆಂಬ ಪೆಸರಿಂ ನಾಮೋತ್ಸವಂಗೆಯ್ಯಲ ।
ಪ್ರತಿಮರ್ ಯೌವನಕಾಲದೊಳ್ ಸಕಲವಿದ್ಯಾಸಂಗಳಂ ಮಾಡಿಯು ॥
ದ್ಧತಶೌರ್ಯಂಬಡೆದೊಪ್ಪುತಂತಿರೆ ಪಿತಂ ಪಂಚತ್ವಮಂ ಪೊರ್ದೆ ತ ।
ತ್ಕ್ಷಿತಿಭರ್ತೃತ್ವಕೆ ತಾಮೆ ಸನ್ನಿಹಿತರಾದರ್ ನೀತಿಧರ್ಮಂಗಳಂ ॥೨॥

ಆದೇಶಾಧಿಸನಾದ ಚೋಳನೃಪನಂ ಕಂಡೋಲಗಂಗೊಂಡು ತಾ ।
ಮಾದೇಶಾವನಕರ್ಥಕಂ ಗುಣತನಂಜೆತ್ತಾಮಹಾರಾಜನಿಂ ॥
ಭೇದಂದೋಱದ ಪಾಂಗಿನಿಂ ನಡೆಮ ರಾಜದ್ರವ್ಯಮಂ ತೆತ್ತುಕೊಂ ।
ಡಾದಂ ಸಂತಸದಿಂದವರ್ ಕೆಲವು ಸೇನಾಸಾಧನಂ ಮಾಡಿದರ್ ॥೩॥

ಇಂತು ಸಾಧನಂಗೆಯ್ಯು ಸುಖದಿನಿರ್ದ ಕಾಲದೊಳ್,

ಪುರಿಗಭ್ಯರ್ಣದ ತಿರುವಾಲ್ ।
ತಿರುನಗರಿಯ ರಂಗನಾಥನಮಳಕಟಾಕ್ಷ ॥
ಸ್ಫುರಣೆಯನಿವರೊಳೆಸಗಿ ನಿಜ ।
ತರುಣಿಯನೊಲವಿಂದೆ ಕರೆದು ತಾನಿಂತೆಂದಂ ॥೪॥

ಸುದತೀ ನೀನಿವರಂ ಕಟಾಕ್ಷದೊದವಿಂದುಜ್ಜೀವಿಸಲ್ವೇಱ್ಕುಮೆಂ ।
ಬುದನೊಲ್ದಾಲಿಸಿ ದೇವಿಯರ್ ನಿಜಕಟಾಕ್ಷಾಧಿಕ್ಯದಿಂದಪ್ಸರೋ ॥
ಮದವತ್ಯಂಶದೆ ಪುಟ್ಟಿಯೊಂದುದಿನಮಂಬುಕ್ರೀಡೆಗೆಂದಿಂದ್ರಲೋ ।
ಕದಿನೆಯ್ತಂದಮರೀಜನಾಳಿ ತಿರುವಳ್ಳಿಕ್ಕೋಳಮೆಂಬಾಖ್ಯೆಯಂ ॥೬॥

ತಳೆದಾಶ್ವೇತಸರಸ್ಸಿನೊ |
ಳೆಳಸಿ ಸರೋಜಾತಹಲ್ಲಕೋತ್ಪಲಮುಖಮಂ ||
ಜುಳಪುಷ್ಪಜಾತಿಯುಂ ತಿಱಿ |
ದಳವಡಿಕೆಯೊಳಂಬುಕೇಳಿಗೆಯ್ದುವನಿತಱೊಳ್ ||೭||

ವ|| ತಿರುನಾಂಗೂರ ತಿರುತೊತ್ತೀವನಾರುತೋಕೆಯೆಂಬ ಸ್ಥಲದಿಂದೊರ್ವ ವೈದ್ಯನಾದ ವೈಷ್ಣವನಾಶ್ವೇತಸರಸ್ಸಿಗೆ ಸ್ನಾನಾರ್ಥವಾಗಿ ಪೋಗೆ,

ಅವರೀವೈಷ್ಣವರಂ ನಿರೀಕ್ಷಿಸುತುಮಂತರ್ಧಾನಮಂ ಪೊರ್ದೆಯಾ |
ಯುವತೀಸಂಘದೊಳೊರ್ವೆಯುತ್ಪಲದ ಪೂವಂ ಕೆಯ್ಯೊಳಾಂತೊಲ್ದು ಸೋ||
ತ್ತವಮುಜ್ಜೀವಿಸವೇಱ್ಕುತ್ತಿರೆ ಕರಂ ತಿರ್ನಂಗೆಯಾಶ್ಚರ್ಯರಸಂ|
ತವಳ್ ನೋಡಿಯುಪುತ್ರನಾದ ಬಗೆಯಿಂದೀವೈಷ್ಣವಾಗ್ರೇಸರಂ ||೮||

ಅತಿಸಂತೋಷದಿನೆತ್ತಿಕೊಂಡು ನಿಜಗೇಹಕ್ಕೆಯ್ದಿಯಾಕನ್ನೆಯಂ |
ಸತಿಗಿತ್ತಾತ್ಮಜೆಯೊರ್ಬಳಂ ಕರುಣದಿಂ ಸರ್ವೇಶನೇ ಕೊಟ್ಟನಾ ||
ಪ್ರತಿಕನ್ಯಾಮಣಿಯಂ ಸ್ವಗರ್ಭಭರೆಯೆಂದಾರಯ್ದು ಸುಸ್ನೇಹದಿಂ |
ಸತತಂ ಪಾಲಿಸುಪೇಕ್ಷೆಗೆಯ್ಯದೆನುತುಂ ಪೇೞ್ದಾಗಳಾವೈಷ್ಣವಂ ||೯||

ಕುಮುದಕರೆಯಾದ ಕತದಿಂ |
ದಮರಿಸಿದಂ ಕುಮುದವಲ್ಲಿಯಾರೆಂಬಭಿಧಾ ||
ನಮನಾಕೆಗೆ ರತ್ನಾವಳಿ |
ರಮಣೀಯಾಭರಣೆ ಬಳೆವ ಸಮನಂತರದೊಳ್ ||೧೦||

ಅಳಿನೀಲಾಳಕೆ ಪೂರ್ಣಚಂದ್ರಮುಖಿ ಫುಲ್ಲಾಬ್ಜಾಕ್ಷಿ ಚಾಂಪೇಯಮಂ|
ಜುಳನಾಸಾಪುಟೆ ಕುಂದದಂತೆ ವಿಲಸದ್ಬಿಂಬೋಷ್ಠಿ ಮಂದಸ್ಮಿತೋ ||
ಜ್ಜ್ವಳೆ ಕಂಬೂಪಮಕಂಠೆ ಹೇಮರುಚಿ ಸಿಂಹೀಮಧ್ಯೆ ರಂಭೋರು ಸ |
ತ್ಪುಳಿನಶ್ರೋಣಿ ಶುಕೀಸುವಾಣಿಯತಿಸೌಂದರ್ಯಾಂಗಿ ಕಣ್ಗೊಪ್ಪಿದಳ್ ||೧೧||

ಪರಿಣಯಕಾಲೋಚಿತೆಯಾ |
ಗಿರಲೊಡವಾಪುರದ ತಳವರರ್ ಕಂಡೀಗುಂ ||
ದರಿಯುಂ ತಮ್ಮೊಡೆಯಂಗೀ |
ತರಳಾಕ್ಷಿಯ ರೂಪಗುಣವಿಶೇಷದೆ ತಕ್ಕಳ್ ||೧೨||

ಎನುತಾನೀಲನಿಜತ್ತರೆಂಬವನಿಪಾಭ್ಯರ್ಣಕ್ಕವರ್ ಪೋಗಿ ಯೌ ।
ವನದಿಂ ಕಾಮುಕನಾದ ಕಾರಣದಿನೊರ್ವುರ್ವೀಸುರಾಗಾರದೊಳ್ ॥
ಘನಲಾವಣ್ಯಜಿತಾಮರಾಂಗನೆಯದೊರ್ವಳ್ ಕನ್ನೆಯಿರ್ಪಳ್ ಪರಾ ।
ಕೆಲನಾವೈದ್ಯನ ಗೇಹಕಾಧರಣಿಪಂ ಪೋದಂ ಮಹೋಲ್ಲಾಸದಿಂ ॥೧೩॥

ಅಂತು ಪೋಗಲೊಡಮಾಬೆಜ್ಜಂ ಭೂಮಿಪಾಲನೆಯ್ತರ್ಪುದನಾಲಿಸಿ ;

ಇದಿ*ರ್ಗೊಂಡಾನೃಪನಂ ಕಡಂಗುತೊಳಗಣ್ಗೊಲ್ದುಯ್ದುರಾಜೋಪಚಾ।
ರದೆ ಸನ್ಮಾನಿಸಲಾಗಳಾಳಿಯರ ಕೂಡಿರ್ಪಾಕೆಯುಂ ಕಂಡು ಮೋ ॥
ಹದ ಪೆಂಪಿಂ ಕರೆದಾಭಿಷಗ್ವರನನೀಪೆಣ್ಣೆತ್ತಣಿಂ ಬಂದು ಸಾ ।
ರ್ದುದು ತಾನೆಂತೆನೆ ಭೂವರಂಗುಸಿರ್ದನಾವೈದ್ಯಂ ಯಥಾರ್ಥಂಗಳಂ ॥೧೪॥

ಅದನಾಕರ್ಣಿಸುತಾನೃಪಂ ಭಿಷಜ ಕೇಳೀಪೆಣ್ ಭವದ್ವಂಶಮು ।
ಲ್ಲದ ಪಕ್ಷಂ ಪದೆದಿಂದು ನೀನೆನಗೆ ಕನ್ಯಾದಾನಮಂ ಮಾಡು ಪ್ರೇ ॥
ಮದಿನಾನುಂ ಬಹುಮಾನಮಂ ನೆಗಳ್ವೆನೆಂದಾಭೂಧವಂಗೀಗಳೀ ।
ಯದೊಡಿನ್ನಪ್ಪುದು ಪ್ರತ್ಯವಾಯಮೆನುತಾದಂ ಯೋಚನಾತತ್ಪರಂ ॥೧೫॥

ಅಂತು ಮನದೊಳ್ ಯೋಚಿಸಿ—

ಕರೆದೂರುಸ್ಥಲವಲ್ಲಿ ಕುಳ್ಳಿರಿಸಿಕೊಂಡಾಕನ್ನೆಯಂ ಪುತ್ರಿ ನೀಂ ।
ವರಿಸೀಭೂಪನನೆಂದೊಡೆಮ್ಮವೊಲಿವರ್ ತಾನುಲ್ತು ಶ್ರೀವೈಷ್ಣವರ್ ॥
ಪರಮಶ್ಲಾಘಿತೆಯಿಂದೆ ಸಂದ ಭಗವತ್ಸಂಬಂಧಮಂ ಮಾಡಿಯೊ ।
ಪ್ಪಿರೆಯೂರ್ಧ್ವಾಕೃತಿಪುಂಡ್ರರಮ್ಯತುಲಸೀದಾಮಂಗಳಿಂ ಸಂತತಂ ॥೧೬॥

ನಯದಿಂದೆ ಪಂಚಸಂಸ್ಕಾ ।
ರಯುಕ್ತಮಾದೊಡೆ ವಿವಾಹಮಾಪೆನೆನಲಾ ॥
ಕೆಯ ನುಡಿ ತಚ್ಛ್ರುತಿಗಮೃತೋ ।
ದಯಮಾದುದು ಮೊದಲವಳ್ಗೆ ಮೋಹಿಸಿದುದಱಿಂ ॥೧೭॥

ಮತ್ತಂ ಪ್ರೇಮವಿಶೇಷದಿ ।
ನುತ್ತಮವೈಷ್ಣವನುತಪ್ರವರ್ತಕನಪ್ಪಿಂ ॥
ಚಿತ್ತದೊಳಂತೆಂದಾನಿಜ ।
ಪತ್ತನಮಂ ಪೊಱಮಡಲ್ ಸಮುದ್ಯತನಾದಂ ॥೧೮॥

ಅಂತು ನಿರ್ಗಮಿಸಿ ಪೋಗಿ,

ತಿರುನಱೆಯೂರ ನಂಬಿಯ ಸಮೀಪದೊಳರ್ಚಕನಿಂದೆ ಪಂಚಸಂ |
ಸ್ಕರಣೆಯನಾಂತು ರಂಜಿಸುವ ಪನ್ನೆರಡೂರ್ಧ್ವಲಲಾಮವೈಭವ ||
ಸ್ಫುರಿತಶರೀರನಾಗಿ ಗಳದೊಳ್ ತುಲಸೀಸ್ರಜಮಂ ತಗುಳ್ಚಿಯಾ |
ಧರಣಿಪನಾಭಿಷಗ್ವರನ ಗೇಹಕೆ ಬಂದನಯಃಪ್ರವೃದ್ಧಿಯಿಂ ||೧೯||

ಬರಲೊಡಮಾಕೆಯಾ ನೃಪನ ವೈಷ್ಣವಚಿಹ್ನೆಯನೆಯ್ದೆ ನೋಡಿಯಾಂ |
ಪರಿಣಯಮಪ್ಪೆನಿನ್ನೆನಲೊಡಂ ಪರಮೋತ್ಸವದಿಂದಮಾವಸುಂ ||
ಧರೆಯಧಿಪಂಗೆ ತಾನೆಱೆಯೆ ಧಾರೆಯನಾಕೆಯನಗ್ನಿಸಾಕ್ಷಿಯಿಂ |
ದರಸನತಿಪ್ರಹೃಷ್ಟನೊಸೆದಾತ್ಮಗೃಹಕ್ಕೊಡನುಯ್ದು ಭಾರ್ಯೆಯಂ ||೨೦||

ಬಡರಿಸಿ ಗೃಹಪ್ರವೇಶಮ |
ನಡಿಗಡಿಗೀಕ್ಷಿಸುತುಮವಳ ಚೆಲ್ವಂ ಮುದಮಂ ||
ಪಡೆದಿರೆ ಯೌವನದೊಳ್ಪೊಡ |
ನೊಡನುರ್ವಿದುದವಳ್ಗೆ* ಬಣ್ಣಿಸಲ್ಕನ್ನಳವೇ ||೨೧||

ತನು ಸೊಂಪೇಱಿದುದಕ್ಷಿ ಮಿಂಚಿದುದು ಬಿಣ್ಪೇಱಿತ್ತು ರೋಜದ್ವಯಂ |
ಘನಲಾವಣ್ಯರಸಂ ಮುಖಾಂಬುರುಹದೊಳ್ ಪೊಣ್ಮಿತ್ತು ನಲ್ವಾತಿನೊಳ್ ||
ಜೆನುಗಿತ್ತೊಳ್ಸೊದೆ ಬಾಸೆ ರಂಜಿಸಿತು ಗುಣ್ಪಿಂ ನಾಭಿಯೊಪ್ಪಿತ್ತು ಚಾ |
ರುನಿತಂಬಂ ಪೊಡರ್ದ*ತ್ತು ಮಂದಗತಿಯಾಯ್ತಾ ಪೆಣ್ಗೆ ತಾರುಣ್ಯದೊಳ್ ||೨೨

ತರುಣಿಯ ಯೌವನವೈಭವ |
ದಿರವಂ ಪಗೆದಾನೃಪಾಲನೀಕ್ಷಿಸಿ ನಲವಿಂ ||
ಸುರತಾಪೇಕ್ಷೆಯೊಳುಱೆ ಮೇ |
ಲ್ವರಿಯಲೊಡಂ ಕಂಡು ಲಲನೆಯಿಂತೆಂದುಸಿರ್ದ*ಳ್ ||೨೩||

ಶ್ರೀಮದ್ವೈಷ್ಣವಧರ್ಮೋ |
ದ್ದಾಮತೆಯದು ನಿಮಗೆ ಕಾಣಬಾರದು ಮತ್ತಾಂ ||
ಪ್ರೇಮದಿನುಸಿರ್ದ*ಪೆನದನಿ |
ನ್ನಾಮೋದದಿನಾಲಿಸೀಗಳುರ್ವೀನಾಥಾ || ||೨೪||

ಪದಿಬಿಂ ಸಾಸಿರ ವೈಷ್ಣವರ್ಕಳ ತದೀಯಾರಾಧನಂಗೆಯ್ದೊಡ |
ಲ್ಲದೆ ನಿಮ್ಮೊಳ್ ಸಹಶಯ್ಯೆಯಾಗದೆನೆ ತಾನೆಂತಕ್ಕದಂ ಮಾಱ್ಪೆನೆಂ ||

ದು ದೃಢಂಬೆತ್ತ ಸಗಲ್ಕೆಯೋಚಿಸಿ ಸಹಸ್ರಕ್ಕಿಂದಿರಾನುಜ್ಞೆಯಿಂ ।
ದದು ತಾಂ ಸಾಲದೆ ಪೋಕುವಮಾದೊಡಮಜಸ್ರಂ ಮಾಣದುದ್ಯೋಗಿಪರ್ ॥

ಪ್ರತಿದಿನದೊಳಮೀಪರಿಯೆಸ ।
ಗುತಿರೆಯುಪಕ್ರಾಂತಮೇಕಮುಪಸಂ ॥
ಹೃತಿಯಾಗಿ ಪೂರ್ತಿಯಿಲ್ಲದ ।
ನಿತಱಿಂ ಪೂರಿಸಲೆವೇೞ್ಕುಮಿನ್ನೆಂತಾನುಂ ॥೨೬॥

ಎನಿಪಾಸಕ್ತಿಯಿನಂಗನಾಮಣಿಯು ಭೋಗಪ್ರಾಪ್ತಿಯಾತಂಗೆ ತಾ ।
ನಿನಿತಾನುಂ ದೊರೆಕೊಂಡುದಿಲ್ಲ ನಿಜರಾಜಂಗೀವ ಪೊಂಗಳ್ ತದೀ ॥
ಯನುತಾರಾಧನೆಗೆಲ್ಲಮುಂ ಸಮೆದುದಾಗಳ್ ಚೋಳರಾಜೇಂದ್ರನೀ ।
ತನ ವೃತ್ತಾಂತಮನೆಯ್ದೆ ಕೇಳ್ದು ಕಡುಗಾಯ್ದಂತಿರ್ಪಸಿಂತಾದನೇ ॥೨೭॥

ಕಡುಲೇಸಾದುದೆನುತ್ತವ ।
ನೆಡೆಗೊಱಗದಾಳ್ಗಳಂ ಕಳಪೆಯುವರವನಂ ॥
ತಡೆದಾಣೆಯಿಕ್ಕಿ ಪಣಮಂ ।
ಕುಡೆನುತ್ತುಱೆ ಬೇಡಲೊಡಮುದರ್ಕವನಾಗಳ್ ॥೨೮॥

ಇದನಾನಿತ್ತಪೆನಿಂದು ನಾಳೆನುತೆ ಕಾಲಕ್ಷೇಪಮಂ ಮಾಡೆ ಸಾ ।
ಮದೊಳೇಯೆಂದೊಡೆ ಮಾಱ್ಪಿಯಿಂತುಭಳಿಯೊಳ್ಳಿತ್ತಾದೊಡೇನೊರ್ಮೆಯೆ ॥
ಮ್ಮದಟಂ ಕಾಣಿಪೆವೆಂದು ಬಂಧಿಸೆಯುವರ್ ತಮ್ಮಾಳ್ಗಳಂ ಬಿಟ್ಟು ಕೋ ।
ಪದೆ ಸಂತ್ರಾಸಿಸಿ ಬಯ್ದು ನೂಂಕಿಸಲವರ್ ಚೋಳಂಗದಂ ದೂರಿದರ್ ॥೨೯

ಕರೆದು ಗುಱಿಕಾಱರಂ ಕೆಲ ।
ಬರನವನಂ ಪಿಡಿದು ತರ್ಪುದಿಲ್ಲಿಗೆನುತೆ ನಿ ॥
ಷ್ಠುರವಚನದೆ ಕಳಪಲವರ್ ।
ಪರಿದವನಿಪೂರ್ಗೆ ಮುತ್ತಿ ನಿರ್ಬಂಧಿಸಿದರ್ ॥೩೦॥

ಅದನಾಕರ್ಣಿಸುತಾರ್ಪಿನಿಂದೆ ಪೊಱಮಟ್ಟೇತಂ ಮಹಾಯುದ್ಧದೊಳ್ ।
ಸದೆದೆಬ್ಬಟ್ಟೆಯುವರ್ ಪರಾಭವದಿನಾವೃತ್ತಾಂತಮಂ ಪೇೞೆ ಕೋ ॥
ಪದಿನಾಚೋಳನೆ ಸರ್ವಸೈನ್ಯಸಹಿತಂ ಬಂದೀತನಿಪೂರ್ಗೆ ಮು ।
ತ್ತಿದೊಡಾಗಳ್ ಮೊದಲಂತೆ ಶೌರ್ಯದೊದವಿಂ ಸಂಗ್ರಾಮಮಂ ಮಾಡಿದಂ ॥

ಅಸಿಖೇಟಂಗಳನಾಂತು ಸೈನ್ಯದೊಳಪೊಕ್ಕಾರ್ದಾರ್ಪಿನಿಂ ಪೊಯ್ದು ಖಂ।
ಡಿಸಿ ಕೊರ್ಚೇರ್ಡಿರಿದಟ್ಟಿ ಮುಟ್ಟಿ ತಿವಿದಾಡಿಟ್ಟೊತ್ತಿ ಬೆಂಬತ್ತಿ ಛೇ ॥
ದಿಸಿ ಸೇನಾಮುದಮಂ ಕಚಿಲ್ಚು ತಿರೆ ಮತ್ತೇಭಾಗ್ರದೊಳ್ ಕುಳ್ಳಿರೀ ।
ಕ್ಷಿಸಿ ಚೋಳಾವನಿಪಂ ಪೊಣರ್ಕೆಯ ಚಮತ್ಕಾರಕ್ಕೆ ತಾಂ ಮೆಚ್ಚಿದಂ॥೭೨॥

ಅಂತು ಮೆಚ್ಚಿಯೊರ್ವ ಭೃತ್ಯನಂ ಕರೆದು ನೀಂ ನೀಲನಿಅತ್ತ ರೆಡೆಗೆಯ್ದಿ ಬೆದರ್ಕೆಯುಂ ಮಾಣ್ದೆ ಮೊಡೆಯುಸಂ ನಂಬಿ ಬರ್ಪುದೆಂದು ಪೇಳ್ದು ವರನೊಡಗೊಂಡು ಬಾರೆನಲವಂ ಪೋಗಿ ಕರೆಯಲೊಡಂ;

ಅರಸಂ ಪೇಳ್ದ ನಿರೂಪಮುಂ ಚರನ ಮಾತಂ ನಂಬಿ ಬಂದಾತನಂ ।
ತಿರೆ ನೀಂ ಮಾಡಿದ ಯುದ್ಧಕೌಶಲಕದೇಂ ಪೋ ಮೆಚ್ಚಿದೆಂ ಮತ್ತೆ ಕಾ ॥
ತರಿಸಲ್ವೇಡಪರಾಧಮಂ ಕ್ಷಮಿಪೆನರ್ಥಂ ಮಾತ್ರಮಂ ಕೊಟ್ಟು ಸಾ ।
ಖ್ಯರಸಂಬೆತ್ತಿರೆನುತ್ತೆ ಮಂತ್ರಿಯ ವಶಂಗೆಯ್ದಿಲ್ದು ತಾನೆಯ್ದಿದಂ ॥೭೩॥

ಅಂತು ಚೋಳರಾಜನೂರ್ಗೆ ಪೋಗಲೊಡಮಿತ್ತಲ್,

ಬಿಡದಿವನಂ ಸಚಿವಂ ಸಂ ।
ಗಡವೊಡಗೊಂಡೆಯ್ದಿ ಕಱಿಯುಮಾಣಿಕಪೆರುನೂಳ್ ॥
ಗುಡಿಯೊಳ್ ಸೆಱೆಯಿಟ್ಟಂಕೆಯ ।
ನೊಡರಿಸೆ ಚಿಂತಾಬ್ಧಿಯೊಳ್ ಮುಳುಂಗಿಂತೆಂದಂ ॥೭೪॥

ಏವೆನಿದರ್ಕರ್ಥಮ ।
ನೀವುದಪೆಂತೆನ್ನೊಳಿಲ್ಲದುದನಾರಣದೊಳ್ ॥
ಸಾವೆನಗೆ ಬಾರದಕಟಾ! ।
ಈವಿಧಿಗೊಳಗಾಗಲಿರ್ದುದೇ ಶ್ರೀನಾಥಾ! ॥೭೫॥

ಈತೆಱದಿಂ ಸಾವುದೆ ಸರಿ ।
ಮಾತೇನೆನುತಿರ್ದ ಮುಲಗೆ ಕಾಂಚಿಯ ವರದಂ ॥
ಪ್ರೀತಿಯಿನೀತನ ಕನಸಿನೊ ।
ಳೈತಂದಳ್ಕದಿರೆನುತ್ತೆ ತಾನಿಂತೆಂದಂ ॥೭೬॥

ವೇಗವತೀನದೀಸಿಕಟದೊಂದೆಡೆಯೊಳ್ ಸಿಧಿಯಿರ್ಕುಮಂತದಂ ।
ವೇಗದೆ ತಂದಿವರ್ಗೆ ಕುಡು ನೀನೆನಲಾನುಡಿಗೇಳ್ದು ಚಿತ್ತದೊಳ್ ॥

ರಾಗಿಸಿ ಮಂತ್ರಿಯುಂ ಕರೆದು ನಿಮ್ಮ ಪಣಂಗಳನೀವೆನೇಱುವಿಂ ।
ದೀಗಳೆ ಕಾಂಚಿಕಾಪುರದೊಳಾಂ ಮಡಗಿರ್ದಪೆನೊಂದು ತಾಣದೊಳ್ ॥೩೭॥

ಅದಱಿಂ ನಿಮ್ಮ ಮನುಷ್ಯರಂ ಕಳುಪಲೀವೆಂ ದ್ರವ್ಯಮಂ ಕೌಳಿಯ ।
ಲ್ತಿದನೊವಿರ್ನಾಕ್ಷಿಪುದೆಂದು ಪೇೞಲವನಂತಕ್ಕೆಂದು ಭೃತ್ಯಾಳಿಯಂ ॥
ಪದೆಪಿಂ ಪ್ರೇರಿಸಿಯಾತನುಂ ಪಯಣದಿಂ ಕಾಂಚೀಪುರಕ್ಕೆಯ್ದಿ ಹ ।
ರ್ಷದಿನಾಸ್ವಾಮಿಯ ಸೇವೆಗೆಯ್ದಿರುಳೊಳಾಸಿಕ್ಷೇಪಮಂ ಪೊರ್ದಿದಂ ॥೩೮॥

ರಹದೊಳದಂ ತೆಗೆದಾಗಳ್ ।
ಮಹೋತ್ಸವಂಬೆತ್ತು ತದ್ಧನಮನಿತ್ತವರಿಂ ॥
ಬಹುಮಾನಂಬಡೆದೀತಂ ।
ವಿಹಂಗವಾಹನನ ವೈಮೆಗಚ್ಚರಿವಟ್ಟಂ ॥೩೯॥

ಅಂತಾಸ್ವಾಮಿಯುಂ ಬಣ್ಣಿಸುತರೊರ್ಗೆ ವಂದು ಎಂದಿನಂತೆ ಪರಮ ಭಕ್ತಿಯಿಂ

ಮಗುೞ್ದು* ಶ್ರೀವೈಷ್ಣವಾರಾಧನೆಯನೆಸಗಿಕೊಂಡಿರ್ಪಿನಂ ದ್ರವ್ಯಮೆಲ್ಲಂ ।
ಮಿಗೆ ತೀರ್ದತ್ತೀನುಮಾಗಾರದೊಳರದಿರೆ ಚೋರತ್ವಮಂ ಮಾೞ್ಪೆನೆಂದೀ ॥
ಬಗೆಯೊಳ್ ನಿಶ್ಚೈಸಿಕಾೞ್ಬಟ್ಟೆಯೊಳೆ ಸುಲಿದು ಪಾಂಥರ್ಕಳಿಂ ತಂದ ವಸ್ತ್ವಾ ।
ದಿಗಳಿಂದಾಕೃತ್ಯಮಂ ತಪ್ಪದೆ ವಿರಚಿಸೆ ಸಾಸಿರ್ವರೊಳ್ ನ್ಯೂನಮುಕ್ಕುಂ ॥೪೦॥

ಇಂತು ನಿಜಜಾತ್ಯನುಗುಣಮಾದ ಚೌರ್ಯಕೌಶಲದಿಂ ತಂದ ಪಣಂಗಳಿಂ ತದೀಯಾರಾಧನೆ ಪೂರ್ತಿಯಾಗಿ ಮನೋಭೀಷ್ಟಮುಪ್ಪನ್ನಗಂ ಬಿಡವೆಸಗುತಿರೆಯಾಸಮಯದೊಳ್

ತಿರುಮಾಲ್ ತಿರುನಗರಿಯ ರಂ ।
ಗರಮಣನಿವನಿಂದಮಿಂತು ಬಿನದಂಗೆಯ್ಯು ॥
ತ್ತಿರಲಾಗದೆಂದು ತಾಂ ಭೂ ।
ಸುರವೇಷಮನಾಂತುಪಾಯಮೊಂದಂ ನೆನೆದಂ ॥೪೧॥

ತಿರುಮಾಲಿಗ್ರಾಮದುರ್ವೀಸುರನ ನಿಳಯದೊಳ್ ಪುಟ್ಟುನೀನೆಂದು ಮುನ್ನಿಂ ।
ದಿರೆಗೊಲ್ದಾಜ್ಞಾಪನಂಗೆಯ್ದ ಕತದಿನೊಗೆದಾಕನ್ಯಕೋದ್ವಾಹಕ್ಕೈತಂ ॥
ದರವಿಂದಾಕ್ಷಂ ಸಮಸ್ತಾಭರಣಲಸಿತನಾಯಾಮಿನೀತುರ್ಯಯಾಮಾ ।
ತರದೊಳ್ ಸರ್ವಾಪ್ತಬಂಧುವ್ರಜಮೊಡವರೆತನ್ಮಾರ್ಗೆತಾವೆಯ್ದುವಾಗಳ್ ॥

ಈತಂ ನಿಜಪರಿವಾರಸ |
ಮೇತಂ ಮಿಗೆ ತಿರುನಱುಂಕೊಲೆಯೆನಿಸ ಪ್ರೊಲದೊಳ್ ||
ಖ್ಯಾತಾಶ್ವತ್ಥಸವಿಧಾಪದೊ |
ೞಾತನ ವಸ್ತುಗಳನಸಹರಿಸವೇೞ್ಕನುತುಂ ||೪೩||

ಕಳವಿನ ಕಜ್ಜದೊಳ್ ನಿಪುಣನಾದುದಱಿಂದವರೊಳ್ ಕೆಲಂಬರಂ |
ಚಳಕದಿನೇಱಿ ವೃಕ್ಷಮನಿದಂಬರಮಂ ನೆರೆ ನೋೞ್ಪುದೆಂದು ಸಂ ||
ಗಳಿಸಿಯಡಂಗಿ ತಾಂ ಮಱೆಯೊಳೊಂದಿರೆಯೀದ್ವಿಜರೂಪಿ ವಿಷ್ಣುವು |
ಜ್ಜ್ವಳಿಪ ವಿವಾಹವೇಷದಮಿತಾಭರಣಂಗಳನಾಂತು ಹರ್ಷದಿಂ ||೪೪||

ನಿಜಪತ್ನೀಯುತನಾಗಿ ಬಾಂಧವಸಮೂಹಂ ಕೂಡಿ ಬರ್ಪಾಗಳಾ |
ದ್ವಿಜರಂ ಕಂಡು ಮಹೀಜದಗ್ರದೊಳಡಂಗಿರ್ದರ್ ಕರಂ ವೇಳೆಯಿಂ ||
ದು ಜನಾಸ್ಥಾನದೊಳೊಲ್ದುವಂಗುಸಿರೆ ತಾಂ ಮುಂಬಟ್ಟೆಯುಂಕಟ್ಟ ಸಾ |
ಧುಜನವ್ರಾತವ ವಸ್ತುವೆಲ್ಲಮುಮನೀೞ್ದಾತಂ ಮಹಾನಂದದಿಂ ||೪೫||

ತ್ವರಿತದಿನೊಂದುಗೂಡಿಯವನೆಲ್ಲಮನಂಬರದಲ್ಲಿ ಕಟ್ಟಿ ವಿ |
ಸ್ಫುರಿಸುವ ತತ್ಕರಾಂಗುಳಿಯಿನುಂಗುರವೊಂದು ಕೞಲ್ಚಿ ಬಾರದಂ ||
ತಿರೆ ರದದಿಂದೆ ಕರ್ಚಿ ತೆಗೆಯುತ್ತಿರಲಾತನ ಧೂರ್ತವೃತ್ತಿಯಂ |
ಪರಿಕಿಸಿಯಿನ್ನವೇಂ ಕಲಿಯನೋ ಎನಲಾಪೆಸರಾದುದಾತನೊಳ್ ||೪೬||

ಬೞಿಕಾವೊಟ್ಟೆಯನೆತ್ತವೇೞ್ಕುತೆ ಯತ್ನಂಗೆಯ್ದೊಡಾಪೇೞ್ಗಳಾ |
ತಳದಿಂದೇಳದೆ ಭಾರವಾಗಲಿವನೇನೋ ಮಂತ್ರಸಾಮರ್ಥ್ಯದಿಂ ||
ದಿಳೆಯಿಂದೇಳದ ರೀತಿಯಿಂ ರಚಿಸಿದಂ ದಲ್ ಮಂತ್ರಮಂ ಬೇಗಮೆ |
ನ್ನೊಳೆ ನೀಂ ಪೇೞದೆ ಸುಮ್ಮನಿರ್ದೊಡೆ ಬಿಡೆಂ ಕೊಂದಲ್ಲದಾಂ ಭೂಸುರಾ ||

ಎನುತೊರೆಯಿನುಗಿದು ಖಡ್ಗಮ |
ನೆಸಿತಾನುಂ ಬೆರ್ಚಿಸಲೊಡನಾಬ್ರಾಹ್ಮಣರೂ ||
ಪಿನ ಲಕ್ಷ್ಮೀವಲ್ಲಭನೆಲೆ |
ವನಚರ ಕೇಳಾಗದಿದುವೆ ಗಳಬೆಯೊಳುಸಿರಲ್ ||೪೭||

ಎಂದಾದಾರಿಗೆ ದಕ್ಷಿಣಾಕೆಗವನಂ ಕೊಂಡುಯ್ದು ತಾನಲ್ಲಿ ಸಾ |
ನಂದಂ ಶ್ರುತ್ಯಖಿಳಾರ್ಥಸಾರವದಮಷ್ಟಾಕ್ಷರೀಮಂತ್ರಸು ||

ಚ್ಛಂದೋನ್ಯಾಸಮುದಾದಿಯಾಗಿರಲೊಡಂ ತದ್ದಕ್ಷಿಣಶ್ರೋತ್ರದೊಳ್ ।
ಸಂದಾಮಂತ್ರದ ಮೂಲಮಂ ಪಚಿಸಿದಂ ಬರ್ಪನ್ನೆಗಂ ಸಾದರಂ ॥೪೯॥

ಸ್ಫುರಿಪಾಮಂತ್ರದ ಸುಪ್ರಭಾವದೊದವಿಂದುಂಟಾಗೆ ತನ್ನೊಳ್ ಪರಾ ।
ವರತತ್ವಜ್ಞತೆ ನಶ್ವರಂ ದಲೆನುತರ್ಥಾಪೇಕ್ಷೆ ಬಿಟ್ಟೆಲ್ಲಮಂ ॥
ತುರಿಪಂ ತಾಂ ಗುರುದಕ್ಷಿಣಾರ್ಥಮುಪಗಿತ್ತಾ*ವಸ್ತುಸಂದೋಹಮಂ ।
ಪರಮಾನಂದಪಯೋಧಿಯೊಳ್ ಮುಳುಗಿದಂ ಸತ್ಸಂಗಮೇಗೆಯ್ಯದೋ ॥೫೦॥

ವ॥ ಅನಂತರಂ "ನಾಂ ಕಂಡುಕೊಂಡೇನ್ ನಾರಾಯಣಾವೆನ್ನುಂ ನಾಮಂ" ಎಂದುಪಕ್ರಮಿಸಿ "ನಾರಾಯಣಾವ್ರೋ ! ಮಣಿವಣ್ಣಾ ! ನಾಹಣಿಯರ್" ಎಂದುಪಸಂಹಾರಪರ್ಯಂತಮಾಗಿ ತಿರುನೋಟಿಯೆಂಬ ಸಾಸಿರದೆಣ್ಬತ್ತುನಾಲ್ಕುಂ ಪದ್ಯರೂಪಮಾದ ಪ್ರಬಂಧಮುಮಂ "ತಿರುವೆಟುಕೂತ್ತಿರುಕ್ಕೈ" "ಶಿರಿಯ ತಿರುಮಡಲ್" "ಪೆರಿಯತಿರುಮಡಲ್" "ತಿರುಕ್ಕುರಂದಾಂಡಹಂ" "ತಿರುನೆಡುಂದಾಂಡಹ" ಮೆಂಬ ಷಟ್ಪ್ರಬಂಧಂಗಳುಮಂ ಮಾಡಿ ಸ್ವಾಮಿಗೆ ಸ್ತೋತ್ರರೂಪಮಾಗಿ ಬಿನ್ನಪಂಗೆಯ್ದು "ನಾಲ್ ಕವಿಪ್ಪೆರುಮಾಳ್" ಎಂದುಂ "ಚತುಷ್ಕವಿಶಿಖಾಮಣಿ" ಯೆಂದುಂ ಬಿರುದಂ ಪಡೆದು ಅತ್ಯುನ್ನತರಾಗಿರ್ಪ ಕಾಲದೊಳ್

ಸ್ಫುರಿಪಾನಾಡಿತನಾಕೆಯಾಳವೆಸರೀಶಸಾಸ್ಥಿದೊಳ್ ಶೈವಭೂ ।
ಸುರಸಂಬಂಧನೆನಿಪ್ಪನಾಲಿಸಿವರಂ ಮೇಣ್ ಸಲ್ಗುಮೆಮ್ಮೊಳ್ ದಲೀ ॥
ಬಿರುದಂ ಗೆಲ್ದು ಸಮಸ್ತರಂ ಕಡಗಮಂ ತಂದೆಮ್ಮ ನೋಟಿಪ್ಪೊಡಿನು ।
ಬ್ಬರದಿಂ ಸೋಲಿಸಲೀಚತುಷ್ಕವಿಗಳೆಂಬೀಪೆರ್ಮೆಯುಂ ಸಂತತಂ ॥೫೧॥

ಎನಲೊಡಮಂತಾದೊಡೆ ನೀ ।
ನೆನಗಿಲ್ಲಿ ಸಮಸ್ಯೆಯೊಂದನೀಯೆನಲಾತಂ ॥
ಘನವಿಷಮಮಾಗಿ ಕುಡಲಿವ ।
ರನುವಪ್ಪಿನಮಾಸಮಸ್ಯೆಯಂ ಪೂರಿಸಿದರ್ ॥೫೨॥

ಇನ್ನುಂ ವಿಷಮಸಮಸ್ಯೆಯ ।
ನೆನ್ನೊಳ್ ಕುಡಲುಚಿತಮುಕ್ಕುಮೇ ಎಂದವನಂ ॥
ಚುನ್ನಮನಾಗಿಸಿ ಖುಜುಸಂ ।
ಪನ್ನಸಮಸ್ಯೆಯನಮಂಗಿವರ್ ನಿರವಿಸಿದರ್ ॥೫೩॥

ಅವನಿಂ ಪೂರಿಸಲಾಗದಾಂ ನಿಮಗೆ ಸೋಲ್ತಿಂ ಸಲ್ಗುಮಸ್ಮತ್ಕರಾ |
ಬ್ಜದ ಭಾಸ್ವತ್ಕಟಕಂ ಭವತ್ಪದಯುಗಕ್ಕಂ ಸಂಗತಂ ಯುಕ್ತಮಿ ||
ನ್ನದರಿಂ ಪೆರ್ಬಿರುದುಂ ಚತುಷ್ಕವಿಗಳೆಂಬೀಯೊಟ್ಟೆಯುಂ ನಿಮ್ಮೊಳಾ |
ಸ್ಪದಮೆಂದಾಶಿವವಿಪ್ರನಾಮಹಿಮೆಯಂ ಕೊಂಡಾಡಿ ಸಂತೋಷದಿಂ ||೫೪||

ವಿಪುಲಪ್ರಬಂಧಮಂ ನೆಗ |
*ಳ್ದಪಚಾರಕ್ಷಮೆಯನೆಯ್ದೆ ಪಡೆದೆಯ್ದಿದನೀ ||
ಸುಪವಿತ್ರಕಲಿಯನಿಂದಿರೆ |
ಯಪಾರಕರುಣಾಕಟಾಕ್ಷದೊದವಿಂದಾಗಳ್ ||೫೫||

ಘನವೈಷ್ಣವತತಿಯಿಂ ಪಡೆ |
ದನಘಂ ತಿರುಮಂಗೆಯಭಿಧೆಯಾಳ್ವಾರ್ ನವಮಂ ||
ಮನವೊಸೆದಷ್ಟೋತ್ತರಶತ |
ದನುಪಮತಿರುಪತಿಗಳೆಲ್ಲಮಂ ಸೇವಿಸಿದರ್ ||೫೬||

ಆಯಾಯೆಡೆಯೊಳ್ ಸ್ತೋತ್ರಮ |
ನೋಯುರದಿಂದೆಸಗಿ ವಿಮಲಭಗವದ್ಭಕ್ತಿ |
ಶ್ರೀಯುಕ್ತರಾಗಿ ಭಕ್ತನಿ |
ಕಾಯದೊಳೊಡವೆರೆದು ಕೆಲವುದಿನಮಿಂತಿರ್ದರ್ ||

ಅನಂತರಂ

ಪರಿವೃಭಯುಸಹ್ಯಜಾಮ |
ಧ್ಯರಸೆಯೊಳತಿರಮ್ಯಮಾದ ರಂಗಸ್ಥಲಮೇ ||
ಇರವಿಂತು ನಿತ್ಯವಾಸಕೆ |
ಪರಿಭಾವಿಸೆ ಯೋಗ್ಯಮೆಂದು ನಿಶ್ಚಿತರಾದರ್ ||೫೭||

ಬಡನಾರಂಗಕ್ಷೇತ್ರಕೆ |
ಕಡುನಲಿಯುತೆ ಪೋಗಿ ರಂಗಧಾಮನ ಪದಮಂ ||
ಬಿಡದೆ ಭಜಿಸಲ್ಲಿ ಬಗೆ ನುಡಿ |
ಯೊಡಲ್ಗಳೊಂದಾಗಿ ಕೆಲವು ಪಗಲಲ್ಲಿರ್ದರ್ ||೫೮||

ವ|| ಅಂತಿರ್ದಾ ವೈಕುಂಠದೊಳ್ ನಿತ್ಯಸೂರಿಗಳ ಪರಿಷನ್ಮಧ್ಯಸ್ಥನಾದ ಪರ ವಾಸುದೇವನನೆ ರಂಗನಾಥನಾಗಿಯವತಾರಮಂ ನೆಗಳ್ದನೆಂದು ನಿಶ್ಚಯಂಗೆಯ್ದು,

ಇನ್ನಂ ಸ್ವಾಮಿಗೆ ರಕ್ಷೆಯಿಲ್ಲದಿರಲೊಳ್ಪಲ್ತೆಂದು ವೈಕುಂಠದಿಂ |
ತಿನ್ನಂತಾನುಮೊಡರ್ಚವೇೞ್ಕು ವಿಲಸತ್ಪ್ರಾಕಾರಮೇಱಿಂ ಕರಂ ||
ಚೆನ್ನಪ್ಪಂತೆನುತಾರ್ಪಿನಿಂ ಹೃದಯದೊಳ್ ಸಂಕಲ್ಪಮಂ ಮಾಡಿ ಮೇಣ್ |
ಪೊನ್ನಿಲ್ಲೆಂದತಿಚಿಂತೆಗೆಯ್ಯುತಿರೆ ಬಂದರ್ ವೈಷ್ಣವರ್ಕಳ್ ಕೆಲರ್ ||೬೦||

ಆವೈಷ್ಣವರಿವರಿರ್ಪಿರವಂ ಕಂಡೀಚಿಂತೆಬೇಡೆಂದಿಂತೆಂದರದೆಂತೆನೆ:-

ಪಾರಾವಾರದ ತೀರನಾಗಪುರದೊಳ್ ಜೈನಾಲಯಂ ರಂಜಿಕುಂ |
ಸಾರಂ ಕೋಟಿಹಿರಣ್ಯದಿಂ ಸಮೆದ ಜೈನಪ್ರೋಲ್ಲಸದ್ವಿಗ್ರಹಂ ||
ರಾರಾಜಿಕ್ಕುಮದಲ್ಲಿಯಾಪ್ರತಿಮೆಯಂ ನೀಂ ಚೌರ್ಯಚಾತುರ್ಯದಿಂ |
ಧೀರಾಗ್ರೇಸರ ತಂದೊಡೀನಿಖಿಲಕೈಂಕರ್ಯಂಗಳಕ್ಕುಂ ಕಣಾ ! ||೬೧||

ಎನಲಾವೈಷ್ಣವವಾಕ್ಯಮಂ ಗ್ರಹಿಸಿಯಾೞ್ವಾರಾಪ್ತನಾಗಿರ್ದ ವೈ |
ದುನನಂ ತಾಮೊಡಗೊಂಡು ನಾಗಪುರಮಂ ಸಾರ್ದಾಜಿನಾಗಾರದೊ ||
ಳ್ಪನೆ ನೋಡುತ್ತೆ ವಿಮಾನದಗ್ರದೊಳೆ ಯಂತ್ರಾಕಾರದಿಂದೊಂದಯ |
ಸ್ಸಿನ ಪೆರ್ಬೀಗಮನೆಯ್ದೆ ಕಂಡಿದಱನಕ್ಕುಂ ಸಾಧಿಸಲ್ ಚೌರ್ಯದೊಳ್ ||

ಎಂದು ಯೋಚನೆಗೆಯ್ದು ಮನಮಂ ನಿಸ್ಸಂಶಯಂ ಮಾಡಿ ಪಗಲೊಳಾಗ್ರಾಮದೊಳಡಂಗಿರ್ದನಂತರಂ,

ಇರುಳೊಳ್ ಸ್ವಾಲಕಯುಕ್ತರಾಗಿ ಗುಡಿಯಂ ತಾಮೇಱಿಯಾಯಂತ್ರಮಂ
ಕರದಿಂ ಬಿರ್ಚೆ ಕೞಲ್ಚಿ ಪ್ರಗ್ರಹದೆ ನೇಲ್ವಂತಾತನಂ ಕಟ್ಟಿ ದೇ ||
ವರ ಸಾನ್ನಿಧ್ಯಕೆ ಮೇಗಣಿಂದಿೞಿಯವಿಟ್ಟಾಮೂರ್ತಿಯಂ ರಶ್ಮಿಯಿಂ |
ಭರದೊಳ್ ಸೇಂದಿ ಬೞಿಕ್ಕಧಸ್ತಲಕೆ ನೇಣಂ ಸಾರ್ಚೆ ಮತ್ತಾತನಂ ||೬೩||

ಸೇಂದುವ ವೇಳೆಯೊಳ್ ಪೃಥುಲವಸ್ತುವೆ ಸಿಲ್ಕಿದುದೆಂದವಂಗೆ ಮೆ |
ಯ್ಯೆಂದಿನಿಸುರ್ವಿ ಯಂತ್ರಮುಖದೊಳ್ ನುಸುೞಲ್ ಬಹುಕಷ್ಟಮಾಗೆ ಕೈ ||
ಗುಂದಲಿವರ್ಗೆ ಸಮ್ಮತಿಸಿಯಾಮಿವನಂ ಮಿಗೆ ಬಿಟ್ಟು ಪೋದೊಡೆ |
ಮ್ಮಿಂದವೆ ಗುಟ್ಟುಪೋಕುಮೆಮಗೆಂದತಿಚಿಂತೆಯೊಳದ್ದು ಬೇಗದಿಂ ||೬೪||

ಆತನ ಶಿರಮಂ ಕರದ ನಿ |
ಶಾತಾಸಿಯೊಳಱಿದು ಕೊಂಡದನುಮಾಂತಿರುಳೊಳ್ ||
ಭೀತಿಯನುೞಿದಿವರೆಯ್ದಿದ |
ರೋತು ತಿರುಕ್ಕಣ್ಣಮಂಗೆಯೆಂಬೊಂದೆಡೆಯಂ ||೬೫||

ವ॥ಅಂತಾಯೆಡೆಗೆಯ್ತಂದೊಂದು ಗರ್ದೆಯೊಳದಂ ಪೂಳ್ದಿನಿತಱೊಳೆ,
ದಿನರಾಜೋದಯಕಾಲವಾದ ತೆಱದಿಂ ಕಾದಿರ್ಪಿನಂ ಬಿತ್ತವೇ ।
ಟ್ಕೆನುತಾಗಳ್ ಬರಲಲ್ಲಿಗೊರ್ವ ಕೃಷಿಕಂ ನೀನಾರಿದರ್ಕೆನ್ನ ವ ॥
ಸ್ತು ನಿಜಂ ಮಾಣ್ ಸಡೆಯೆಂದು ಸೂರುಳಡೆಯಿನ್ನಂ ಪಚ್ಚನೆಲ್ಲಿಂದೆ ಬಂ।
ದನಿವಂ ತಾನಿದು ದುರ್ನಿಮಿತ್ತಮದಱಿಂ ಲೇಸಲ್ತೆನುತಾಕ್ಷಣಂ ॥೬೬॥

ಪಿಂದಿರುಗಿ ನಾಳೆ ಮಾಳ್ಪಂ ।
ಬಂದಿದನೆಂದಾತನೆಯ್ದಿದಂ ಬೞಿಕಿವರಾ ॥
ನಂದಿಸಿ ಪ್ರಯಾಣಗತಿಯಿಂ ।
ತಂದರ್ ಶ್ರೀರಂಗಕಿರುಳೊಳಾವಿಗ್ರಹಮಂ ॥೬೭॥

ಅಂದು ತಂದಾಮೂರ್ತಿಯನೊಡೆದದಂ ವಿಕ್ರಯಿಸಿ ದಿವ್ಯಪ್ರಾಕಾರಂ ತಿರುಮಡಪ್ಪಳ್ಳಿ ಜೊಕ್ಕಸಂ ಕೊಟ್ಟ ಸಾಲೆಯೆರೆಯಾಯಿರಕ್ಕಂಡಾನೆಂಬ ಕಣಜಮಿವು ಮೊದಲಾದ ಸಕಲಕೈಂಕರ್ಯಗಳಂ ಮಾಡಿಸಿ ಸುಖದಿಂದಿರ್ಪನ್ನೆಗಂ,

ಗುಡಿಯೊಳ್ ತನ್ಮಯ ದೇವರಿಲ್ಲದಿರೆ ಬಂದರ್ ಬೇಗದಿಂ ಪಜ್ಜೆಯಂ ।
ಪಿಡಿದಲ್ಲಲ್ಲಿ ವಿಚಾರಿಸುತ್ತೆ ಕ್ರಮದಿಂ ಶ್ರೀರಂಗಮಂ ಸಾರ್ದವರ್ ॥
ಕಡುಕಾಯ್ಪಿಂದೆ ಮದೀಯಮೂರ್ತಿಯನದೇಂ ನೀಂ ಚೌರ್ಯದಿಂ ಕೊಂಡುಬಂ
ದೊಡಸಿಂತಾಗಿಸಲಕ್ಕುಮೇ ಎನಲವರ್ಗಿಂತೆಂದರುಲ್ಲಾಸದಿಂ ॥೬೮॥

ಭಾವಿಸಿಯಾದೊಡೆ ನಿಮ್ಮಯ ।
ದೇವಗೆ ಕಿಱುವೆರಲದೂನಮಿಲ್ಲದವೋಲಿ ॥
ನ್ನಾವಿತ್ತಪೆವೆಂದಾಳ್ವಾರ್ ।
ತೀವಿದ ಮಧ್ಯಸ್ಥರೆಡೆಯೊಳೊಳ್ಪಂ ನುಡಿದರ್ ॥೬೯॥

ಆನುಡಿಯನೊಪ್ಪುಗೊಂಡಾ ।
ಜೈನರ್ ಕೈಯೋಲೆವಡೆದರಾಯರ್ಥಕ್ಕ ॥
ನ್ಯೂನಕನಿಷ್ಠಾಂಗುಲಿಯಂ ।
ಸಾಸಂದಂ ಮುಂದೆ ಸಾರ್ಚಿದರ್ ಕಡುವೇಗಂ ॥೭೦॥

ಅದನೀಕ್ಷಿಸಿ ಮಾನ್ಯದಿಯಿ ।
ಲ್ಲದೆ ಜೈನರ್ ಪತ್ರಿಕಾರ್ಥಮಿದ್ದಂತಿರೆ ತಾಂ ॥

ಮೊದಲೊಳ್ ತಪ್ಪಿದ ಕಜ್ಜ |
ಕ್ಕಿದಱಿಂ ಮುಂದೆಸಗಲೇನುಮಾಗದೆ ಪೋದರ್ ||೨೧||

ಬಟ್ಟಕಾದ್ರವ್ಯಂಗಳಲ್ಲಂ ಸಮೆಯೆ ಕೆಲವು ಕೈಂಕರ್ಯಕಾದೇವಗೇಹೋ|
ಪಳಕರ್ಮಿವ್ರಾತಕಾಮಿತ್ತಪೆವು ಪಣಮನೆಂದಾದಿಯೊಳ್‌ಪೇೞ್ದುಮೇಣ್‌ಕೈ|
ಯೊಳ್ ಕಿಂಚಿದ್ವಿತ್ತಮಂ ಕಾಣದವರನೊಡಗೊಂಡೆಯ್ದಿ ಕಾವೇರಿಯುದ್ಯ |
ಜ್ಜಳಪೂರಸ್ಥಾನದೊಳ್ ಕಲ್ಕುಟಿಗರಖಿಳರಂನಾವೆಯೊಳ್‌ಸಾರ್ಚಿಯಾಗಳ್‌||

ಗನ್ನದಿನಂಬಿಗರಂ ಕರೆ |
ದಿನ್ನಿವರಂ ಮುೞುಗುವಂತೆಸಗಿಮೆನಲಾಗಳ್ ||
ಸನ್ನಿಹಿತರಾಗಿ ಕಡುಬೇ |
ಗನ್ನದಿಯೊಳ್ ನಾವೆಯಂ ಮುೞುಂಕಿಸಿ ಬಿಟ್ಟರ್ ||೨೩||

ಅನಂತರಂ,

ಶ್ರೀರಂಗಕ್ಷೇತ್ರದೊಳಾ |
ಶ್ರೀರಂಗೇಶಂಗೆ ಸಕಲಕೈಂಕರ್ಯಮುಮಂ ||
ಧೀರತಿರುಮಂಗೆಯಾೞ್ವಾ |
ರಾರೈದೆಸಗುತ್ತುಮಿರ್ದು ಪೆಱತೊಂದು ದಿಸಂ ||೨೪||

ಆರ್ತಪ್ರಸನ್ನರಾಗಿಯೆ |
ಸಾರ್ತಂದಾರಂಗನಾಥಸನ್ನಿಧಿಯೊಳ್ ಸಂ ||
ಕೀರ್ತನೆಗೆಯ್ದೆಱಗಿ ಕರಂ |
ಕೂರ್ತಂಭೋಜಾಕ್ಷ ಲಾಲಿಸೆಂದಿಂತುಸಿರ್ದರ್ ||೨೫||

ಶ್ರೀನಾಯಕ ಕೇಳೀತನು |
ವೇನೇನೋ ಮಾಡಿತಾತೆಱಂ ಮುನ್ನಿರದೆ ||
ತ್ತಾನುಂ ಮಾಣಿಸು ಬೇಗಂ |
ನೀನೆಂದಾರಂಗವಿಭುವನಿರದೆರೆಯುಲೊಡಂ ||೨೬||

ವ|| ಆಸ್ವಾಮಿಯರ್ಚಕಮುಖಾಂತರಂ ಬಂದು ನಿಮಗೆಮ್ಮ ದಕ್ಷಿಣದಿಶಾ ಮಂದಿರವಾದ ತಿರುಕ್ಕುರುಂಗುಡಿಯೊಳ್ ಮೋಕ್ಷಮನಿತ್ತಪೆವೆಂದು ಪೇೞ ಲೊಡಮಂದು ಮೊದಲಾರಂಗಕ್ಷೇತ್ರದಲ್ಲಿ ಪಂಚತ್ವಮನೆಯ್ದಿದರ ಸಂಸ್ಕಾರ ದೇಶಮಸ್ಮದೀಯಮವರಾಗಿರವೇೞ್ಕೆಂದಾನೆಲನಂ ಕ್ರಯಕ್ಕೆ ಕೊಂಡು,

ಅದಱೊಳ್ ಮಾಡಿಸಿಯೊಂದುಂ |
ಸದನಮನಾನೆಲಕೆ ಪಾರಿವಾಣಂತೊರೆಯೆಂ ||
ಬುದನಿಟ್ಟಾಧರೆಯೊಳ್ ಕೆಲ |
ವು ದಿನಂ ನೆಲಸಿರ್ದರಚ್ಯುತಾಂಘ್ರಿಯು ನೆನಪಿಂ ||೭೭||

ಬಱಿಕಲ್ಲಿಂ ಪೊಱಮಟ್ಟವ |
ರಳಿಯುಂಬೆರಸಾತಿರುಕ್ಕುರುಂಗುಡಿಯೆಂಬಾ ||
ಸ್ಥಳಮಂ ಸಾರ್ದತಿಹರ್ಷೋ |
ಜ್ವಳತೆಯಿನಾನಂಬಿಗೆಱಗಿ ತದನುಗ್ರಹದಿಂ ||೭೮||

ಇವರಾಪೊೞಲ ಮಹಾವೈ |
ಷ್ಣವಸಂಸ್ಕಾರೋಚಿತಸ್ಥಲಮನಾವಾಸ ||
ಕ್ಕೆ ವಿರಚಿಸಿಯಲ್ಲಿ ಕತಿಪಯ |
ದಿವಸಮನಿರ್ದಲ್ಲಿ ಪೌರ್ಣಮಾಸ್ಯೆಯ ನಿಶಿಯೊಳ್ ||೭೯||

ಅತಿಸಿರ್ವೇದಮನೊಂದಿ ತಮ್ಮ ತನುವಂ ನೀಗಾಡವೇೞ್ಕೆಂದು ಸ |
ಮ್ಮತಿಗೆಯ್ದಾನಪರಾಧಮಿಲ್ಲದೆ ಮೊದಲ್ ದ್ರವ್ಯಾರ್ಥಮಾರಯ್ಯದು ||
ನ್ನತ ದುರ್ವೃತ್ತತೆಯಿಂದೆ ಭಾಗವತನಾಗಿರ್ದಾತನಂ ಕೊಂದ ದು |
ಷ್ಕೃತಿಯುಂ ವರ್ಜಿಪವೀಶರೀರದೊಳೆನುತ್ತಾರಾತ್ರಿ ಬೆಳ್ದಿಂಗಳೊಳ್ ||೮೦||

ಆಸೋದರಳಿಯನಂ ಕರೆ |
ದೀಸಮಯದೊಳೀಸನೆಸಗಲಕ್ಕುಂ ಪೇೞಿಂ ||
ದಾಸೆಯಿನುಸಿರಲೊಡಂ ಮೊದ |
ಲಾಸುರಕೃತ್ಯಮನೆ ಮಾಡಿ ತೀರಿಸಲಕ್ಕುಂ ||೮೧||

ಎನೆ ನಿನ್ನ ತಂದೆಯುಂ ಮು |
ನ್ನಿಸಿತುಂ ತಪ್ಪಿಲ್ಲದಱಿದ ಪಗೆತನಮಂ ನೀ ||
ನನುಸರಿಸಿ ತೀರಿಸೆಂದಿವ |
ರನುವದಿಸಲದರ್ಕೆ ಬೆರ್ಚುತಿಂತೆಂದುಸಿರ್ದಂ ||೮೨||

ಭಾಗವತದೊ್ರೀಹಮನೆಂ ।
ತಾಗಿಪೆನೆನಲೀಶರೀರವಮಂ ವರ್ಜಿಸುವು ॥
ದ್ಯೋಗದಿನಿರ್ಪೆವುಗಿಂತಿದು ।
ರಾಗಂ ನೀನಳ್ಕದಂತು ಮೊಗಸು ಸಶೀಘ್ರಂ ॥೮೩॥

ಎನೆ ತಚ್ಚಿತ್ತಾನುಸಾರಂಬಿಡಿದವನಸಿಯಿಂ ಶೀರ್ಷವಂ ಪೊಯ್ಯಲಾಗಳ್ ।
ಘನತಾರ್ಕ್ಷ್ಯಾರೂಢನೆಯ್ತಂದವರ ತಲೆಯನಿರ್ಕೈಗಳಿಂದಾಂತು ವೈಕುಂ ॥
ಠನಿಜಾವಾಸಕ್ಕೆಪೋದಂ ಪರಮಪದವಿಯಂ ಸಾರ್ದರಾಳ್ವಾರಿವಂಗಂ ।
ವನಜಾಕ್ಷಸ್ಥಾನಮಂಗಾಂತದ ಸಮುಮದೊಳಾಯ್ತಾಮಹತ್ಸಂಗದಿಂದಂ ॥

॥ ಗದ್ಯಂ ॥

ಇದು ನಮಿತಹಿಮಕರಚೂಡಕಮಲಭವಮುಖಸುರಸಮುದಯಮೌಳಿಮಣಿಗಣಘೃಣಿಸಂಧ್ಯಾರಾಗಾನುಗುಣಪ್ರಚುರರುಚಿತಾರಕಾಯಮಾನ ರಂಗವಿಭುಚರಣಯುಗಳನಖಮಯೂಖಸುಧಾಪೂರವಿಹಾರಮದಮರಾಳೀಕೃತ ಮಹಿಷಪುರವರಸಾಮ್ರಾಜ್ಯಸಂಪನ್ನ ರಾಜಾಧಿರಾಜರಾಜಪರಮೇಶ್ವರಾಪ್ರತಿಮಪ್ರೌಢಪ್ರತಾಪ ಬಿರುದಂತೆಂಬರಗಂಡ ಯದುಕುಲನಳಿನದಿನಕರರಾದ ಶ್ರೀಚಿಕದೇವರಾಯಮಹಾರಾಜಪ್ರಸಾದಪರಿಪೂರ್ಣ ಸಚಿವನಿಚಯತಿಲಕ ಶ್ರೀಚಿಕುಪಾಧ್ಯಾಯವಿರಚಿತಮಪ್ಪ ದಿವ್ಯಸೂರಿಚರಿತ್ರಮಹಾಪ್ರಬಂಧದೊಳ್ ತಿರುಮಂಗೆಯಾಳ್ವಾರವರ ವೈಭವಂ ನವಮಾಶ್ವಾಸಂ ಸಂಪೂರ್ಣಂ.

॥ ಮಂಗಳಂ ಮಹತ್ ಶ್ರೀ ॥



## —ದಶಮಾಶ್ವಾಸಂ—

ಶ್ರೀರಾಮಾನುಜಮೌಳಿಸ ।
ಮಾರಾಧಿತಪಾದಪದ್ಮನೀಗೆಮಗೊಳ್ಪಂ ॥
ಶ್ರೀರಂಗಧಾಮನಸುರವಿ ।
ದಾರಂ ಭವಭೀಮಸಿಂದ್ರನೀಲಶ್ಯಾಮಂ ॥೧॥

ಶ್ರೀವರನ ದಿವ್ಯಪದರಾ ।
ಜೀವಮರಂದಾಭಿಷಿಕ್ತಮಸ್ತಕರೆನಿಪಾ ॥

ಭಾವಜ್ಞಭಾಷ್ಯಕಾರರ |
ಪಾವನವೈಭವವನುಸಿರ್ವೆನಖಿಲೇಷ್ಟದಮಂ ||೧||

ವ|| ಸ್ವಸ್ತಿ ಶ್ರೀ ಶಾಲೀವಾಹನ ಶಕ ವರ್ಷಂಗಳು ೯೩೯ಕ್ಕೆ ಸಂದ ಪಿಂಗಳನಾಮಸಂವತ್ಸರದ ಚೈತ್ರಮಾಸದಾದ್ರಾನಕ್ಷತ್ರಕಲಿತವಾದ ಶುಭವಾಸರದೊಳ್ ಭೂತಪುರಿಯಪರಾಭಿಧಾನವೆನಿಪ ಪೆರುಂಬೂತೂರೊಳ್ ಹರಿತಗೋತ್ರದ ಸರ್ವಕ್ರತು ಸೋಮಯಾಜಿಗಳೆಂಬ ಶ್ರೀಕೇಶವಾಚಾರ್ಯರ ಧರ್ಮಪತ್ನಿ ತಿರುಮಲೆನಂಬಿಗಳೊಡವುಟ್ಟಿದ ಭೂಮಿಪ್ಪಿರಾಟ್ಟಿಯಾರ ಗರ್ಭದೊಳ್ ಮಹಾಶೇಷಾವತಾರವಾಗಿ—

ಶ್ರೀವೈಕುಂಠನಿಯೋಗದಿ |
ನಾವಿರ್ಭವಿಸಿದರುದಾರಚರಿತರ್ ಶ್ರಿತಸಂ ||
ಜೀವನರಾತ್ಮಮಹಾಂಬುಧಿ |
ಜೈತ್ರಾತ್ಯಕರನಘಭಾಷ್ಯಕಾರರ್ ಸಲವಿಂ ||೨||

ಹರಿಯ ನಿಯೋಗದಿನಱಿದಾ |
ತಿರುಮಲೆನಂಬಿಗಳೊರಲ್ದು ಬಂದಿವರ ಮಹೋ ||
ತ್ತರಜಾತಕವಿಭವಮುಮಂ |
ವರಸಾಮುದ್ರಿಕೆಯನೆರಡುಮಂ ದಿಟ್ಟಿಸಿದರ್ ||೪||

ಅಂತೀಕ್ಷಿಸಿ,

ಇವರೇ ಶೇಷಪರಾವತಾರರಿವರೇ ಶ್ರೀರಂಗಮುಖ್ಯೇಂದಿರಾ |
ಧವದಿವ್ಯಸ್ಥಳಕಾಗುವಾಳ್ಪರಳವಿಂ ಕೈಂಕರ್ಯಮಂ ದರ್ಶನೋ ||
ತ್ಸವಸಂಸ್ಥಾಪಕರಪ್ಪರೆಂದಖಿಳ ಕೈಂಕರ್ಯಂಗಳಂ ಧೀರರೊ |
ಪ್ಪುವ ಶೇಷಾಂಶದ ಸಂದ ಲಕ್ಷ್ಮಣನ ದಿವ್ಯಾಭಿಖ್ಯೆಯಿಂದಾಕ್ಷಣಂ ||೫||

ರಾಮಾನುಜರೆಂದೊಳ್ಪಿಂ |
ನಾಮಗ್ರಹಣಮನೊಡರ್ಚೆ ಶ್ರುತಿವಿಧಿಯಿಂ ಸು ||
ಕ್ಷೇಮಂ ತಿರುಮಲೆನಂಬಿಗ |
ಳಾಮೋದಂಬಿಡಿದು ವೇಂಕಟಾದ್ರಿಗೆ ಪೋದರ್ ||೬||

ವ|| ಮತ್ತೊಂದು ಸಂವತ್ಸರಾನಂತರದೊಳ್ ತಿರುಮಲೆನಂಬಿಗಳೊಡವುಟ್ಟಿದ ಪಿರಿಯಪಿರಾಟ್ಟಿಯಾರ ಗರ್ಭದೊಳ್ ಕಮಲನಯನಭಟ್ಟರ್ ಗೋ

ವಿಂದರೆಂಬವರವತರಿಸಲೊಡಂ ಆವೃತ್ತಾಂತಮಂ ಕೇಳ್ದು ತಿರುಮಲೆನಂಬಿಗ ಳೈತಂದವರ ಜಾತಕಾದಿಗಳಂ ನೋಡಿ,

ಬಗೆವೊಡೆ ಸಕಲಶ್ರುತಿಮಯ |
ಖಗೇಂದ್ರಸಂಭಾವತಾರಮೆಂದಱಿ*ದವರ್ಗಳ್ ||
ಮಿಗೆ ರಾಮಾನುಜಸಂಬಂ |
ಧಿಗಳಾಗಿ ಸಹಾಯರಪ್ಪರೆನುತತಿಮುದದಿಂ ||೭||

ವ|| ಗೋವಿಂದಪ್ಪೆರುಮಾಳೆಂಬ ನಾಮಕರಣಂಗೆಯ್ದು ವಿಶೇಷಕಟಾ ಕ್ಷಮಂ ಮಾಡಿ ತಾಮಾತಿರುಪತಿಗೆಯ್ದಿದರನಂತರದೊಳ್—

ಮಿಗೆ ರಾಮಾನುಜರಂತು ಭೂತಪುರಿಯೊಳ್ ಚೌಲಾದಿವೈವಾಹದ |
ನ್ನೆಗಮಾಗಿರ್ದ ಸುಕರ್ಮಮಂ ತಳೆದು ವೇದಾಭ್ಯಾಸಶಾಸ್ತ್ರಾದಿವಿ ||
ದ್ಯೆಗಳಂ ಕಲ್ತಿಸೆದಿರ್ಪ ಕಾಲದೊಳೆ ಕಾಂಜೀಪತ್ತನಾಭ್ಯರ್ಣದ |
ಬ್ಜಗಣೇಂದೀವರರಮ್ಯಗೃಧ್ರಸರಸೀಪ್ರಾಂತೋರ್ವಿಯೊಳ್ ಸಂತತಂ ||೮||

ವ || ವಿದ್ಯಾಕಾಲಕ್ಷೇಪಮಂ ಮಾಡಿಕೊಂಡನೇಕಶಿಷ್ಯಾವೃತರಾಗಿ ಯಾದವಪ್ರಕಾಶರೆಂಬ ಸನ್ಯಾಸಿಗಳಿರ್ಪ ವೃತ್ತಾಂತಮನೀರಾಮಾನುಜರ್ ಕೇಳ್ದಮಗಲ್ಲಿಯೆ ವಿದ್ಯಾಭ್ಯಾಸಂ ಕರ್ತವ್ಯಮೆಂದು ತಿಳದಿರ್ಪಿನಂ ;

ಜನಕಂ ಶ್ರೀಹರಿಧಾಮಕೆಯ್ದಿದ ನಿಮಿತ್ತಂ ಬಂದು ಕಾಂಚೀಪುರ |
ಕ್ಕನಘರ್ ಮಾತೃಸಮೇತರಾಗಿ ಗೃಹಮೊಂದಂ ಮಾಡಿಕೊಂಡಲ್ಲಿ ನೆ ||
ಟ್ಟನೆ ಮಾಡತ್ತಿರುವೀಧಿಗಂತು ಬಲದೊಳ್ ಶಾಸ್ತ್ರಂಗಳಭ್ಯಾಸಮಂ |
ಮನಮೊಲ್ದು ಯತಿವರ್ಯನಿಂದೆಸಗುತಿರ್ದರ್ ಮಾಣದಾಸಕ್ತಿಯಿಂ ||೯||

ವ || ಅಂತೆಸಗುತಿರ್ದೊಂದು ದಿನಮಾಯಾದವಪ್ರಕಾಶಗೀರಾಮಾ ನುಜರೆಣ್ಣೆಯನೊತ್ತುವ ಸಮಯದೊಳ್ "ತಸ್ಯ ಯಥಾ ಕಪ್ಯಾಸಂ ಪುಂಡರೀ ಕಾಕ್ಷಂ" ಎಂಬ ಶ್ರುತಿಗೆ ವ್ಯಾಖ್ಯಾನಮಂ ಮಾಳ್ಪಲ್ಲಿ ;

ವಿಪರೀತಾರ್ಥಮನಾತನೊಲ್ದೆಸಗಲೀ ರಾಮಾನುಜರ್ಗಕ್ಷಿಯಿಂ |
ದೆ ಪಯೋಬಿಂದುಗಳುರ್ವಿ ಬಿಟ್ಟು ಯತಿಯೂರುದ್ವಂದಮಂ ಚುರ್ಚೆ ವ ||
ಹ್ನಿಪಟುಜ್ವಾಲೆವೊಲಿಂ ತದಾಸ್ಯಮನವರ್ ನೋಡಿಂತು ಸಂತಾಪಕೇ |
ಸಬಚಾರಂ ನಿಮಗೆಮ್ಮೊಳಾಯ್ತೆನಲೊಡಂ ಮಾತಾಡಿನರ್ ಭೇದದಿಂ ||೧೦||

ಈನಿಗಮಕ್ಕೆ ನೀಮೆಸಗಿದಿಂದಿನಸಂಗತದರ್ಥದಿಂದೆ ಮ ।
ನ್ಮಾನಸಕಾಯ್ತು ತಾಪಮೆನಲಾದೊಡಿದರ್ಕೆ ಸದರ್ಥಮಪ್ಪವೊಲ್ ॥
ನೀನೆಸಗೆಂದವರ್ ನುಡಿಯೆ ತಾವರೆಯಂತಖಿಲೇಶನಕ್ಷಿಗಳ್ ।
ಜಾನಿಸೆ ತೋರ್ಕುಮೆಂದುಸಿರ್ದುದೀಶ್ರುತಿಯೆಂದಱಿವಿಂ ನೆಗೞ್ಚಿದರ್ ॥೧೧॥

ಅದನಾಯಾದವನಾಲಿಸಿ ।
ಮಧುಧಾರಾದ್ವೈತಮತಮುೞಿಗುಮೆಂದತಿಕೋ ॥
ಪದೆ ಹೂಂಕರಿಸುತ್ತೆಮಗಿ ।
ನ್ನಿದಿರ್ವಾತಂ ನುಡಿಯಲಾಗ ಪೇೞ್ದಂತಿರು ನೀಂ ॥೧೨॥

ಎನೆ ಬೞಿಕಿವರಿರೆ ಕೆಮ್ಮನೆ ।
ಮನವೊಲ್ದು ಮಳಲಮಂಗಲದೊಳಿರ್ಪರ್ ನೆ ॥
ಟ್ಟನೆ ಗೋವಿಂದಪ್ಪೆರುಮಾ ।
ಳಸುಪಮರೀಗೃಧ್ರಸರಸಿಯೆಡೆಗೈತಂದರ್ ॥೧೩॥

ವ ॥ ಅಂತೆಯ್ತಂದೀರಾಮಾನುಜರೊಡನೆ ಗ್ರಂಥಾಭ್ಯಾಸಕಾಲಕ್ಷೇಪಮಂ ಮಾಡಿಕೊಂಡಿರ್ಪನಮಾಕಾಲದೊಳ್—

ಆದೇಶಕ್ಕಧಿನಾಯಕ ।
ನಾದರಸಿನ ತನುಜೆ ಬೊಮ್ಮರಕ್ಕಸನಿಂ ತಾ ॥
ನಾದಂ ಪೀಡಿತೆಯಾಗಿರ ।
ಲಾಬೊರೆ ಚಿಂತಾಬ್ಧಿಯೊಳ್ ಮುೞುಂಗಿ ಬೞಿಕ್ಕಂ ॥೧೪॥

ಕರೆಯಿಸಿ ಮಂತ್ರವಾದಿಗಳನಾಲಿಸುತಂತಿರೆ ಯಾದವಪ್ರಕಾ ।
ಶರುಮುೞಿ ಬಲ್ಲರೆಂದುಸಿರೆ ಮಂತ್ರಿಗಳಂದಳದಿಂದೆ ತರ್ಪುದೆಂ ॥
ದರಸನವರ್ಗೆ ಪೇೞಲವರಿರ್ಪೆಡೆಗಾಸಚಿವರ್ಕಳೆಯ್ದಿ ತಾ ।
ಮಿರದೊಡಗೊಂಡುಬಂದಖಿಳವೈಭವದಿಂದರಸಂಗೆ ತೋಱಿದರ್ ॥೧೫॥

ಆತಂ ಶಿಷ್ಯಸಮೇತನಾಗಿ ಕಡುಪಿಂ ರಕ್ಷೋಘ್ನಸೂಕ್ತಂಗಳಿಂ ।
ಖ್ಯಾತತ್ವಂ ಮಿಗೆ ಮಂತ್ರಿಸುತ್ತಿರೆನಗೀ ತ್ವನ್ಮಂತ್ರಮೇಂ ಬಾರದೇ ॥
ಪ್ರೋ ತಾಳಿಸಿದಱಿಂದೆ ಪೋದಪೆನೆ ನಿನ್ನಿಂದಾಗದೀಶಜ್ಞ ಮಿ ।
ನ್ನೇತಕ್ಕೀ ಬಹುಯತ್ನದಿಂದೆ ಫಲಮಿನ್ನುಂಟಾದುದಾ ಪೇೞ್ದಪಂ ॥೧೬॥

ನಿನ್ನಯ ಸನಿಯದೊಳರ್ಪ |
ಪನ್ನಗರಾಜಾಂಶಜಾತರಾಮಾನುಜರೊ ||
ಲ್ದಿನ್ನಂ ಪೋಗೆನೆ ಪೋಪೆಂ |
ನನ್ನಿಯಿಂದಾಂ ಪ್ರೋಸ ತೆಱನಿದಂ ವಿರಚಿಸು ನೀಂ ||೧೭||

ಎನೆ ರಾಮಾನುಜರಂ ಕಡಂಗಿ ಕರೆದಾಭೂಪಾಲನೀಗಳ್ ವಿಮೋ |
ಚನಮಪ್ಪಂತಿದನೊಲ್ದು ಡರ್ಚುವುದು ನೀಮೆಂದಾಗಳೊಳ್ಪಿಂದೆ ಪ್ರಾ ||
ರ್ಥನೆಯಂ ಮಾಡೆ ಪಿಶಾಚ ನೀನಿರದೆ ಪೋಗಿನ್ನೆಂದವರ್ ಪೇೞೆ ಗ |
ಳ್ಕನೆ ನಿಮ್ಮಂಘ್ರಿಯನಿಟ್ಟೊಡಿನ್ನ ಶಿರದೊಳ್ ಪೋಪೆಂ ಬುಧಾಗ್ರೇಸರಾ ||೧೮||

ಎನಲೊಡಮಂತೆ ಡರ್ಚಲವರಾಗಳೆ ಮುಂದೆಸೆದಿರ್ದ ಕುಂಜರಾ |
ಶನಕುಜಮಂ ಪ್ರೊಡರ್ಬ್ಬಿಡಿಮುಕೊಂಡದು ಪೋದುದು ಬೊಮ್ಮರಕ್ಕಸಂ ||
ಘನತರಮಾದ ತನ್ನ ಹಿಮೆಗಾನದೆ ಮೋದಮನಾಯತೀಶ್ವರಂ |
ಮನದೊಳಸೂಯೆಯಂ ತಳೆದ ಕೆಮ್ಮನೆ ತನ್ನ ನಿವಾಸಕೆಯ್ದಿದಂ ||೧೯||

ವ|| ಅಂತಾಯಾದವಪ್ರಕಾಶಂ ನಿಜಾಶ್ರಮಕೆಯ್ದಿ ಗ್ರಂಥಕಾಲಕ್ಷೇಪಮಂ ಮಾಡಿಸುತಿರಲಾಕಾಲದೊಳ್—

ಸತತಂ ಶ್ರೀರಂಗದಲ್ಲೀಶ್ವರಮುನಿತನುಜರ್ ಯಾಮುನಾಚಾರ್ಯರುದ್ಯ |
ನ್ಮತಿಯಿಂ ವ್ಯಾಖ್ಯಾನಮಂ ಮಾಡುತಿರುತ್ತಬಹುಶಿಷ್ಯಾನ್ವಿತರ್ ಚಿತ್ತದೊಳ್ ಮ |
ನ್ಮತದೊಳ್ಪ್ರಸ್ಥಾವನಿಂ ನಿಲ್ಪುದೊ ಇದರನುವಂ ಕಾಣೆನೆಂದಿರ್ದೊಡಿರ್ದಾರ್ |
ಚತುರರ್ ಶ್ರೀವೈಷ್ಣವರ್ ಕಾಂಚಿಯಪುರದೆಡೆಯಿಂದಲ್ಲಿಗೆಯ್ತಂದರಾಗಳ್ ||

ಅಂತಾಳ್ವಂದಾರ್ಗೆಱಗಿ ಮ |
ಹಂತರ್ಗಾ ಕಾಂಚಿಕಾಖ್ಯಪುರವಿಭವಮನೋ ||
ರಂತೊರೆದು ಗೃಧ್ರಸರಸೀ |
ಪ್ರಾಂತದೊಳರ್ಪಾ ಯತೀಂದ್ರನೆಡೆಯೊಳ್ ಸತತಂ ||೨೧||

ಶ್ರುತಿಭಾಷ್ಯಮಂ ಮಾಡುತುಮತಿಮುದದಿಂ ಕೇಶವಾಚಾರ್ಯಪುತ್ರರ್ | ಮತಿಮದ್ರಾಮಾನುಜರ್ ವರ್ತಿಸಿದಪರಿರುತಿಂತೆಂದು ಮರ್ತ್ಯ ತ್ರಾಣಮಂ ನಂದಿಸಂ || ಶ್ರುತಿಯೊಂದರ್ಕಾಯತೀಂದ್ರಂ ವಿರಚಿಸೆ ಸಕಲಾರ್ಥಮಂ ಕೇಳ್ವರ್ ಸಂ | ಗತಮಪ್ಪಂತರ್ಥಮಂ ಮಾಡಿನರಖಿಳಜನಾಹ್ಲಾದಕರ್ ಮತ್ತಮಿತ್ತಲ್ ||೨೨||

ಶ್ರೀಕಾಂಚೀನಗರಾಧಿನಾಥಸುತೆಗಾರ್ಪಿಂ ಬ್ರಹ್ಮರಕ್ಷೋಗ್ರಹಾ |
ಸ್ತೋಕಗ್ರಸ್ತೆಗೆ ತದ್ವಿಮೋಚನನುನಾಗಳ್ ಮಾಡಿದರ್ ತಚ್ಛುಭಾ ||
ನೇಕೋದ್ಯಚ್ಚರಿತಂಗಳಂ ವಚಿಸಲೆಮ್ಮಿಂ ಶಕ್ಯಮಲ್ತೆಂದೊಡ |
ತ್ಯಾಕಾಂಕ್ಷಾಮತಿ ಪುಷ್ಟಿತಾಗಳವರಂ ನೋಡಲ್ಕಿವರ್ಗಾಗಳೇ ||೨೩||

ಇನ್ನೆಮ್ಮ ವಿಶಿಷ್ಟಾದ್ವೈ |
ತಂ ನಿಲ್ವುದೆನುತ್ತೆ ತಿಳಿದು ಶಿಷ್ಯವ್ರಜಸಂ ||
ಪನ್ನರ್ ಪ್ರಯಾಣಗತಿಯಿಂ |
ಸನ್ನುತಕಾಂಚೀಪುರಕ್ಕೆ ಪದೆದೆಯ್ತಂದರ್ ||೨೪||

ಅವರೆಯ್ತಂದುದನಾಲಿಸುತ್ತವರ ಶಿಷ್ಯಂ ತಾಂ ತಿರುಕ್ಕಚ್ಚಿ ನಂ |
ಬಿ ವದಾನ್ಯಂ ವರದಂಗೆ ಬಿಜ್ಜಣದ ಸೇವಾಸಕ್ತ ಶಾತ್ತಾದ ವೈ ||
ಷ್ಣವನೊಳ್ಪಂದಿದಿರ್ವಂದು ಶ್ರೀವರದರಾಜಸ್ವಾಮಿಯಭ್ಯರ್ಣಕು |
ತ್ಸವದಿಂದಂ ಕರೆದುಯ್ದು ಮಾಡಿಸಿದನಾತಂಗಳ್ಗೆ ತತ್ಸೇವೆಯಂ ||೨೫||

ಅವರ್ಗೊಂದಂ ಮಠಮಂ ವೈ |
ಷ್ಣವಯೋಗ್ಯಸ್ಥಾನದಲ್ಲಿ ಕಲ್ಪಿಸಿ ತತ್ಪಾ ||
ದವನಜಮಂ ಸೇವಿಸುತಿರೆ |
ಯುವರಾತನನೊಲ್ದು ಕರೆದು ಬಳಿಕಿಂತೆಂದರ್ ||೨೬||

ರಾಮಾನುಜರೆಂಬರ್ ಸು |
ಕ್ಷೇಮದಿನೆಲ್ಲಿರ್ಪರೆನೆ ಪ್ರಭಾತದೊಳವರೀ ||
ಸ್ವಾಮಿಯ ಸೇವೆಗೆ ಬರ್ಪರ್ |
ಶ್ರೀಮಂತರ್ ಯಾದವಪ್ರಕಾಶರೊಡನೆ ತಾಂ ||೨೭||

ಎನಲೊಡನಾಳ್ವಂದಾರ್ ಮಱು |
ದಿನದುದಯದೊಳಿರ್ದು ವರದರಾಜಸುಸೇವಾ |
ಸ್ನಾನವಿಧಿಯನೆಸಗಿ ಬಲವರು |
ತ[illegible] ಸುತಿಸುತ[illegible] ||೨೮||

ನಿಯಮದೆ ಸನ್ನಿಧಿಗುತ್ತರ |
[illegible] |
ಮಿಯ ಸನ್ನಿಧಿಯೊಳವರ್ ಶಿ |
ಷ್ಯರುತರ್ ತಾವಾಗಿ ಕುಳ್ಳಿರಲೊಡನಾಗಳ್ ||೨೯||

ನಲಿದಾಯಯಾದವನಲ್ಲಿಗೆಯ್ದಿ ನಿಜಶಿಷ್ಯರ್ ಕೂಡಿಯಾಪೋಗಲೊಳ್ ।
ಬಲವರ್ಪಲ್ಲಿ ಪೊದಟ್ಟನಂತಸರಸೀಪೂರ್ವಾಶೆಯೊಳ್ ಸಂದ ಪಿ ‖
ಪ್ಪಲಭೂಜಾತಸಮೀಪದೊಳ್ ಭುಜಗರಾಜಾವಿರ್ಭವಕ್ಕಾಶ್ರಯ ।
ಸ್ಥಲವಲ್ಮೀಕದ ಸನ್ನಿಕರ್ಷೆಯೊಳೆ ಕಂಡಾಯಾದವಾಭಿಖ್ಯನಂ ‖೨೦‖

ವ ‖ ಆಗಳಾಯಾಮುನಾಚಾರ್ಯರ್ ತಿರುಕ್ಕಚ್ಚಿನಂಬಿಯುಂ ಕಂಡಿಂತೆಂದರದೆಂತೆನೆ :—

ನಿಜವಾಗೀಬರ್ಪ ಸಂದೋಹದೊಳುಜ್ಜಸಮಂ ತಾಳ್ದು ಸಂದಿರ್ಪರಾವಾ । ನುಜರಾರ್ ತೋಱಂದೊಡಾಯಾದವನ ಬಲದೊಳಿರ್ಪುತ್ತರಾಜಾನುವಿಭ್ರಾ । ಡ್ಭುಜಯುಗ್ಮರ್ ದೀರ್ಘನಾಸಾ ಶ್ರುತಿ ಪುಟರತಿಗೌರಾಂಗರಾಕರ್ಣನೇತ್ರಾಂ । ಬುಜರೀಗಳ್ ಕೇಶವಾಚಾರ್ಯರ ಸುತರೆನೆ ಕಂಡಾಗಳಾನಂದದಿಂದಂ ‖ ‖೨೧‖

‖ ವಂಶಸ್ಥ ‖

ತದಂಗಸಂಸ್ಥಾನಮುಮಂ ವಿರಾಜಿಪಾ ।
ತದೀಯಸಲ್ಲಕ್ಷಣಮಂ ಸಮಸ್ತಶಾ ‖
ಸ್ತ್ರದಲ್ಲಿ ಸಮ್ಯಗ್ವ್ಯವಹಾರದಾರ್ಢ್ಯಮಂ ।
ಸದಾನತರ್ ನೋಡಿ ಕಡಂಗಿದರ್ ಕರಂ ‖೨೨‖

ಇವರಿಂದೆವಿಶ್ರುತಿಸಿ ।
ದ್ಧವೆನಿಪ ಮತಮಿನ್ನದೇಂ ವಿಶಿಷ್ಟಾದ್ವೈತಂ ಸಾ ‖
ರವೆನಿಸಿ ನಿಂದಪುದೆಂದೊಂ ।
ದು ವಿಶೇಷಕಟಾಕ್ಷದಿಂದಲವರಂ ಪೊರೆದರ್ ‖೨೩‖

ಶ್ರೀವರದರಾಜನಂ ಸಲೆ ।
ಸೇವಿಸಿ ತಚ್ಚರಣವರಣಮಂ ಮಾಡಿ ಕರಂ ‖
ಶ್ರೀವರ ಮುದ್ದರ್ಶನದು ।
ದ್ಭಾವಸ್ಥಾಪಕರನೆಸಗವೇಱ್ಕೆಂದೊರೆದರ್ ‖೨೪‖

ವ‖ ಅಂತು ಸಂಪ್ರಾರ್ಥನೆಗೆಯ್ದು,

(ಸಂಸ್ಕೃತ)—ಯಸ್ಯ ಪ್ರಸಾದಕಲಯಾ ಬಧಿರಃ ಶೃಣೋತಿ ।
ಪಂಗುಃ ಪ್ರಧಾವತಿ ಜವೇನ ಚ ವಕ್ತಿ ಮೂಕಃ ‖
ಅಂಧಃ ಪ್ರಪಶ್ಯತಿ ಸುತಂ ಲಭತೇಚ ವಂಧ್ಯಾ ।
ತಂ ದೇವಮೇವ ವರದಂ ಶರಣಂ ಗತೋಸ್ಮಿ ‖

ಆವನ ಸುಪ್ರಸಾದಕಲೆಯಿಂ ಬಧಿರಂ ಮಿಗೆ ಕೇಳ್ಗುಮೊಳ್ಪಿನಿಂ ।
ದಾವಗಮುರ್ವಿ ಪಂಗು ನಡೆಗುಂ ನುಡಿಗುಂ ನಿಜಮೂಕನೀಕ್ಷಿಕುಂ ॥
ಭಾವಿಸೆಯುಂಧಕಂ ಪಡೆಗುವಾತ್ಮಜರಂ ಸಲೆ ವಂಧ್ಯೆಯಾದವಾ ।
ದೇವರ ದೇವನಂ ವರದನಂ ಶರಣಂಗತನಾದೆನೆಂದವರ್ ॥೩೫॥

ವ॥ ಆಸ್ವಾಮಿಗೆ ಪ್ರಪತ್ತಿಯಂ ಮಾಡಿ,

ಸತತಂ ಬೇಡ್ಪ ಜನೇಷ್ಟದಾನಕುಶಲಂ ನೀನೇ ದಯಾಂಭೋಧಿ ಮ ।
ನ್ಮತದೊಳ್ ವರ್ತಿಸುವಂತಿರಿನ್ನೆಸಗಿಮಾರಾಮಾನುಜಾಚಾರ್ಯರಂ ॥
ಶ್ರುತಿಮಾರ್ಗೋನ್ನತಿಯಂ ಪ್ರತಿಷ್ಠಿಸು ಕಣಾ! ನೀನೆಂದು ಸಂಪ್ರಾರ್ಥಿಸಿಂ ।
ತತಿಸಂತೋಷದಿನೆಯ್ದಿದರ್ ಪದೆದವರ್ ಶ್ರೀರಂಗರಾಟ್‌ಕ್ಷೇತ್ರಮಂ ॥೩೫॥

ಬಟಿಕಾಯಾದವನತಿನಿ ।
ರ್ಮಲರಾಮಾನುಜರ ಸುಪ್ರಭಾವಕಸೂಯಾ ॥
ಮಿಳತಾಂತರಂಗನಾಗಿವ ।
ರಿಳೆಯೊಳಗಿನ್ನಿರ್ದೊಡಟಿಗುಮದ್ವೈತಮತಂ ॥೩೬॥

ಅದಱಿಂದಾಮಿವರಂ ವಲಂ ಕೊಲಲೆವೇಟ್ಕುಂದಾಪ್ತಶಿಷ್ಯರ್ಕಳೊಳ್ ।
ಮುದದಿಂ ಯೋಚನೆಗೆಯ್ಯಲಿಂತಸುರಕೃತ್ಯಂ ತಕ್ಕುದಲ್ಲೆಂದವರ್ ॥
ಪದೆಪಿಂ ಪೇೞ್ದೊಡಮಾತನಾಲಿಸದೆ ತಾಂ ವೇದಾಂತಿಯಾಗಿರ್ದ ಧೈ ।
ರ್ಯದಿನಿನ್ನಾಮಣಿಕರ್ಣಿಕಾಮರಣಮಾತಂಗಾದೊಡೆಮ್ಮಿಂದಮೇಂ ॥೩೭॥

ಇದಱಿಂ ಬರ್ಪುದೆ ಬ್ರಹ್ಮಹತ್ಯೆಯೆಮಗಾಗಳ್ ಶಾಸ್ತ್ರಸೌಕರ್ಯಮೆಂ ।
ದದನೇ ಯೋಚಿಸಿ ಶಿಷ್ಯವೃಂದದೊಡನಾತಂ ಕಾಶಿಗೆಯ್ದುತ್ತೆ ಮ ॥
ಧ್ಯದೆ ವಿಂಧ್ಯಾಟವಿಯುಲ್ಲಿ ಕೇಳ್ದಱಿದಿದಂ ಗೋವಿಂದರೆಯ್ತಂದು ಗೋ ।
ಪ್ಯದೆ ರಾಮಾನುಜರಿರ್ಪವೇಳೆಯಱಿತೀವೃತ್ತಾಂತಮಂ ದೂಱಿದರ್ ॥೩೮॥

ಇಲ್ಲಿಂ ತಪ್ಪಿಸಿಕೊಂಡು ಪೋಗಿಮೆನುತಾಶಿಷ್ಯಾಳಿಯಂ ಪೊರ್ದಿ ತಾ ।
ಮುಲ್ಲಾಸಂಬಡೆದೆಯ್ದಲಿತ್ತಲಿರದಾರಾಮಾನುಜರ್ ಪಿಂಚೆ ನೋ ॥
ಡಿಲ್ಲಿಲ್ಲೆಲ್ಲಿಗೆ ಪೋದರೆಂದು ಯತಿ ಗೋವಿಂದಾಖ್ಯರಂ ಕೇಳೆ ಮ ।
ತ್ತಿಲ್ಲಿರ್ದರ್ ಗಡ ಕಾಣೆನಾನುಮವರಂ ಮೇಣೆಲ್ಲಿ ತಾಮಿರ್ಪರೋ ॥೩೯॥

ಎನಲಾಯಾದವನೆಮ್ಮ ಯತ್ನಮಿದು ತಾಂ ಲೇಸಾದುದೀಘೋರಕಾ ।
ನನದೊಳ್ ಕ್ರೂರಮೃಗಂಗಳಿಂ ಮಡಿದನೆಂದತ್ಯಂತಸಂತೋಷನಂ ॥

ಮನದೊಳ್ ತಾಳ್ದನುತಾಪಮಂ ಪೊಱಗೆ ತಾಳ್ದಂತಕ್ಕಟಾ! ಎಲ್ಲಿ ಪೋ |
ದನೊ ಎಂದಾಯತಿ ಜಾಹ್ನವೀನಿಕಟಮಂ ಸ್ನಾನಾರ್ಥಮೊಲ್ದೆಯ್ದಿದಂ||೩೯||

ಬೞಿಕೀರಾಮಾನುಜರಾ |
ಯಿಳೆ ದುಷ್ಟಮೃಗಾಳಿಯುಕ್ತ ವಿಂಧ್ಯಾರಣ್ಯ ||
ಸ್ಥಳಮಾಗೆ ಸಂಜೆಯೊಳ್ ಚೆಂ |
* ನೞ್ದರುಗಲ ಮರದ ಕೆಳಗೆ ಕುಳ್ಳ್ದರ್ಗಳ್ |೪೦||

ಸುವಿಚಾರಾಕ್ರಾಂತರಾಗಿರ್ಪನಿತಱೊಳಬಲಾಯುಕ್ತನೊರ್ವಂ ಕಿರಾತಂ|
ಜವದಿಂದಿಷ್ವಾಸಹಸ್ತಂ ಬರಲೊಡಮವನಂ ಕಂಡಿವರ್ ಭೀತಿಗೊಂಡಿ ||
ನ್ನಿವನೇನಂ ಮಾಳ್ಪನೋ ಎಂದಿರಲವನೆಲೆ ಭೂದೇವ ನಿಮ್ಮಲ್ಲಿಗಿನ್ನೆ |
ಯ್ದುವಭೀಷ್ಟಂ ಪೇೞಿಮೆಂದೊಳ್ನುಡಿಯೊಳುಸಿರಲಾತಂಕಮಂ ಮಾಣ್ದು ದಾ
ಆಕಿರಾತನೊಡನೆ ನಿರ್ಭಯದಿಂದಿಂತೆಂದರದೆಂತೆನೆ:— [ರಂ ||೪೧||

ಎಲೆ ದಸ್ಯೂತ್ತಮ ಕಾಂಚೀ |
ಸ್ಥಲಕೆಯ್ದಲ್ವೇೞ್ಕುಮೆಂಬ ಬಗೆಯೆನೆ ಲೇಸಂ ||
ದಲಸಿಕೆಯಿಲ್ಲದೆ ನಿಮ್ಮೊಡ |
ನೆಲೆ ವೈಷ್ಣವವರ್ಯ ಬರ್ಪೆವಾವುಂ ಮುದದಿಂ |೪೨||

ವ|| ರಾತ್ರಿಯೊಳಿರ್ದಲ್ಲಿಯೇ ಸೂರ್ಯೋದಯಮಾನ ಮೇಲೆ ಪೋಪಮೆನುತಾ ಶ್ರೀರಾಮಾನುಜರುಮಾತನುಮಾರಮಣಿಯುಮಲ್ಲಿ ಎೞ್ಚಱಕೆಯಿಂದಿರ್ದರ್.

ಶ್ರಮದಿಂದಮಾಕಿರಾತನ |
ರಮಣಿ ಜಲಂವೇೞ್ಕುಮೆಂದು ಯೋಚಿಸಲೊಡಮಾ ||
ಪ್ರಮದೆಗೆ ಬೆಳಗಾದೊಡೆ ಮುಂ !
ದಮಳೋದಕಮಿರ್ಕುಮಾಸಮಾಪದೊಳದನಾಂ ||೪೩||

ತಂದೀವೆನೆಂದು ಪೇೞ್ದರ |
ವಿಂದಸಖೋದಯದೊಳೆದ್ದು ತೆಂಕಣ ದೆಸೆಗಾ ||
ನಂದದೊಳೈತರುತಿರ್ದಂ |
ತೊಂದಿದರಾಶಬರರಿರ್ವರುಮದೃಶ್ಯತೆಯಂ |೪೪|

ವ|| ಅಂತವರಿರ್ವರುಮಂತರ್ಧಾನಗತರಾಗಿ ಪೋದ ಸಮನಂತರದಲ್ಲಿ:-

ಅತಿಚಿಂತಾನ್ವಿತರಾಗಿ ದಕ್ಷಿಣದಿಕ್ಕಂ ಕೌತುಕಂಬೆತ್ತು ನೋ |
ಡುತುಮಿರ್ಪಾಗಳದೊಂದು ಗ್ರಾಮಮುರುದೇವಸ್ಥಾನವೊಂದಲ್ಲಿಯು ||
ಪ್ರತಿಮರ್ ವೈಷ್ಣವರಂತು ನಾಲ್ವರುಮದೊಂದಬ್ಜಾಕರಂ ಕಣ್ಗೆ ರಾ |
ಜಿತಮಾಗಿರ್ದುದವಂ ಸಮೀಕ್ಷಿಸುತುಮಿರಾರಾಮಾನುಜರ್ ನೋಡಿದಿಂ ||೪೫||

ಆವೈಷ್ಣವರಂ ಕೇಳ್ದರಿ |
ದಾವುರ್ವಿಯಿದಾವದೇಶಮಾವೂರಿದು ತಾ ||
ನಾವ ಗುಡಿಯಾವ ಕೊಳನೆಂ |
ದಾವಿಷ್ಕೃತಿಯುಪ್ಪ ತೆಱನನೆಮಗಿನ್ನುಸಿರಿಂ ||೪೬||

ವ|| ಇಂತೆಂದ ರಾಮಾನುಜರ್ಗಾವೈಷ್ಣವರ್-ನೀಮೆ ವಿವೇಕಿಸಿ ನೋಡಿಂ. ಈಮುಂಡಣ ದೆಸೆಯೊಳ್ ಪುಣ್ಯಕೋಟಿಯೆನಿಪ್ಪಗಣ್ಯವಿಮಾನಂ ಕಣ್ಗೊಳ್ಳುಮಿದು ಶಿವಲ್ಲಿಮೇಡೆಂಬ ಗ್ರಾಮಂ. ಇದು ಶಾಲಕ್ಕಿಣಱೆಂಬ ಕೊಳನಲ್ತೆ—ಎಂದು ಪೇೞಲೊಡಮಿವರಚ್ಚರಿವಟ್ಟು

ನೂರ್ಱುತ್ತಂ ಗಾವುದ |
ದಾರಿಯುನಿಂತೆಂದುದಿಲ್ಲಿ ಬಿಟ್ಟರವರ್ ತಾ ||
ಮಾರೋ ವರದಸ್ವಾಮಿಯು |
ನಾರಮೆಯುಂ ಸರಿಯಿದನ್ವರಿಂದಕ್ಕುಮೆ ನೋಲ್ |೪೭||

ಇಂದಾರಿವರಾವೈಷ್ಣವ |
ರೆಂದಂತಿರೆ ಕಂಚಿಗೆಯ್ದಿಯಾವರದನನಾ ||
ನಂದದೆ ಸೇವಿಸಿ ಬೞಿಕೈ |
ತಂದು ನಿಜಾಲಯಕೆ ಮಾತೃಸೇವೆಯ ಗೆಯ್ದರ್ ||೪೮||

ಆಯಖಿಳವೃತ್ತಿಯುಂ ಮಿಗೆ |
ತಾಯೊಡನವರುಸಿರೆ ಕೇಳ್ದವರ್ ವಿದ್ಯಾಭ್ಯಾ ||
ಸಾಯಾಸಂಬೇಡಿನ್ನೀ |
ಶ್ರೀಯುರಸನ ವರದರಾಜನೆಡೆಯೊಳ್ ಸತತಂ ||೪೯||

ವ|| ಕೈಂಕರ್ಯವಿಶೇಷದಿಂದೆ ತಿರುಕ್ಕಚ್ಚಿನಂಬಿಯೆಂಬ ಶ್ರೀವೈಷ್ಣವರಂತರಂಗರಾಗಿರ್ಪುದುವರ್ ಪೇೞ್ದ ಬುದ್ಧಿಯನಂಗೀಕರಿಸಿಕೊಂಡಿರೆನಲೊಡನೆ ಮಾತೃವಾಕ್ಯಪರಿಪಾಲನಶೀಲರಾಗಿ—

ಅವರಿರ್ಪಲ್ಲಿಗೆ ಪೋಗಿ ಯಾದವನ ವೃತ್ತಾಂತಂಗಳಂ ಪೇಳ್ದು ಶ್ರೀ।
ಧವಕೈಂಕರ್ಯಮದುಳ್ಳೊಡಿಲ್ಲಿಯೆಮಗಿನ್ನೇನಾನುವೊಂದಂ ಸಮು॥
ತ್ಸವದಿಂ ಕಲ್ಪಿಸಿಮೆಂದು ಸೊಲ್ಲಿಸೆ ಮೊದಲ್ ಶ್ರೀವೈಷ್ಣವರ್ ನಾಲ್ವರೊ।
ಪ್ಪುವ ಕಾಲಕ್ಕೆಣರಿಂ ಕಡಂಗಿ ತರವೇಳ್ದಿರ್ ತೀರ್ಥಮಂ ನಂಬಿಗಳ್ ॥೫೦॥

ಅನವರತಮವರ್ ತಿರುಮ।
ಜ್ಜನಸೇವೆಯುವರ್ಗಭೀಷ್ಟಮುಕ್ಕುಂ ನೀವಿಂ॥
ದಿನ ದಿವಸಂ ಮೊದಲಾಗೀ।
ಘನಕೈಂಕರ್ಯಮನೆ ಮಾಳ್ಪುದೆಂದವರ್ಗೊರೆದರ್ ॥೫೧॥

ಅದಱಿಂ ರಾಮಾನುಜರ್ ಮಜ್ಜನವಿಧಿಯೊಳಗೊಂದಿರ್ದರಿಂತತ್ತಲೊಳ್ಪಿಂ।
ತ್ರಿದಶಸ್ರೋತಸ್ವಿನೀಸ್ನಾನಮನೆಸಗುತುಮಿರ್ಪಾಗಳಾಯಾದವಾಖ್ಯಂ॥
ಮುದದಿಂದಂತೊರ್ವಗಲ್ ಮಿಾವುತುಮಿರೆಯಿರೆ ಗೋವಿಂದರಂಗೈಗೆ ಲಿಂಗಂ।
ಸಗೆಪಿಂ ಪತ್ತಿರ್ದೊಡೆತ್ತಂ ಕಡುನಲಿಯುತೆ ತಾಂ ಕಂಡವಗಿಂತು ಪೇಳ್ದಂ॥

ಈಮಣಿಕರ್ಣಿಕೆಯೆನಿಸುವ।
ಶ್ರೀಮತ್ತೀರ್ಥದೊಳೆ ಸುಪ್ರಸನ್ನತೆವಡೆನಂ॥
ಕಾಮರಿಪು ವಿಶ್ವನಾಥಂ।
ಪ್ರೇಮದೆ ನಿಮಗೆಂದು ಶಿಷ್ಯರಂ ಕರೆದಾತಂ ॥೫೨॥

ಕೃತಕಮಿದಲ್ತಿವರಂ ಸಂ।
ತತಮುಳ್ಳಂಕೈಕೊಳ್ಳಂ ನೈನಾರೆಂದಿಂ॥
ತತಿಶಯದೀಪೆಸರಿಂ ವಿ।
ಶ್ರುತಮಾಗಿರೆ ಕರೆಯಿಮೆಂದು ನೇಮಿಸಿ ಬೞಿಕಂ ॥೫೩॥

ಪಟುಭಕ್ತಿಯಿಂದೆ ನೀಮು।
ತ್ಕಟಮಾಗಿನ್ನಿಂದಿನಿಂದೆ ಲಿಂಗಾರ್ಚನೆಯುಂ॥
ಸ್ಫುಟಮುಪ್ಪವೊಲೊಡರಿಸಿಮೆಂ।
ದಟಿಸಕ್ರಮದಿಂದೆ ಕಾಂಚಿಗೆಯ್ತರ್ಪಾಗಳ್ ॥೫೪॥

ಆಗೋವಿಂದಪ್ಪೆರುಮಾಳ್।
ರಾಗದಿನೆಮ್ಮಾರೊಳಾಂ ಪ್ರತಿಷ್ಠಿಸಿ ಬರ್ಪೆಂ॥
ಬೇಗದಿನೀಲಿಂಗಮನೆಂ।
ದಾಗಂಗಾತಟದೊಳಾತನಂ ಬೀೞ್ಕೊಂಡರ್ ॥೫೫॥

ಅಂತು ಬೀಳ್ಕೊಂಡು ನಿಜಗ್ರಾಮಕೆಯ್ತಂದು ಲಿಂಗಮನಲ್ಲಿ ಪ್ರತಿಷ್ಠಿಸಿ ಗೋವಿಂದಪ್ಪೈರುವರೊಳ್ ಕತಿಪಯದಿನಮಲ್ಲಿರ್ಪಿನಮಿತ್ತಲ್

ಯತಿ ಕಾಂಚೀಪುರಿಗೆಯ್ದಿ ಚಿತ್ತದೆ ವಿಚಾರಾಕ್ರಾಂತನಂತಾಗಿ ಕಾ |
ಣುತೆ ರಾಮಾನುಜರಂ ಸ್ವಬಾಹ್ಯದೊಳ್ ನಿಮ್ಮಂ ವಿಂಧ್ಯೆಯೊಳ್ ಕಾಣದಾ ||
ವತಿಖೇದಂಬಡೆದಿರ್ಪವಿಲ್ಲಿ ಸುಖದಿಂದೆಂತಾದೊಡಂ ಹಿಂಸ್ರಸಂ |
ತತಿಯಿಂ ನೋಯದೆ ಸಾರ್ದಿರಾವೆಸಗಿದುದ್ಯತ್ಪುಣ್ಯದಿಂ ಗ್ರಾಮಮಂ ||೫೯||

ಎಂದುಪಚಾರಮನುಸಿರ್ದ |
ನ್ನಿಂದಿನವರೋಲ್ ಶಾಸ್ತ್ರಪಾತಮೆಮ್ಮೆಡೆಯೊಳ್ ಸಾ ||
ನಂದಂ ಸಮನಿಸುಗೆನಲೊಡ |
ಮಂದವರಾವುಭಯಕೃತ್ಯಮುಮನಾಂತೆಸೆದರ್ ||೬೦||

ಇದು ನಮಿತಹಿಮಕರಚೂಡಕಮಲಭವಮುಖಸುರಸಮುದಯಮೌಳಿಮಣಿಗಣಘೃಣಿಸಂಧ್ಯಾರಾಗಾನುಗುಣಪ್ರಚುರರುಚಿತಾರಕಾಯಮಾನ ರಂಗವಿಭುಚರಣಯುಗಳನಖಮಯೂಖಸುಧಾಪೂರವಿಹಾರಮುದಮರಾಳೀಕೃತ ಮಹಿಷಪುರವರಸಾಮ್ರಾಜ್ಯಸಂಪನ್ನ ರಾಜಾಧಿರಾಜರಾಜಪರಮೇಶ್ವರಾಪ್ರತಿಮಪ್ರೌಢಪ್ರತಾಪ ಬಿರುದೆಂತೆಂಬರಗಂಡ ಯದುಕುಲನಳಿನದಿನಕರರಾದ ಶ್ರೀಚಿಕದೇವರಾಯಮಹಾರಾಜಪ್ರಸಾದಪರಿಪೂರ್ಣ ಸಚಿವನಿಚಯತಿಲಕ ಶ್ರೀ ಚಿಕುಪಾಧ್ಯಾಯ ವಿರಚಿತಮಪ್ಪ ದಿವ್ಯಸೂರಿಚರಿತ್ರಮಹಾಪ್ರಬಂಧದೊಳ್ ಯಾದವಪ್ರಕಾಶಕುಹಕತ್ವಾದಿ ವೈಭವಂ ದಶಮಾಶ್ವಾಸಂ ಸಂಪೂರ್ಣಂ.

|| ಮಂಗಳಂ ಮಹತ್ ಶ್ರೀ ||

---

## —ಏಕಾದಶಾಶ್ವಾಸಂ—

ಶ್ರೀಮದ್ವೈಷ್ಣವಸಂತತಿ |
ತಾಮರಸವ್ರಾತವಿಕಸನೋದ್ಯದ್ದಿನರಾ ||
ಡ್ರಾಮಾನುಜಗುರುಪೂಜ್ಯಂ |
ಕಾಮಿತಮಂ ಸಲಿಸುಗೆಮಗೆ ಶ್ರೀರಂಗೇಶಂ ||೧||

ಬಳಿಕಂದು ಕಾಳಹಸ್ತಿ |
ಸ್ಥಳದೊಳ್ ವರನಾಮಲಿಂಗವನದೀಶಂ ಕ |

ಸೊಗ್ಗಳಸುತೆ ಬಂದರ್ಚಕಸಂ |
ಕುಳಕಿಂತೆಂದುಸಿರ್ದನೊಲ್ದು ಕನಸಿನೊಳಾಗಳ್ ||೨||

ಉಲ್ಲಸಿಪ ಮೞಲಮಂಗಲ |
ದಲ್ಲಿ ಮಹಾಭಕ್ತರಾದ ಗೋವಿಂದಾರ್ಯರ್ |
ಸಲ್ಲೀಲೆಯಿಸಿರ್ದಪರಿ |
ನ್ನಲ್ಲಿಂ ಸಕಲೋಪಚಾರದಿಂ ಸೀಮವರಂ ||೩||

ಬಡಗೊಂಡಿಲ್ಲಿಗೆ ಬಂದು ಮುದ್ರೆಯುಮನಸ್ಮತ್ಸ್ಥಾನಮುಂ ಕೊಟ್ಟು ಸಂ|
ಗಡವಿರ್ಪಂತಿರೆ ಮಾಡಿಮೆಂದೊರೆಯೆ ತಾವಾಶ್ಚರ್ಯಮಂ ತಾಳ್ದಯಾ ||
ಮೃಡನಿಂ ಪ್ರೇರಿತರಾಗಿ ಬಂದಿವರಸತ್ಯಂತೋಪಚಾರಂಗಳಿಂ |
ಕಡುವೇಗಂ ಮಿಗೆ ಕಾಳಹಸ್ತಿಯೆಡೆಗುಯ್ದಾಯೀಶ್ವರಾನುಜ್ಞೆಯಿಂ ||೪||

ಪ್ರೀತಿಯೊಳಖಿಳಸ್ವಾಮ್ಯ |
ಸ್ವಾತಂತ್ರ್ಯಮನಿತ್ತು ಮೇರೆಯಿಂದಿರ್ದರವರ್ |
ಧೂತಾಘನಿಕರರವರಾ |
ಭೂತೇಶ್ವರಭಕ್ತರಾಗಿ ಮುದದಿಂದೆಸೆದರ್ ||೫||

ಬೞಿಕಿತ್ತಲ್ ಶ್ರೀರಂಗ |
ಸ್ಥಳಗೊಳ್ ಪಡೆದಿರ್ಪ ಯಾಮುನಾಚಾರ್ಯರ್ ಪ್ರೋ ||
ಜ್ಜ್ವಳಭಕ್ತಿಜ್ಞಾನೋದಯ |
ದಳವಿಂದಾವರದವಿಷಯಮಾಗಿರೆ ಬೞಿಕಂ ||೬||

ವ|| ಬಂದು ಸ್ತೋತ್ರರತ್ನಮಂ ವಿರಚಿಸಿಯದಂ ನಿಜಶಿಷ್ಯರಾದ ಪೆರಿಯನಂಬಿಗಳ್ಗುಪದೇಶಿಸಿಯವರೊಡನಿಂತೆಂದರದೆಂತೆನೆ :—

ನಯದಿಂ ಕಾಂಚಿಗೆ ಪೋಗಿದಂ ಪಠಿಸುತುಂ ರಾಮಾನುಜರ್ ಬರ್ಪ ದಾ|
ರಿಯೊಳೊಳ್ಪಿಂದಿರಿಮೆಂದು ಪೇೞಲೊಡಮಾಕಾಂಚೀಪುರಕ್ಕೆಯ್ದಿದವರ್ ||
ಪ್ರಿಯದಿಂದಾತಿರುಮಣ್ಣು ತಸ್ಗೊಳದ ತೀರಕ್ಷೋಣಿಯಲ್ಲಿರ್ದು ತಾ |
ಮಯಮಪ್ಪಾಸ್ತುತಿಯಂ ನೆಗೞ್ತಿರೆಯಮಾರಾಮಾನುಜರ್ ಭಕ್ತಿಯಿಂ ||೭||

ವ|| ತೀರ್ಥಾಹರಣಮಂ ಕೈಕೊಂಡು ಬರ್ಪಾಗಳೀಪೆರಿಯನಂಬಿಗಳ್

"ಸ್ವಾಭಾವಿಕಾನವಧಿಕಾತಿಶಯೇಶಿತೃತ್ವಂ[1]" ಎಂಬ ಶ್ಲೋಕಾನುಸಂಧಾನ ಮನೆಸಗುತಿರ್ದನವರಾಗಳ್

ಅದನಾಲಿಸಿ ರಾಮಾನುಜ |
ರಿದನಾರ್ ವಿರಚಿಸಿದರೆಂದು ಕೇಳ್ದೊಡೆ ಶ್ರೀರಂ ||
ಗದೊಳಿರ್ಪಾಳ್ವಂದಾರೆಸ |
ಗಿದರೆನಲಂತಾದೊಡವರನಾಂ ಸೇವಿಸುವೆಂ || ||೮||

ಬಡಗೊಂಡು ಪೋಗಿವೆಂದವ |
ರೊಡನುಸಿರ್ದ*ಸ್ವಾಮಿಗಳಪಿ ತಾಯುಂ ಬೀಳ್ಕೊಂ ||
ಡೊಡನೊಪ್ಪಿಸಿ ಮಜ್ಜನಮಂ |
ದೃಢದಿಂ ಶ್ರೀರಂಗಕೆಯ್ದೆ ಬರ್ಪನವರಾಗಳ್ ||೯||

ವಿಮಲಕವೇರಜೆಯುತ್ತರ |
ದ*ಮೆರ್ದಿರ್ಪ ತಿರುಕ್ಕರಂಬನೂರೆಂಬ ಮಹಾ ||
ತ್ಮರ ಗುಡಿಗೆಯ್ದೆ ಬಹುಸಂ |
ಭ್ರಮದಿರ್ಪರುಮಲ್ಲಿ ದಕ್ಷಿಣಾಶಾತಟದೊಳ್ ||೧೦||

ಕಂಡರ್ ಸಂದ ತಿರುಕ್ಕರಂಬ ತೋಱಿಯಾಳ್ವಂದಾರರುದ್ಯಾನದೊಳ್ |
ಚಂಡಾಂಶುಪ್ರಭೆಯೆಂಬ ವೈಷ್ಣವರಸಂಘಂ ಬರ್ಪುದಂ ಮತ್ತಿದೇಂ ||
ತಂಡಂ ತಾನೆನೆ ವಿಷ್ಣುಧಾಮಕಿರದಾಳ್ವಂದಾರ್ ಸಮಂತೆಯ್ದೆ ಮೇಣ್ |
ಕೊಂಡಾವೈಷ್ಣವರೆಲ್ಲರುಂ ಜನನಸಂಸ್ಕಾರಾರ್ಥಮೆಯ್ತಂದಪರ್ ||೧೧||

ಅದನಿಂತಿರ್ಪರುಮಾಲಿಸುತ್ತೆ ಮಿಗೆ ಮುಖಭ್ರಾಕ್ರಾಂತರಾಗಿರ್ದ ಶ್ರೀ|
ದದೆ ಮತ್ತೇಳ್ದು ಕಟೆಂದು ರಂಗವಿಭುಗಾವೈತಂದುದೇಸಿಪ್ಪವಿ ||
ಳ್ದದೆ ಪೋಯೆತ್ತ ಮ್ರೊಬಳೆ ಪೋಗೆವೆನುತೀರಾಮಾನುಜರ್ ಸೇಱಿ ಮೇಣ್ |
ಪಡೆದಾವಿಗ್ರಹಸೇವೆಯಾದೊಡಮೊಡರ್ಚೆನ್ನೆಯ್ದಿ ನೊಂದಾಕ್ಷಣಂ ||೧೨||

---

ಟಿಪ್ಪಣಿ—1. ಶ್ಲೋ॥ ಸ್ವಾಭಾವಿಕಾನವಧಿಕಾತಿಶಯೇಶಿತೃತ್ವಂ ।
ನಾರಾಯಣ ತ್ವಯಿ ನ ಮೃಷ್ಯತಿ ವೈದಿಕಃ ಕಃ ॥
ಬ್ರಹ್ಮಾ ಶಿವಶ್ಶತಮಖಃ ಪರಮಸ್ವರಾಡಿ ।
ತ್ಯೇತೇಽಪಿ ಯಸ್ಯ ಮಹಿಮಾರ್ಣವ ವಿಪ್ರುಷಸ್ತೇ ॥
ಎಂಬ ಆಳವಂದಾರ್ ಸ್ತೋತ್ರದ ೧೧ ನೆಯ ಪದ್ಯ.

ಆಪೆರಿಯನಂಬಿಗಳ್ ಪಿಂಗೆ |
ತೋಃಪಿಂಗೊಡಗೊಂಡು ಪೋಗೆ ತದ್ವಿಗ್ರಹಸೇ ||
ವಾಪರಿಣತರಪ್ಪಿನವರಾ |
ಪಾಪಾಚಲಕುಲಿಶಮಪ್ಪ ತತ್ಕರತಳದೊಳ್ ||೧೩||

ಕೊಂಕಿರೆ ಮೂಱಂಗುಲಿಗಳ |
ದೇಂ ಕಾರಣಮೆಂದು ಕೇಳೆ ರಾಮಾನುಜರಾ ||
ಶಂಕಿಸಿಯುಲ್ಲಿರ್ಪರೆನವ |
ರೇಂ ಕಥನಮೆ ತಿಳಿಯಬಾರದೆಮಗೆನಲಾಗಳ್ ||೧೪||

ವ|| “ಪೂರ್ವವ್ಯಾಖ್ಯಾನಸಮಯದೊಳವರಭಿಪ್ರಾಯಮಂ ತಿಳಿದರುಂಟೆ?” ಎಂದು ರಾಮಾನುಜರ್ ಬೆಸಗೊಳಲೊಡಂ, ಆಗಳೊರ್ವ ಶ್ರೀವೈಷ್ಣವಂ “ವ್ಯಾಸಪರಾಶರರ ಬೞಿಯೊಳಂ ನಮ್ಮಾೞ್ವಾರೆಡೆಯೊಳಂ ಉಪಕಾರಸ್ಮರಣೆಯುಂ ಮಾಡಿಕೊಂಡು ಬ್ರಹ್ಮಸೂತ್ರಕ್ಕೆ ಭಾಷ್ಯಮನೆಸಗವೇೞ್ಕೆಂದಿವರ್ಗೆ ಸಂಕಲ್ಪಮುಂಟು” ಎಂದು ಪೇೞಲೊಡಮಿವರಾಳ್ವಂದಾರ ವಿಗ್ರಹಮಂ ನೋಡುತಿಂತೆಂದರದೆಂತೆನೆ:—

ನಲಿದಾ ಸ್ವಾಮಿ ಭವತ್ಕೃಪಾತಿಶಯದಿಂದೀಮೂಱಭಿಪ್ರಾಯಮಂ |
ಸಲೆ ಸಾಕಲ್ಯಮನಾಗುಮಾೞ್ಪೆನೆನಲಾಗಳ್ ಮುನ್ನಿನಂತಾಕರಾಂ ||
ಗುಲಿಗಳ್ ಮಾಣ್ದುವದಂ ಸಮೀಕ್ಷಿಸಿ ಮಹಾಕೌತೂಹಲಂಬೆತ್ತರು |
ಜ್ವಲಿಪಾವೈಷ್ಣವರೆಲ್ಲರಿರ್ವರ ಮನೋಭಿಪ್ರಾಯಮೊಂದಾಯ್ತುದೇಂ! ||೧೫||

ಎಂದಿನ್ನೆಮ್ಮ ಮತಪ್ರವರ್ತಕರಿವರ್ ತಾಮಪ್ಪರೀಯರ್ಥದೊಳ್ |
ಸಂದೇಹಂ ಲವಮಿಲ್ಲೆನುತ್ತವರದಂ ನಿಶ್ಚೈಸಿದರ್ ಪೋಗದ ||
ಲ್ಲಿಂದಾರಂಗನಿವಾಸನಂ ಭಜಿಸಲಾಕಾಂಚೀಪುರಕ್ಕೆಯ್ದಿ ಸಾ |
ನಂದಂ ಸ್ವಾಮಿಗೆ ಮಜ್ಜನಕ್ರಿಯೆಯನೆಂದುಂ ಮಾೞ್ಪವೊಲ್ ಮಾಡಿದರ್ ||

ಬೞಿಕಿವರ್ಗೆ* ಬ್ರಹ್ಮಸೂತ್ರಂ |
ಗಳ್ ಸುವ್ಯಾಖ್ಯಾನಮಂ ವಿರಚಿಸಲ್ವೇೞ್ಕುಂ ||
ಬಳಸನ್ಮತಿ ಪುಟ್ಟಿ ಪೊದ |
ೞ್ದಿಳಸಿ ಮನೋಗತಮೆನಿಸಿತು ನುಡಿದರ್ ತಮ್ಮೊಳ್ ||೧೬||

ಇನ್ನೆಮಗೆ ಪಂಚಸಂಸ್ಕಾ |
ರೋನ್ನತಿಯಾದಲ್ಲದಿದನೊಡರ್ಚೆಪ ಕರ್ತೃ ||
ತ್ವಂ ನಿಜಮಲ್ತುಚಿತಂ ವ್ಯ |
ತ್ಪನ್ನಸಮಾಶ್ರಯಣಮಿಳೆಯೊಳೆಲ್ಲಿರ್ದಪುದೋ ||೧೮||

ವ|| ಮತ್ತಂ ಭೇದಾಭೇದಂಗಳಾದ ತತ್ವನಿರ್ಣಯಮುಮನುಪಾಯ ಮುಮನೆಂತು ನಿಶ್ಚಯಿಸುವುದಿವಂ ಪ್ರಶ್ನೆಗೆಯ್ವುದರ್ಕಾಳವಂದಾರುಮಿಲ್ಲೆಂದೀರಾಮಾನುಜರ್ ಚಿಂತಿಸಿ

ವರದಸ್ವಾಮಿಯನೀ ಸಮಸ್ತವಿಷಯಕ್ಕಂ ಪ್ರಶ್ನೆಯಂ ಮಾಳ್ಪೆಮೆಂ |
ದಿರದಾಗಳ್ ತಿರುಕಚ್ಚಿನಂಬಿಯೊಡನರ್ಚಾವಿಗ್ರಹಾವಸ್ಥೆಯಂ ||
ಹರಿಯುಲ್ಲಂಘಿಸಿ ಮಾತನಾಡುಗುಮೆನಿಪ್ಪಾವಾರ್ತೆಯಂ ಕೇಳ್ದು ಸಾ |
ದರಮೀತನ್ಮುಖದಿಂದಿದಂ ತಿಳಿಯವೇೞ್ಕೆಂದಾತನಂ ಪೊರ್ದಿದರ್ ||೧೯||

ವ|| ಅಂತು ಪೊರ್ದಿಯಾತಿರುಕ್ಕಚ್ಚಿನಂಬಿಯೊಡನಿಂತೆಂದರದೆಂತೆನೆ:-

ಬಗೆದಿರ್ಕುಂ ಮನದೊಳ್ ಸಂ |
ದೆಗಗಳ್ ಕೆಲವವಱದೊಂದು ಪರಿಹಾರಾರ್ಥಂ ||
ವರದಂಗೊರೆದೆಮಗಾಪ |
ನ್ನಗಶಯನನಿರೂಪಮಂ ಪೊದೞ್ದುರದೊರೆಯಿಂ ||೨೦||

ಎನಲೊಡಮಂತು ತಿರುಕ್ಕ |
ಚ್ಚಿನಂಬಿಗಳ್ ಸ್ವಾಮಿಯೆಡೆಗೆ ಬಂದಚ್ಯುತ ನಿ ||
ನ್ನನೆ ಕೆಲವು ಸಂಶಯಂಗಳ |
ನೆನಿತಾನುಂ ಬಿಡಿಸಲೆಂದು ಕ್ರಮದಿಂ ನಿನ್ನೊಳ್ ||೨೧||

| ಇಂದ್ರವಜ್ರಂ ||

ರಾಮಾನುಜರ್ ಪೇೞಲೊಡಂ ಕರಂ ಪ್ರೀ
ತಂ ಪೋಕಿ ವಿಜ್ಞಾಪಿಸಿದಂ ಸಮಂತಾ |
ನಾವೋದದಿಂ ಸಂಶಯಗಳವೊ್ಮ |
ಭೀಮರಾಮಾನುಜಾರ್ಯ! ಸ್ಫುಟಮಪ್ಪವೊಲ್ ಪೇೞ್ ||೨೨||

ಎನೆ ತದ್ವಾಕ್ಯಮನಾಲಿಸಿಸ್ವವರ ಸಂದೇಹಂಗಳಂ ಬಲ್ಲೆನಾಂ |
ಮನದೊಳ್ ಸೂತ್ರಸಿಕಾರ್ಯಮಂ ಸ್ಫುಟಮಪ್ಪವೊಲ್ ವ್ಯಾಖ್ಯಾನಮಂ ಮಾಡುವೆಂ ||

ಬಿಕ್ಕನುತುಂ ತತ್ತ್ವದ ನಿರ್ಣಯಾದಿ ಕೆಲವುಂ ಸಂದೇಹಮುಂಟೆಂದು ಯೋ |
ಚನೆಯುಂ ಮಾಡಿದರಿಂತವರ್ಕೆ ತಿಳಿಸೆಂದಂ ಭಾರ್ಗವೀವಲ್ಲಭಂ ||೧೩||

ವ|| ಆ ವರದರಾಜರಿಂತು ನಿರೂಪಿಸಲೊಡಮದಂ ಕೇಳ್ದೀತಿರುಕ್ಕಚ್ಚಿ ನಂಬಿಗಳ್ ರಾಮಾನುಜರೊಡನೆ ನಿಮ್ಮ ಮನೋಜನಿತಸಂಶಯಪರಿಹಾರ ಮಿಂತೆಂದು ಸ್ವಾಮಿ ಪೇಳ್ದನೆಂದಱಿಪಲೊಡಮದನಾಲಿಸಿ,

ಇವರೆನ್ನ ಚಿತ್ತದೊಳ್ ಸಂ |
ಭವಿಸಿರ್ದರ್ಥಕ್ಕೆ ವರದರಾಜಂ ನಿಜಮ ||
*ಪ್ಪವೊಲುಸಿರ್ದನೆಂದದರ್ಕಂ |
ತು ವಿಲಾಸಮನಾಂತು ಮನದೊಳಾಳೋಚಿಸುತುಂ ||೧೪||

ಬಳಿಕೊಲ್ದು ಪೆರಿಯನಂಬಿಯು |
ಬಳಿಯೊಳ್ ಕ್ರಮದಿಂ ಸಮಾಶ್ರಯಣಮಂ ಮಾಳ್ಪು ||
ಜ್ಜ್ವಳಮತಿಯಿಂ ಶ್ರೀರಂಗ |
ಸ್ಥಳಕೆಯ್ದಲ್ ಪಯಣಮಾದರಿವರೊಳ್ವಗಲೊಳ್ ||೧೫||

ವ|| ಆಕಾಲದೊಳ್ ಶ್ರೀರಂಗದೊಳಗಿರ್ಪ ಶ್ರೀವೈಷ್ಣವರೆಲ್ಲರುಮ ನ್ಯೋನ್ಯಮಾಗಿ ಪೆರಿಯನಂಬಿಗಳೊಡನಿಂತೆಂದರದೆಂತೆನೆ :—

ಹರಿಧಾಮಕ್ಕಾಳ್ವಂದಾ |
ರಿರದೆಯ್ದಿದರಮ್ಮ ದರ್ಶನೋದ್ಧಾರಕರೊ ||
ರ್ವರುಮಿಲ್ಲಾಳ್ವಂದಾರ್ ಪೊದ |
ಲೆ ರಸಜ್ಞರ್ ಮುಂದೆ ಬರ್ಪನಂ ತಿಳದೊಲವಿಂ ||೧೬||

ಶ್ರೀರಾಮಾನುಜರಲ್ಲಿಯೆ |
ಭೂರಿಕಟಾಕ್ಷಮನೊಡರ್ಚಿದಂ ನೀಮದಱಿಂ ||
*ಸಾರತರಮವರ್ಗೆ ವರಸಂ |
ಸ್ಕಾರಂಗಳನೈದನೆಸಗಿವಾಗಮವಿಧಿಯಿಂ || ||೧೭||

ಅವರಂ ಮದ್ದರ್ಶನಸಂ |
ಪ್ರವರ್ತಕರೆನಿಸಿಪ್ಪವೊಲ್ ನೆಗಳ್ಚುವುದೆನೆ ವೈ ||
ಷ್ಣವರಂ ಬೀಳ್ಕೊಂಡವರು |
ತ್ಸವದಿಂ ಸಕುಟುಂಬರಾಗಿ ಬರ್ಪನಮಾಗಳ್ ||೧೮||

॥ ವಂಶಸ್ಥವೃತ್ತಂ ॥

ಪ್ರಯಾಣದಿಂ ಕಂಚಿಗೆ ಸಂದ ದಕ್ಷಿಣಾ |
ಶೆಯಾದ ಭಾಸ್ವನ್ಮಧುರಾಂತಕೂರೊಳ ॥
ಲ್ಲಿಯೇಱಿಕಾತ್ತಪ್ಪೆರುಮಾಳ ಸನ್ನಿಕ |
ರ್ಷೆಯಲ್ಲಿವರ್ ತಾಂ ಸಕುಟುಂಬರಿರ್ದರ್ ॥೧೯॥

ಆರಾಮಾನುಜರಾಗಳ್ |
ಶ್ರೀರಂಗಕೆ ಬರುತೆ ಪೆರಿಯನಂಬಿಗಳಿರ್ಪ ॥
ವೂರಂ ಸಾರ್ದಾದೇವಾ |
ಗಾರಕೆ ಬಲವರುತುಮಿರ್ಪ ಸಮನಂತರದೊಳ್ ॥೨೦॥

ಅಲ್ಲಿಯು ತೆಂಕಣ ಬಾಗಲೊ |
ಳುಲ್ಲಸಿತಮುದಾರ ನಾಗತರುವಿನ ಬೞಿಯೊಳ್ ॥
ನಿಲ್ಲದೆ ಸದ್ವ್ಯಾಖ್ಯಾನಮ |
ನಲ್ಲಿಯುವರ್ ಪೆರಿಯನಂಬಿಗಳ್ ಮಾಡುತ್ತುಂ ॥೨೧॥

ಇರೆ ಕಂಡಾಂ ಪೋಪ ಶ್ರೀರಂಗಮೆಯೆಮಗಿದಿರ್ವಂದತ್ತು ತಾನಿಲ್ಲಿಯೇ ಭಾ|
ಪುರೆಯೆಂದತ್ಯಂತಹರ್ಷಂಬಡೆದವರ್ಗೆ ನಮಸ್ಕಾರಮಂ ಗೆಯ್ದವರ್ ಸ ॥
ತ್ವರಮಿಾಗಳ್ ಪಂಚಸಂಸ್ಕಾರಮನೆಮಗೊಲವಿಂ ಮಾಡವೇೞ್ಕೆಂದೊಡಂ ವಿ|
ಸ್ಫುರಿಪಾಸತ್ಯವ್ರತಕ್ಷೇತ್ರಮೆನಿಸುವ ಮಹಾಕಾಂಚಿಯೊಳ್ ತಾನಿದಕ್ಕುಂ ॥

ಎನಲೊಡಮನ್ನೆವರಂ ಮೇಣ್ |
ತನುವಿದು ತಾನಿರ್ಪುದರ್ಕೆ ಪೊಣೆಯಾರದಱಿಂ ॥
ಮನವೊಸೆದಿಲ್ಲಿಯೆ ವಿರಚಿಪು |
ದೆನಲಲ್ಲಿಯೆ ಪಂಚಸಂಸ್ಕರಣಮಂ ನೆಗೞ್ದರ್ ॥೨೨॥

ಬೞಿಕೀರಾಮಾನುಜರ್ಕಾಂಚಿಗವರನೊಡಗೊಂಡೆಯ್ದಿಯಾತ್ಮಾಲಯಾರ್ಥ |
ಸ್ಥಳಮಂ ಕೊಟ್ಟೊಳ್ಪಿನಿಂ ದ್ರಾವಿಡದೆಸೆವಪ್ರಬಂಧಂಗಳೊಳ್ ಸದ್ರಹಸ್ಯಂ|
ಗಳನೋದುತ್ತಿರ್ಪ ತಜ್ಜನನಿ ಗಮಿಸೆ ವೈಕುಂಠಕಾತಾಯ್ಗ ಕರ್ಮಂ |
ಗಳನಾಮ್ನಾಯೋಕ್ತಮಿರ್ಪಂತೆಸಗಿ ಪದೆದು ಗಾರ್ಹಸ್ಥ್ಯದಲ್ಲಿರ್ದರಾಗಳ್ ॥

ವ॥ ಇಂತಿರ್ದೊಂದು ದಿವಸದೊಳ್—

ಮನೆಗೆಯ್ದಿಯಾತಿರುಕ್ಕ |
ಚ್ಚಿನಂಬಿಯುಂ ಭೋಜನಕ್ಕೆ ಬರವೇೞ್ದಂದೆಂ ‖
ದಸಘುರ್ ಗೃಹದೊಳ್ ಸೌಖ್ಯಮ |
ನೆಸಿತಾನುಂ ರಚಿಸವೇೞ್ಪು ಪತ್ನಿಗೆ ಬೞಿಕಂ ‖೩೫‖

ಸ್ವಾಮಿಯು ಸನ್ನಿಧಾನಕವರೆಂದಿನ ಸೇವೆಗೆ ಪೋದ ವೇಳೆಯೊಳ್ |
ಈಮಹಿಮಾನ್ವಿತರ್ ತಿಳಿದು ಭಾವಮುನಾಭವನಕ್ಕೆ ಬಂದು ಸು ‖
ಪ್ರೇಮದಿನುಂಟವಶ್ಯಮೆಮಗೊಳ್ದು ಪ್ರಸಾದಿಸಿಮಾಗಳೆಂದೊಡಾ |
ಭಾಮಿನಿಯುಂತವರ್ಗೆ ರುಚಿಯುಪ್ಪಿನವೊಳ್ಳುಣಿಸಂ ನೆಗೞ್ಚಿದಳ್ ‖೩೬‖

ಅವರುಂಡೆಲೆಯುಂ ಕೋಲಿಂ |
ನಿವಾರಿಸುತೆ ಬೞಿಕೆ ಮಿಂದಳಸಿತಱಿೞೊಳಾವೈ ‖
ಷ್ಣವಮಣಿ ರಾಮಾನುಜರಾ |
ತ್ಮವಸತಿಗೆಯ್ತರಲೊಡಂ ಸ್ವಕೃತ್ಯಮನುಸಿ*ರ್ದಳ್ ‖೩೭‖

ಅಱಿಯದೆ ತತ್ಪ್ರಭಾವಮನೊಡರ್ಚಿಗೆಯಿಂತಕಟೆಂಬೆವೇನಿದೊಂ |
ದುಱಿಯುಸರಾಧವೊಂದುದಿನಮೆಣ್ಣೆಯನೊತ್ತುವ ವೈಷ್ಣವಂಗೆ ನೀಂ ‖
(ನಿರ)ದುೞಿದನ್ನಮಂ ಕುಡೆಸಲಿರ್ದೊಡಮಿಲ್ಲೆನೆ ತಾಮೆ ನೋಡಿ ಮೇಣ್ |
ಮಱಿಯಿಸಲಕ್ಕುಮೇ ಎಸಿತು ಸಿರ್ದಯೆಯಯೋ ಎನುತಾಂತು ಕೋಪಮಂ ‖

ಇಂತಿರಲೊಂದುದಿನಂ ಶ್ರೀ |
ಕಾಂತನ ಸನ್ನಿಧಿಗೆ ಪೋಗಲಿವರಾಗಳ್ ತಾಂ ‖
ಮುಂತೊಂದು ಬಾವಿಯೊಳ್ ನಿಜ |
ಕಾಂತೆಯುಮಾಪೆರಿಯನಂಬಿಯುಬಲೆಯುಮಿರ್ದರ್ ‖೩೯‖

ನೀರಂ ಸೇಂದುತ್ತಿರೆ ತ |
ನ್ನಾರಿಯು ಕುಂಭಾಂಬು ಸೋಂಕಿದುದನೀಕ್ಷಿಸಿವರ್ ‖
ತಾರತಮುತ್ವದಿನಿಂತು ಕ |
ಠೋರೋಕ್ತಿಯೊಳೊಂದು ಮಾತನವರೊಡನುಸಿ*ರ್ದರ್ ‖

ನೀಮೆ ಬೃಹಚ್ಛರಣರ್ ಮ |
ತ್ತಾಮೇ ವಡಮರ್ ಸಮಂತಿದಂ ಮಱಿಚ್ಚಪುದೆಂ ‖

ತಾಮೆಂದು ಬಿಸುಟದಂ ಮಿಂ |
ನಾವಗಾನಿನಿ ತನ್ನ ಮಂದಿರಕ್ಕೆಯ್ತಂದಳ್ ||೬೧||

। ದ್ರುತವಿಲಂಬಿತ ವೃತ್ತಂ ॥

ಪೆರಿಯನಂಬಿಗಳಾತ್ಮನಿಕೇತನ |
ಕ್ಕಿರದೆ ಬಂದಿದನಾಲಿಸಿ ಸಿನ್ನೆಯಿಾ ||
ಪರಿಯ ಭಾಗವತರ್ಗಪಚಾರಮಂ |
ವಿರಚಿಸಲ್ಕಿನು ಯೋಗ್ಯಮೆ ಕಾಮಿನೀ! ||೬೨||

ಎನುತೆ ಮುಳಿದಿಲ್ಲಿಯಾಮಿರ |
ಲನುಚಿತಮಿಂತೆಂದು ಬಟ್ಟೆ ಸಕುಟುಂಬಂ ಸ ||
ದ್ವಿನುತಶ್ರೀರಂಗಕ್ಷೇ |
ತ್ರನಿವಾಸಕೆ ಪೆರಿಯನಂಬಿಗಳ್ ಪೋಗಲೊಡಂ ||೬೩||

ಆಮೇಲೆ ಗೃಹಕೆ ಬಂದೀ |
ರಾಮಾನುಜರಬಲೆಯೆಸಗಿದುಜ್ಜಗವಂ ಕೇ ||
ಳ್ದಾಮರ್ಷದಿಂದಮಾನಿಜ |
ಭಾಮಿನಿಯಂ ನೋಡಿ ನುಡಿದರನುಚಿತಭೀತರ್ ||೬೪||

ಇನಿತುಂಟೆಯ ಕಟಕಟ ಕೇಳ್ |
ವನಿತೆ ತಿರುಕ್ಕಚ್ಚಿ ನಂಬಿಯುಂತೊಡೆ ತದ್ಭ |
ಜನನುಂ ತೊಲಗಿಸಿ ಮಿಂದಂ |
ದಿಸ ಭಾಗವತಾಪಚಾರಮಲ್ಲಗೆ ಮತ್ತಂ ||೬೫||

ಎನಗಭ್ಯಂಗಮನೆಸಗಿದ |
ವಿನುಳಶ್ರೀವೈಷ್ಣವಂಗೆ ವಂಚಿಸದೀಯ ||
ನ್ನಮನೀದೊಡಿದರ್ಗಮಿಲ್ಲಂ |
ಗು ಮದುಕ್ತಿಯ [ನಂತು] ಮಿಾಱಿದೊಂದಪಚಾರಂ ||೬೬||

ನೀನಿಂತಪ್ಪಪಚಾರಮಂ ನೆಗಱ್ದಿಯಿಂ ನಿನ್ನಿಂದಮೇಂ ಕಜ್ಜಮುಂ |
ಟಾನೇಗೆಯ್ವೆನಿನಿತ್ತು ಪುಟ್ಟಿದೊಡೆ ತಾಳಲ್ಕಕ್ಕುಮೇಯಂತಱಿಂ ||
ನೀನೀ ಬೇಡೆಮಗೆಂದು ಮಂದಿರದೊಳರ್ದರ್ಥಂಗಳಂ ಕೊಟ್ಟು ಮ |
ತ್ತಾ ನಾರೀಮಣಿಯಂ ತನರ್ಮನೆಗೆ ಪೋಗೆಂದಾಶುವಿಂ ಬಿಟ್ಟವರ್ ||೬೭||

ಕೆನ್ಮನಸಾಶ್ರಮತೆಯೊಳಾಂ |
ಸನ್ಮತಮುಲ್ತ್ರಿಪುರ್ಗದೆಂದನಂತಸರದೊಳೊ ||
ಳ್ಪಂ ಮಿಂದು ವರದನನುಮತಿ |
ಯಿಂ ಮಿಗೆ ಕಾಷಾಯವಸನದಂಡತ್ರಯಮಂ ||೮೯||

ತಳೆದರ್ ಯತ್ಯಾಶ್ರಮತ್ವಂದಳೆದ ಬಜಿ‍ಕಮಾಸ್ವಾಮಿ ತಾನರ್ಚಕಗರ್ಗ|
ಜ್ಜ್ವಳಮಪ್ಪಂತಿಂತು ಪೇಳ್ದಿಂ ಕರೆವುದು ಯತಿರಾಜಾಖ್ಯೆಯಿಂದಿನ್ನೆನುತ್ತಾ ||
ಗಳೆಯಂತಕ್ಕೆಂದು ಮತ್ತಾ ಪೆಸರನವರೊಳಪ್ಪೈಸಿ ತಾಮೆಲ್ಲರುಂ ಮಂ |
ಗಳವಾದ್ಯಾದ್ಯುತ್ಸವಂ ಮುಂದೆಸೆಯೆ ನೆಗಳ್ದಿ* ವಿಖ್ಯಾತಿಯಪ್ಪಂತುದಾರರ್ ||

ಮೊದಲವರೊಲವಿಂದಿರ್ದಾ |
ಸದನಮನೇ ಮಠಮನೆಸಗಿಯುಲ್ಲಿರಿಸಿ ಮನೋ |
ಮುದಮುರ್ವೆ ವರದರಾಜನ |
ಸದಮಳಸನ್ನಿಧಿಗೆ ಬಂದರರ್ಚಕಮುಖ್ಯರ್ ||೯೦||

ಇದು ನಮಿತಹಿಮಕರಚೂಡಕಮಲಭವಮುಖಸುರಸಮುದಯಮೌಳಿಮಣಿಗಣಘೃಣಿಸಂಧ್ಯಾರಾಗಾನುಗುಣಪ್ರಚುರರುಚಿತಾರಕಾಯಮಾನ ರಂಗವಿಭುಚರಣಯುಗಳನಖಮಯೂಖಸುಧಾಪೂರವಿಹಾರಮದಮರಾಳೀಕೃತ ಮಹಿಸಪುರವರಸಾಮ್ರಾಜ್ಯಸಂಪನ್ನ ರಾಜಾಧಿರಾಜರಾಜಪರಮೇಶ್ವರಾಪ್ರತಿಮಪ್ರೌಢಪ್ರತಾಪ ಬಿರುದೆಂತೆಂಬರಗಂಡ ಯದುಕುಲನಳಿನದಿನಕರರಾದ ಶ್ರೀಚಿಕದೇವರಾಯಮಹಾರಾಜಪ್ರಸಾದಪರಿಪೂರ್ಣ ಸಚಿವನಿಚಯತಿಲಕ ಶ್ರೀ ಚಿಕುಪಾಧ್ಯಾಯ ವಿರಚಿತಮಪ್ಪ ದಿವ್ಯಸೂರಿಚರಿತ್ರಮಹಾಪ್ರಬಂಧದೊಳ್ ಶೇಷಾಂಶಭವರಾದ ರಾಮಾನುಜಾಚಾರ್ಯರ ಯತ್ಯಾಶ್ರಮಸ್ವೀಕಾರಾದಿ ವರ್ಣನಂ ಏಕಾದಶಾಶ್ವಾಸಂ ಸಂಪೂರ್ಣಂ.

|| ಮಂಗಳಂ ಮಹತ್ ಶ್ರೀಃ ||

---

## —ದ್ವಾದಶಾಶ್ವಾಸಂ—

ಶ್ರೀಕರವೈಷ್ಣವಮತಶ |
ತ್ನಾಕರಪರಿಪೂರ್ಣಚಂದ್ರಯತಿರಾಜಮನೋ ||
ಬ್ಜಾಕರವಿಹರಣಹಂಸಂ |
ಸೌಕಲ್ಯಮನೆಮಗೆ ಕುಡುಗೆ ಶ್ರೀರಂಗೇಶಂ ||೧||

ವ|| ಬಳಿಕಾವೃತ್ತಾಂತಮಂ ಕೇಳ್ದು ಕೂರತ್ತಾಳ್ವಾನುಂ ಮೊದಲಿಯಾಂಡಾನುಂ ಕೇಳ್ದವರಿರ್ವರುಂ ಸೋದರದಳಿಯಂದಿರಾದುದಱಿಂ ಸಂತುಷ್ಟಚಿತ್ತರಾಗಿ ಆಳವಂದಾರ ಕಟಾಕ್ಷಂ ಫಲೋನ್ಮುಖಮಾಯ್ತೆಂದು ಮಠಕ್ಕೆ ಬಂದು,

ಸ್ವಾಮಿಯ ಪದಕ್ಕೆ ಮಣಿದಾ |
ರಾಮಾನುಜರೆಡೆಗೆ ಪೋಗಿ ತದನುಗ್ರಹಮಂ ||
ಕಾಮಿಸಿ ಬಳಿಕವರಿಂದಂ |
ತಾಮಿರ್ವರ್ ಪಂಚಸಂಸ್ಕೃತಿಯನುಱೆ ಪಡೆದರ್ ||೧||

ವ|| ಅಂತು ಪಡೆದಾಪ್ತಕೈಂಕರ್ಯಂಗಳಂ ಮಾಡಿಕೊಂಡಿರ್ದನಂತರಂ,

ಬಸೆದೀರಾಮಾನುಜರ್ ಸೂತ್ರಕೆ ಸಮುಚಿತಭಾಷ್ಯಂಗಳಂ ಮಾಳ್ಪುದ
ಕೆರ್ಗಾಂ| ದು ಸಹಾಯಂ ಸಾರ್ದುದೆಂದೊಲ್ದವರ್ಗೆ* ಸಕಲಶಾಸ್ತ್ರಂಗಳಭ್ಯಾ
ಸಮಂ ಮಾ || ಡಿಸುತಿರ್ದರ್ ಯಾದವಾಭಿಖ್ಯನ ಜನನಿಯವರ್ಗಾದ ಮಹಾ
ತ್ಮ್ಯಮಂ ಸಂ | ಧಿಸಿಯೆಲ್ಲರ್ ದೇವಗೇಹಾಂತದೊಳೆಸಪ್ಪುಪಚಾರಂಗಳಂ
ನೋಡಿಯಾಗಳ್ ||೩||

ಇವರ್ಗಸ್ಮದ್ವರಸೂನು ಮಾಡಿಸಿದನೆಲ್ಲಾ ವಿದ್ಯೆಯಭ್ಯಾಸಮಂ |
ಧ್ರುವಮಾತಂ ಪರದೇಶದಂಡಿಯೆನಿಸಿನ್ನಿಂತಿರ್ಪುದಲೆತ್ತಳ್ವನು ||
ತ್ತೆ ವಿಚಾರಂದಳೆದಾಕೆ ಚಿಂತಿಸಲೊಡಂ ತತ್ಸ್ವಪ್ನದೊಳ್ ಬಂದು ವಿ |
ಷ್ಣುವೆ ನಿನ್ನಾತ್ಮಜನಂ ತ್ರಿದಂಡಧರಸನ್ಯಾಸತ್ವಮಂ ಮಾಡವೇಳ್ ||೪||

ಎನಲಾಸ್ವಪ್ನಮನಾಕೆಯಾಲಿಸಿಯನೇಕಾಶ್ಚರ್ಯಂಗಳಿಂದಾಗಳಾ |
ಕನಸಂ ತನ್ನಣುಗಂಗೆ ಪೇಳ್ದು ಮಗನೇ ನೀನಿಂತು ಮಾಡೆಂದೊಡಾ ||
ಜನನೀವಾಕ್ಯಗುರುತ್ವದಿಂದೆಯುಮದೊಂದದ್ವೈತತಾತ್ಪರ್ಯದಿಂ |
ಮನದೊಳ್ ಸಂಶಯಯುಕ್ತನಾಗಿ ಬಳಿಕೀಸಂದೇಹಮೆಂತೈದುಗುಂ ||೫||

ಎನುತಾಸ್ವಾಮಿಯಿಸಲ್ಲದೆ |
ಜನಿಯಿಸದೀಸಂಶಯಕ್ಕೆ ಪರಿಹೃತಿಯೆಂದೊ ||
ಳ್ಪನಿನೆಯ್ದಿಯಾತಿರುಕ್ಕ |
ಜ್ಞೆ ನಂಬಿಯುಂ ಕುಱಿತು ತನ್ನ ಬಗೆಯಂ ಪೇಳ್ವಂ ||೬||



ಎನ್ನೆರ್ದೆಯೊಳಿರ್ಪ ಸಂದೆಗ |
ಮಂ ನೀಂ ಪದೆದಿಂದು ವರದನೊಳ್ ಪೇೞ್ವಿನೆ ತಾಂ ||
ಪನ್ನಗಶಯನನೊಳರುಳೊಳ್ |
ಬಿನ್ನವಿಸಿದರಿಂತು ಲಾಲಿಸೆಲೆ ಲಕ್ಷ್ಮೀಶಾ ||೭||

ಆಸಿಸಿ ತ್ರಿದಂಡಯುತಸ |
ನ್ನ್ಯಾಸಮನಿನ್ನಾತನೆಸಗಲಕ್ಕುಮೆ ಎನೆ ಪ ||
ದ್ಮಾಸಖನಿಂದುಸಿರ್ದಂ ಮೊದ |
ಲೀಸೌಕರ್ಯವನೆ ತಜ್ಜನನಿಗಾಂ ಪೇೞ್ದಂ ||೮||

ಆದಱಿಂ ನೀವೊಸೆದಾತನಂ ಕ್ರಮದಿನೀಸನ್ನ್ಯಾಸಮಂ ಮಾಡವೇ |
ೞ್ಪುದು ನಿಸ್ಸಂಶಯಮಿನ್ನಿದರ್ಕೆನಲವರ್ ತ್ವಚ್ಚಿತ್ತಸಂದೇಹಮಿಂ ||
ತಿದನೆನ್ನೊಳ್ ಸ್ಫುಟಮಪ್ಪವೋಲುಸಿರ್ದನೀಸರ್ವೇಶ್ವರಂ ಸಂಶಯಾ |
ಸ್ಪದಮಿಲ್ಲೆಯ್ದಿ ತ್ರಿದಂಡಯುಕ್ತಮೆಸವೀ ಸತ್ಕೃತ್ಯದೊಳ್ ರೂಢಿಸಿಂ ||೯||

ವ॥ ಇಂತೆಂದಾತಿರುಕಚ್ಚಿನಂಬಿಯು ಮಾತಂ ಕೇಳ್ದಾಯಾದವಂ ತದನಂತರದೊಳ್

ಚಪಲತ್ವಂ ಪರಿದೆಯ್ದೆ ತನ್ಮಠಕೆ ಬಂದಾಗಳ್ ಶಿಖಾಬ್ರಹ್ಮಸೂ |
ತ್ರಪರಿತ್ಯಾಗನಿಮಿತ್ತಮಾಗಿ ಸಲೆ ಪ್ರಾಯಶ್ಚಿತ್ತಮಿನ್ನಪ್ಪುದ ||
ರ್ಕೆ ಪಟುತ್ವಂ ಧರಣೀಪ್ರದಕ್ಷಿಣಕೆ ತಾನಿಲ್ಲೇವೆನೆಂತೆಂದದ |
ರ್ಕೆ ಪರಾಲೋಚನೆಗೆಯ್ಯಲಿಂತು ನುಡಿದಂ ತತ್ಸ್ವಪ್ನದೊಳ್ ಶ್ರೀಧವಂ ||೧೦||

ನಿನಗೀಚಿಂತೆಯೆ ಬೇಡ |
ನ್ನನುಮಾನಿಸದಸ್ಮದೀಯರಾಮಾನುಜರಂ ||
ಮನದೊಳ್ಳಿಂ ಬಲವಂದಂ |
ತನಘಾ ಶಿಖಾಬ್ರಹ್ಮಸೂತ್ರಯುತನಾಗಲೆ ನೀಂ ||೧೧||

ಸನ್ನ್ಯಾಸಮನೆಸಗೆನೆ ಬಹು |
ಧನ್ಯಂ ರಾಮಾನುಜರ್ಗೆ ಬಲವಂದು ಗುರು ||
ತ್ವನ್ಯಾಯದೆ ಮೊದಲುಸಿರ್ದಂ |
ತನ್ನಮನೆರ್ದೆಯುಳ್ಳ ಬಗೆಯುದಾತಂ ಕ್ರಮದಿಂ ||೧೨||

ವ|| ಶಿಖಾಯಜ್ಞೋಪವೀತಜಾತಕರ್ಮಾದಿಸಕಲಸಂಸ್ಕಾರಸಮೇತನಾಗಿ,
ವಿಮಲತ್ರಿದಂಡಸನ್ನ್ಯಾ |
ಸಮನಂಗೀಕರಿಸಿ ಬಟಿಕ ರಾಮಾನುಜರ್ಗೆ* ||
ತ್ತಮಶುಶ್ರೂಷೆಯನೊಡರಿಸು |
ತಮರ್ದಿ*ರೆ ಗೋವಿಂದಜೀಯರೆಂಬಭಿಧೇಯರ್ ||೧೩||
ಸತತಂ ಸತ್ಪ್ರೀತಿಯೊಳು |
ನ್ನತಿವೆತ್ತೀದರ್ಶನಾನುಗುಣಮಾಗಿರೆ ತಾಂ ||
ಯತಿಧರ್ಮಸಮುಚ್ಚಯಮೆನಿ |
ಪತುಲಗ್ರಂಥಮನೊಡರ್ಚೆ ಪೃಥ್ವೀತಲದೊಳ್ ||೧೪||
ಕೆಲವು ಪಗಲಿರ್ದು ವೈಷ್ಣವ |
ಸುಲಲಿತಮಾರ್ಗಂಗಳೊಳ್ ಪ್ರಸಿದ್ಧತೆವೆತ್ತು ||
ಜ್ವಲವೈಕುಂಠಪುರಕ್ಕೆ ವಿ |
ಮಲಮತಿಗೋವಿಂದಜೀಯರೆಯ್ದಿದರಿತ್ತಲ್ ||೧೫||
ವಿಳಸಚ್ಛ್ರೀರಂಗದೊಳು |
ಜ್ವಲಿಸಿರ್ಪಾಪೆರಿಯನಂಬಿ ಮೊದಲಾದರ್ ಕೇ ||
ಳ್ದೊಲವಿಂದಿದನಾಳ್ವಂದಾ |
ರಲಲಿತಕರುಣಾಕಟಾಕ್ಷ ಫಲಮಾಯಿತ್ತಾಗಳ್ ||೧೬||
ಎನುತವರನಿಲ್ಲಿಗೊಡಗೊಂ |
ಡನುಪಮಮುದ್ದರ್ಶನಪ್ರವರ್ತಕರಪ್ಪಂ ||
ತನಘರ್ ಯಾಚಿಸಿ ಮೇಣ್ ಪೆರಿ |
ಯನಂಬಿಯೊಳ್ ಪೇೞಲೊಡಮದರ್ಕವರಾಗಳ್ ||೧೭||
ಪರಮಮುದಾನ್ವಿತಚಿತ್ತರ್ |
ಭರದಿಂದಂ ಕರೆದು ತಿರುವರಂಗಪ್ಪೆರುಮಾ ||
ಳರೆಯರನೀಕ್ಷಿಸಿ ಕಾಂಚೀ |
ಪುರಮಂ ಸೇರ್ದೆಯ್ದಿಯೊಂದು ಕಜ್ಜಮನೆಸಗಿಂ ||೧೮||
ನಯದಿಂ ದೇವಸುಗಾನದಿಂ ವರದರಾಜಂ ಮೆಚ್ಚು ವಂತೊಲ್ದು ಪಾ |
ಡಿಯೆ ರಾಮಾನುಜರಂ ಕಡಂಗಿಬೇಡಗೊಂಡೈತರ್ಪುದಿಂದೆಂದೊಡ ||

ತ್ಯಯುಕಾಂಚೀನಗರಕ್ಕೆ ಪೋಗಿ ನಲವಿಂ ಆನುಂ ತಿರುಕ್ಕಚ್ಚಿನಂ |
ಬಿಯುವೊಂದಾಗಿ ಲಸನ್ಮಹಾವರದರಾಜಾಗಾರಮಂ ಪೊರ್ದಿದರ್ ||೧೯||

ವ|| ಅಂತೆಯ್ದಲೊಡಮಾಸ್ಥಲವಾಸಿಗಳಾದ ಶ್ರೀವೈಷ್ಣವರ್ ಮಹಾಕ್ಷೇತ್ರದಿಂ ಬಂದಾತಿರುವರಂಗಪ್ಪೆರುಮಾಳರೆಯರಂ ನೋಡಿ ಅಂತೆಂದರದೆಂತೆಂದೊಡೆ:—

ಅರೆಯರ್ ಬಂದರಿವರ್ಗೆ ನಂದ ಬಹುಮಾನಂಗೆಯ್ವೆಂದಾಗಳಾ |
ಪ್ಪಿರೆ ಕೋಡೈತ್ತಿರುನಾಳಮಂಡಪದೊಳಿರ್ಪಾಸ್ವಾಮಿ ಸೇವಾಧುರಂ ||
ಧರರಂ ಮಾಣಿಸೆ ಭೈರವೀಲಲಿತಘಂಟಾರಾವರಾಗಂಗಳಿಂ |
ಪು ರಸಂ ಸೊಂಪು ಬೆಡಂಗು ಮುಕ್ತೆ ಜತಿಯೊಳ್ಪಿಂ ಪಾಡಿದರ್ ಗೇಯಮಂ ||

ಆಲಿಸಿ ಗಾನಮಂ ವರದನಾದುದಱಿಂ ನಿಮಗೀಕ್ಷಣೊಳ್ ಮಹಾ
ಲೋಲತೆಯುಂಟದಂ ಕುಡುವೆನೀಗಳೆ ಯಾಚಿಸಿಮೆಂದು ಪೇೞೆ ಕೇಳ್ ||
ಶ್ರೀಲಲನಾಭಿರಾಮ ಯತಿರಾಜರನೀಯಸೆ ವೈಷ್ಣವಾವಳೀ |
ಪಾಲಕರಾಗಿಯುಸ್ಮದಭಿಮಾನಸಮೇತರನೆಂತು ಬೇಡುವಿರ್ ||೨೧||

ಇವರೊರ್ವರ್ ಪೊಱತಾಗೆ ಪಿಕ್ಕ ಪದಮೇನುಂಟಾದೊಡಂ ಬೇಡಿಮೆಂ|
ದು ಮನೋಜಾಂಬಕನಾಡೆ ಕೇಳುತವ ! ನೀನಿಂತೆತ್ತಿಯುಂ ಪೇಳ್ವರೇ |
ತವೆ ನೀನೀವ್ರೊಡವಶ್ಯವೊಲ್ದಿವನೇ ಕೊಟ್ಟಲ್ಲದೆನ್ನೊಲ್ ಮಹೋ |
ತ್ಸವಮುಂತಕ್ಕುಮೆ ಎಂದೊಡಾಂ ಮೊದಲೆ ಪೇೞಲ್ಬಾರದಿಂತೆಚ್ಚತಂ ||೨೨||

ವ|| ಎಂದು ಮಗುಳ್ದಂತೆಂದನದೆಂತೆನೆ:—

ಕರೆದುಯ್ವುದೆಂದು ನೇಮಿಸೆ |
ವರದಂ ಬೞಿಕರೆಯರವರ ಕೆಯ್ಯಂ ಪಿಡಿದು ||
ನ್ನಿರದೆಯ್ದಮನೆನೆ ಲಕ್ಷ್ಮೀ |
ವರನಿಕಟಕೆ ಪೋಗಿಯಾತನಂ ಬೀೞ್ಕೊಂಡರ್ ||೨೩||

ವ|| ಅಂತು ಬೀೞ್ಕೊಂಡಾತ್ಮೀಯಮಪ್ಪ ದೇವತಾರ್ಚನಾ ಪರಿಕರಮುಖ್ಯಮಂ ನೀಮಿರ್ವರುಂ ಕೊಂಡು ಬರ್ಪುದೆಂದಾಮುದಲಿಯಾಂಡಾರ್ ಕುರತ್ತಾೞ್ವಾರ್ಗೆ ನಿರೂಪಿಸಿಯವನೆಲ್ಲಮಂ ಬರಿಸಿಕೊಂಡು

ಶ್ರೀರಂಗಸ್ಥಳಮಂ ಪ್ರಯಾಣಗತಿಯಿಂದಂ ಪೊರ್ದಿ ನಪ್ಯೋವೃಷಾ |
ಸಾರಸ್ನಾನಮುದಾದಿಯಾಗಿ ವಿಳಸದ್ರಂಗಾಧಿರಾಟ್ಸೇವನೋ ||
ದಾರರ್ ಸೇವಿಸುತಿರ್ಪಿನಂ ಬೞಿಕಮಾರಾಮಾನುಜಾರ್ಯಾಗಳಾ |
ಶ್ರೀಣಾಮಾವರನಿಕ್ಷೇಂದ್ರಮುಖದಿಂದಿಂತೆಂದನತ್ಯಾದರಂ ||೨೪||

ವಿಲಸನ್ನಿತ್ಯವಿಭೂತಿಯಾದ ವಿಮಲಾಸ್ಮದ್ಧಾಮಮುಂ ಸಂತತೋ ।
ಜ್ಜ್ವಲಲೀಲಾತಿವಿಭೂತಿಯಾದ ಪದಿನಾಲ್ಕುಂ ಲೋಕಮುಂ ನಿಮ್ಮದಿ ॥
ನ್ನಿಳೆಯುಲ್ಲಿಂದುಮೊದಲ್ ಸಮಂತೊಡೆಯರೆಂಬೀನಾಮಮೆಮ್ಮಿಂಗೆ ಸಂ ।
ದಳವಟ್ಟಿರ್ಕೆಮುಮುಲ್ಲದಿನ್ನೆಸಗುವುದ್ಯೋಗಂಗಳಂ ಪೇಳ್ದಪೆಂ ॥೭೪॥

ಶ್ರೀರಂಗಂ ಮೊದಲಾದ ದಿವ್ಯತರದೇಶವ್ರಾತಮಂ ಪೊರ್ದಿ ಸೀ ।
ಮಾರಯ್ದಲ್ಲಿ ವಿಲಕ್ಷಣಾಢ್ಯಮೆನಿಪಂತಾರ್ಪಿಂ ಕರಂ ತಿರ್ದಿವಿಂ ॥
ದಾರಭ್ಯಂ ಧರೆಯುಲ್ಲಿ ರೂಢಿಸುಗೆ ತಾಂ ಮದ್ದರ್ಶನಂ ಪೆಂಪಿನಿಂ ।
ಶ್ರೀರಾಮಾನುಜದರ್ಶನಾಭಿಧೆಯೊಳೆಂದಿಂದೀವರಶ್ಯಾಮಳಂ ॥೭೫॥

ವ. ಇಂತು ಸಕಲನಿರ್ವಾಹಕವಿಷಯಮುಮನಿವರೊಳರಿಸಲೊಡಮಿರಾರಾ ಮಾನುಜರ್ ಪಾರುಪತ್ಯಸ್ಥಳದೊಳ್ ಕುಳ್ಳಿರ್ದು ಚೆಂಗೋಲಂ ವಹಿಸಿಯಾ ಸ್ವಾಮಿಯು ಸೀಮೆದಿಟ್ಟಂ ಮೊದಲಾದಖಿಳಮುಮಂ ತಾಮೆಯಂಗೀಕರಿಸಿ

ಸಕಲವಿನಿಯೋಗವಿಷಯ ।
ಕ್ಕಕಳಂಕರ್ ದೂತಜಯಕೆ ನಿಯಮಿಸಿ ಶ್ರೀನಾ ॥
ಯಕರಂಗನಾಥಭಜನಾ ।
ಚಕಿತರ್ ಸ್ಫುಟಮಪ್ಪವೊಲ್ ವಿಚಾರಿಸುತೊಲವಿಂ ॥೭೬॥

ಐದನೆಯ ಪಾಗಿಲೊಳ್ ಸ ।
ಮ್ಮೋದಂ ಮಠಮಂ ನೆಗೞ್ಚಿ ಯದರೊಳ್ ವ್ಯಾಖ್ಯಾ ॥
ನಾದಿಗಳನೆಸಗುತಿರ್ದಂ ।
ಶ್ರೀದಯಿತನ ಪಾದಪದ್ಮಮಂ ಜಾನಿಸುತುಂ ॥೭೭॥

ಇದು ನಮಿತಹಿಮಕರಚೂಡಕಮಲಭವಮುಖಸುರಸಮುದಯಮೌಳಿಮಣಿ ಗಣಪ್ರಭಾಸಂಧ್ಯಾರಾಗಾನುಗುಣಪ್ರಚುರರುಚಿತಾರಕಾಯಮಾನ ರಂಗವಿಭುಚರಣ ಯುಗಳನಖಮಯೂಖಸುಧಾಪೂರಪಿಹಾರಮದಮರಾಳೀಕೃತ ಮಹಿಷಪುರವರಸಾ ಮ್ರಾಜ್ಯಸಂಪನ್ನ ರಾಜಾಧಿರಾಜರಾಜಪರಮೇಶ್ವರಾಪ್ರತಿಮಪ್ರೌಢಪ್ರತಾಪ ಬಿರು ದಂತೆಂಬರಗಂಡ ಯದುಕುಲನಳಿನವಿಕಸಕರರಾದ ಶ್ರೀಚಿಕದೇವರಾಯಮಹಾರಾಜ ಪ್ರಸಾದಪರಿಪೂರ್ಣ ಸಚಿವಸಿಂಹತಿಲಕ ಶ್ರೀಚಿಕುಪಾಧ್ಯಾಯ ವಿರಚಿತಮಪ ದಿವ್ಯಸೂರಿಚರಿತ್ರಮಹಾಪ್ರಬಂಧದೊಳ್ ಶೇಷಾಂಶಭವರಾದ ಶ್ರೀರಾಮಾನು ಜಾಚಾರ್ಯರ ಶ್ರೀರಂಗಪ್ರವೇಶ ತದಧಿಕಾರಾದಿವರ್ಣನಂ ದ್ವಾದಶಾಶ್ವಾಸಂ.

॥ ಮಂಗಳಂ ಮಹತ್ ಶ್ರೀ ॥

## —ತ್ರಯೋದಶಾಶ್ವಾಸಂ—

ಶ್ರೀಮಹಿತವೇದಸೂತ್ರ।
ಸ್ತೋಮವ್ಯಾಖ್ಯಾನಕಾರ ರಾಮಾನುಜಜಿ॥
ತ್ತಾಮಳವೇಶ್ಮಜ್ಯೋತಿ ಮ।
ಹಾಮುದಮಂ ಪೆರ್ಚಿಕೆಮ್ಮೊಳಾರಂಗೇಶಂ ॥೧॥

ಅನಂತರದೊಳ್

ರಾಮಾನುಜರ್* ವರದ।
ಸ್ವಾಮಿ ಪೊದಲ್ದುಭಯಭೂತಿಯಂ ಕೊಟ್ಟನೆನಿ॥
ಪ್ಪಾಮಹಿತವಾರ್ತೆಯಂ ಕೇ।
ಳ್ದಾವೇೂದದಿನಿಳೆಯೊಳಿರ್ಪ ವೈಷ್ಣವರೆಲ್ಲರ್ ॥೨॥

ಪಡೆದೈತಂದತಿಭಕ್ತಿಯೊ।
ಳುದಾರತತ್ಪಾದಪದ್ಮಮೆನಿಸುವ ಸುರಭೂ॥
ಜದೊಳಾಶ್ರಯಮಂ ವಿರಚಿಸಿ।
ಸದಮಳಸುಜ್ಞಾನವಿಷಯಮಂ ಪಡೆದೆಸೆದರ್ ॥೩॥

ವ॥ ಅನಂತರದೊಳಾರಾಮಾನುಜರ್ ಕೂರತ್ತಾಳ್ವಾರ್ ಮುದಲಿಯಾಂಡಾನ್‌ಗಳೊಡನಾಳವಂದಾರ ಮನೋರಥಮಂ ಪರಿಪೂರ್ಣಂಗೆಯ್ಯಲ್ವೇಳ್ಕುಮೆಂದಾಳೋಚಿಸಿ

ಎಸೆಗಲ್ ಮುಂದೊಳ್ಪಂ ವ್ಯಾ।
ಸಸೂತ್ರಭಾಷ್ಯಮನದರ್ಕೆ ಸಾಧನಕರಮಾ॥
ದ ಸುಕರಬೋಧಾಯನ ವೃ।
ತ್ತಿಸಮೂಹಂ ಮೊದಲೆನಿಪ್ಪ ಕೆಲವುಂ ಗ್ರಂಥಂ ॥೪॥

ನೆಲಸಿರ್ಕುಂ ಬಡಗಲ್ ಸರಸ್ವತಿಯ ಭಾಸ್ವತ್ಪೀಠದೊಳ್ ತಪ್ಪದ।
ಕೆರ್ಲವಿಂದಲ್ಲಿಗೆ ಪೋಗವೇಳ್ಕೆನುತೆ ಶಿಷ್ಯರ್ ಕೂಡಿ ತಾಮೆಯ್ದಿಯಾ॥
ಸ್ಥಲದೊಳ್ ರೂಢಿಪ ಮಿಶ್ರರೊಳ್ ಸರಸಭಾವಂಬೆತ್ತು ತತ್ಪುಸ್ತಕಾ।
ವಲಿಯುಂ ಕೊಂಬೆಡೆಯಲ್ಲಿ ಯೋಜಿಸಿದರಾಮಿಶ್ರರ್ಕಳಾಭಾವಮಂ ॥೫॥

ಕ್ರಮದೆಮ್ಮದ್ವೈತಮಂ ಭಂಗಿಪುದಿವರ್ಗೞಸಂಕಲ್ಪಮೀಪುಸ್ತಕವಾ ।
ತಮನೀಯಲಾಱದೆಂದಾಕ್ರಮಿಸಲೊಡಮಿವರ್ ಮುಂದಿದಕ್ಕೇನುಪಾಯ ‖
ಕ್ರಮಮೆಂತಿನ್ನೆಂದು ಚಿಂತಾನ್ವಿತಮನರಿರೆ—ಕೂರತ್ತರಿಂತೆಂದರಾಗಳ್ ।
ನಿಮಗೇಂ ನಾನಿರ್ದಮೀಯೋಚನೆ(ಯೆನಗಿನಿತುಂ) ಪಾಠವಾಯ್ತೊರ್ಮೆ
[ನೋಡಲ್ ‖೬‖

ಎನೆ ಸಂತೋಷಮನಾಂತು ಶಿಷ್ಯರೊಡನಾಶ್ರೀರಂಗಕೈತಂದು ಸೂ ।
ತ್ರನಿಕಾಯಕ್ಕೞವಿಂದೆ ಭಾಷ್ಯಮನಿವರ್ ಪ್ರಾರಂಭಮಂ ಪ್ರೊಣ್ಮಿವಾ ‖
ಜ್ಞಿನಮೀವಾರ್ತೆನೆಯ್ದೆ ಕೇಳ್ದು ವಿಮಲಾವತ್ಯಾಪಗಾತೀರದಿಂ ।
ಘನವಿದ್ಯಾಬಲಯಜ್ಞಮೂರ್ತಿವಿಬುಧಂ ಶ್ರೀರಂಗಮಂ ಪೊರ್ದಿದಂ ‖೭‖

ಕೊಲ್ಲಾರಿ ಬಂಡಿಯೊಳ್ ತ ।
ನ್ನೆಲ್ಲಾ ಪುಸ್ತಕಮನಿಡಿದು ತಂದೆಮ್ಮದ್ವೈ
ತೋಲ್ಲಸಿತಮತಮನಿವರ್ಗೞ್ ।
ನಿಲ್ಲದವೋಲೞಿಗುಮೆಂದು ಕೋಪದಿನಾಗಳ್ ‖೮‖

ವ‖ ಇವರಿರ್ಪೆಡೆಗೆ ಬರಲೊಡಮಿರ್ವರುಮೊಂದುಂ ಪ್ರಸಂಗಮಂಟಪಮಂ ಪ್ರವೇಶಿಸಿ ಆಸೀನರಾಗಿ,

ಕರಮನ್ಯೋನ್ಯಪ್ರಸಂಗಂಸಮನಿಸುತಿರಲಾರ್ಸೋಲ್ದವರ್ಮೋಣವರ್ವಾ ।
ಣ್ದಿರದಾತ್ಮೀಯೋಲ್ಲಸದ್ದರ್ಶನಮನೊಡನೆ ಗೆಲ್ವರ್ ಶಿಷ್ಯರ್ ಕಣಾ! ಎಂ‖
ದುರುಸಂವಾದಪ್ರತಿಜ್ಞಾಲಿಖಿತಮೆಸೆಯಲಂತಿರ್ವರುಂ ಕೊಂಡು ತಾಂ ಸಾ ।
ದರಮೀರೊಂಭತ್ತು ಪಸ್ಸನ್ನೆವರಮುಱಿಯದಾಸ್ತ್ರಾಗಳಿರ್ವರ್ಗೆ ವಾದಂ ‖೯‖

ಪದಿನೇೞುಂ ದಿವಸಂಬರಂ ಕ್ರಮದೆ ಮೀಟಾಯಾಸ್ತ್ರತನೊಳ್ ಯುಕ್ತಿ ತ ।
ಮ್ಮದು ಪಿಂಚಿರ್ದ ನಿಮಿತ್ತದಿಂ ಬಹುವಿಚಾರಂಚಿತ್ತದಕೇನುಪಾ ‖
ಯದ ಮಾರ್ಗಂ ಪಡೆದೇವಮೆಂದು ನಿಜನೇಪಾಗಾರಮಂ ಪೊರ್ದಿ ಶೀ ।
ದಪಿ ಶ್ರೀಮದ್ವರದೋನ ಕಾಂತದೆಡೆಯೊಳ್ ಕುಳ್ಳಿರ್ದ ರಾಮಾನುಜರ್ ‖

ವರಟಂಕದ್ರಮಿಡೇಂದ್ರಯಾಮುನ ಮುಖಾಸ್ಮತ್ಪೂರ್ವದಾಚಾರ್ಯರಿಂ ।
ಪರಮೋತ್ಕೃಷ್ಟತೆಯಾಂತ ಮಸ್ಮತಮಿದೆಮ್ಮಿಂದೆತ್ತ ಪ್ರೋನ್ನಾರದೆಂ ‖
ದು ರಸಜ್ಞರ್ ಸುತಿದುರ್ವಿಯೊಳ್ ಮಲಗೆ ಪದ್ಮಾಜಾನಿತರ್ ಸ್ವಪ್ನದೊಳ್ ।
ಕರಮೀಯೋಚನೆ ನಿಮ್ಮೆಳೇಕೆ ಬಿಡಿಮಿನ್ನೊಂದುಂಟಿದಂ ಪೇೞ್ದಪಂ ‖೧೧‖

ವ॥ ಅದೆಂತೆಂದೊಡೆ—ಪೂರ್ವಾಚಾರ್ಯರಾದ ಯಾಮುನಾಚಾರ್ಯರ್ ನೆಗೞ್ಚಿದ ಗ್ರಂಥದೊಳ್

ಸಂಸ್ಕೃತ॥ “ಜ್ಞಾನರೂಪಂ ಪರಂಬ್ರಹ್ಮ ತನ್ನಿವರ್ತ್ಯಂ ಮೃಷಾತ್ಮಕಂ।
ಅಜ್ಞಾನಂ ಚೇತ್ ತಿರಸ್ಕುರ್ಯಾತ್ ಕಃ ಪ್ರಭುಸ್ತಂ ನಿವರ್ತತೇ॥”

ವ॥ ಎಂಬ ಶ್ಲೋಕಮುಂಟದಱೊಳ್ ಪ್ರಸಂಗಮನೆಸಗಿದೊಡೆ ಜಯಮಕ್ಕುಮೆಂಬ ತನ್ನಿರೂಪಮನಾಲಿಸಿ

ಅತಿಹರ್ಷಾವಿಷ್ಟಚಿತ್ತರ್ ಮಱುವಗಲೆಸೆವಾಮಂಟಪಕ್ಕೆಯ್ದೆ ವಕ್ತ್ರ |
ಸ್ಥಿತಿಯಂ ಕಂಡಿಂದದೇಂ ಚಿಂತಿರ್ಗೆಪದುಳವಿಕರ್ಗಂ ಪ್ರಸಾದಂಮಹಾದೇ |
ವತೆಯಿಂದಾಯ್ತಂದವಂ ವಾದಮನೆಸಗನೆಮೋರ್ಗೆಸೋಲ್ತೆನಾನೆಂದೊಡಾಯು |
ಪ್ರತಿಮಶ್ಲೋಕಾನುಸಾರಂ ಪಿಡಿದೊಡರಿಸಲಾಶ್ಚರ್ಯದಿಂ ಕೆವ್ರುನಿರ್ದಂ |

ವ॥ ಅನಂತರನೊಳಾತನುಂ ತನ್ನ ವಶಂಗೆಯ್ದುವಂಗೆ ಯಾದವಪ್ರಕಾಶನಂತೆ ಜಾತಕವರ್ಣದ್ಯಪಿಲಪ್ರಾಯಶ್ಚಿತ್ತಮನೆಸಗಿ ಬ್ರಾಹ್ಮಣ್ಯೋಪವೀತ ಪೂರ್ವಕವಾಗಿ ತ್ರಿದಂಡಸನ್ಯಾಸಮನಿತ್ತು

ನಿಜದೇವಪೂಜೆಯೆನಿಪಂ |
ಬುಜನಾಭನ ವರನಾಜನತಿದನಿಯಿಂದಂ |
ಸುಜನರ್ ಬಂದರೆನುತ್ತುಱೆ |
ಯುಜಯಿಂದನರ್ಗೆಂದು ನಾಮಮಂ ಕಲ್ಪಿಸಿದರ್ ||೧೩||

ವ॥ ಅದೆಂತೆನೆ—ದಯಾಪಾಲಮುನಿಯೆಂಬೊಳ್ಪಿನರ್ ಪಸರಿಸುವಂತೆಸಗಿ ತಮ್ಮ ಮಠನಿಕಟದಲ್ಲಿಯೊಂದು ಮಠಮಂ ಕಲ್ಪಿಸಿಯದಱೊಳವರಂ ಪ್ರವೇಶಂಗೆಯ್ಸಿರ್ಪಿನಂ ಬರ್ಪ ತಮ್ಮ ಪೂರ್ವಾಶ್ರಮಕ್ಕೆ ಸೋದರರಾದ ಗೋವಿಂದಪ್ಪೆರುಮಾಳ್ ಮೇಲೆ ತೃಷೆಯುಂಟಾಗಿಯುಮರ್ ವಾಮಂದಿರ ಸನ್ನಿಧಿಯೊಳ್ ಸ್ವರೂಪಶಿಕ್ಷಿತರಾಗಿಯುಂ ಶೈವರಾಗಿರ್ಪುದನಾಲೋಚಿಸಿ

ಅವರುಂ ಮುದ್ದರ್ಶನದೊಳ್ |
ಪ್ರವರ್ತಿಪಂತೆಸಗವೇಳ್ಕೆನುತ್ತುಂ ಮಿಸರ್ ವೈ |
ಷ್ಣವರಂ ತಿರುಪ್ಪತಿಗೆ ಕಳು |
ಪ್ಪುವ ವೇಳೆಯೊಳಂತು ನಿರವಿಸಿದನೊಲವಿಂದಂ ||೧೪||

ಕರಮಾಲೋಚಿಸವೇಡೆಸುತ್ತು ನಿರಲಾಸ್ಥಾನೀಕರೆಮ್ರೀಶನೀ ।
ಪರಿಯಿಂದಪ್ಪಣೆಯಿತ್ತಸಿಂ ಕರೆದುಕೊಂಡೀತಂಗಳಂ ಬೇಗದಿಂ ॥೨೧॥

ಪೋಗಿಮೆನಲಾತಿರುಪ್ಪತಿ ।
ಗಾಗಳೂರಲ್ಲಿರ್ದವರ್ಗೆ* ಪ್ರಾಯಶ್ಚಿತ್ತೋ ॥
ದ್ಯೋಗಮನೈದುಂ ಸಂಸ್ಕಾ ।
ರಾಗಮುಮನೆಸಗಿ ಬಳಿಕೆ ವೈಷ್ಣವವಿಧಿಯಿಂ ॥೨೨॥

ಸಕಲಗ್ರಂಥಾಭ್ಯಾಸಮು ।
ಸಕಳಂಕರಿವರ್ಗೆ ಮಾಡಿಸುತೆ ಸನ್ನಿಧಿಯೊಳ್ ।
ಸುಕರತ್ವದಿಂದೆ ವೈಷ್ಣವ
ನಿಕರದ ಮಾರ್ಗಮನೆ ಪೇಳುತ್ತೋರುತ್ತುಮಿರ್ದರ್ ॥೨೩॥

ವ ॥ ಇಂತಾ ತಿರುಮಲೆನಂಬಿಗಳಿರಲೊಡಮಿತ್ತ ಮೇಲ್ನಾಡಿಂದೆ ತೊಂಡನೂರನಂಬಿ ಮರುಗೂರ ನಂಬಿ ಯೆಚ್ಚಾನ್ ಅನಂದಾಳ್ವಾನ್ ಮೊದಲಾದ ವೈಷ್ಣವರೀ ರಾಮಾನುಜರ ವೈಭವಮಂ ಕೇಳ್ದು,

ಇವರಡಿದಾವರೆಗಳೊಳು ।
ತ್ವದಿಂದೆ ಸಮಾಶ್ರಯಣಮನೊಡರಿಸವೇಳ್ಕುಂ ॥
ದವಿರಳವೈಷ್ಣವರಿಂದೊ ।
ಪ್ಪುವ ಶ್ರೀರಂಗಕ್ಕೆ ಪೋಗಿ ನಾಳ್ವರ್ ಪದೆಪಿಂ ॥೨೪॥

ವ ॥ ಅಲ್ಲಿಯೊರ್ವವೈಷ್ಣವನಂ ಕರೆದು ಎಂಬೆರುಮಾನಾರ ಮತಮೆಲ್ಲಿರ್ಕುಮೆಂದು ಕೇಳಲೊಡಮವಂ ಆವೆಂಬೆರುಮಾನಾರ ಮತಮೆಂದುಸಿರಲೊಡಂ, ದರ್ಶನಪ್ರವರ್ತಕರಾದೆಂಬೆರುಮಾನಾರ ಮತಮೆನೆ, ಕೇಳ್ದೀವೃತ್ತಾಂತಮನರುಳಾಳಪ್ಪೆರುಮಾಳಾರೆಂಬುದನಾಲಿಸಿ,

ಪಿರಿದುಂ ಮದೀಯಮತದೊ ।
ಪ್ಪಿರೆಯುಂ ಬೇಱುಂಟೆ ಧರೆಯೊಳೆಂಬೆರುಮಾನಾ ॥
ರರ ಮತಮೆನಲಲ್ಲಿಯುವರ್ ।
ಪರಮಮುದಂಬೆತ್ತು ನೆಲಸಿ ಬಳಿಕಾನಾಲ್ವರ್ ॥೨೫॥

ಶ್ರೀರಾಮಾನುಜರಂಘ್ರಿಗೊಲ್ದೆಱಗಿ ಮುಂದೆಮ್ಮಂ ಮಹಾಪಂಚಕಸಂ ।
ಸ್ಕಾರಂ ಪೂರ್ವಕಮಾಗಿ ನೀಂ ಕರುಣಿಸಲ್ವೇಳ್ಕೆಂದು ಸದ್ಭಕ್ತಿಯಿಂ ॥

ಸಾರಾಭೀಪ್ಸಿತಮಂ ಸಮಂತುಸಿರೆ ಕೇಳ್ದತ್ಯಂತಕಾರುಣ್ಯದಿಂ |
ಧೀರಾಗ್ರೇಸರರಂತುಮಾೞ್ಪವನಱಿಂವಂ ನಂಬಿಮೆಂದಾಗಳೇ ||೨೭||

ವ|| ಆಯುರುಳ್ಳಾಳಪ್ಪೆರುಮಾಳೆಂಬೆರುಮಾನಾರಂ ಕರೆದು ಇಂತೆಂದರ ದೆಂತೆನೆ :—

ಈನಾಲ್ವರ್ಗುಂ ನೀಂಮೆ |
ತ್ತಾನುಂ ಕೃಪೆಯುಳ್ಳೊಡೆಸಗಿಮಿಂತೆನೆ ಪರಮ ||
ಜ್ಞಾನಿಗಳಾಗುರುನಿಯಮನ |
ದಾನಂದಂಬಡೆವವರ್ಗೆ ವೈಷ್ಣವವಿಧಿಯೊಳ್ ||೨೮||

ಭಗವತ್ಸಂಬಂಧಮಾತ್ರಂ ರಚಿಸಿಯುವರ್ಗೆ ತಾವೊಪ್ಪಿಸಿನ್ನೆಲ್ಲರೊಳ್ಪಂ |
ಮಿಗೆ ಶಿಷ್ಯರ್ ಸಂದ ರಾಮಾನುಜಯತಿತಿಲಕರ್ಗಾಗಿ ಸೈತೊಂದಿಮೆಂದಾ ||
ಸಗುಣಾಢ್ಯರ್ ಪೇೞ್ದಿಯಾನಾಲ್ವರುಮಖಿಳಮಹಾಧರ್ಮನಾರ್ಥಂಗಳಂ ಕೇ |
ಳ್ದಗುರ್ವೆತ್ತಂತಿರ್ದರಾಸದ್ಗುರುಪದಯುಗದೊಳ್ ಪ್ರೋನ್ಮ ಸದ್ಭಕ್ತಿಯಾಗಳ್ ||

ತಿರುವಾಯ್ಮೊೞಿಯೆಂಬ ಪ್ರಬಂ |
ಧರಹಸ್ಯಾರ್ಥವೃತ್ತಿಯುಂ ಮಾೞ್ಪೆಸಮಿಂ ||
ದಿರೆಯುರಸ ವೇಂಕಟೇಶಂ |
ಗಿರದಾಂ ಕೈಂಕರ್ಯಮೆಸಗವೇೞ್ಕೆಂದಾಗಳ್ ||೨೯||

ಮನದೊಳ್ ದ್ಯೋತಿತವಾಗಿ ಸಂದ ನಿಜಶಿಷ್ಯಾಸ್ಯಂಗಳಂ ನೋಡೆ ಸು |
ಮ್ಮನವರ್ ತಾನುಮರೀಸ್ತ್ವೆಯುಂ ತಿಳಿಯದಿರ್ದಾ ತೋಷದಿಂದೆೞ್ದು ಭೋಂ ||
ಕನೆ ತನ್ಮಾನಸವೃತ್ತಿಯುಂ ಬಗೆದನಂತಾೞ್ವಾರ್ ಭವದ್ಪಾಂಘ್ರಿಯಿಂ |
ತಿನಿತಂ ನೀಂ ಕೃಪೆಗೆಯ್ವುದೆನ್ನೊಳೆಸಲತ್ಯಾನಂದಮಂ ತಾಳ್ದಿರ್ ||೩೦||

ಬೞಿಕೆ ಸಕುಟುಂಬರಾಗಿಯೆ |
ಕಳುಪಿಸಲಿವರ್ಗಳ್ ತಿರುಪ್ಪತಿಗೆ ಪೋಗಿ ಮಹೋ ||
ಜ್ವಳನಾದ ವೇಂಕಟೇಶನ |
ನಿಲಸತ್ಪದಪದ್ಮಕೆಱಗೆ ಭಕ್ತಿಯಿನಾಗಳ್ ||೩೧||

ಅಲ್ಲಿರ್ಪ ಶಿಷ್ಯಸಂಚಯ |
ಕೆಲ್ಲಂ ಪೇೞ್ದ್ವರ್ಗನಿಂದೆ ನಿಜಗುರುಚಿತ್ತ ||

ಕ್ಕುಲ್ಲಸಮುಪ್ಪವ್ರೋಲ್ ಮೇ |
ಣಿಲ್ಲದವೋಲ್ ನ್ಯಾಸವೆಡಸೆ ಪ್ರಾರಂಭಿಸಿದರ್ ||೨೦||

ವ|| ಅಂತು ಪ್ರಾರಂಭಿಸಿ ಚೆಣಪತಿರುಚ್ಚುತ್ತೆಂಬ ಪ್ರಾಕಾರಮುಮಂ ರಾಮಾನುಜಪುತ್ತೇರಿಯೆಂಬ ಕೆಱೆಯುಮಂ ರಾಮಾನುಜರೆಂಬ ದಿವ್ಯೋದ್ಯಾನಮುಮಂ ಮತ್ತಮಿವು ಮೊದಲಾದಖಿಲಕೈಂಕರ್ಯಮುಮಂ ಮಾಡಿಸಿರ್ದಿನಂ:—

ಸಂಸ್ಕೃತ|| ಚಕ್ರೇ ಶೇಷಗಿರೌ ವಿಭೋರುಪವನಂ ಮಾಲಾಕರಂ ಮಂಟಪಂ ।
ಪ್ರಾಕಾರಂ ಘನಗೋಪುರಂ ವರಸರೋ ರಾಮಾನುಜಾಖ್ಯಂಚ ಯಃ ॥
ಜಾಮಾತೃತ್ವಮವಾಪ್ಯ ಯಸ್ಯ ಭಗವಾನ್ ಯಂ ಮಾರ್ಗಮಾಣಸ್ಸ್ರಜಂ॥
ದತ್ತೇಽದ್ಯಾಪಿ ವೃಷಾದ್ರಿಪಸ್ತ ಮನಘಂ ಶೇಷಾದ್ರಿವರ್ಯಂ ಭಜೇ ॥

ಟೀಕು—ಶ್ರೀರಾಮಾನುಜನಾಮದೆ !

ಸಾರೋದ್ಯಾನಮುಮನೆಸೆವ ಮಂಟಪಮಂ ಪ್ರಾ ||
ಕಾರಮುಮಂ ಗೋಪುರಮಂ |
ರಾರಾಜಿಪ ಸರಮನೊಂದು ಮಾಲಾಕರಮಂ ||೨೨||

ವಿರಚಿಸಿದಂ ಶೇಷಾದ್ರಿಯೊ |
ಳಿರದಾಮಂ ವೃಷನಗೇಶನಾಮಂಗೊಲವಿಂ ||
ಪಿರಿಯುಳಯನಾಗಿಯಾವನ |
ನುರುದಯೆಯಿಂದಜಸುತೀಗುಮೀಗುಂ ಸ್ರಜಮಂ ||೨೩||

ಅನಘನನಾತನನೆಂದುಂ |
ಜನಿತಮಹಾಭಕ್ತಿಯಿಂದೆ ಶೇಷಾಚಲವ ||
ರ್ಯನನಾಂ ಭಜಿಸಿದಪೆಂ ಸಂ |
ದನವದ್ಯನನೆಂದು ಸ್ತೈಪಿನಿಂದಾಗಳವರ್ ||೨೪||

ವ|| ಇಂತಪ್ಪನಂತಾೞ್ವಾರ್ ಶ್ಲೋಕಮಂ ನೆಗೞ್ದರ್. ಇತ್ತಲ್ ಶ್ರೀರಂಗದೊಳಿರ್ಪ ರಾಮಾನುಜಾಚಾರ್ಯರ್ ಭಾಷ್ಯನಿರ್ಮಾಣಾರ್ಥಂ ಸಹಾಯಮಾಗಲ್ ಗೋವಿಂದಪ್ಪೆರುಮಾಳಂ ಕರೆದುಕೊಳಲ್ವೇೞ್ಕುಂದು

ಅಯುದಿಂ ಶಿಷ್ಯಸಮೇತರಾಗಿ ವಿಲಸತ್ಕಾಂಚೀಪುರಕ್ಕೆಯ್ದಿ ಭ |
ಕ್ತಿಯಿನಾಶ್ರೀವರದಾಂಘ್ರಿಪಂಕಜಮನಾಗಳ್ ತಾಂ ತಿರುಕ್ಕಚ್ಚಿನಂ ||

ಬಿಯ ರವನ್ಯಾಕೃತಿ[ಯೆಂದು]ಸೇವಿಸಿ ಬಱಿಕ್ಕಲ್ಲಿಂದೆ ಶೇಷಾದ್ರಿಯಂ ।
ನಯದಿಂ ಸಾರ್ದರುದಾರವೈಷ್ಣವವತಾಂಭೋಜಾತಸೂರ್ಯೋಪಮರ್ ॥

ವ॥ ಅಂತು ಸಾರ್ದು ದಿಗುವ ತಿರುಪತಿಯೊಳಿರ್ಪ ಆಳವಂದಾರ ತೀರ್ಥದೊಳ್ ಸ್ನಾನಂಗೆಯ್ದು

ಗೋವಿಂದರಾಜನಂ ಸಲೆ ।
ಸೇವಿಸಿ ಕಾಲಿಂದೆ ಮೆಟ್ಟಬಾರದು ಫಣಿರಾಟ್ ॥
ಪಾವನರೂಪಿಯೆನಿಪ್ಪೀ ।
ಶ್ರೀವಿಲಸದ್ಗಿರಿಯನೆಂದು ಕೆಳಗಿರಲಾಗಳ್ ॥೩೭॥

ಆವೃತ್ತಾಂತಮನೊಯ್ಯನೆ ।
ಭಾವಜ್ಞರ್ ಕೇಳ್ದು ಪದೆದನಂತಾಳ್ವಾರ್ ಬಂ ॥
ದಾವಿಮಳಾಚಾರ್ಯರ ಚರ ।
ಣಾವನತಿಯನೆಸಗಿ ಕೆಯ್ಗಳಂ ಮುಗಿದಾಗಳ್ ॥೩೮॥

ತಿರುಮಲೆಗೆಯ್ದಿದರ್ದೊಡಿರಲಕ್ಕುಮೆಯಾಮೆನೆ ಮೇಣ್ ದಿನತ್ರಯಂ ।
ಬರಮುಪವಾಸಪೂರ್ವಕದಿನಂಗವಿಶುದ್ಧಿಯನಾಂತು ಪೋಪಮೆಂ ॥
ದಿರದೆ ಶರೀರಬಾಧೆ ಪುಗದಂತೆ ಮಹೀಧ್ರಮನೇಱುತಿರ್ಪಿನಂ ।
ತಿರುಮಲೆನಂಬಿಗಳ್ ತಳೆದು ತೀರ್ಥಮುಮಂ ವಿಮಲಪ್ರಸಾದಮಂ ॥೩೯॥

ಇದಿರ್ವರೆ *ನೀವೇ ಬರ್ಪುದೆ ।
ಸದಯರ್ ಮಿಗೆ ಪಸುಳೆಯೊರ್ವನಂ ಕಳುಹಿಸಲಾ ॥
ಗದೆಯೆನಲೀ ತಿರುಮಲೆಯೊಳ್ ।
ಪದೆದಿರ್ಪರೊಳುಂಟೆ ಪಸುಳೆಯೆನ್ನಿಂದೆ ಪೆಱರ್ ॥೪೦॥

ಎನೆ ಹರ್ಷಂದಳೆದಾಗಳ್ ।
ಘನಮಹಿಮರ್ ಸ್ವಾಮಿಪುಷ್ಕರಿಣಿಯೊಳ್ ಮಿಂದಾ ॥
ವನಜಾಂಬಕನಂ ಸೇವಿಸೆ ।
ಋನಂತರೊಡರಿಸಿದ ಸಕಲಕೈಂಕರ್ಯಮುಮಂ ॥೪೧॥

ನೋಡಿ ಬಹುಹರ್ಷದಿಂ ಕೊಂ ।
ಡಾಡಿ ದಿನತ್ರಯಮುಮಿರ್ದು ನಗದಗ್ರದೊಳಾಂ ॥

ಆಡುತ್ತಾನಂದದೊಳೊಡ |
ಗೂಡಿರ್ದರ್ ಶೇಷಗಿರಿಯನಾವಾತುಲರಿಂ ||೪೨||

ಐದಿ ಮಿಗೆ ದಿಗುವ ತಿರುಪತಿ |
ಗಾದೇಶಾಧೀಶನಿಂದೆಳೆಯ ಮಂಡೆಯುಮಂ ||
ಸಾದರಮಾರ್ಜಿಸಿಯದನಾ |
ಹ್ಲಾದದೆ ತಾಮಗ್ರಹಾರಮಂ ಮಾೞ್ಪಿನೆಗಂ ||೪೩||

ಸ್ಫುರಿಪಂತೊಡರಿಸಿ ಮೂವ |
ತ್ತೆರಡುಂ ವೃತ್ತಿಕೆಯನೊಲ್ದು ಸಂತಾಱ್ವರಾ ||
ತಿರುಮಲೆನಂಬಿಗಳಾದಿಯ |
ವರವೈಷ್ಣವಸಂಚಯಕ್ಕದಂ ನಿಯಮಿಸಿದರ್ ||೪೪||

ತರದಿಂ ಸ್ವಾಮಿಯ ಮಾಡ |
ತ್ತಿರುವೀಧಿಯನೊಪ್ಪುವಂತೆ ಮಾಡಿಸಿ ತಾಮಾ ||
ತಿರುಮಲೆನಂಬಿಗಳುರುಮಂ |
ದಿರದೊಳಗೊಂದಬ್ದದನ್ನೆವರಮಿರ್ದೊಲವಿಂ ||೪೫||

ಶ್ರೀರಾಮಾಯಣಕಥನೋ |
ದಾರಶ್ರವಣಮನುದಾತ್ತಭಕ್ತಿಯ ಬಲ್ಪಿಂ ||
ಧೀರರ್ ಸಚತುರ್ವಿಂಶತಿ |
ವಾರಂ ವ್ಯಾಖ್ಯಾನಪೂರ್ವಕಂ ಸಲೆ ಕೇಳ್ದರ್ ||೪೬||

ವ|| ಅಂತು ಕೇಳ್ದನಂತರಂ ಶ್ರೀರಂಗಕ್ಕೆಯ್ದುವ ಸಮಯದೊಳ್ ತಿರುಮಲೆನಂಬಿಗಳ್ ರಾಮಾನುಜಾಚಾರ್ಯರಭಿಪ್ರಾಯಮಂ ತಿಳಿದು—

ಮದ್ವಸತಿಯಲ್ಲಿ ರಂಜಿಪ |
ಸದ್ವಸ್ತುವಿನಲ್ಲಿ ಯಾವುದೀಪ್ಸಿತಮದನಾಂ ||
ವಿದ್ವದ್ವರ ನಿಮಗೀವೆಂ |
ಮದ್ವಾಂಛೆಯದಿಂತುಟೆಂದು ನಿರವಿಪುದೆಂದರ್ ||೪೭||

ಈವಿಧದ ಕರುಣಮೊಮ್ಮೊಳ್ |
ತೀವಿರ್ದತೆ ನಿಮಗೆ ಮಾಂಜಲೇತರ್ಕಾಮೀ ||

ಗೋವಿಂದಪ್ಪೆರುಮಾಳಂ ।
ಭಾವಜ್ಞರ್ ಕುಡುವುದೆನೆ ಕಡಂಗಿ ಬೞಿಕ್ಕಂ ॥೪೮॥

ಧಾರಾಪೂರ್ವಕಮಾಗಿ ಕೊಟ್ಟರವರಂ ತಾಮಾಕ್ಷಣಂ ಹರ್ಷದಿಂ ।
ಶ್ರೀರಾಮಾನುಜರೆಯ್ದಿ ಕಂಚಿಗೆ ಪೊದೞ್ದಾಸ್ವಾಮಿಯಂ ಸೇವೆಗೆ ॥
ಯಾ್ದರಯ್ದಾ ನಿಜಶಿಷ್ಯಸಂಚಯಮನಂತನ್ಯೋನ್ಯಸಲ್ಲಾಪದಿಂ ।
ಶ್ರೀರಂಗಕ್ಕುಜಕೆ ಪೋಗಿ ರಂಗವಿಭುಸೇವಾನಿಷ್ಠೆಯಂ ಮಾಡಿದರ್ ॥೪೯॥

ವ॥ ಅಂತು ಶ್ರೀರಂಗನಾಯಕನಂ ಸೇವಿಸಿ ಮಠಕ್ಕೆಯ್ತಂದು ಕೂರತ್ತಾೞ್ವಾರ್ ಮೊದಲಾದ ಪ್ರಧಾನಶಿಷ್ಯರ್ ಸಮೇತರಾಗಿ ಶ್ರೀಭಾಷ್ಯಗ್ರಂಥಪರಿಪೂರ್ತಿಯಂ ಮಾಡಿ ಮನದೊಳ್ ಮತ್ತಮಾಳೋಚನೆಯಂಗೆಯ್ದರೆಂತೆನೆ—

ಈಭಾಷ್ಯಗ್ರಂಥಮನಾ ।
ಶ್ರೀಭಾರತಿಗೊಡನೆ ಸಮ್ಮತಂಗೆಯವೇೞ್ಕುಂ ॥
ದಾಭಾವಜ್ಞರ್ ಗಾನಸ ।
ದಾಧರಿತರ್ ತಿಳದು ಭೂಪ್ರದಕ್ಷಿಣಿಮಿಷದಿಂ ॥೫೦॥

ಸರಸತಿಯ ಪೀಠಕೆಯ್ದು ।
ತ್ತಿರೆ ತಾಸಿದಿರ್ವಂದು ವಾಣಿ ರಾಮಾನುಜರ್ಗಂ ॥
ತಿರವತಿಸನ್ಮಾನಂಗೆ ।
ಯ್ದುರುತರಮುದದಿಂದೆ ಪ್ರಶ್ನೆಗೆಯ್ದುಳದೊಂದಂ ॥೫೧॥

ವ॥ ಅದೆಂತೆನೆ:—"ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ" ಎಂಬ ಶ್ರುತಿಗರ್ಥಮನೆಂತೆಸಗಿಪಿರೆಂದು ಬೆಸಗೊಳಲೊಡಮಿಂತೆಂದರ್. ಅದೆಂತೆನೆ :—

ಸಿರಿಯುರಸನಕ್ಷಿಗಳ್ ತಾ ।
ವರೆಯಂತೆವೊಲೆಸೆವುತಿರ್ಕುಮೆಂದಾಪದಸಂ ॥
ಚರಣೆವಿಡಿದರ್ಥಮಂ ವಿ ।
ಸ್ತರಿಪಂತಿರೆ ಪೇೞೆ ಕೇಳ್ದು ಭಾರತಿಯಾಗಳ್ ॥೫೨॥

ಇವರಂ ತೞ್ಕೈಸಿ ಭೂಮಿಯುಳ್ಳಿ ನಿಮಗಿಂ ಶ್ರೀಭಾಷ್ಯಕಾರಾಖ್ಯಮಂ ।
ಸವನಿಕ್ಕೆಂದತಿಹೃಷ್ಟೆ ಯಾಗಳವರ್ಗಾ ತಾಂ ನಮಾಡಿದಿಂಭಾಷ್ಯಮೊ ।

ಧ್ರುವವೋ ಶಂಕರಯೋಗಿಗಳ್ ನೆಗಳ್ದ* ಕೋಶಂ ಸಿದ್ಧವೋ ಎಂದು ಮ
ತ್ತೆ ವಿಚಾರಂಬಡೆದಾಸಿಶಾಸಮಯದಲ್ಲೀದ್ವಂದ್ವಮಂ ಶೋಧಿಸಲ್ ॥೫೩॥

ಸರಸತಿಯ ಸನ್ನಿಕರ್ಷೆಯೊ ।
ಳರಿಸಿದರುಜು ಬೇಗದೊಡನೆ ಮುಪ್ರೇಮಸಿಟ್ಟಂ ॥
ಬುರುಹಸಖನುದಯದೊಳ್ ಬಂ ।
ದು ರಸಜ್ಞರ್ ತೆಗೆದು ಕದಮನೀಕ್ಷಿಸಲಾಗಳ್ ॥೫೪॥

ಇವರೆಸಗಿದ ಶ್ರೀಭಾಷ್ಯಮ ।
ನವಧರಿಸಿ ಶಿರಸ್ಸಿನಲ್ಲಿ ತಾಳ್ದಂತುಜ್ವಿದಿ ॥
ದುರ್ಗವನೆಲ್ಲಮನೀಡಾಡಿರೆ
ತವಕದಿನಾನೇಶದಲ್ಲಿ ರಂಜಿಸ ವಿಬುಧರ್ ॥೫೫॥

ಈವೃತ್ತಾಂತಮನಾಲಿಸಿ ।
ಭಾವಿಸಲಿದು ಸಂಕೆಸುತ್ತೆ ವಾದಕೆ ಬರಲಾ ॥
ಭೂವಲಯೇಶಂ ಸಭೆಯೊಳ್ ।
ತೀವಿದ ಮಧ್ಯಸ್ಥರಗ್ರದೊಳ್ ತಾನಾಗಳ್ ॥೫೬॥

ಕ್ರಮದಿಂ ಕೇಳುತೆ ಮೇರೆದಪ್ಪನೆ ಪ್ರಸಂಗಂಗೆಯ್ಸುಲಾತಂಗಳಂ ।
ವಿಮಳರ್ ವಾದಿಸುತುಂ ಸಹಸ್ರಮುಖದಿಂ ಗೆಲ್ದಂದವಂ ನೋಡಿಯಾ ॥
ಕ್ಷಮೆಯಾಣ್ಮಂ ಕಡುಮೆಚ್ಚಿ ಭಕ್ತಿಯೊದವಿಂ ಚಕ್ರಾಂಕಮಂ ತಾಳ್ದುಸಂ
ಭ್ರಮದಿಂ ವೈಷ್ಣವನಾದನಂತು ಕೆಲರ್ ಶ್ರೀಪಾದಮಂ ಪೊರ್ದಿದರ್ ॥೫೭॥

ವ॥ ಅನಂತರದೊಳ್

ವಿಜಯಸ್ತಂಭಮನಾಂತುತಲ್ಲಿ ಮಠಮಂ ತಮ್ಮಾಖ್ಯೆಯಿಂ ಗೆಯ್ಸಿ ಶಿ ।
ಷ್ಯಜನವ್ರಾತಮನಿಟ್ಟು ಶೇಷಗಿರಿಗಂತೆಯ್ತರ್ಪನಂ ತೊಂಡಮಾ ॥
ನ ಜನೇಶಂಗಿರದಿತ್ತು ಚಕ್ರಮನಮೋಘಂ ವೇಂಕಟೇಶಂ ಕಿರೀ ।
ಟಜಟಾಸಂಯುತನಾಗಿ ತಾನಿರೆ ಕೆಲರ್ ಶೈವರ್ ಮಹಾದರ್ಪದಿಂ ॥೫೮॥

ಮದುಮಾಧೀಶ್ವರನೆಂದು ಪೂಜಿಸಪವ್ರೊಲ್ ನಿರ್ಬಂಧಮಂ ಮಾಡೆ ಕೇ ।
ಳ್ದದನಾದೇಶದ ಮೇದಿನೀಪತಿಯಿದೇಂ ಸಂವಾದಮೀದೇವತಾ ॥
ಗ್ರದೊಳಾತ್ಮೀಯಕಮಾದ ಮುದ್ರೆಗಳನೀಗಳ್ ಸಾರ್ಚಿಮಾದ್ವಂದ್ವದೊಳ್ ।
ಪಡೆಪಿಂದಾವುದನಾಂಗುವೋ ಅವರ ದೇವಂ ತಪ್ಪನೀತಂ ಕಣಾ! ॥೫೯॥

ಎನೆ, ಕೇಳ್ದುರ್ವರುಮಂತೆ |
ಕ್ಕೆಸುತಿರಿಸಿದರಲ್ಲಿ ಶಂಖಮುಂ ಚಕ್ರಮುಮಂ ||
ಘನವೈಷ್ಣವರಾಶ್ಚೈವರ್ |
ಜನಮೆಲ್ಲಂ ನೋಡೆ ಶೂಲಮುಂ ಡಮರುಗಮಂ ||೬೦||

ವ|| ಆರಾತ್ರಿಯಿಂತೆಸಗಿಯನಂತರದೊಳ್

ಕದಮಂ ಮುಚ್ಚಿ ಯುಮರ್ಚೆ ಬೀಗಕುರುಲಾಕ್ಷಾಮುದ್ರೆಯುಂ ದೇವತಾ|
ಸದನಕ್ಕಂ ಬಲುಗಾವಲಿಕ್ಕೆ ಸಲೆ ಪ್ರಾತಃಕಾಲದೊಳ್ ಭೂಪನ ||
ಗ್ರದೊಳಾಮುದ್ರೆಯುಸಿಂಗಳುಂ ತೆಗೆದು ದೇವಸ್ಥಾನದೊಳ್ ನೋಡೆ ಹ |
ಸ್ತದೊಳಾಶಂಖಸುದರ್ಶನಂಗಳಿರೆ ಶ್ರೀಮದ್ವೇಂಕಟಾಧೀಶನಾ ||೬೧||

ಅನಂತರಂ,

ಆವೇಶಮುಖದಿನೆಯ್ತಂ |
ದಾವೇಂಕಟಪತಿ ದರಾರಿಗಳನಾರ್ಪಿಂದಂ ||
ಭಾವಿಸಿ ಕೊಟ್ಟ ನಿಮಿತ್ತಂ |
ಕೋವಿದರಾಚಾರ್ಯರಿಂದಿನಿಂದೆಮಗೆಂದಂ ||೬೨||

ಎನೆ, ಕೇಳ್ದಾ ನೃಪನಿವರೊಳ್ |
ಘನಮಾನಿಯುಮಿರ್ದು ನೋಡಿ ಚಕ್ರಾಂಕಿತಮಂ ||
ಮನವೊಸೆದಾತಂ ಬಳಿಕಾ |
ಜನಪದಜನಮೆಲ್ಲಮಾಶ್ರಯಿಸಿತಿನರಡಿಯುಂ ||೬೩||

ಬಳಿಕಾಕಾಂಚಿಗೆ ಬಂದು |
ಜ್ವಳವರದನ ಸೇವೆಗೆಯ್ದು ಶ್ರೀರಂಗಕ್ಕಂ ||
ತಳುವಿಂದೈತಂದಾಮುಂ |
ಜುಳರಂಗೇಶನ ಪದಾಬ್ಜಮುಂ ಸೇವಿಸಿದರ್ ||೬೪||

ವ|| ತದನಂತರಮವಾಚ್ವಾರ ತಿರುನಗರಿ ಮೊದಲಾದ ಗಕ್ಷ್ಣತಿರುಪತಿಗಳಂ ಸೇವಿಸಿ ತಿರುಕ್ಕೊಯಿಂಗಾತಿಯುನೆಯ್ದಿ ಯಾಸ್ವಾಮಿಯ ಸೇವೆಯುಂ ಮಾಡ್ಡಿ ಸಮಯದೊಳ್ ಸಂಬಿನಿಯಾಸ್ವಾಮಿಮುಚಕಾಕಮುದಾಂತರದಿಂದಿವರೊಡನಿಂತೆಂದರತೆಂಗೊಡೆ:—

ಅಪರಿಮಿತಾವತಾರಮನೊಡರ್ಚಿಯುಮಾಂ ಮಿಗೆ ಲೋಕವಶ್ಯಮಂ ।
ಸುಪಟುತೆಯಿಂದೆ ಮಾಡಲತಿಯತ್ನದೊಳಾದೊಡಮಾದುದಿಲ್ಲ ಮೋಕ್ಷ್ ॥
ಕಪಟಮುದಲ್ತು ನಿಮ್ಮ ವಶವರ್ತಿಯದೇತಱಿನಾದುದೆಂದು ಸಂ ।
ದ ಪರಮಪೂರುಷಂ ನುಡಿಯಲಿಂತವರುತ್ತರಮಂ ನೆಗಳ್ಚಿದರ್ ॥೬೫॥

ಬೆಸಗೊಂಬಂದದೆ ಕೇಳ್ದೊಡಾಮುನಿವರ್ಯವಿಂತಾಂಪೇಳ್ವಿರಲ್ತೆಂದೊಡಾ ।
ಬಿಸಜಾಕ್ಷಂ ಪದೆದರ್ಚಕೇಂದ್ರಮುಖದಿಂ ಬಿಟ್ಟಂತಲಂಕಾರದಿಂ ॥
ದೆಸೆವಾತ್ಮಾಸನಮಂ ಪರಾಮರಿಸಿ ತಾಂ ಸಿಂಹಾಸನಾಸೀನನಾ ।
ಗಿ ಸುವರ್ಣೋಲ್ಲಸಿತೋನ್ನತಾಸನಮನಿತ್ತಾಚಾರ್ಯರಂ ಪ್ರೀತಿಯಿಂ ॥೬೬॥

ನಿರವಿಸಿಮಿನ್ನನಲೊಡಮಾ ।
ಸಿರಿಯರಸನ ಬಲದ ಕಿವಿಯೊಳೇಕಾಂತನೆ ಭಾ ॥
ಸುರಮಂತ್ರರತ್ನಮೆರಡಂ ।
ಪರಿವಜೆಸಿ ಮಹಿಮೆಯಿಂದೊಡರ್ಚಿದೆಮೆಂದರ್ ॥೬೭॥

ಅದನಾಕರ್ಣಿಸಿ ನಂಬಿ ನೀಮೆನಗೆ ಸಪ್ಪೀಮಂತ್ರಮಂ ಭಾವಿಸಿ ।
ತ್ತುದಱಿಂ ದಾಸ್ಯಮನೀಯವೇೞ್ಕೆನಲಿವರ್ ನಿಮ್ಮಿಂದಿಸಿಂಪೆಮ್ಮ ನಾ ॥
ಮುದೆ ರಾಮಾನುಜನಂಬಿಯೆಂದುಸಿರ್ದು ಮತ್ತಲ್ಲಿಂದಮೆಯ್ತಂದು ಸ ।
ನ್ಮುದದಿಂ ಕೇರಳಕಂತನಂತಶಯನಾದಿಕ್ಷೇತ್ರಮಂ ಪ್ರೋರ್ದಿದರ್ ॥೬೮॥

ಪದಿಮೂಱು ತಿರುಪ್ಪತಿಗಳ ।
ನುನಾರತೆಯೆಸೆಯೆ ಸೇವೆಗೆಯ್ದುಂ ಮರಳ್ದಂ ॥
ತೊದವಿದನಂತಶಯನಕುಱಿ ।
ಸದಮಳರೆಯ್ತಂದು ಪಾಂಚರಾತ್ರಾಗಮದಿಂ ॥೬೯॥

ವರವೈಷ್ಣವಮರ್ಯಾದೆಯಿ ।
ನಿರದೀಕ್ಷೇತ್ರಮನೊಡರ್ಚವೇೞ್ಕೆಂದತ್ಯಾ ॥
ದರದಿಂ ಯತ್ನಂಗೆಯೆ ವಿ ।
ಸ್ಫುರಿಸುತ್ತುಂ ಪದ್ಮನಾಭನೆಯ್ತಂದಿರುಳೊಳ್ ॥೭೦॥

ವ॥ ಇವರೊಡನಿಂತೆಂದನದೆಂತೆನೆ:—

ತುಳಸೀವಬ್ರಾಹ್ಮಣಭಕ್ತಿಯಿಂದೆಯುಮುದಾರಾಸ್ಮತ್ಪ್ರಸಾದತ್ವದಿ ।
ಸ್ಥಳಮಂ ವರ್ಜಿಸಿ ಪೋಗಿವಮಾವಿಲಲಸಚ್ಛ್ರೀರಂಗಕೆಂದಂತು ಚಾ ॥
ಪಳದಿಂ ಪೊತ್ತು ತಿರುಕ್ಕುಱುಂಗುಡಿಗೆ ತಂದಾಗಳ್ ತಿರುಪ್ಪಾರ್ಕಡಲ್ ।
ಮಲೆಯೊಳ್ ತಾಂ ದಶಯೋಜನಾಂತದೆಡೆಯುಲ್ಲಿಟ್ಟಂ ಸರೋಜಾಂಬಕಂ ॥

ಅಂತಿರಿಸಲೊಡಮವರ್ ಕ ।
ಣ್ಣಂ ತೆಱೆದೀಕ್ಷಿಸಿ ತಿರುಕ್ಕುಱುಂಗುಡಿಯಿದನಾ ॥
ವೆಂತೈದಿದೆವಾಶ್ಚರ್ಯವು ।
ನಂತಂಗಾಮೆಸಪ್ರದಿಷ್ಟಮಲ್ಲದೆ ಪೋಯ್ತೇ ! ॥೭೦॥

ಅದುಕಾರಣದಿಂದಿಂತೆಸ ।
ಗಿದನಿದು ವಲಮೆಮ್ಮ ದೇವರುಂ ತಿರುಮಣ್ಣುಂ ॥
ಮೊದಲಾದ ವಸ್ತುಚಯಮುಱ ।
ದುದು ತಾನಂತಲ್ಲಿಯೆಂತಿದರ್ಕೇಗೆಯ್ವೆಂ ॥೭೨॥

ಎನುತಾಳೋಚನೆವೆತ್ತಿರ ।
ಲನಿತಱೊಳಾಸ್ವಾಮಿಯಿವರ ಶಿಷ್ಯನ ರೂಪಿಂ॥
ಮನವೊಸೆದವನೆಲ್ಲಂ ಕೊಂ ।
ಡನುನಯದಿಂ ಬಂದು ಪದಯುಗಕೆ ನಮಿಸಲೊಡಂ ॥೭೪॥

ಅತಿಸಂತೋಷದಿನೆಮ್ಮ ಪೋಲ್ ಪದೆದು ನಿನ್ನಂ ಬಿಟ್ಟನೇ ತಂದು ಶ್ರೀ।
ಸತಿಯಾಣ್ಮಂ ಭಳಿಯೆಂದು ಮತ್ತೆ ನದಿಯೊಳ್ ಮಿಂದೂರ್ಧ್ವಪುಂಡ್ರಪ್ರಭೂ॥
ಷಿತರಾಗಿರ್ಪಿನವೀಕ್ಷಿಸುತ್ತೆ ನಿಜಶಿಷ್ಯಾಕಾರದಿಂ ರಂಜಿಪ ।
ಚ್ಯುತನಾಗಳ್ ತಿರುಮಣ್ಣನೀವುದೆನಗೆಂದಾವಾಕ್ಯಮಂ ಕೇಳ್ದವರ್ ॥೭೫॥

ಅತಂಗಂ ನಿಜಶೇಷವಾದ ತಿರುಮಣ್ಣಂ ಫಾಲದಲ್ಲಿಟ್ಟು ವಿ ।
ಖ್ಯಾತರ್ ತಾವೊಡಗೊಂಡು ಪೋಗಿ ಬಲಿಪೀಠಾಭ್ಯರ್ಣಮಂ ಪೊರ್ದಿಯು ॥
ಬ್ಜಾತಾಕ್ಷಂಗೆ ಪ್ರಣಾಮಮಂ ವಿರಚಿಸಲ್ ಶ್ರೀದಂಡಮಂ ಬೇಡಲಂ ।
ತಾತಂ ಮೆಯ್ಗರೆದೆಯ್ದೆ ಯುಚ್ಚರಿಸಿದುತ್ತುಂ ಸಾರ್ದರಂತಸ್ಥಮಂ ॥೭೬॥

ವ॥ ಅಂತೊಳಗಣ್ಗೆ ಪೋಗಿ ದಂಡಪ್ರಣಾಮಂಗೆಯ್ದು,

ಋಜುವಿಂಸ್ವಾಮಿಯು ವಕ್ತ್ರವಾರಿರುಹಮಂನೋೞ್ಪಲ್ಲಿ ತತ್ಕಾಲದೊಳ್।
ನಿಜಶಿಷ್ಯಂಗೆ ಪ್ರಸಾದಿಸಿರ್ದ ತಿರುಮಣ್ ಕಣ್ಗೊಪ್ಪಿಯೆಂತಪ್ಪ ಮೆ ॥

ಯೆನ್ನ ಜನಾಶ್ಚರ್ಯಕರಂ ವಿರಾಜಿಸಿದುದೆಮ್ಮೊಳ್ ವಿಸ್ಮಯಂ ತಾನೆನು |
ತ್ತ ಜಿತರ್ ವೈಷ್ಣವದರ್ಶನಾಂಬರವಿವಸ್ವಂತರ್ ಕಡಂಗಿರ್ಪಿನಂ ||೭೭||

ವ||ಆಸ್ವಾಮಿಯುರ್ಜಕವುಖಾಂತರದಿಂದಿಂತೆಂದನೆಂತೆನೆ:—

ತಿರುವಣ್ಣಿಲ್ಲದ ಕಾರಣಂ |
ಮಿರದಾಂ ಭವದೀಯಶಿಷ್ಯನಾಗೈತಂದೆಂ ||
ಗುರುವಲ್ತೆ ನೀಮಿದೇನ |
ಚ್ಚರಿಯಲ್ತೆನಗಿಷ್ಟಮೆಂದು ಸನ್ಮಾನಿಸಿದಂ ||೭೮||

ಕರದೊಳ್ ತ್ರಿದಂಡಮಿಲ್ಲದೆ |
ವಿರಚಿಸಲಿಂತುಚಿತನುಲ್ಲು ವಲವಿದು ವಾಧಾ ||
ಕರಮೆಂದು ಮೂಱುದಿನಸಂ |
ಬರಮುವರುಪವಾಸಮಿರ್ದರನುಚಿತಭೀತರ್ ||೭೯||

ಅನಿತಱೊಳನಂತಶಯನದಿ |
ನನುಪಮಶಿಷ್ಯಾದಿಸಂಘಮೆಯ್ತಂದುದು ತಾ ||
ಮುನಿಬರೊಡಗೂಡಿ ಶ್ರೀರಂ |
ಗನಿಜಾವಾಸಕ್ಕೆ ಪೋಗಿ ಮಠದಲ್ಲಿರ್ದರ್ ||೮೦||

ವ॥ ಆಮಠದೊಳೆಂತೆಸೆದಿರ್ದರೆಂದೊಡೆ :—

(ಸಂಸ್ಕೃತ)ಸಂಸೇವಿತ ಸ್ಸಂಯಮಿಸಪ್ತಶತ್ಯಾ ಪೀಠೈಶ್ಚತುಸ್ಸಪ್ತತಿಭಿ ಸ್ಸಮೇತಃ।
ಅನ್ಯೈರನಂತೈರಪಿ ವಿಷ್ಣುಭಕ್ತೈ ರಾಸ್ತೇಽಧಿರಂಗೇ ಯತಿರಾಜರಾಜಃ॥

ಟೀಕು— ಯತಿವರರೇೞ್ನೂರ್ವರಿನೂ |
ರ್ಜಿತಪೀಠಸ್ಥರ್ ಕರಂ ಚತುಸ್ಸಪ್ತತಿಯುಂ ||
ಮಿತಮಿಲ್ಲದ ಶ್ರೀವೈಷ್ಣವ |
ತತಿಯಿಂದೊಡಗೂಡಿ ಸಕಲವೈಭವದಿಂದಂ ||೮೧||

ಯತಿರಾಜಸಾರ್ವಭೌಮರ್ |
ವಿತತಮಹಾಮಹಿಮರೆಸೆವ ಶ್ರೀರಂಗದೊಳಾ ||
ರ್ಜಿತಕೀರ್ತಿಚಂದ್ರಿಕಾಧವ |
ಳಿತಲೋಕರ್ ಪರಮತಾಬ್ಧಿಬಾಡಬರಿರ್ದರ್ ||೮೨||

ಇದು ನಮಿತಹಿಮಕರಚೂಡಕಮಲಭವಮುಖಸುರಸಮುದಯಮೌಳಿಮಣಿಗಣಘೃಣಿಸಂಧ್ಯಾರಾಗಾನುಗುಣಪ್ರಚುರರುಚಿತಾರಕಾಯಮಾನ ರಂಗವಿಭುಚರಣಯುಗಳನಖಮಯೂಖಸುಧಾಪೂರವಿಹಾರಮದಮರಾಳೀಕೃತ ಮಹಿಷಪುರವರಸಾಮ್ರಾಜ್ಯಸಂಪನ್ನ ರಾಜಾಧಿರಾಜರಾಜಪರಮೇಶ್ವರಾಪ್ರತಿಮಪ್ರೌಢಪ್ರತಾಪ ಬಿರುದಂತೆಂಬರಗಂಡ ಯದುಕುಲನಳಿನದಿನಕರರಾದ ಶ್ರೀಚಿಕದೇವರಾಯಮಹಾರಾಜಪ್ರಸಾದಪರಿಪೂರ್ಣ ಸಚಿವನಿಚಯತಿಲಕ ಶ್ರೀಚಿಕುಪಾಧ್ಯಾಯ ವಿರಚಿತಮಪ್ಪ ದಿವ್ಯಸೂರಿಚರಿತಮಹಾಪ್ರಬಂಧದೊಳ್ ಶೇಷಾಂಶಭವರಾದ ಶ್ರೀರಾಮಾನುಜಾಚಾರ್ಯರ ಭಾಷ್ಯನಿರ್ಮಾಣ ಸರಸ್ವತೀಸಮ್ಮತಭಾಷ್ಯಕಾರಾಹ್ವಯ ಪ್ರಾದುರ್ಭಾವಾದಿ ವರ್ಣನಂ ತ್ರಯೋದಶಾಶ್ವಾಸಂ ಸಂಪೂರ್ಣಂ

॥ ಮಂಗಳಂ ಮಹತ್ ಶ್ರೀ ಶ್ರೀ ॥

## —ಚತುರ್ದಶಾಶ್ವಾಸಂ—

ಶ್ರೀವಿಮಳಭಾಷ್ಯಕಾರಮ |
ಹಾವೈಷ್ಣವಗುರುಮನೋನುವಾಂಛಿತಮಂ ರಂ ||
ಗಾವಸಥಂ ಕುಡುಗೆಮಗೆ ಶು |
ಭಾವಹಫಲಮಂ ಕಡಂಗಿಯಾರಂಗೇಶಂ ||೧||

ಈರೀತಿಯೊಳರ್ಪಿನಮಾ |
ಶ್ರೀರಾಮಾನುಜರಶೇಷಮಂ ಪದೆದಾಳ್ವಂ ||
ದಾರಿಂ ಕೇಳ್ವಭಿವಾಂಛಿತ |
ಮಾರಯಲೊಡಮದುಮತೀತಮಾದ ನಿಮಿತ್ತಂ ||೨||

ಮಿಗೆ ಪೆರಿಯನಂಬಿಯಿಂದಂ |
ಭಗವತ್ಸಂಬಂಧಮಾದಿಯಾಗಿರೆ ನೆಗೞ್ದ ||
ರ್ಥಗಳ ವಿಶೇಷಮುಮಂ ತಾಂ |
ಬಗೆದುಱಿ ತಚ್ಛಿಷ್ಯರಾದ ತೆಱದಿಂ ಕೇಳ್ದರ್ ||೩||

ತಿರುಮಲೆನಂಬಿಗಳಿಂ ವಿ |
ಸ್ಫುರಿತದ್ವಂದ್ವಾರ್ಥವಿವರಣಾತ್ಮಕವೆಸಿಪಾ ||
ವರರಾಮಾಯಣದೊಳ್ಪುಮ |
ನಿರದತ್ಯಾಸಕ್ತಿಯಿಂದೆ ಕರಮಾಲಿಸಿದರ್ ||೪||

ತಿರುಕಚ್ಚಿನಂಬಿಯಿಂದಂ |
ಚರಮಶ್ಲೋಕಾರ್ಥಮಾದ ತಿರುಮಾಲೆಯುಮಂ ||
ಪಿರಿಯಾಂಡಾರ್ ಸನ್ನಿಧಿಯಿಂ |
ಪರಮದ್ರಾವಿಡಪ್ರಬಂಧದೊಳ್ಪಿಂ ಕೇಳ್ದರ್ ||೫||

ಸ್ಫುರಿಪಂತೆ ತಿರುವರಂಗ |
ಪ್ಪೆರುಮಾಳರೆಯರಿನುದಾರಭಾಗವತೋದ್ಯ ||
ಚ್ಚರಿತಪ್ರಕಾಶಮೆನಿಪಾ |
ಪರಮಾರ್ಥವಿಶೇಷಮುಮನೊಲ್ದಾಲಿಸಿದರ್ ||೬||

ಈಪರಿಯರ್ಥವಿಶೇಷಮ |
ನೀಪಂಚಾಚಾರ್ಯರಿಂದೆ ಸಂಪಾದಿಸಿ ಚಿ |
ದ್ರೂಪಾಳ್ವಂದಾರಂ ತ |
ತ್ತಾಪ ಪ್ರತಿಪತ್ತಿಗೆಯ್ದು ಮಿಗೆ ಯತಿರಾಜರ್ ||೭||

ಮ|| ಇಂತು ಪ್ರತಿಪತ್ತಿಯನೆಸಗಿಯಾಶ್ರೀರಂಗದೊಳ್ ಗ್ರಂಥಕಾಲಕ್ಷೇಪಮಂ ಮಾಡಿಕೊಂಡನೇಕಚೇತನೋಜ್ಜೀವನಪರರಾಗಿರೆ ಗಂಗೆಗೊಂಡಚೋಳಪುರದ ದೇಶಾಧೀಶನಪ್ಪ ಚೋಳರಾಜಕುಮಾರಂ ದುಸ್ಸಂಗಪ್ರಾಬಲ್ಯದಿಂ ಶೈವನಾಗಿ,

ನಿಜದೇಶಸ್ಥಬುಧರ್ಕಳಂ ಪಿಡಿದು ಬಲ್ಪಿಂ ತಂದು ನಿರ್ಬಂಧಮಂ |
ಕುಜನಂ ಮಾಡಿಸಿ ತಾಂ "ಶಿವಾತ್ಪರತರಂ ನಾಸ್ತೀತಿ" ಸಾರಾರ್ಥಮಂ ||
ನಿಜಮಪ್ಪಂತಿರೊಡರ್ಚಿಮಿನ್ನೆನೆ ಬಿಗುರ್ತ್ತಾತಂಗೆ ಶ್ರೀವೈಷ್ಣವ |
ವ್ರಜಮುಂ ಮಿಕ್ಕ ಬುಧರ್ಕಳುಂ ಬರೆದುಕೊಟ್ಟರ್ ಮಾಱಲೇನಕ್ಕುಮೋ ||

ಆರಾಜನ ಸನ್ನಿಧಿಯೊಳ್ |
ಕೂರತ್ತಾಳ್ವಾರ ಭಾಗಿನೇಯರ್ ತಾಂ ನಾ ||

ಲೂರಾನೆಂಬರ್ ಸಚಿವ್ರೋ |
ದ್ಧಾರತ್ವದಿನಿರ್ಪರರಸನೊಡನಿಂತೆಂದರ್ ||೯||
ಧರಣಿಪ ಮನ್ಮಾತುಳರ್ಗಂ* |
ಪರಮಾಚಾರ್ಯರ್ಕಳಾದ ರಾಮಾನುಜರೇ ||
ಬರೆದೊಡೆ ಶಿವಪಾರಮ್ಯಂ |
ಪರಮುಕ್ಕುಮದಲ್ಲದಲ್ಲರಿಂದೇನಕ್ಕುಂ ||೧೦||
ಎನೆ ತದ್ವಾಕ್ಯಮನಾಲಿಸಿ |
ಜನಪತಿಮಂತಕ್ಕೆನುತ್ತುಮಾಕ್ಷಣದೊಳ್ ದೂ ||
ತನಿಕಾಯಮನವರಿರ್ಪೆಡೆ |
ಗನುಸರಿಸದೆ ಕಳುಹಿ ಬಿಟ್ಟನಾಗಳ್ ಬಲ್ಪಿಂ ||೧೧||
ನಡುವಗಲ ಸಮಯದೊಳ್ ಮಠ |
ದೆಡೆಯಿಂ ಮಿಗೆ ಮುತ್ತಿಕೊಂಡರಂದಿನ್ನಿವರ್ಗ* ||
ಳೊಗ್ಗಡಲಸ್ವಸ್ಥತೆಯಾಗಿರ |
ಲೊಡಮುಷ್ಣೋದಕದೆ ಮಿಾವ ಸಮನಂತರದೊಳ್ ||೧೨||

ಕೂರತ್ತಾಳ್ವಾರ್ ಸಮಂತಾಲಿಸಿನೃಪಭಟನೃತ್ತಾಂತಮಂ ಮುಂತಿವರ್ಗಾ|
ಕೂರಾಸದ್ರಾಜನಿಂದೇಂ ಪ್ರಥಿವಿಕುಮೊ ಎನುತ್ತಳ್ಕಿನಿಂದಾಂತು ಕಾಷಾ ||
ಯಾರಾಜದ್ವಸ್ತ್ರದಂಡತ್ರಯಮನಜಿಕೆಯುಂ ಮಾಡದೀಭಾಷ್ಯಕಾರ |
ಗೋರ್ರಂತಲ್ಲಿಂದೆ ತಾಮೇ ಪೋಬನುಡಲೊಡನಾರಾಜದೂತರ್ಕಳಾಗಳ್||

ಇವರೇ ರಾಮಾನುಜರೆಂ |
ದು ವಿಚಾರಿಸದುಯ್ದರಾಲಿಸೀತೆಱನಂ ತಾ ||
ಮವರ ಸಹಾಯಕೆ ಕಳುಹಿಸಿ |
ತವಕದಿನಾಪೆರಿಯನಂಬಿಗಳನಾಕ್ಷಣದೊಳ್ ||೧೪||
ಇರಬಾರದೆಂದು ಮಠದೊಳ್ |
ಭರದಿಂ ಬೆಳ್ಳುಡೆಸುತ್ತಾಂತು ಶಿಷ್ಯಾವಳಿಯುಂ ||
ಕರೆದೊಡಗೊಂಡೊಂದುಮನಾ |
ದರಿಸದೆ ಮೆಲ್ಲನೆಯಿಸೆಯ್ದುಮಸಿತಜಿಳಾಗಳ್ ||೧೫||

ಆರಾಜದೂತರಿರದಾ |
ಕೂರತ್ತಾಳ್ವಾರುಮಂ ಪೆರಿಯ ನಂಬಿಯುಮಂ ||
ಘೋರನೊಡಗೊಂಡು ಪೋಪಿನ |
ಮಾರಯ್ದಿವರಲ್ಲ ಕೆಲವರೀಕ್ಷಿಸಿಯಾಗಳ್ ||೧೬||

ಇವರೆಂಬೆರುಮಾನಾರ |
ಲ್ಲವರ್ಗಳ್ ಬೇಱಿರ್ಪರೆಂದು ಕಳುಪಿಸೆ ಕೆಲರಂ ||
ತವಕದೆ ಮಠದೊಳಗೀಕ್ಷಿಸಿ |
ಯವರಿರದಿರೆ ಪೋದ ದಾರಿವಿಡಿದತಿಶೀಘ್ರಂ ||೧೭||

ಮಿಗೆ ಪಿಂದಟ್ಟಿಕೊಳುತ್ತುಮೈತರಲಿವರ್ ಕಂಡಾಗಳಂತಿತ್ತ ಶಿ |
ಷ್ಯಗಣಕ್ಕೀದ್ರಮಿಡಪ್ರಬಂಧಜಪದಿಂ ತನ್ಮಾರ್ಗದೊಳ್ ಸೈಕತಾ ||
ಳಿಗಳಂ ಮಂತ್ರಿಸಿ ಚೆಲ್ಲಿ ಬರ್ಪುದೆನುತಾಗಳ್ ಪೋಱಲಾಪಥ್ಯೆಯೊಳ್ |
ನೆಗೞ್ದಿತ್ತಿಂತವರೆಲ್ಲರಾಮಹಿಮೆಯಿಂ ಕಣ್ಗಾಣದಾಶ್ಚರ್ಯದಿಂ ||೧೮||

ಈಪೋದ ವಿಪ್ರರೇನೋ |
ಕಾಪಟ್ಯಂಗೆಯ್ದು ಬೇಗಮೆಯ್ದಿದರೆಂದಾ |
ಭೂಪಾಲಕದೂತರ್ ಬಂ |
ದಾಪದದೊಳ್ ತಿರಿಗಿ ತಮ್ಮ ಪುರಿಗೆಯ್ತಂದರ್ ||೧೯||

ವ|| ಅಂತೆಯ್ತಂದಾಕೂರತ್ತಾಳ್ವಾರಂ ಪೆರಿಯನಂಬಿಗಳನಿರ್ವರುಮನೊಡಗೊಂಡು ನಿಜರಾಜಂಗೆ ತೋಱಲೊಡಂ ಇವರಂ ಕಂಡು

ಭರದಿಂ ತಪ್ಪಿಸಿಕೊಂಡು ಪೋದರೆಯವರ್ ಲೇಸಾದುದೀತಂಗಳೇ |
ಪಿರಿದುಂ ತತ್ಪ್ರತಿರೂಪರೆಂದಿವರ ಕೆಯ್ಯೊಳ್ ಕೊಟ್ಟನಾಗಳ್ ಬುಧೋ |
ತ್ಕರಮಾರಯ್ದೊಸೆದಿತ್ತ ಪತ್ರಿಕೆಯನಿನ್ನೀಂ ಲೇಖಿಸಿಂತೀ "ಶಿವಾ
ತ್ಪರಮುಂ ನಾಸ್ತಿ" ಎನಿಪ್ಪ ಸೊಲ್ಲನೆನೆ ಕೇಳ್ದಾಪತ್ರಮುಂ ಕೊಂಡಿವರ್ ||೨೦||

ವ|| 'ದ್ರೋಣಮಸ್ತಿ ತತಃ ಪರಂ' ಎಂದಾ ಕೂರತ್ತಾಳ್ವಾರ್ ಬರೆದಾ ನೃಪಂಗೀಯಲೊಡಮದಂ ನೋಡಿ,

ಅತಿಕುಶಲಂ ತಾಂ ಮೃತ್ಪ |
ನ್ನತೆಯಿಂ ತಿಳಿದೆಮ್ಮ ಶಿವನನವಮತಿಸಿದರೀ ||

ಕೃತಕರ ಕಣ್ಣಂ ಕೀಳ್ವುದೆ |
ನುತವೆಂದಾದೂತಚಯಕೆ ಬೆಸಸಿದನಾತಂ ||೨೧||
ಆರಾಜಾಜ್ಞೆಯಿನಾಗಳ್ |
ಕೂರತ್ತಾಳ್ವಾರ ಪೆರಿಯನಂಬಿಯ ಕಣ್ಣಂ ||
ಕೂರಸಿಯಿಂ ಮಿಾಟಿದರಾ |
ಕ್ರೂರಚರರ್ ಪೆರಿಯನಂಬಿಗಳ್ ನಿಜತನುವಂ ||೨೨||
ಪರಿವರ್ಜಿಸಿಯಾವ್ಯಾಜದೆ |
ಹರಿಧಾಮಕ್ಕೆಯ್ದಿಯವರ್ಗೆ ಕೂರತ್ತಾಳ್ವಾರ್ ||
ವಿರಚಿಸಿ ಸಂಸ್ಕಾರಮನಂ |
ತಿರದಾಶ್ರೀರಂಗಕೆಯ್ದಿ ಗೃಹದಲ್ಲಿರ್ದರ್ ||೨೩||
ಬಳಿಕಾಚೋಳಂ ವಿಷ್ಣು |
ಸ್ಥಳವಿಗ್ರಹಮೆಲ್ಲಮಂ ಕರಂ ಕಿೞ್ತಾಯಾ ||
ಸ್ಥಳದೊಳ್ ಶಿವಪ್ರತಿಷ್ಠೆಯ |
ನಳವಿಂದಂ ರಚಿಸಿ ದುಷ್ಟತೆಯಿನೆಸೆದಿರ್ದಂ ||೨೪||

ಯತಿರಾಜರ್ ಬಳಿಕಿತ್ತ ಕೊಂಗುಧುರೆಯಂ ಸಾರ್ದೊಂದರಣ್ಯಕ್ಕೆ ಬಂ|
ದು ತತ್ಕಾಸಾರದೆಡೆಯೊಳಿರ್ದೊಂದುನಿಜಶಿಷ್ಯರ್ದಾರಿಯಂ ತಪ್ಪಿಯುಂ ||
ತತಿಭೀತರ್ಕಳೆದಿರ್ದುಳೊಂದು ಪೊಲದೊಳ್ ಬೇಡರ್ಕಳರ್ ಕಂಡುಮೇಣ್|
ಧೃತಿಗುಂದೀಪರಿ ಪೋಪ ಪೆರ್ಗಮನವೆತ್ತಣ್ಬಂದಿರೆಲ್ಲಿಂದಿದೇಂ ||೨೫||
ರಾಮಾನುಜರಡಿಗಳ್ ಸು |
ಕ್ಷೇಮಮೆ ಶ್ರೀರಂಗದಲ್ಲಿ ನಡೆಗುಮೆ ವಿಭವಂ ||
ಶ್ರೀಮಂತರ್ಗೆನೆ ಚೋಳನ |
ಭೂಮೋಪದ್ರವದಿನೊಂದು ದೇಶಾಂತರಮಂ ||೨೬||

ಧರಿಸಿನ್ನೆಲ್ಲಿಗೆ ಪೋದರೋ ತಿಳಿಯೆವಾವೆಂಬಾಗಳಂದಲ್ಲಿಗೆಂ |
ಜೆರುವಮಾನಾರಿರಪ್ಪೈದಿಯೆಮ್ಮ ಕುಱುಪಂ ಸೀಮೆಂತು ಬಲ್ಲಿರ್ ಸಮಾ ||
ದರದಿಂದಂ ಬೆಸಗೊಂಡಿರಿಂತುಟೆನೆ ನಲ್ಲಾಂಚಕ್ರವರ್ತೀಂದ್ರ ಶ್ರೀ |
ಪ್ಯರಿದೀ ದಲ್ ಪಡೆದಂದವರ್ ಸಮುಪದೇಶಂಗೆಯ್ದರಿಂತೆಂದು ತಾಂ ||೨೭||

ಗುರುವೆಂಬೆರುಮಾನಾರ್ಗಳ |
ತಿರುವಡಿಗಳೆ ಶರಣಮೆಂಬ ಬಗೆಯಿಂ ನಿಮ್ಮಂ ||
ಪಿರಿದುಂ ಬೆಸಗೊಂಡಪೆವೆಂ |
ದುರುತರದನುತಾಪದಿಂದೆ ಬಿಸುದರ್ ಬೇಗಂ ||೨೮||

ನವಣೆಯ ತಂಡುಲ ಜೇನ್ಗಳ |
ನಿವ*ರ್ಗಿತ್ತಾರಾತ್ರಿಯಲ್ಲಿ ಶ್ರಮಹರಣಾರ್ಥಂ ||
ತವೆ ಸನ್ಮಾನಿಸಿ ಬೆಳಗಾ |
ದವಸರದೊಳ್ ತಮ್ಮ ನಗರಿಗೊಡಗೊಂಡುಯ್ದರ್ ||೨೯||

ಅಂತೊಡಗೊಂಡು ಪೋಗಿ ನಿಜರಾಜಸಮೀಪಕೆ ಚೋಳಮೇದಿನೀ |
ಕಾಂತನಮಾಂತರಕ್ಕಗಿದು ತಾಮಿವರಿಲ್ಲಿಗೆ ಬಂದರೆಂದೊಡಾ ||
ತಂ ತವೆ ಚಿತ್ತದೊಳ್ ಮಱುಗಿ ತನ್ನ ಪುರೋಹಿತಗೇಹಕಕ್ಕಿಯಂ |
ಸಂತಸದಿಂದೆ ಕೊಟ್ಟವರ್ಗೆ ಭೋಜನಮಂ ನೆಱೆಮಾಡಿಸಲ್ಕಱಿಂ ||೩೦||

ಎನಲಂತಕ್ಕೆಂದವಂ ತನ್ನಬಳಿಗುಸಿರಲಾಕಾಂತೆ ಕೈಕೊಂಡು ನಿಮ್ರಂ |
ದನಘರ್ ಮಿಂದಾಶುವಿಂ ಬರ್ಪುದೆನಲವರಿವರ್ ಕೇಳ್ದು ಮೇಣಕ್ಕಮೇಭೋ ||
ಜನಮೇತದ್ಗೇಹದೊಳ್ ನಿಂದೆಮಗೆನುತೊಡನಾಲೋಚಿಸುತ್ತಿರ್ದೊಡಾಮಾ |
ನಿನಿ ಕಂಡಾಂ ಶಿಷ್ಯೆ ರಾಮಾನುಜರಡಿಗಳಱಿಂ ಯೋಗ್ಯೆಯಾನಪ್ಪೆನೆಂದಳ್ ||

ವ|| ಇಂತೆಂದಾಕಾಂತೆಯುಂ ಕುಱಿತು ರಾಮಾನುಜಾಚಾರ್ಯರ್ ಬೆಸಗೊಂಡರದೆಂತೆನೆ:—

ನಿನಗೆಂದಾದುದು ಪೇೞ್ ಸಮಾಶ್ರಯಣಮಾರಾಮಾನುಜಾಚಾರ್ಯರಿಂ|
ದೆನೆ ಶ್ರೀರಂಗಕಮಾಂತರಕ್ಕಗಿದು ಬಂದಾನೋರ್ವನಾಗಾರದ ||
ಲ್ಲಿನೆಯುಂ ಗೂಡಿರೆ ಶಿಷ್ಯವೃಂದಸಹಿತಂ ಮಾಧೂಕರಕ್ಕೆಲ್ದು ಬ |
ರ್ಪಿನಮಲ್ಲಿರ್ದು ಸಹರ್ಷೆ ಕಂಡು ಬೆಸಗೊಂಡೆಂ ಪ್ರೇಮದಿಂದಾಗಳಾಂ||೩೧||

ಇನಿಬರ್ ಶಿಷ್ಯರುಮೋಂ ಪೊವಲ್ದು ನಿಮಗೀಮಾಧೂಕರಕ್ಕೆಲ್ದು ಬ |
ರ್ಪಿನಿತೇಂ ಮೋಣೆನಲೊಂದು ಮಂತ್ರಮನಿವ*ರ್ಗಾಂ ಪೇೞುತಿರ್ದಪ್ಪೆವೆ ||
ಮ್ಮನಿವರ್ ತಾವಂದಿನಿಂದಾಶ್ರಯಿಸುವರೊಲವಿಂದಾಂತ ಸದ್ಭಕ್ತಿಯಿಂ ಕೇ |
ಳೆನಲಾಮಂತ್ರಮನೆನ್ನೊಳುಂ ಸಮುಪದೇಶಂಗೆಯ್ಯವೇಳ್ಕೆಱಿಂ ||೩೨||

ಎನೆ ಮದ್ಭಕ್ತಿಯನೀಕ್ಷಿಸಿ |
ಘನಮಂತ್ರಮನಾಗಳೊಳ್ಪನುಪದೇಶಿಸಿ ಗ ||
ಳ್ಕನೆ ಭಗವತ್ಸಂಬಂಧಮ |
ನನುಗೊಳಿಸಿದರೆಂದು ಪೇೞಲೊಡಮಿದಱೊಲವಿಂ ||೨೪||

ಧ್ರುವಮಂತಾದೊಡೆ ಯೋಗ್ಯನೀನಡಿಗೆಯಂ ಮಾಡೆಂದು ಪೇೞ್ದೊರ್ವವೈ |
ಷ್ಣವನಂ ನೀಂ ಮನೆಗೆಯ್ದಿಯಾತರುಣಿ ತಾನೇಗೆಯ್ವಳೋ ನೋಡುತಂ ||
ತವಧಾನಂಬಿಡದಿರ್ಪುದೆಂದಿರಿಸಲೆೞ್ದಾ ಕಾಂತೆಯಾರಯ್ಯಲು |
ತ್ಸವದಿಂ ಪೂಜಿಸ ಪಾದುಕಾಯುಗಕದಂ ನೈವೇದ್ಯಮಂ ಮಾಡಿದಳ್ ||೨೫||

ಬೞಿಕಾವೈಷ್ಣವನಂ ಸಮಂತಬಲೆ ತಾನೇಗೆಯ್ದಳೆಂತಿರ್ದಳು |
ಜ್ಜ್ವಳಮಪ್ಪಂತಿರೆ ಸೊಲ್ಲಿಸಿನ್ನಲಿವಳ್ ತಾನಟ್ಟ ಮೇಣೊಂದು ಕೃ ||
ಷ್ಣಲಸದ್ದಾರುಗದಂ ನಿವೇದಿಸಿದಳೆಂದಾವಾಕ್ಯಮಂ ಕೇಳ್ವನಂ |
ನಳಿನಾಭಾಕ್ಷಿಯಿವರ್ಗೆ ಬಂದು ಮಣಿಪಂತೆಂದಳ್ ಮಹಾಭಕ್ತಿಯಿಂ ||೨೬||

ಪದೆದಟ್ಟರ್ಚಿಸಿಯೆಮ್ಮ ದೇವರಿದಿರೊಳ್ ನೈವೇದ್ಯಮಂ ಸ್ವಾಮಿ ಮಾ |
ಡಿದೆನೊಲ್ದಾನೆನಲಾಂ ನಿರೀಕ್ಷಿಪೆವು ಯುಷ್ಮದ್ದೇವರಂ ಕೊಂಡು ಬ ||
ರ್ಪುದು ನೀನೆಂಬಿನಮಂತು ಪಾದುಕೆಗಳಂ ತಂದಾಕ್ಷಣಂ ತೋಱಲಿ |
ಸ್ನಿದೆಯುಕ್ಕಂ ಪಲಮೊಂದು ನೀನಿವರೊಳಾರಾಮಾನುಜಾಚಾರ್ಯರಾರ್ ||೨೭

ಪರಿಕಿಪುದೆನಲಾಕಾರಂ |
ಸರಿ ಬೆಳ್ಳುಡೆಯಿಂದೆ ಶಂಕೆಯಾಗಿದೆ ನೀಮೇ ||
ನಿರವಿಸಿಮೆನಲಾವೈಷ್ಣವ |
ರಿರದೆ ಭವತ್ಸ್ವಾಮಿಯಿವರೆ ತಾಮೆಂದೊಱೆದರ್ ||೨೮||

ತರುಣೀ ಕೇಳಿವರ್ಗೊಂದಪಾಂತರದಿನೀಮೇಪಾಂತರಂಬೆತ್ತು ಸಾ |
ರ್ತರವೇೞ್ಕ್ಯೆತ್ತನೆ ದುಃಖಿಸುತ್ತಬಲೆ ಪಶ್ಚಾತ್ತಾಪದಿಂದಕ್ಕಟಾ ! ||
ಗುರುಗಳ್ಗಂತೞಿ ಬಂದುದೇ ಏನುತವಳ್ ಸದ್ಭಕ್ತಿವೆತ್ತಂತು ತ |
ಚ್ಚರಣಾರಾಧನೆಯುಂ ನೆಗೞ್ಚಿಯುವ*ರ್ಗಗಳ್ ಭೋಜನಂಗೆಯ್ಸಿದಳ್ ||೨೯||

ಮೇಲಂಕಣದೊಳ್ ವೈಷ್ಣವ |
ಜಾಲಮನಾಲಿಸದೆ ರಮಣನೊಱಗಿರೆ ಕಂಡಾ ||

ಲೋಲಾಕ್ಷಿಯಿವರ ಪತ್ಪ್ರ |
ಕ್ಷಾಲನಜಲದಿಂ ಪ್ರಸಾದದಿಂದೆಯುಮೀಗಳ್ ||೪೦||
ಉದ್ಧರಿಸಲ್ವೇೞ್ಕುಂದಾ |
ಸದ್ಧರ್ಮಚರಿತ್ರೆ ಪತಿಯ ಬೞಿಗೊಡನುಯ್ದಾ ||
ಶುದ್ಧ ಪ್ರಸಾದತೀರ್ಥಮ |
ನುದ್ಧತಮಹಿಮಾವಶಿಷ್ಟಮುಂ ಕೊಟ್ಟಳವಂ ||೪೧||
[ಊಡುತಿರೆ]ಸುಮ್ಮನವಳಂ |
ನೋಡಿ ಸರೋಜಾಕ್ಷಿ ಭುಕ್ತಿ ನೀನಾಗೆನೆಯಾಂ ||
ಮಾಡುವೆನೆಂತೂಟಮನೀ |
ರೂಢಿಯ ಮತ್ಸ್ವಾಮಿಗೊಂದೊಳದು ಸಂಕಲ್ಪಂ ||೪೨||

ಅದೇನೆಂದೊಡೆ :—

ಕರಮೆಸೆವ ಪಂಚಸಂಸ್ಕಾ |
ರರಚನೆಯಿಲ್ಲದ ಮನೆಯೊಳಿಮುಗುಣಿಸೆಂತೆಂ ||
ದು ರಸಜ್ಞರಿರ್ಪರೆಸಲೆಲೆ |
ತರುಣೀ ನೀಂ ಭುಂಜಿಸವರ ಶೇಷಮನೀಗಳ್ ||೪೩||
ನಾಳಿನ ದಿನದೊಳ್ ತಾಳ್ವೆಂ |
ನೀಳಾಳಕಿ ಚಕ್ರಚಿಹ್ನಮಂ ದಿಟಮಿದು ನೀಂ ||
ಕೇಳೆನಲಂತಕ್ಕೆಂದು ಪ್ರ |
ವಾಳಾಧರೆ ತದವಶಿಷ್ಟಮಂ ಭುಂಜಿಸಿದಳ್ ||೪೪||
ವಿರಚಿಸುತುಂ ಮಱುವಗಲಾ |
ಧರಣೀಸುರಗೊಲ್ದು ಪಂಚಸಂಸ್ಕೃತಿ ಮೊದಲಾ ||
ಗಿರೆ ವೈಷ್ಣವವಿಧಿಯಂ ವಿ |
ಸ್ಫುರಿಪಂತುಜ್ಜೀವಿಸಲೊಡಮಾಸತಿ ನಲವಿಂ ||೪೫||
ಈರೈದು ದಿನಂಬರಮುಂ |
ತಾರೈದಾದರಿಸೆ ಬೞಿಕೆ ಸಂಪಾದನೆಗೆ ||
ಯ್ದೀರಂತೆ ತಿದಂಡಮುಮಂ |
ಧೀರರ್ ಕಾಷಾಯವಸನಮಂ ಪೊಱಮಟ್ಟರ್ ||೪೬||

ವ|| ಅಂತು ಪೊಱಮಟ್ಟು ವಹ್ನಿಪುಷ್ಕರಣಿಗೆಯ್ದಿಯಲ್ಲಿಂದೆ ಸಾಲ
ಗ್ರಾಮಕ್ಕೈತಂದಾಗ್ರಾಮಸ್ಥರೆಲ್ಲರುಂ ಪ್ರಾಕೃತರಾಗಿರ್ದ ನಿಮಿತ್ತಂ ಮೊದ
ಲಿಯಾಂಡಾನಂ ಕರೆದಾರಾಮಾನುಜರಿಂತೆಂದರದೆಂತೆನೆ :—

ಶ್ರೀಪಾದತೀರ್ಥಮಂ ನೀಂ |
ಸ್ಥಾಪಿಸಿಮಾಕೆಱೆದೊಳೆಂದು ನಿಯಮಿಸುತವರಂ ||
ತಾಪದ್ಮಾಕರದೊಳ್ ಬಱಹು |
ಪಾಪಾಪಹ ದಿವ್ಯತೀರ್ಥಮಂ ಮೇಳಿಸಿದರ್ ||೪೭||

ಅದಱಿನೊಳ್ ಮಿಂದೊಸದಿಂಟಿದಾಪ್ರೊಱಿಲೊಳಿರ್ಪ ಗ್ರಾಗಳೇ ಜ್ಞಾನಸಂ |
ಪದಮಾಯ್ತಂತವರ್ಗಳ್ ಸಮಾಶ್ರಯಣಮಂ ಕೈಕೊಂಡು ತಚ್ಛ್ರೀಪದಾ ||
ಬ್ಜದೊಳೊಳ್ಪಂದವರಂಘ್ರಿಯಂ ಭಜಿಸಿಯೆಮ್ಮಂ ಸ್ವಾಮಿ ಸುಜ್ಞಾನಕಾ |
ಸ್ಪದದೀವೈಷ್ಣವದೀಕ್ಷೆಯಿತ್ತು ಸಲಿಪಲ್ವೇಱ್ಕೆಂದು ಸದ್ಭಕ್ತಿಯಿಂ ||೪೮||

ಬಿನ್ನವಿಸಲವರ್ಗೆ ಚಿತ್ಸಂ |
ಪನ್ನರದಂ ಕೊಟ್ಟೊಡರ್ಚಿದರ್ ವೈಷ್ಣವರಂ ||
ತನ್ನ ಜನನೋರ್ವಿಯಾಗಿರೆ |
ಸನ್ನುತನಾವಡುಗನಂಬಿ ತದ್ವೈಭವಮಂ ||೪೯||

ಪರಿಕಿಸಿ ವೈಷ್ಣವನೊರ್ವನ |
ಸಿರಿಯಡಿಗಳ ತೀರ್ಥಮಿನಿತು ಮೈಮೆಯೊಳಿರ್ಕುಂ ||
ಪರಮಯತಿರಾಜ ರಾಜ |
ಸ್ಫುರಿತಶ್ರೀಪಾದತೀರ್ಥವೈಭವಮೆನಿತೋ ! ||೫೦||

ಪತಚ್ಛ್ರೀಪದತೀರ್ಥದಿಂದಖಿಳರಂ ಪ್ರೋಜ್ಜೀವಿಸಲ್ವೇಱ್ಕೆನು |
ತ್ತಾತ್ತೀರ್ವಿರ್ದ ಕಮಂಡಲಾಂತದೊಳದಾಚಂದ್ರಾರ್ಕಮಿರ್ಕೆಂದು ವಿ ||
ಖ್ಯಾತತ್ವಂ ಬರೆಯೊಂದು ಬಾವಿಯೊಳದಂ ನಿಕ್ಷೇಪಮಂ ಮಾಡಿದಂ |
ಧೂತಾಘರ್ ಯತಿರಾಜರಾಜಱಿಕಮೊಳ್ಪಿಂ ತೊಂಡನೂರ್ಗೆಯ್ದಿದರ್ ||೫೧||

ವ|| ಅಂತು ತೊಂಡನೂರ್ಗೆಯ್ದಿಯಲ್ಲಿಯೊಂದು ಪರ್ವತಸಮೀಪದ
ನೃಸಿಂಹಸ್ವಾಮಿಯ ಗುಡಿಯನೆ ಮಠಂಮಾಡಿ ಕಲ್ಪಿಸಿ ತೊಂಡನೂರ ನಂಬಿ
ಯಿಂ ಸಮೇತರಾಗಿರ್ಪ ಕಾಲದೊಳ್

ಅನಗರಕ್ಕಧಿನಾಥನ ।
ಜೈನಪ್ರಭು ಬಿಟ್ಟಿದೇವರಾಯನ ಸುತೆಗಂ ॥
ತೇನಾಸುಂ ಬಿಡದಿರ್ದುದು ।
ತಾನಾಳುತ್ತೊಂದು ಬೊಮ್ಮರಕ್ಕಸನಾಗಳ್ ॥೫೨॥

ಆತೊಂಡನೂರ ನಂಬಿ ವಿ ।
ಭೂತಾಘಂ ಪೋಗೆ ಪದೆದುಪಾದಾಸಕ್ಕಂ ॥
ತಾತಸರವನೆಗೆ, ಮಂತ್ರಿಸಿ ।
ಭೂತಗ್ರಸ್ತೆಗೆ ಚಿಕಿತ್ಸೆಯೊಡರಿಪರಿಲ್ಲಂ ॥೫೩॥

ಎನೆ, ಪೃಥ್ವೀಪತಿಕೇಳ್ವುದೀಯುಗುರುಗಳ್ ರಾಮಾನುಜಾಚಾರ್ಯರೊ ।
ಳ್ಪನೊಳಾಶ್ರೀಪದತೀರ್ಥಮಂ ಕುಡಲೊಡಂ ತ್ವತ್ಪುತ್ರಿಗಾರೋಗ್ಯಮಿ ।
ನ್ನನುವಕ್ಕುಂ ವಲಮೆಂದು ತಾನುಸಿರೆ ಸೀಮಂತಾದೊಡಿಂದಿಲ್ಲಿಗಾ ।
ಘನಚಾರಿತ್ರರನಾಳುವಿಂ ಕರೆದುಕೊಂಡೆಯ್ತಂದೊಡಕ್ಕುಂ ಕಣಾ! ॥೫೪॥

ವ॥ ಎಂದೀವೃತ್ತಾಂತಮಂ ನಿಜಗುರುಗಳ್ಗೆ ನಂಬಿ ಬಿನ್ನವಿಸೆ ರಾಮಾನುಜಾಚಾರ್ಯರಿಂತೆಂದರದೆಂತೆನೆ :—

ಅವನಾಗಾರಕೆ ಬರ್ಪುದಿಲ್ಲೆನಲೊಡಂ ಭೂಪಾಲಕಂ ತಾನೆ ಬಂ ।
ದಿವರಿರ್ಪಲ್ಲಿಗೆ ಶಿಷ್ಯನಲ್ತೆ ನಿಮಗಾನೆಂತೆಯ್ತರಲ್ ಬರ್ಕುಮಾ ॥
ಕುವಿನಿಂದೆಂದೊಡಗೊಂಡು ಪೋಗಲವಳ್ಗತ್ತಾ ತೀರ್ಥದಲ್ಲಿರ್ಪ ವೈ ।
ಭವದಿಂದೋಡಿದುದಾಪಿಶಾಚಮುದಱಿಂದಾಶ್ಚರ್ಯಮಂ ತಾಳ್ದಿದಂ ॥೫೫॥

ಅನಂತರದೊಳ್

ಅರಸಂ ತನ್ನ ಕುಟುಂಬಮುಂ ಸಹಿತಮೊಳ್ಪಂ ಪಂಚಸಂಸ್ಕಾರಭಾ ।
ಸುರನಾಗೀಗುರುಗಳ್ಗೆ ಶೇಷಬಹುಮಾನಂಗೆಯ್ದನಾಗಳ್ ಮಹಾ ॥
ನರಸಿಂಹಂಗೆ ರಥೋತ್ಸವಾದ್ಯಖಿಳಕೈಂಕರ್ಯಂಗಳಂ ಮಾಡಿಯಾ ।
ಗಿರಿಯೊಳ್ ತಾಂ ಕೆಲವುಂ ಪಗಲ್ಗಳಿರೆ ಶ್ರೀರಾಮಾನುಜರ್ ಮೋದದಿಂ ॥೫೬॥

ಆರಾಜ್ಯದಖಿಳಜೈನರ್ ।
ಘೋರೆನೆ ಕೂಡಿಂತು ನೀಂ ಮತಭ್ರಷ್ಟನನೇ ॥
ನಾರಯ್ಯದೆಸಗಿ ಸಮಯಮಾ ।
ಚಾರಂಗೆಯ್ದಿನಿತು ಕೆಡಿಸಲುಚಿತಮೆ ನೃಪನಂ ॥೫೭॥

ಬುಧರಾಗಿರ್ದೊಡೆ ನೋೞ್ಪೆಮೊಮ್ರ್ಭವದೀಯಾಧಿಕ್ಯಮಂ ತೋರ್ಪೆವೆ।
ಮ್ಮ ಧುರೀಣತ್ವಮನೆಂದವರ್ ಕರೆಸಿ ತದ್ವಕ್ತ್ರಂಗಳಂ ಸಜ್ಜಿದಂ॥
ಬುಧಿಗಳ್ ನೋಡದೆ ಮುಂದಮಾರ್ಚಿ ತೆರೆಯಂ ಕುಳ್ಳಿರ್ದುಪನ್ಯಾಸಮಂ ।
ಸುಧಿಗಳ್ ಶೇಷಪರಾವತಾರರೆಸಗುತ್ತಿರ್ದರ್ ಸಹಸ್ರಾಸ್ಯದಿಂ ॥೫೮॥

ಇದುಮೇನಚ್ಚರಿಯೆಂದು ಬಂದು ತೆರೆಯೊಳ್ ತಾನೊರ್ವನಾರ್ಪಿಂದೆನೋ ।
ೞ್ಪುದುಮಾಗಳ್ ವಿಲಸತ್ಸಹಸ್ರಫಣಾರತ್ನೋದ್ಭಾಸಿ ಶೇಷಂಬೊಲಿ ॥
ರ್ಪುದು ತನ್ನೇತ್ರಕೆ ತೋಱೆ ತಂತವರ್ಗೆಲ್ಲರ್ ಕಂಡು ಕೌತೂಹಲಾ ।
ಸ್ಪದರಾಗುತ್ತತಿಭಕ್ತಿಯಿಂದಿವರಿಸಾಂತರ್ ದಿವ್ಯಚಕ್ರಾಂಕಮಂ ॥೫೯॥

ಅಂತಿರ್ಪಿನಂ,

ಒಂದು ದಿನಮಿನಗೆ ತಿರುಮ ।
ಣ್ಣೊಂದಿಸಿತುಂ ಕರಗೊಳಲ್ಲದಿರೆ ಜಿಂತೆಯೊಳಂ ॥
ತೊಂದಿರೆಯಿಂದಿರೆಯಣ್ಣಂ ।
ಬಂದೊಡನಾರಾತ್ರಿಯವರ ಕನಸಿನೊಳೊಲವಿಂ ॥೬೦॥

ತಿರುನಾರಾಯಣನಾಸಿದರ್ಕೆ ಬಡಗಲ್ ಶ್ರೀಯಾದವಾದ್ರೀಂದ್ರದೊಳ್ ।
ಸ್ಫುರಿಸುತ್ತಿರ್ದಪೆನಿರ್ಕುವಲ್ಲಿ ವಿಲಸತ್ಕಲ್ಯಾಣಪದ್ಮಾಕರಂ ॥
ತರದಿಂ ರಂಜಿಪ್ಪುದಷ್ಟತೀರ್ಥಮುರುಸತ್ಕ್ಷೇತ್ರಮುಂಟಲ್ಲಿ ಭೂ ॥
ಸುರವಾಗಿರ್ಪುದು ಪಂಚಭಾಗವತ ದಿವ್ಯಸ್ಥಾನಮಿಷ್ಟಾರ್ಥದಂ ॥೬೧॥

ಆಕಲ್ಯಾಣಿಗೆ ಪಶ್ಚಿಮಾಶೆಯೊಳ್ ತೋರ್ಕುಂ ಶ್ವೇತಮೃತ್ತಾಸ್ಸ್ಥಳಂ ।
ವ್ಯಾಕೀರ್ಣಂ ತುಳಸೀವನಂ ಪಿಸುಗೆ ಮಾರ್ಗಂ ಬರ್ಪುದಿಲ್ಲಿಂದೆ ಸು ॥
ಶ್ಲೋಕರ್ ನೀಮೆನೆ ಶಿಷ್ಯರಿಂಬೆರಸು ಪ್ರಾತಃಕಾಲದೊಳ್ ಪೋದದಿಂ ।
ಭೂಕಾಂತಾಭರಣಕ್ಕೆ ಯಾದವಧರಾಭೃತ್ತಿಂಗೆ ತಾಪೆಯ್ದಿದರ್ ॥೬೨॥

ಷ॥ ಅಂತೆಯ್ದಿ ಯಾದವಾದ್ರಿಯುಂ ನೋೞ್ಪನಂ;

ಆನಂದಮುಯಮೆನಿಪ್ಪ ವಿ ।
ಮಾನಪ್ರಾಕಾರಗೋಪುರಂಗಳನೆಲ್ಲಂ ॥
ತಾನಟವಿಯಾಗಿ ಕಣ್ಣಿ ವಿ ।
ಪಾನುಂ ಕಾಣಿಸದೆ ಜೀರ್ಣಮಾಗಿರಲಾಗಳ್ ॥೬೩॥

ಅತಿಚಿಂತಾಕ್ರಾಂತರಾಗಿರ್ಪನಿತಱ್ಗೊಳಗರುಳ್ಗೊಳ್ಳ ಸ್ವಪ್ನಕ್ಕೈತಂದು ವಿಪ್ರ |
ನ್ನುತಕಲ್ಯಾಣಕ್ಕೆ ನೈರುತ್ಯದೊಳತಿವಿಲಸಚ್ಚಂಪಕಾಗಕ್ಕೆ ತೆಂಕಲ್ ‖
ಕ್ಷಿತಿಯಂ ಸಾರ್ದಲ್ಲಿ ಸಂಶೋಧಿಸಲೊಡನೆಸೆಗುಂ ಮದ್ವಿಮಾನಂದಲೆಂದ |
ಚ್ಯುತವಾಕ್ಯಂಗೇಳ್ದು ಸೂರ್ಯೋದಯಸಮಯದೊಳೆಯ್ದೀಮಹಾಭಾಷ್ಯ

ಸಿತಮೃತ್ಸ್ನಸ್ಥಳಮಂ ಕಂ | [ಕಾರರ್ |೬೪‖
ಡತಿಪರ್ಷದಿನೂರ್ಧ್ವಪುಂಡ್ರಧಾರಣಮುಂಶಿರ್ಯೋ ‖
ಚಿತಕೃತ್ಯಮನೊಡರಿಸಿ ಮ |
ತ್ತತುಳರ್ ನಿಜಶಿಷ್ಯನೃಪನ ದೂತರ್ ಸಹಿತಂ ‖೬೫‖

ಆನೆಲಸಂ ಶೋಧಿಸಲೊಡ |
ಮಾನಂದಮಯಾಖ್ಯದುರುವಿಮಾನದ ಶಿಖರಂ ‖
ಭಾನುನಿಭಮೆಸೆಯೆ ಕಂಡಿವ |
ರಾನಂದಂಬೆತ್ತು ನರ್ತನಂಗೆಯ್ಯುತ್ತುಂ |೬೬‖

ಮಗುೞ್ದಾ ಕ್ಷೋಣಿಯನೆಲ್ಲಂ |
ಮಿಗೆ ಶೋಧಿಸಿ ಗೊಡ್ಡಬೀದಿ ಮಾಡುತ್ತಿರುವೀ ‖
ಧಿಗಳಂ ಪೋಗಲ್ ಮಂಟಪ |
ಸುಗೋಪುರಾದಿಗಳನೆಲ್ಲಮಂ ಮಾಡಿಸಿದರ್ |೬೬‖

ಯತಿರಾಜಾಜ್ಞೆಯದಿಂದೆ ಗೆಯ್ಸಿ ಮಠಮಂ ಶ್ರೀರಂಗರಾಜಾಖ್ಯನಿಂ |
ಚತುರರ್ ಪುಣ್ಯಮುಹೂರ್ತದಲ್ಲಿ ಸಕಲೋತ್ಸಾಹಪ್ರತಿಷ್ಠಾಕ್ರಿಯೋ ‖
ನ್ನತಿಯಂ ಮಾಡಿಸಿಯಾಸಮೀಪದ ಮಹಾಬೌದ್ಧಾಲಯವ್ರಾತಮಂ |
ಧೃತಿಯಿಂ ಭಿನ್ನಮನಾಗಿಸಿಂತಿವರ್ಗಳಾಕ್ಷೇತ್ರಸ್ಥರಾಗಿರ್ಪಿನಂ ‖೬೭‖

ದೊರೆಯಂ ಮೇಣ್ ಕಿಡಿಸಿರ್ದುದಲ್ಲದೆ ಜಿನಾಗಾರಂಗಳಂ ಭೇದಿಸಿಂ |
ತಿರವೇಂ ಬರ್ಕುಮೆಯೆನಾತಗೆಂಗೆಣೆಸದಾಭೂವಿನಾಶನಂ ವಿನಾೞ್ ಬೌ ‖
ದ್ಧರನೇಕರ್ ಮಿಗೆ ಕೂಡಿ ತಾವಿವರನೆಂತುಂ ಕೊಲ್ಲವೇೞ್ಕೆಂದವರ್ |
ಬರೆ ರಾಮಾನುಜರಂತು ಮೆಯ್ಗರೆಯೆ ಕೇಳ್ದೀವಾರ್ತೆಯಂ ಬೇಗದಿಂ‖೬೮‖

ಇಳೆಯೊಳೆಸೆದಿರ್ಪ ದಾಸರು |
ಮುಱಿಯದೆ ಸೆಂಪಿಂ ತಿರುಕ್ಕುಲದವರುಮೆಲ್ಲರ್ ‖

ಗಳಲೆನೆ ಬಂದವರಂ ಪೊ |
ಯ್ದಳವಿಂ ರಾಮಾನುಜರ್ಗೆ ಪದುಳಂಗೆಯ್ದರ್ ||೧೯||

ವ|| ಅಂತು ಪದುಳಂಗೆಯ್ದಡಂಗಿದರಂ ಸನ್ಮಾನಿಸಿ ಬಯಲ್ಗೆ ಕರೆದೊಡಗೊಂಡು ಬರಲೊಡಯಾನೃಪನೀವೃತ್ತಾಂತಮಂ ಕೇಳ್ದು,

ಭರದಿಂ ತಾನುಟಿದಿರ್ದ ಬೌದ್ಧತತಿಯಂ ಕಲ್ಗಣದೊಳ್ ಸಾರ್ಚೆ ಸಂ |
ಹರಣಂಗೆಯ್ಸಿನರ್ಗಳ್ಗೆ ನಿರ್ಭಯಮನಾರ್ಪಿಂ ಮಾಡಿದಂ ನೋಡಿಯಾ ||
ತಿರುನಾರಾಯಣಮೂರ್ತಿಯುತ್ಸವನಿಮಿತ್ತಂ ಚೆಲ್ವನಾರಾಯಣ |
ಸ್ಫುರಿತಾಭಿಖ್ಯೆಯ ದಿವ್ಯವಿಗ್ರಹಮನೊಳ್ಪಿಂ ಕಲ್ಪಿಸಿದರ್ಗಳೇ ||೨೦||

ಚಿರಕಾಲಂ ತಿರುನಾಳ್ಗಳಿಲ್ಲದ ನಿಮಿತ್ತಂ ಸ್ವಾಮಿಗುತ್ಸಾಹಮಂ |
ಪಿರಿದುಂ ಫಾಲ್ಗುಣದೊಳ್ ನೆಗಳ್ಚೆ ಕೆಲರಂ ಶಿಷ್ಯರ್ಕಳಂ ಮುಂತೆ ಸಾ |
ದರವೈವತ್ತೆರಡಾಟಿಗಂಗಳನೊಡರ್ಚುತ್ತಿರ್ಪುದಿನ್ನಚ್ಯುತಂ |
ಗಿರಿದೀಸ್ಥಾನದ ಕೃತ್ಯಮಂ ರಚಿಪುದೆಂದಾಜ್ಞಪ್ತಿಯಂ ಪ್ರೇಮದಿಂ ||೨೧||

ನಿರವಿಸಿಯುವರ್ಗೆಮಾಡ |
ತ್ತಿರುವೀಧಿಯೊಳಾಲಯಂಗಳಂ ಕಲ್ಪಿಸಿ ಕೊ ||
ಟ್ಟುರುತರ ಸಕಲೋತ್ಸವಮಂ |
ಸ್ಫುರಿಪಂತೊಡರಿಸುತುಮಿರ್ಪ ಕಾಲದೊಳೊಲವಿಂ ||೨೨||

ತಿರುನಾರಾಯಣದೇವನೊಂದುದಿನದೊಳ್ ತತ್ಸ್ವಪ್ನದೊಳ್ ಬಂದು ಭಾ |
ಸುರಮಾದುತ್ಸವಮೂರ್ತಿಯಂ ಮಿಗೆ ಸುರತ್ರಾಣಾಖ್ಯಧಿಳ್ಳೀಶಮಂ ||
ದಿರದೊಳ್ ತತ್ಸುತೆ ಪೂಜಿಕುಂ ಗಮಿಸು ನೀಂ ಮದ್ವಿಗ್ರಹಂಬೆತ್ತು ಸಾ |
ದರಮಂತಿಲ್ಲಿಗೆ ಕೊಂಡು ಬರ್ಪುದೆನಲತ್ಯಾಶ್ಚರ್ಯಮಂ ತಾಳ್ದಿದರ್ ||೨೩||

ಭರದಿಂ ಶಿಷ್ಯಸಮೇತರಾಗಿ ನಡೆದಿಂದಾಧಿಳ್ಳಿಯಂ ಪೊರ್ದಿಯಾ |
ಧರಣೀಪಾಲಕನಂತಿವರ್ ಬರೆಯುಮಂ ವಿಶ್ವಾಸದಿಂದೆಳ್ದು ವಿ ||
ಷ್ಟರದಿಂದಂ ಯತಿಪಾಗೆ ತಾನಿದಿರೊಳೈತಂದುದ್ಯದೇಂ ಕಾರಣಂ |
ಬರವಾಯಿತ್ತಿಲ್ಲಿಗೆ ಧನ್ಯನಾನೆನಲವಂಗಿಂತೆಂದರುಲ್ಲಾಸದಿಂ ||೨೪||

ಭವದಾಗಾರದೊಳಿರ್ಪ್ಪ ದೇವರೆನಿಪದಿಕರ್ಗಂ ಪ್ರೇಮದಿಂ ಕೊಟ್ಟೊಡು |
ತ್ಸವಮಂ ದೇವನೆಮೆಂದು ಪೇಳ್ದ ಭವದೀಯಸ್ವಾಮಿಯಂ ಕಾಣೆನಾ |

ನವಧಾನಂಬಿಡದಿಲ್ಲಿ ಶೋಧಿಪುದದೇನೆಲ್ಲಿ ದೊರ್ಕೊಡಂ ಕೊಂಡು ಸಂ ।
ಭ್ರಮದಿಂ ಪೋಗಿಮಿದರ್ಕೆ ಸಂದೆಗಮೆ ಯುಷ್ಮದ್ವಸ್ತ್ರವೊಳ್ ಕಾಮಮೋ ॥

ಎನಲೊಡಮಱಿಯಿಮವಾತನ ।
ಮನೆಯೊಳ್ ಕಾಣದೆ ತದಾತ್ಮಭವೆಯೊಸೆದಿರ್ಪಾ ॥
ಕನಕಪ್ರಾಸಾದಕೆ ಗ ।
ಳ್ಕನೆಯ್ದಿ ಕಂಡಿದುಮೆಮಕ್ಕುಮಸ್ಮದ್ದೇವರ್ ॥೩೬॥

ಇದು ನಿಮ್ಮ ದೇವರಾದೊಡೆ ।
ಪದೆಪಿಂ ಸನಿಯಕ್ಕೆ ಕರೆಯಿಮೆನೆ ಯತಿರಾಜಂ ॥
ಪದೆದೆಮ್ಮೆಡೆಗಿನ್ನೈತ ।
ಪ್ಪುದು ನೀನೆಂದಿರದೆ ಕರೆಯಲಾಲಕ್ಷ್ಮೀಶಂ ॥೩೭॥

ನಡೆದರ್ಚಾವೇಷಮನುೞಿ ।
ದೊಡನಖಿಳಾಭರಣಸಹಿತನಿದಿರ್ವರೆ ಪೋದಂ ॥
ಬಹುತಪ್ಪಿ ಬೞಿಕಲೆಮ್ಮಯ ।
ಕಡುನೋಂಪಿನ ಪೆಲ್ವಪಿಳ್ಳೆಯೆಂದೊಡಮದಱಿಂ ॥೩೮॥

ಆನಾಮಧೇಯದಿಂ ಪ್ರ ।
ಖ್ಯಾನುತಯತಿರಾಜರಾಜವರಸುಕುಮಾರಂ ॥
ತಾನೆಂದಾದುದು ಕಂಡಾ ।
ಭೂನಾಥಂ ಹೃಷ್ಟನಾಗಿಯಚ್ಚರಿವಟ್ಟಂ ॥೩೯॥

ವ॥ ಅಂತಚ್ಚರಿವಟ್ಟನಂತರಮೊಳ್

ಆಡಿಳ್ಳೀಶ್ವರನಿತ್ತು ವಿಗ್ರಹಮನೀರಾಮಾನುಜರ್ಗೊಲ್ದು ಸಂ ।
ರೂಢತ್ವಂ ಬಹುಮಾನಮಂ ರಚಿಸಿ ಬೀೞ್ಕೊಟ್ಟಂ ಬೞಿಕ್ಕಾಮುಗಳ್ ॥
ಪಾರ್ಥಸ್ತ್ರೀಮಣಿಯೀತನೆನ್ನಿನಿಯನಾಂ ಬಿಟ್ಟಿರ್ಪೆನೆಂತೆನ್ನುಮಂ ।
ಗೂಢಂಗೆಯ್ಯದೆ ಬೇಗದಿಂದೆ ಕಳುಪೆನ್ನಂ ನಿಲ್ವಳಲ್ಲೀಗಳೇ ॥೪೦॥

ಎನೆ ಸರ್ವಾಭರಣಾಂಬರಾಳಿಯುಮನಶ್ವಾಂದೋಳಿಕೇಭಾದಿಮಾ ।
ಹನಸರ್ವಸ್ವಮನಿತ್ತು ತಾಂ ಕಳುಪಿದಂ ಶ್ರೀಯಾದವೋರ್ವೀಧರ ॥
ಕ್ಕನುವಿಂ ಬಂದೊಸೆದಾಪಿವಿಗ್ರಹದ ಬಿಂಬಂ ತಪ್ಪದೀಮೂರ್ತಿಯೆಂ ।
ದಗ್ಗುರ್ ಸೇರಿಸಿ ತತ್ಸಮಾಪನಸರ್ ತಾಮಿರ್ದರುಲ್ಲಾಸದಿಂ ॥೪೧॥

ವ|| ಇಂತು ಕತಿಪಯಕಾಲಮಿರ್ದೊಂದು ದಿನಮಾಲೋಚಿಸಿ,

ಮಾರುತಿಯಾಂಡಾನೊಡನಾ |
ಶ್ರೀರಂಗಾದಿಗಳ ವಾರ್ತೆ ತಿಳಿಯುವದೆಂ ಸೀ ||
ಮಾರಯ್ದಾ ವೃತ್ತಾಂತಮ |
ನೋರಂತಱಿದಾಶುವಿಂದೆ ಬರ್ಪುದೆನುತ್ತುಂ ||೮೨||

ವ|| ನಿರೂಪಿಸೆ ತದುಕ್ತಿಯಂ ಕೇಳ್ದಂತಕ್ಕೆಂದು

ಶ್ರೀರಂಗಕ್ಕೈತಂದಾ |
ಕೂರತ್ತಾಳ್ವಾರ ಸೇವೆಗೆಯ್ವ ವರ್ಗದಾ ||
ಭೂರಿವಿಪತ್ತಂ ನೋಡಿ |
ಶ್ರೀರಾಮಾ ! ಇಸಿತು ನಿಮಗೆ ಬರ್ಪುದುಚಿತಮೋ ||೮೩||

ಎನುತತಿದುಃಖದೊಳಾಪೆರಿ |
ಯನಂಬಿಗಳ್ ವಿಷ್ಣುಧಾಮಕ್ಕೈದಿದ ತೆಱನಂ ||
ಮನದೊಳ್ ನೊಂದಾಲಿಸಿಯಾ |
ಯನಘರ ಸಮಿಪದೊಳ್ ಕೆಲವು ದಿನವೊಸೆದಿರ್ದರ್ ||೮೪||

ವ|| ಅಂತಿರಲೊಡನನಂತರದೊಳ್

ಘೋರಾಚಾರಾತಿದುಷ್ಟಾತ್ಮಕನೆನಿಸುವ ಚೋಳಂ ಕ್ರಿಮಿಷ್ವಕ್ತಕಂಠಂ |
ಭೂರಿಕ್ಲೇಶಾನುಷಂಗಂ ಪ್ರಾಣದೆ ಮಡಿದನಾವಾರ್ತೆಯಂ ಸೈತು ಕೇಳ್ದೀ ||
ಕೂರತ್ತಾಳ್ವಾರ್ ಪ್ರಹರ್ಷಂಪಳೆದೊಡನಿವರಂ ಬೇಗದಿಂ ಪೋಗಿ ನೀಮಾ |
ಧೀರಶ್ರೀಭಾಷ್ಯಕಾರರ್ಗಿದನಱಿಪುವುದೆಂದೊಲ್ದು ಬೀಳ್ಕೊಟ್ಟರಾಗಳ್ ||
ಗತಿಯಿಂ ಯಾದವಗೋತ್ರಮಂ ಪಡೆದು ಸಾಯಂಕಾಲದೊಳ್ ಪೊರ್ದಿ ಮಾ|
ರುತಿಯಾಂಡಾರ್ ಯತಿರಾಜರುಂ ವಿಮಳಸಂಧ್ಯಾವಂದನಂಗೆಯ್ವಿನಂ ||
ನುತಕಲ್ಯಾಣಿಯ ತೀರದಲ್ಲಿ ಮಣಿದಾಶ್ರೀವೈಷ್ಣವದೊಳ್ಪಿಂ ದು |
ರ್ಮತಿ ಚೋಳಂ ಕ್ರಿಮಿಕಂಠನಾಗಿ ಮಡಿದಂ ತಾನೆಂದರಾವಾರ್ತೆಯಂ ||೮೫||

ಇವರೊಲ್ದಾಲಿಸಿ ಹರ್ಷದಿಂ ಪಡೆದು ದಿವ್ಯಕ್ಷೇತ್ರವಿಖ್ಯಾತಭಾ |
ಗವತರ್ದ್ರೋಹಿಯೆನಿಪ್ಪ ಪಾಪಿ ಮೃತಿಯಂ ತಾಂ ಸಾರ್ದನೇ ಇಂದು ಸಂ ||
ಭವಿಸಿತ್ತಸ್ವಿತನಾಮುನಿ ಸರಕೆ ಶ್ರೀಕಲ್ಯಾಣಿಯೊಂದಿಂದಿರಾ |
ಧವನಾರಾಯಣಸೇವೆಗೆಪ್ಪೊಡನೆ ಪ್ರಾತಃಕಾಲದೊಳ್ ಮತ್ತಿವರ್ ||೮೬||

ಆಪೆರಿಯನಂಬಿಗಳ್ ಪದ್ಮಾ |
ಪತಿಲೋಕಕ್ಕೆ ಪೋದುದಂ ಕೇಳ್ದತಿಸಂ ||
ತಾಪದಿನಾಚಾರ್ಯರೆನಿ |
ಪ್ಪಾಪುಣ್ಯಾಂಗರ್ಗೆ ಪದೆದು ವೈಷ್ಣವವಿಧಿಯಿಂ ||೮೮||

ತಿರಿಚೂರ್ಣದ ಪರಿಪಾಲನ |
ತಿರುವಧ್ಯಯನಾಂತಪಾದಖಿಳಕೈಂಕರ್ಯ ||
ಸ್ಫುರಣೆಯನೊಡರಿಸಿಯಾಗಳ್ |
ಕರೆದೈವತ್ತಿರ್ವರೊಡನೆ ತಾಮಿಂತೆಂದರ್ ||೮೯||

ಧೀರಾಚಾರ್ಯವಿಯೋಗಂ |
ಕೂರತ್ತಾಳ್ವಾರ ಸೋಪ್ರಮಿವನೆಲ್ಲಂ ಪೋ ||
ಣಾರಯ್ದು ಬಪೆವೆನೆ ಸಿ |
ವಿಸ್ಮಾರುಚಿರಪದಾಬ್ಜದೊಡನೆ ಬಂದಪೆವಾವುಂ ||೯೦||

ಎನೆ ಚೆಲ್ವಪಿಳ್ಳೆಗೊಲವಿಂ |
ಘನಕೈಂಕರ್ಯಮನೊಡರ್ಚುತಿರ್ಪುದು ನೀವೆಂ ||
ಪನುವಿಂ ನೇಮಿಸೆಯಾಮೆಂ |
ತನುಸಮುಭವಪಂಘ್ರಿರಯೆತರಾಗಿರಲಕ್ಕುಂ ||೯೧||

ಎನುಗಂತಾದೊಡೆ ನಿವಿಷ್ಮಾ |
ವಿಮಳಪ್ರತಿಬಿಂಬನಾದ ವಿಗ್ರಹಸೇವಾ ||
ಕ್ರಮಮಂ ಕರುಣಿಸವೇಳ್ಕೆನೆ |
ಮಮತೆಯಿನೊಡರಿಸಿದರಾತ್ಮಮೂರ್ತಿಯನಾಗಳ್ ||೯೨||

ಆವನಾಲಿಂಗಿಸಿ ಕೊಟ್ಟು ಪಂಪಿಸದನಾಮೆಂದೀಕ್ಷಿಸಿನ್ನೆಲ್ಲರುಂ |
ಮುದದಿಂ ವಿಗ್ರಹಸೇವೆಯುಂ ಬಿಡದಜಸ್ರಂ ಶ್ರೀಶಕೈಂಕರ್ಯಮಂ ||
ಪದೆಪಿಂ ವರ್ತಿಸುವಂತೊಡರ್ಚುತಿರಿಮೆಂದಾಜ್ಞಾಪಿಸಿನ್ನಾವಸೀ |
ಯದುಶೈಲಸ್ಥಲದಲ್ಲಿ ಸಿಮ್ಮನುಗುಣತ್ವಂಬೆತ್ತು ಸಂತೋಷದಿಂ ||೯೩||

ದಳನಿಳಯಮನಾದೊಡಮೇ |
ನೆಳಸಿ ಕರಂ ಕಲ್ಪಿಸಿರ್ಕುಮಾತಂಗಕ್ಕುಂ ||

ವಿಳಸದ್ವೈಕುಂಠಪುರೋ |
ಜ್ಜ್ವಳಪದವಿಯೆ ತಪ್ಪದಿಮವೆ ನಿಸ್ಸಂದೇಹಂ ||೯೪||

ವ|| ಎಂದು ನಿರೂಪಿಸೆ ಬಿೞಿಕ್ಕೊಂಡೀಂದಿರೆಯಧಿನಾಥ (ನಾಜ್ಞೆಯಿಂ) ಶ್ರೀರಂಗಕ್ಕೆಯ್ತಂದು ಅಕೂರತ್ತಾೞ್ವಾರಂ ದಯೆಯಿಂ ನೋಡಿ ಮಱುಗಿ ತಾವಿಂತೆಂದರ್:—

ಎಮ್ಮ ನಿಮಿತ್ತಂ ನಿಮಗಿನಿ |
ತುಮ್ಮಱಿವಾಯ್ತಿದುವೆ ಕರ್ಮಫಲವೆಂದಾಗಳ್ ||
ತಮ್ಮ ಮಠಕ್ಕೆಯ್ದಿ ಶಿಷ್ಯ |
ಸಮ್ಮದಸಂಪತ್ತುವೆರಸು ಶ್ರೀಯತಿರಾಜರ್ | ||೯೫||

ವ|| ಅಂತು ವಿದ್ಯಾಸಾಮರ್ಥ್ಯದಿಂತುಭಯವೇದಾಂತವ್ಯಾಖ್ಯಾನಮಂ ಮಾಡಿಕೊಂಡಿರ್ಪ ಕಾಲದೊಳ್

ಗೋವಿಂದಪ್ಪೆರುಮಾಳ್ಗಳ್ |
ಭಾವಿಸಿ ವೈರಾಗ್ಯದಿಂದೆ ಯತ್ಯಾಶ್ರಮಮಂ ||
ಕೋವಿದರಾಂತೆಂಬಾರೆಂ |
ಬಾವಿಮಳಾಭಿಧೆಯನೊಲ್ದು ಪಡೆದಿರ್ಪನೆಗಂ |೯೬||

ಸರಸಾರ್ಜಿತಗೋವಿಂದ |
ಪ್ಪೆರುಮಾಳೆಂಬವರ ಸೋದರಗಾತ್ರಭವಂ ||
ಕರಮುದಯಿಸಲಾೞ್ವಾರ್ಗಳ |
ಪರೋಪಕಾರಸ್ಮರಣೆಯನೆಸಗಿದ ಬಗೆಯಿಂ ||೯೭||

ಪಲಗಾರ್ಪಾೞ್ವಾರೆಂಬಾಪಿಳ್ಳೈ |
ತ್ತವನಂ ಮಾಡಿಸಿ ಬೞಿಕ್ಕೆ ಕೂರತ್ತಾೞ್ವಾ ||
ರ್ಗವರಂಗೆ ಸೈತು ನೆಗೞ್ದರ್ |
ತವೆ ವೇದವ್ಯಾಸಭಟ್ಟರೆಂಬಾಹ್ವಯಮಂ |೯೮||

ಎಂಬಾರಿಸವರ್ಗೆ ಭಗವ |
ತ್ಸಂಬಂಧಂಗೆಯ್ದು ಯಾಮುನಾಚಾರ್ಯಗಾ ||
ದಂ ಬಯಕೆಯೆನಿಸ ಮೂಱುರಿ |
ಣಂ ಬಗೆಮಲದಿಂತು ತೀರ್ದತೆಮ್ಮಂದೆಂಗರ್ ||೯೯||

ವ|| ಇಂತೀತೆಱದ ಸಂಭ್ರಮಂಬಡೆದಿರ್ಪ ಕಾಲದೊಳ್

ವಿಮಳಶ್ರೀಚಿತ್ರಕೂಟಸ್ಥಳದೊಳೆಸೆವ ಗೋವಿಂದರಾಜಾಖ್ಯನಂ ತಾಂ|
ಕ್ರಿಮಿಕಂಠಂ ಚೋೞನಂಬೋಧಿಗೆ ಬಿಸುಡಿಸಿ ಮೇಣಲ್ಲಿ ಸಂಸ್ಥಾಪನಂಗೆ ||
ಯ್ದುಮೆಯಾಣ್ಮಂತಾಂಡವೇಶಾಷ್ಪಯುಸಸಿರೆಪಯೋರಾಶಿಯಿಂಸ್ವಾಮಿಯುಂಸಂ
ಭ್ರಮದಿಂ ವೇಶ್ಯೆಯೋರ್ವಳ್ ಪಡಗಿನೆಡೆಯೊಳಟ್ಟಿತ್ತು ತಾಂಕೊಂಡುಬಂದಳ್|

ವ| ಅಂತು ಕೊಂಡು ಬಂದು ತಿರುಪತಿಗೆ ಸೇರಿಸಿದಳೆಂಬ ವೃತ್ತಾಂತಮಂ ರಾಮಾನುಜರ್ ಕೇಳ್ದತಿಹರ್ಷದಿಂದಾಚಾರ್ಯರ್ಗಳ ಪ್ರಬಂಧಾನುಕ್ರಮಮಾಗಿ ಮಗುೞ್ದು ಸೇರಿದುದು ಲೇಸಾಯ್ತೆಂದಾಕ್ಷಣದೊಳ್ ಪ್ರಯಾಣಗತಿಯಿಂ ಶೈಲಾಚಲಕ್ಕೆಯ್ತಂದು,

ಮೊದಲಿರ್ಪಾಸ್ವಾಮಿಗೆ ಸ
ಮ್ಮದದಿಂ ಬಡಗಲ್ ಪ್ರತಿಷ್ಠೆಯಂ ಮಾಡಿಸಿ ಯಾ ||
ಸದಮಳಮನರಲ್ಲಿಯೆ ಕೆಲ |
ವುದಿನಂಗಳಸಿರ್ದು ಭಾಷ್ಯಕಾರರ್ ಬೞಿಕಂ ||೧೦೧||

ಪದೆಪಿನನಂತಾಚಾರ್ಯರ್ಗಳ್
ಮೊದಲಾದಾತ್ಮೀಯಶಿಷ್ಯತತಿಯಂ ಸನ್ಮಾ ||
ನದಿನೋವಿ ಬಂದು ಶ್ರೀರಂ |
ಗದೊಳಿರ್ಪಿನಮೊಸೆದು ಕೆಲವು ದಿವಸಮನಾಗಳ್ ||೧೦೨||

ಉಕೂರತ್ತಾೞ್ವಾರ್ಲ |
ಕ್ಷ್ಮೀಕಾಂತನ ಸನಿಯದೊಳ್ಪ್ರಸತ್ತಿಯನೆಸಗಿ ಶ್ರೀ ||
ವೈಕುಠಕೆಯ್ದಲೊಡಮತಿ |
ಶೋಕಂಗೆಯ್ವವರ ತನಯನಂ ಯತಿರಾಜರ್ ||೧೦೩||

ಕರೆದೆಮ್ಮಂತಿರೆ ಕಂಡು ಬನ್ನಿಮೆನುತಾಶಿಷ್ಯರ್ಗೆ ತಾಂ ಪೇೞ್ದುದಾದರ್ |
ಧರಣೀಮಂಡಲದಲ್ಲಿ ರಂಜಿಪ ಮಹಾಪೀಠಸ್ಥರುಂ ವೈಷ್ಣವರ್ ||
ಭರದಿಂ ಬರ್ಕೆನೆಬಂದರಿಂತೆಮಗೆ ಸೂೞಿರ್ಪತ್ತು ಸಂವತ್ಸರಂ |
ಪರಿಪೂರ್ಣತ್ವಮನೆಯ್ದಿತೆಂದೊರೆದವರ್ಗಳ್ಮಹಾನಂದದಿಂ ||೧೦೪||

ಇರದಿನ್ನುೞಿಯಲ್ವೇೞ್ಕೇ |
ಹರಿಯನುಮತದಿಂದೆ ಪಾಂಚಭೌತಿಕತನುವಂ ||

ಭರದಿಂದೆಂದಾರಂಗೇ |
ಶ್ವರನಿಕಟಕ್ಕೆಯ್ದಿ ಬಿನ್ನವಿಸೆ ರಂಗೇಶಂ ||೧೦೫||
ಶೋಕಿಸುತರ್ಚಕನುಖದಿಂ |
ದೇಕಾಂತದೊಳೇಳ್ವಿಗಲ್ಗೆ ಪರತರಮುಸ್ಮ ||
ದ್ವೈಕುಂಠಕ್ಕೆಯ್ದುವುದೆಂ |
ದಾಕಮಲಾನಾಥನುಸಿರೆ ಕೇಳ್ದತಿಮುದದಿಂ ||೧೦೬||
ಐತಂದು ಮಠಕೆ ಶಿಷ್ಯ |
ವ್ರಾತಕ್ಕತಿಗೂಢಮೆನಿಸುವರ್ಥವಿಷಯಮಂ ||
ಪ್ರೀತಿ ಮಿಗೆ ಕರುಣಿಸಿದರಾ |
ಖ್ಯಾತಂ ನಾಲ್ಸಾಸಿರಪ್ರಬಂಧಮನಾಗಳ್ ||೧೦೭||
ಅನುಸಂಧಾನಮನಾಗುಮಾಡಿಸಿ ತದೀಯಾರಾಧನೋತ್ಸಾಹಮಂ |
ಮನವೊಲ್ದೇಳ್ದಿನಸಂಬರಂ ರಚಿಸಿ ಶ್ರೀಮತ್ಪಾದತೀರ್ಥಂಗಳಂ ||
ತೊನೆದಂಗೀಕರಿಸಿನ್ನೆ ಗಂ ನೆಗೞ್ದುದುಂಟಾಗಿದೋರ್ಷಡೇನಾನು... |
ಮಿನಸಿಷ್ಟಂ ಭಗವತ್ಸುಭಾಗವತಬೃಂದಾವಜ್ಞೆ ನೀವೊಲ್ದದಂ ||೧೦೮||
ಕ್ಷಮಿಸಲ್ಕಕ್ಕುದೆನುತ್ತೆ ಪೇೞ್ದು, ಮಿಗೆ ಮದ್ವಿಶ್ಲೇಷಮಂ ತಾಳದ |
ಕ್ಷಮನೀಶಿಷ್ಯರೊಳಾವನಂತೊಡರಿಕುಂ ತನ್ನಾತ್ಮವಿಶ್ಲೇಷಮಂ ||
ಕ್ರಿಮಿಗಳ್ತೀವಿದ ಘೋರಮಾದ ನರಕಂ ತಾನಕ್ಕುಮಾತಂಗೆ ನೈ|
ಜಮಿದೆಲ್ಲರ್ ಪದೆದಂತನಿಷ್ಟವಿಧಿ ಮಾಡಲ್ತಕ್ಕುದಲ್ತೆಂದವರ್ ||೧೦೯||
ನಿರವಿಸಿ ನೀಮಿಂದುಮೊದಲ್ |
ನಿರುಪಮಭಟರಿಂದಮೆಯ್ದೆ ಸಕಲಗ್ರಂಥೋ ||
ತ್ಕರಕಾಲಕ್ಷೇಪಮನೊ |
ಲ್ದಿರದೆಸಗುತೆ ಬುದ್ಧಿಮಂತರಾಗಿರಿಮೆಂದರ್ ||೧೧೦||
ವ||ಇಂತೆಂದು ಸಕಲಶಿಷ್ಯರ್ಗಮನೋನ್ಯೈರ್ಮಾಲ್ಯಮುಪ್ಪಿನಂಬುದ್ಧಿವೇೞ್ದು
ವಿಲಸನ್ಮಾಘದ ಶುಕ್ಲಪಕ್ಷ ದಶಮೀಸೂರ್ಯಾತ್ಮಭೂವಾರದೊಳ್ |
ಸಲೆ ಮಧ್ಯಾಹ್ನದ ಕಾಲದೊಳ್ ಹೃದಯದೊಳ್ ರಂಗೇಶನಂ ಜಾನಿಸು ||
ತ್ತೊಲವಿಂ ಯೋಗದೊಳರ್ಪಿನಂ ಮಿಗೆ ಸುಷುಮ್ನಾನಾಮಮೂರ್ಧನ್ಯದು |
ಜ್ಜ್ವಲನಾಡ್ಯಂತಮನೆಯ್ದಿ ಭೇದಿಸೆ ತಮಾತ್ಮಜ್ಯೋತಿಯಾಕಾಶಮಂ ||೧೧೧ ||

ಬೆಳಗುತ್ತುತ್ಕ್ರಮಿಸಿ ಮಹೋ|
ಜ್ಜ್ವಳವೈಕುಂಠಕ್ಕೆ ಪೋದುದಾಗಳಖಿಳ ನಿ ||
ರ್ಮಳಶಿಷ್ಯರಾಂತು ಕೌತೂ |
ಹಳಮಂ ಸದ್ಭಕ್ತಿಯಿಂದೆ ತದ್ವಿಗ್ರಹಮಂ ||೧೧೨||

ವ|| ಆನಂದಬಾಷ್ಪಗದ್ಗದಿತ ನಿಸ್ಪಷ್ಟವಾಕ್ಯರೀಕ್ಷಿಸಿ ಬ್ರಹ್ಮಮೇಧಸಂಸ್ಕಾರಮಂ ಮಾಡಿಸಿ ತಿರುವಧ್ಯಯನಂ ಮೊದಲಾದುವಂ ನೆಗಳ್ಚಿ ರಂಗನಾಥನ ನಿಯಮದಿಂ ಮಠದೊಳರ್ಚಾವಿಗ್ರಹಮಂ ಕಲ್ಪಿಸಿಯದರ್ಕೆ ದಿವ್ಯವೈಭವಮನೊಡರಿಸಿ ಸುಖದಿಂದಿರ್ದರ್. ಅನಂತರಂ

ತಿರುಪತಿ ನೂಱೆಂಟಱೊಳಂ |
ಸ್ಫುರಿಸುವ ಶ್ರೀವೈಷ್ಣವಾವಳಪ್ರತಿಗೇಹಾಂ ||
ತರದೊಳಮಿಂತು ಪ್ರತಿಷ್ಠಾ |
ವಿರಚನೆಯೊಳಮಿಂದಿರೇಶನಿಯಮನದಿಂದಂ ||೧೧೩||

ವರವೈಖಾನಸ ಪಾಂಚರಾತ್ರ ವಿಧಿಯೊಳ್ ಭಕ್ತಪ್ರತಿಷ್ಠಾಕ್ರಿಯಾ |
ಸ್ಫುರಣಂ ವರ್ತಿಸುತಿರ್ಪ ತಾಣದೊಳದೇಂ ತೀರ್ಥಪ್ರಸಾದಂಗಳಂ ||
ತರದಿಂದಿಂದು ಮೊದಲ್ ಸಮಂತು ಪದೆದಂಗೀಕಾರಮಂ ಮಾಡುವೆಂ |
ಬರಿದಾಗಳ್ ಸಲೆ ಮಾಮುಕೀಯರದಱಿಂದಾಮಾರ್ಗಮಂ ವರ್ಜಿಸರ್ |೧೧೪||

ಈಗಳುಮಾಮರ್‍ಯಾದೆಯು |
ನಾಗಿಪ್ಪುದದುವೆಮ್ಮತದಾ ಸಿದ್ಧಾಂತಂ ತಾ ||
ನಾಗದಿದಾವ ಮತಸ್ಥರಿ |
ನಾಗಮವಿಧಿಯಿಂ ನಡೆವುದುರ್ವೀತಳದೊಳ್ ||೧೧೫||

ಪಿರಿಯಗುರುಪಜ್ಞೆಯು ಪರಂ |
ಪರೆಯೊಳ್ತಾಂ ಷಟ್ಸಹಸ್ರವಿಸ್ತಾರಕಥಾ ||
ಸರಣಿ ಯಥಾಮತಿಯಾಗಿ ರು |
ಚಿರಮಪ್ಪವೊಲೊಳ್ಪಿಂದೆ ಸಂಗ್ರಹಿಸಿರ್ಕುಂ ||೧೧೬||

ವಿಮಳಸ್ವಾಂತಸರೋಜಾ |
ತ ಮಹಚ್ಛ್ರೀಭಕ್ತಿಸಾರಮುನಿಪತಿ ಶಠಕೋ ||

ಪ ಮಧುರಕವಿ ಕುಲಶೇಖರ |
ವಿಮದಮನೋಭಟ್ಟನಾಥ ಗೋದಾಭಿಖ್ಯರ್ ||೧೧೭||
ಪರಮಮುನಿವರ್ಯಭಕ್ತಾಂ |
ಘ್ರಿರೇಣು ಮುನಿವಾಹ ಧೀರ ಪರಕಾಲಾಖ್ಯರ್ ||
ಕರವಿಶಾಯಿಶಾರಾಖ್ಯಾ |
ರುರುತರ ಮಾಹಾತ್ಮ್ಯದಿಯೊಳ್ಕ್ರಮದಿಂದಂ ||೧೧೮||

ಪರಮದ್ರಾವಿಡದಲ್ಲಿ ಕಲ್ಪಿಸಿರೆ ಮೋಕ್ಷಾಯಾರ್ಥಮೆಲ್ಲರ್ಗೆ ಗೋ |
ಚರಮುಲ್ತಿಂದಿದು ರೂಢಿಯಾಗಿರಲೆವೇಳ್ಕೆಂದೊಂದು ಸಾಮರ್ಥ್ಯದಿಂ ||
ಬಿರುದಂತೆಂಬರಗಂಡಸಪ್ರತಿಮನಾ ಪ್ರೌಢಪ್ರತಾಪಂ ಯುತ |
ಸ್ಫುರಿತಂ ಸತ್ಯಪರಾಕ್ರಮಂ ಬೆಸಸೆ ಶ್ರೀಮಚ್ಚಿಕ್ಕದೇವೋರ್ವಿಪಂ ||೧೧೯||

ಉಸಿರ್ದಂ ಕರ್ಣಾಟಭಾಷಾಕ್ರಮದಿನೊಸೆದು ಶ್ರೀವೈಷ್ಣವರ್ವೇಳ್ಪುವಂತಾ |
ರಸಿಕರ್ಚೆನ್ನಾದುದೆಂಬಂತೆಯುಮಿತರಜನಂ ಮೋದಮಂ ತಾಳ್ವನಂ ಶ್ರೀ |
ಬಿಸಜಾಕ್ಷಂ ರಂಗಧಾಮಂ ಕರುಣಿಸೆ ಕವಿತಾಮಾರ್ಗಮಂ ಭೂಮಿಯೊಳ್ ರೂ |
ಢಿಸಲಾಜನ್ಮಾಘವಿಧ್ವಂಸನಪಟುಕೃತಿಯಿಂ ಶ್ರೀಚಿಕ್ಕುಪಾಧ್ಯಾಯನೊಳ್ಪಿಂ ||

ಇದುಮೋಕ್ಷಲ್ಪನೆಯುಳ್ತಿದಾಲಿಸಲೊಡಂ ಸಾಮಾನ್ಯಮಾಹಾತ್ಮ್ಯಮು |
ಳ್ತಿದು ತಾಂ ಪ್ರಾಕೃತಲೀಲೆಯುಳ್ತಖಿಲಲೋಕೋಜ್ಜೀವನಾರ್ಥಂ ಮಹಾ ||
ಭ್ಯುದಯ ಶ್ರೀಕರವಿಷ್ಣ್ವನುಗ್ರಹದೆ ವಿಷ್ವಕ್ಸೇನಶೇಷಾದಿ ಪಾ |
ರ್ಷದರಾವಿರ್ಭವರಾದರಂತವರ ಸಚ್ಚಾರಿತ್ರಮಂ ಪೇಳ್ದಿನಾಂ ||೧೨೧||

ಇಳೆಯೊಳ್ಮಿಕ್ಕ ಕಥಾಳಿಯಂತೆ ಶ್ರವಣಾಹ್ಲಾದಕ್ರಿಯಾಮಾತ್ರಮು |
ಳ್ಳೆಸುತ್ತಾಲಿಪ ಪೇಳ್ವ ಭಾವುಕಜನಕ್ಕಾನಂದಮಂ ಶ್ರೀಯನು ||
ಜ್ಜ್ವಳಸೌಭಾಗ್ಯಮನಾಯುಮಂ ಯಶಮುಮಂ ದಲ್ ಪೆರ್ಚಿಕುಂ ಸಂ |
ಕುಳದಾವಾನಳವಿಶಾಕಥಾಸರಣಿ ಭಕ್ತಿಜ್ಞಾನವೈರಾಗ್ಯದಂ ||೧೨೨||

ಇದು ಕಾವ್ಯಮಾಗಿಯುಂ ಸ |
ಮ್ಮದಮಂ ವಿಬುಧರ್ಗೆ ಪೆರ್ಚಿಕುಂ ಘನರಸಮಾ ||
ಗಿದು ಭಂಗರಹಿತಮಚ್ಯುತ |
ಪದಮಾಗಿಯುಮನಿಶಜನಕ್ಕೀಪ್ಸಿತದಂ ||೧೨೩||

ವಿಗಳದ್ವ್ಯೋಮ ನಭೋರಸಾಮೃತಗುಶಾಕಾಬ್ದಂಗಳಿಂ ಸಂದ ಪಿಂ |
ಗಳಸಂವತ್ಸರ ಫಾಲ್ಗುನಾಮಳಮಹಾಪಕ್ಷಾಷ್ಟಮೀವಾಸರಂ ||
ಜಳಜಾತಾಂಡದೊಳೆಲ್ಲಿಯುಂ ಸ್ಫುರಿಸವ್ರೋಲ್ ಪನ್ನೀರ್ವರಾಟ್ವಾರ ಮಂ |
ಗಳದೀವ್ಯತ್ಕೃತಿಪೂರ್ಣಮಾಯ್ತು ಚಿಕುಪಾಧ್ಯಾಯಾಖ್ಯಮಂತ್ರೀಶನಿಂ||೧೨೪

ಅವನಿ ಪಯೋಧಿ ಮೇರು ಸಿಗಮಾವಳಿ ವಿಷ್ಣುಕಥಾ ಪುರಾಣ ಶಾ |
ಸ್ತ್ರವಿತತಿ ಸೂರ್ಯ ಚಂದ್ರ ಗಗನಾನಿಲ ಪಾವಕ ಪುಷ್ಕರಂಗಳೆ||
ನ್ನವರಮವಿರ್ಕುಮನ್ನೆವರವಿಾಕೃತಿ ರಂಗಸಿವಾಸನಾಜ್ಞೆಯಿಂ |
ದೆ ವಿಬುಧರಾಲಿಪಂತೆ ಪರೆದೆಲ್ಲಿಯುಮೊಪ್ಪಿಸಿರ್ಕನಾಕುಲಂ ||೧೨೫||

ರಂಗಪತಿ ರಂಗಶಾಯಿೞ |
ರಂಗಾಧಿಪ ರಂಗಧಾಮ ರಂಗನಿವಾಸಾ ||
ಮಂಗಳ ಜಯ ಶುಭ ಶಿವ ಭ |
ದ್ರಂಗಳ್ ಪೇಚ್ಚಾಲಿಪರ್ಗೆ ವರ್ಧಿಕಜಸ್ರಂ ||೧೨೬||

|| ಗದ್ಯಂ ||

ಇದು ನಮಿತಹಿಮಕರಚೂಡಕಮಲಭವಮುಖಸುರಸಮುದಯಮೌಳಿಮಣಿಗಣಘೃಣಿಸಂಧ್ಯಾರಾಗಾನುಗುಣಪ್ರಚುರರುಚಿತಾರಕಾಯಮಾನ ರಂಗವಿಭುಚರಣಯುಗಳನಖಮಯೂಖಸುಧಾಪೂರವಿಹಾರಮದಮರಾಳೀಕೃತ ಮಹಿಷಪುರವರಸಾಮ್ರಾಜ್ಯಸಂಪನ್ನ ರಾಜಾಧಿರಾಜರಾಜಪರಮೇಶ್ವರಾಪ್ರತಿಮಪ್ರೌಢಪ್ರತಾಪ ಬಿರುದಂತೆಂಬರಗಂಡ ಯದುಕುಲನಳಿನದಿನಕರರಾದ ಶ್ರೀಚಿಕದೇವರಾಯಮಹಾರಾಜಪ್ರಸಾದಪರಿಪೂರ್ಣ ಸಚಿವನಿಚಯತಿಲಕ ಶ್ರೀಚಿಕುಪಾಧ್ಯಾಯ ವಿರಚಿತಮಪ್ಪ ದಿವ್ಯಸೂರಿಚರಿತಮಹಾಪ್ರಬಂಧದೊಳ್ ಶೇಷಾಂಶಭವರಾದ ಶ್ರೀಭಾಷ್ಯಕಾರರ ಬೌದ್ಧವಿಜಯ ಯಾದವಗಿರಿನಾರಾಯಣದೇವಾಗಾರಜೀರ್ಣೋದ್ಧಾರಣ ವೈಕುಂಠಯಾತ್ರಾದಿ ವರ್ಣನಂ ಚತುರ್ದಶಾಶ್ವಾಸಂ ಸಂಪೂರ್ಣಂ.

|| ಮಂಗಳಂ ಮಹತ್ ಶ್ರೀ ಶ್ರೀ ||

## ಗ್ರಂಥಂ ಸಮಾಪ್ತಂ

ಸಂಸ್ಕೃತ। ಪುಣ್ಯಾಂಭೋಜವಿಕಾಸಾಯ ।
ಪಾಪಧ್ವಾಂತ ಕ್ಷಯಾಯ ಚ ॥
ಶ್ರೀಮಾನಾವಿರಭೂದ್ಭೂಮೌ ।
ರಾಮಾನುಜ ದಿವಾಕರಃ ॥

KARNATAKA

# Kavya Kalanidhi Series,

NO. 6.

# ಚಿಕ್ಕದೇವೇಂದ್ರ ವಂಶಾವಳಿ.


ಎಸ್. ಜಿ. ನರಸಿಂಹಾಚಾರ್

ಲೈಬ್ರೇರಿಯನ್ ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿ ಮೈಸೂರ್,

ಮತ್ತು

ಎಂ. ಎ. ರಾಮಾನುಜಯ್ಯಂಗಾರ್

ಅಸಿಸ್ಟೆಂಟ್ ಮಾಸ್ಟರ್ ವೆಸ್ಲಿಯನ್ ಮಿಷನ್ ಹೈಸ್ಕೂಲ್ ಮೈಸೂರ್,

ಇವರುಗಳಿಂದ ಶೋಧಿಸಲ್ಪಟ್ಟು



ಮೈಸೂರ್:

ಸ್ಟಾರ್ ಪ್ರೆಸ್ಸಿನಲ್ಲಿ ಮುದ್ರಿತವಾಯ್ತು.

1901.

# ಪೀಠಿಕೆ.

## — ಚಿಕ್ಕದೇವೇಂದ್ರವಂಶಾವಳಿ —

ಈ ಗ್ರಂಥಕರ್ತನ ಹೆಸರು ಗೊತ್ತಿಲ್ಲ. ಈ ಗ್ರಂಥದಲ್ಲಿ ಚಿಕದೇವಮಹಾರಾಜನ ವಂಶವನ್ನು ವರ್ಣಿಸಿರುವುದರಿಂದಲೂ, "ಹೃದಯಾಂಭೋರುಹದಲ್ಲಿಯಾಂ ನೆನೆವು ಗೋಪಾಲಾಂಘ್ರಿಪಂಕೇಜಮಂ । ಮುದವೆತ್ತಾತನನುಜ್ಞೆಯಾಂತುಸಿರ್ವೆನೀವಿದ್ವದ್ದಯಾಸಾರದಿಂ॥" (೧೦) ಎಂದು ಹೇಳಿರುವುದರಿಂದಲೂ, ಕವಿಯು ಶ್ರೀರಂಗಪಟ್ಟಣದಲ್ಲಿ ಚಿಕದೇವಮಹಾರಾಜನ ಕಾಲದಲ್ಲಿ (ಎಂದರೆ ಕ್ರಿ. ಶ. ೧೬೭೨–೧೭೦೪) ಇದ್ದಂತೆಯೂ, ಗೋಪಾಲಗುರುವಿನ ಆಜ್ಞಾನುಸಾರ ಈ ಗ್ರಂಥವನ್ನು ಬರೆದಂತೆಯೂ ತಿಳಿಯಬರುತ್ತದೆ. ಕವಿಯು ಗ್ರಂಥಾದಿಯಲ್ಲಿ ಶ್ರೀರಂಗಪಟ್ಟಣದ ರಂಗನಾಥಸ್ವಾಮಿಯನ್ನೂ, ರಂಗನಾಯಕಿಯನ್ನೂ ಸ್ತುತಿಸಿದ್ದಾನೆ. ಬಳಿಕ ಶಾರದೆಯನ್ನೂ, ಗಣಪತಿಯನ್ನೂ, ಗಂಗಾಧರೇಶ್ವರನನ್ನೂ ಕ್ರಮವಾಗಿ ಸ್ತುತಿಸಿದ್ದಾನೆ. ತರುವಾಯ ವಾಲ್ಮೀಕಿ, ವ್ಯಾಸ, ಕಾಳಿದಾಸ, ಬಾಣ–ಇವರನ್ನು ಸ್ತುತಿಸಿ ಗ್ರಂಥವನ್ನು ಉಪಕ್ರಮಿಸಿದ್ದಾನೆ.

ಈ ಗ್ರಂಥವು ಚಂಪೂರೂಪದಲ್ಲಿದೆ. ಇದರಲ್ಲಿ ಆಶ್ವಾಸವಿಭಾಗಗಳಿಲ್ಲ; ೧೩೭ ಪದ್ಯಗಳಿವೆ. ಇದರಲ್ಲಿ ಮೈಸೂರು ದೇಶದ ಮಹಾರಾಜರ ವಂಶಾವಳಿಯು ಬಹುಸಂಗ್ರಹವಾಗಿ ವರ್ಣಿತವಾಗಿದೆ. ಇದು ಸಣ್ಣಗ್ರಂಥವಾಗಿದ್ದರೂ ವಿಶೇಷವರ್ಣನಾವೈಖರಿಗಳಿಂದ ನಿಬಿಡಿತವಾಗದೆ ಪ್ರಚಾರದಲ್ಲಿರುವ ಪದಗಳಿಂದಲೇ ಗುಂಭಿತವಾಗಿರುವುದರಿಂದಲೂ, ಮೈಸೂರು ಮಹಾರಾಜರ ಚರಿತ್ರೆಯನ್ನು ಸಂಗ್ರಹವಾಗಿ ವರ್ಣಿಸಿರುವುದರಿಂದಲೂ, ಈ ದೇಶೀಯರಿಗೆ ವಿಶೇಷವಾಗಿ ಆದರಣೀಯವಾಗುವುದರಲ್ಲಿ ಸಂದೇಹವಿಲ್ಲ.

# ಚಿಕ್ಕದೇವೇಂದ್ರವಂಶಾವಳಿ.



ಶ್ರೀಲಕ್ಷ್ಮೀಕುಚಕುಂಭಕುಂಕುಮಲಸತ್ಪಂಕಾಂಕಿತೋರಸ್ಸ್ಥಲಂ ।
ನೀಲಾಂಭೋರುಹಸುಂದರಾಂಗನಮರಾಧೀಶಾರ್ಚಿತಾಂಘ್ರಿದ್ವಯಂ ॥
ವ್ಯಾಲೇಶೋರುಫಣಾಮಣಿದ್ಯುತಿಸಮೂಹಾಶ್ಲಿಷ್ಟವಕ್ತ್ರಾಂಬುಜಂ ।
ಲೀಲಾಸಂತತಿವೆತ್ತು ರಕ್ಷಿಸುಗೆ ಶ್ರೀರಂಗೇಶನೊಲ್ದೆಮ್ಮುಮಂ ॥ ೧॥

ನುತಭಕ್ತಾಳಿಚಕೋರಕೌಮುದಿ ಮಹಾಮುಕ್ತ್ಯಂಗನಾಕುಂತಲ ।
ಪ್ರತತೀಂದಿಂದಿರಮಲ್ಲಿಕಾಕುಸುಮದಾಮಂ ಶ್ರೀಸ್ತನದ್ವಂದ್ವರಂ ॥
ಜಿತಮುಕ್ತಾಮಣಿಹಾರಮಾನತಮನಃಕಾದಂಬದುಗ್ಧಂ ರಮಾ ।
ಪತಿಪಾದಾಬ್ಜನಖಾಂಶು ಶೋಭನಕರಂ ತಾನಿರ್ಕೆ ಮಚ್ಚಿತ್ತದೊಳ್॥೨॥

ಮಾತೆ ಸಮುದ್ರಜಾತೆ ಸಕೃತಾನತದೇವವಧೂಶಿರೋರುಹ ।
ವ್ರಾತ ಮಧುವ್ರತಾಂಘ್ರಿಜಲಜಾತೆ ಸುನೀತೆ ಜಗತ್ತ್ರಯಾತಿವಿ ॥
ಖ್ಯಾತೆ ವಿಲಾಸಯುಕ್ತೆ ವಿಧುಬಿಂಬಸಮಾನನೆ ರಂಗನಾಥಸಂ ।
ಪ್ರೀತೆ ವಿನೀತೆ ಮಾಡೆಮಗೆ ಶ್ರೇಯಮನಾಲಿಸಿ ರಂಗನಾಯಕೀ ॥೩॥

ವಾದಿತವಲ್ಲಕೀಗುಣನಿನಾದಭವನ್ನವಚಾರುಗೀತಸಾ ।
ರೋದಿತಮೋದೆ ಮೌನಿಹೃದಯಾಲಯದೀಪಿಕೆ ನೀರಜಾತಜಾ ॥
ಹ್ಲಾದಕರಾಂತರಂಗೆ ಕರುಣಂಬಡೆದಿತ್ತು ಮತಿಪ್ರಕಾಶಮಂ ।
ವೇದಶಿರೋನತಾಂಘ್ರಿಯುಗೆ ಪಾಲಿಸು ಶಾರದೆಯೆನ್ನನಾವಗಂ ॥ ೪॥

ಮದಜಲಮಿಂಬಯಿಂಬ ಮಿಗೆ ಸೋರ್ಕುತೆ ಝಂಕೃತಿಗೈವ ಬಾಲಷ।
ಟ್ಪದಗಣಗಾನಮಂ ಬಿಡದೆ ಲಾಲಿಸಿ ಮೌಳಿಯನೊಲ್ದು ತೂಗುತು ॥
ನ್ಮದಿಸಿ ನಿಮೀಲಿತಾಕ್ಷಿಯಿನಭೀಕ್ಷಿಸಿ ಸರ್ವರಭೀಷ್ಟಮಿತ್ತು ಸ ।
ನ್ಮದಮುರೆ ತಾಳ್ದ ಹಸ್ತಿಮುಖನೀಗೆಮಗೋವಿ ಮತಿಪ್ರಕಾಶಮಂ ॥

ವರಗಂಗೋಜ್ಜ್ವಲಮುತ್ತರಂಗಕಣತಾರಾನೀಕದಿಂ ಫಾಲದೊಳ್ ।
ಮಿರುಗುತ್ತಿರ್ಪ ಸುಧಾಕರಾಂಶುತತಿಯಿಂ ವಕ್ತ್ರಾಬ್ಜಸುಸ್ಮೇರದಿಂ ॥
ಕರುಣಾಸಾರಕಟಾಕ್ಷದಿಂ ವಿಮಲದೇಹಜ್ಯೋತಿಯಿಂ ಶಾಂತಿಯಿಂ ।
ಕರೆದೆನ್ನಂ ಶುಭವಿತ್ತು ರಕ್ಷಿಸುಗೆ ಶ್ರೀಗಂಗಾಧರಂ ನಿಚ್ಚಲುಂ ॥೬॥

ನುತಿಪೆಂ ರಾಮಕಥಾಂಬುರಾಶಿಶಶಿಯಂ ವಾಲ್ಮೀಕಿಯಂ ರಾಧಿಕಾ ।
ಪತಿಚಾರಿತ್ರರಸೈಕಭಾವಶುಕನಂ ಶ್ರೀವ್ಯಾಸನಂ ಕಾಳಿಕಾ ॥
ಸ್ತುತಿಸಾರಪ್ಲುತಕಾಳಿದಾಸಕವಿಯಂ ಶೃಂಗಾರಲೀಲಾಕಲಾ ।
ತತಿಕಲ್ಪಾವನಿಜಾತಪಕ್ವಫಲವದ್ಗೀರ್ವಾಣನಂ ಬಾಣನಂ ॥ ॥೭॥

ಮಕ್ಷಿಕದಂತೆ ದುರ್ವ್ರಣಮನೇ ಬಿದಕುತ್ತಿಹ ದುರ್ಜನರ್ಕಳೊ ।
ಲ್ವೀಕ್ಷಿಸಿ ಸುಪ್ರಬಂಧರುಚಿಯಂ ಕವಿಕೌಶಲಮಾರ್ಗಮಂ ಸದಾ ॥
ಲಕ್ಷಿಪರಂತವರ್ಗಳರಲಂತೆಳಿಯಂತೆ ಸುಗಂಧಸಾರಮಾ ।
ಪೇಕ್ಷಿಪುದಂತೆ ಸಜ್ಜನರ ಮಾನಸವೃತ್ತಿಯವರ್ಗೆ ವಂದಿಪೆಂ ॥೮॥

ನವರಸರೀತಿಯಂ ತಿಳಿವ ಲೋಕನಿಕಾಯಮಹಾಪ್ರಪಂಚಮಂ ।
ತವೆಯಱಿವಂಗಜಾತವರಶಾಸ್ತ್ರವಿಳಾಸಮನ್ನೈದೆ ಬಲ್ಲ ಸ ॥
ದ್ಭ್ಯವತಿಲಸತ್ಕಲಾತತಿಯನೊಪ್ಪಿರೆ ವೇದಿಪ ಸದ್ಗುಣಾಳಿ ಪ್ರೊ ।
ಣ್ಮಿವ ಕವಿಬೃಂದಕಾನೆಱಗಿ ಬೇಳ್ಪೆನವರ್ಗಳ ಚಿತ್ತವೃತ್ತಿಯಂ ॥೯॥

ಹೃದಯಾಂಭೋರುಹದಲ್ಲಿಯಾಂ ನೆನೆದು ಗೋಪಾಲಾಂಘ್ರಿಪಂಕೇಜಮಂ
ಮುದವೆತ್ತಾತನನುಜ್ಞೆಯಾಂತುಸಿರ್ವೆನೀವಿವ್ಯದ್ದಯಾಸಾರದಿಂ ॥
ಮುದವದ್ವೈರಿನೃಪಾಲಖಂಡನರತಶ್ರೀಚಿಕ್ಕದೇವೇಂದ್ರಕೋ ।
ವಿದವಂಶಾವಳಿಯಂ ಬುಧಾಸ್ಪದಮನುದ್ಯಚ್ಛೋಭನಾಗಾರಮಂ ॥೧೦॥

ಅದೆಂತೆಂದೊಡೆ:—

ಚಳದುತ್ಕಲ್ಲೋಲಮಾಲಾಹತಿವಿದಳಿತಶುಕ್ತಿವ್ರಜೋನ್ಮುಕ್ತಮು
ಕ್ತಾ । ಫಳತಾರಾಸಂಚಯಂ ತತ್ತ್ರಟಾಕಲಿತಮಹಾವಿದ್ರುಮಚ್ಛಾಯೆ

ಸಂಧ್ಯಾ ॥ ವಿಳಸದ್ರಾಗಂ ತದಂತರ್ಗತವಡಬನಧಸ್ಥಾರ್ಕಬಿಂಬಂ ತದೀ
ಯೋಜ್ಜ್ವಳಶಂಖಂ ಚಂದ್ರನಂತೊಪ್ಪಿರೆ ಮೆಱೆದುದು ಸಂಧ್ಯಾನಭಂಬೋ
ಲ್ ಸಮುದ್ರಂ ॥ ॥೧೧॥

ಸುಳಿಯಿಂ ಫೇನವಿತಾನದಿಂ ಘುಳುಘುಳುಧ್ವಾನಂಗಳಿಂದೀೞ್ವ ಬೊ ।
ಬ್ಬುಳಿಯಿಂದುದ್ಗತಶುಕ್ತಿಯಿಂ ಮಕರಮೀನವ್ಯೂಹದಿಂ ರತ್ನಸಂ ॥
ಕುಳದಿಂ ವಿದ್ರುಮವಲ್ಲಿಯಿಂ ಜಲಗಜವ್ಯಾಳಂಗಳಿಂ ವಜ್ರಭೃ ।
ದ್ಬಳಭೀತಾಗತಶೈಲಸಂತತಿಯಿನಂಭೋರಾಶಿ ಕಣ್ಗೊಪ್ಪುಗುಂ ॥೧೨॥

ತೀರಧರಾಧ್ರನಿರ್ಝರತಟಾತಿವಿರಾಜಿತಕುಂದಮಲ್ಲಿಕಾ ।
ಚಾರುಸುಮಾಳಿತಲ್ಪಕೃತಮನ್ಮಥಕೇಳಿವಿಳಾಸವಿಶ್ರಮಂ ॥
ಚಾರಣಸುಂದರೀಕುಚತಟಾರ್ದ್ರಸುಕುಂಕುಮಘರ್ಮವಾರಿಯುಂ ।
ಕೊತ್ತೀರುಸುಗಂಧಮಪ್ಪ ವನಮಾರುತಗಂಧದಿನೊಪ್ಪಿತಬ್ಧಿಯುಂ ॥೧೩॥

ಕಮಲಾಕ್ಷಾಂಗನೆಯೆನ್ನ ಪುತ್ರಿ ವಿಧಿ ತಾಂ ದೌಹಿತ್ರನೀಶಂಗೆ ಚಂ ।
ದ್ರಮನಂ ಮೌಳಿಯೊಳಾಂತು ರಂಜಿಸುವವೋಲಿತ್ತೆಂ ಸುರೇಶಂಗೆ ಪ್ರೋ ॥
ದ ಮಹೈಶ್ವರ್ಯಮನಿತ್ತೆನಾರೆನಗೆ ನೋಡಲ್ ಸಾಟಿಯೆಂದಿಂದು ಹ ।
ರ್ಷಮನಾಂತುರ್ವಿದುದೆಂಬಿನಂ ತೆರೆಗಳಿಂದುರ್ವಿರ್ದುದಾಸಾಗರಂ ॥೧೪॥

ಮಗಳುಂ ನೋೞ್ಪೊಡೆ ಪೇೞ್ವೆನೇಂ ಚಪಳೆ ಪುತ್ರಂ ರಾಜಯಕ್ಷ್ಮಾಮಯ
ಪ್ರಗತಂ ಕುಂಭಜನೆನ್ನನಂದು ನೆರೆ ಪೀರ್ದಂ ಪ್ರೋದ್ವಿಷಕ್ಕಾಗರಂ ॥
ಮಿಗಿಲಾದೆಂ ಬಹುದುಃಖಮಂ ತಳೆದೆನಾರೆನ್ನಂತೆ ಕಷ್ಟಸ್ಥರೆಂ ।
ದಗಿದಂಭೋನಿಧಿ ತರ್ಗಿದಂತೆ ಗತಕಲ್ಲೋಲಂಗಳಿಂದೊಪ್ಪುಗುಂ ॥೧೫॥

ಸುತರಂಗಾಯುತಹಸ್ತದಿಂದೆಱಗುವಂಭೋಭೃತ್ಕಚಂದಾಳ್ದು ಪ್ರೋ ।
ದ್ಗತಮುಕ್ತಾರದನಾಳಿ ರಾಜಿಸೆ ನಗುತ್ತಂಭೋಜವೆಂಬಾಪಗಾ ।
ಸತಿಯಾಸ್ಯಂಬಿಡಿದೂರ್ವಿಕಾರವಗಳಧ್ವಾನಂಗಳಿಂ ಚುಂಬಿಸು ।
ತ್ತತಿಮೀನಾಂಬಕದಿಂದೆ ನೋಡಿ ವಿಟನಂತಂಭೋಧಿ ವಿಭ್ರಾಜಿಕ್ಕುಂ ॥೧೬॥

ಸಲೆಮಿಂತೊಪ್ಪುವ ಸಿಂಧುವೆಂಬ ಕೊಳದೊಳ್ ತತ್ಕೀಲಕಕ್ಷ್ಮಾಧ್ರಂ ।
ವಲಿ ಪತ್ರಂ ವಿಲಸತ್ಸ್ವಕೀಯ ಘನದಾತ್ತ್ರವ್ಯೂಹಕಿಂಜಲ್ಕಸ ॥
ನ್ಮಿಲಿತಂ ಸಾನುಮಣಿವ್ರಜಾಂಶುಸುಪರಾಗಂ ನೀಲಮೇಘಾಳಿಸಂ ।
ಕಲಿತಂ ಹೇಮಸರೋಜಕರ್ಣಿಕೆಯೆನಲ್ ಸ್ವರ್ಣಾದ್ರಿಕಣ್ಗೊಪ್ಪುಗುಂ ॥

ಬಳಸಿ ಬರುತ್ತುಮಿರ್ಪ ಹಿಮಧಾಮನೆ ದೀಪಿಕೆ ಚಾರುತಾರಕಾ ।
ವಳಿಯೆ ಸುಗಂಧವಾಂತ ಕುಸುಮವ್ರಜವೊಪ್ಪುವ ಜಾಹ್ನವೀನದೀ ॥
ಜಳಮಭಿಷೇಕವಾರಿ ಘನರಾವವೆ ಗಂಟೆಯದಾಗೆ ದೇವಸಂ ।
ಕುಳವಿರದರ್ಚಿಸಿರ್ದ ಘನಲಿಂಗವೆನಲ್ ಕನಕಾದ್ರಿ ರಂಜಿಕುಂ ॥೧೮॥

ಸಾಲ ರಸಾಲ ಜಂಬು ತಿಲಕಾಮಳಪಿಪ್ಪಲ ಕರ್ಣಿಕಾರ ಜಂ ।
ಬಾಲ ತಮಾಲ ಪೂಗ ರಸದಾಡಿಮ ಪಾಟಲ ಕೇತಕೀಲಸ ॥
ಜ್ಜಾಲ ಪಲಾಶ ಚಂಪಕ ಕುರಂಟಕ ಕಂಟಕಿ ನಾಳಿಕೇರ ಹಿಂ ।
ತಾಲ ಮಹೀಜಮುಖ್ಯತರುಸಂತತಿಯಿಂ ವನವೊಪ್ಪಿತದ್ರಿಯೊಳ್ ॥೧೯॥

ಅಮರಾಧೀಶ್ವರಲೋಕದಂತೆ ಸುಮನೋವಾಸಂ ವಿಲಾಸಾಗ್ರಹಾ ।
ರಮಹಾಶ್ರೇಣಿವೊಲುಲ್ಲಸನ್ನಗಕುಶಾಖಾಸ್ಥದ್ವಿಜಧ್ವಾನಸಂ ॥
ಭ್ರಮಿತಂ ಬಂಧುರವೀಣೆಯಂತಿರೆ ಪ್ರವಾಳಾರಾನ್ವಿತಂ ತದ್ವನಂ ।
ಕಮನೀಯಾಂಬುಧಿಯಂತೆ ವಿದ್ರುಮಲತಾಸಂದೋಹವಿಭ್ರಾಜಿತಂ ॥೨೦॥

ತರಣಿಯ ಗೌರಿಯಂಗಜನ ಜಾತಿಯ ಕೆಂಡವ ಶೂಲಿಭಕ್ತರ ।
ಪ್ಪರಿಯರೊಳೊರ್ವಳುತ್ಕರದ ಘೂಕದ ತೇರ ಕಠಾರಿಯರ್ಭಕೋ ॥
ದರಿಯ ಕಿರೀಟಿಯಿಂದಿರೆಯ ವಹ್ನಿಯ ನಾಮಮನಾಂತು ವರ್ಧಿಪಾ ।
ತರುತತಿಯಿಂದೆ ರಂಜಿಸಿತು ಮೇರುತಟಸ್ಥವಿಶಾಲಕಾನನಂ ॥೨೧॥

ಶರಭ ಲುಲಾಯ ಖಡ್ಗ ಶಶ ಜಂಬುಕ ಸೂಕರ ಗೂಢಪಾದ ಬಂ ।
ಧುರ ಕರಿ ಪುಂಡರೀಕ ರುರು ಕೇಸರಿ ಋಕ್ಷ ಬಿಡಾಲ ವಾನರೋ ॥
ತ್ಕರ ವೃಕ ಸತ್ಕುರಂಗ ಚಮರೀಮೃಗ ಗಂಡಕ ಮುಖ್ಯವಾದ ಭೀ ।
ಕರಮೃಗಯೂಥನಿಸ್ವನದಿನೊಪ್ಪಿತು ತನ್ನಗಸಾನುಕಾನನಂ ॥೨೨॥

ಹರಿಪಾದಾಗ್ರವಿಭಿನ್ನಕುಂಜರಶಿರೋಮುಕ್ತಾರುಣೋದ್ಘೋರುಸಂ।
ಕರಮುಕ್ತಾಕಣಯೂಥ ತತ್ಕಟಗಳದ್ದಾನಾಂಬುಧಾರಾಳಿಯಿಂ ॥
ಧುರಪಂಕಪ್ರಗತಪ್ರದಾನಮೃಗಪಾದಾನ್ವೇಷಣಾಸಕ್ತಭೀ ।
ಕರದಸ್ಫೂರ್ತ್ಕಟಕರ್ಣಘೋರರವದಿಂದೊಪ್ಪಿತ್ತರಣ್ಯಸ್ಥಳಂ ॥೧೩॥

ಮಿಗಿಲಾಮೇರುಗಿರೀಂದ್ರದಕ್ಷಿಣದಿಶಾಭೂಭಾಗದೊಳ್ ದೇಶರಾ ।
ಜಿಗಳೊಳ್ ರತ್ನಮಿದೆಂಬಿನಂ ಮೆಱೆದುದಾಕರ್ಣಾಟದೇಶಂ ಮಹಾ ॥
ನಗರಗ್ರಾಮಮಡಂಬಖೇಟಕಸಮೂಹೋದ್ಭೂತಸೌಖ್ಯಾಳಿಯಿಂ ।
ಸೊಗಸಾಂತಿರ್ಪ ಜನಂಗಳಿಂ ವಿಲಸಿತಷ್ಟೈಶ್ವರ್ಯದಿಂದಾವಗಂ ॥೧೪॥

ಎಳೆವುಲ್ಲಂ ಮೇದು ಪಾನೀಯಮನುರೆ ಸವಿದುಂ ಮತ್ತೆ ಪೆರ್ಗೆಚ್ಚಲಿಂ ಭೂ । ತಳದೊಳ್ ಸಾಲಾಗಿರಲ್ ಪಾಲ್ಸರಿಗಜೆವ ಪಶುವ್ರಾತದಿಂ ಕ್ಷೋಣಿಮರ್ತ್ಯ ॥ ವಳಿಯುಂ ಮಾಳ್ಪಗ್ನಿಹೋತ್ರಂಗಳನೊಗೆವ ಹವಿರ್ಗಂಧಧೂಮಾಳಿಯಿಂ ಮಂ । ಜುಳಲಕ್ಷ್ಮ್ಯಾವಾಸಮೆಂದೆಂಬಿನಮೆಸೆದುದು ಕರ್ಣಾಟದೇಶಂ ಸತೋಷಂ ॥ ॥೧೫॥

ಧುನಿಯಿಂ ಕಲ್ಪನಗೋಪಮಾನತರುಸಂತಾನಂಗಳಿಂ ರಂಜಿಪಾ ।
ವನದಿಂ ಸೌರಭಪುಷ್ಪಸಮ್ಮಿಳಿತವಲ್ಲೀವ್ಯೂಹದಿಂ ಚೆಂದಳಿ ॥
ಸೊರ್ನೆಯಿಂದಿಂಪಿನ ನಾದಮಾಂತ ಕಳಕಂಠಶ್ರೇಣಿಯಿಂ ಹಂಸಚ ।
ಕ್ರನಿಕಾಯೋರುವಿಳಾಸಸಂಯುತತಟಾಕೋದ್ರಾಜಿಯಿಂದೊಪ್ಪುಗುಂ ॥

ಗಿಳಿಯಿಂ ಕೋಗಿಲೆಯಿಂ ತಬಾಕತತಿಯಿಂ ಪುಷ್ಪಾಳಿಯಿಂ ನಂದನಾ ।
ವಳಿಯಿಂ ಶೀತಳವಾರಿಯಿಂದನಿಲನಿಂ ಸತ್ರಂಗಳಿಂ ಮಾರ್ಗದಿಂ ॥
ಪೊಲಬಿಂ ಸತ್ಪ್ರಜೆಯಿಂ ಸುಗೋವ್ರಜದಿನುದ್ಯದ್ದ್ರವ್ಯಧಾನ್ಯಂಗಳಿಂ ।
ತೊಳಗುತ್ತಿರ್ದುದು ಸೀಮೆಯಿಂದೆಸೆದುದಾದೇಶಂ ಕರಂ ಚೆಲ್ವಿನಿಂ॥೧೭॥

ಅರಲಿಂ ಪಣ್ಣಿಂ ಲಸತ್ಪಲ್ಲವದಿನವನಿಜಂ ಮುಕ್ಕಳಿಂ ಭಾಗ್ಯದಿಂ ಭಾ ।
ಸುರಸೌಂದರ್ಯಾಂಗನಾಸತ್ಕೃತನಿಜಪತಿಸದ್ಭಕ್ತಿಯಿಂದಂ ಜನಂ ಬಂ ॥

ಧುರವಿಪ್ರವ್ರಾತಪೂಜಾತತಿಯಿನುರುಕಲಾವ್ಯಕ್ತಿಯಿಂ ದಾನದಿಂ ಭೂ ।
ಸುರಸಂತಾನಂ ವಿಳಾಸಂಬಡೆದು ಮೆಱೆವುದಾರಾಜ್ಯದೊಳ್ ಪೇತ್ವೈಸೇನಂ॥

ವಚನಂ॥ ಮತ್ತಮಾದೇಶಂ ಸಮುದ್ರದಂತೆ ಸದಾರವಿಭವೋಪೇತಮುಂ, ವನದಂತೆ ಭೂಜನಕುಲಾಶ್ರಯಮುಂ, ವೃಕ್ಷದಂತೆ ಸುಮನಃಪಲ್ಲವಪ್ರಮದಾಳಿಮಂಡಿತಮುಂ, ನಾಗಲೋಕದಂತೆ ಭೋಗಿಪವಿಳಾಸಮಿಳಿತಮುಂ, ನಾಕದಂತೆ ಸುರಾಗನಂದನಾಶ್ರಯಜನರಂಜಿತಮುಂ, ವ್ಯೋಮದಂತೆ ಘನಚಕ್ರರಾಜಹಂಸಮಂಡಲವಿರಾಜಿತಮುಮೆನಿಸಿರ್ದುದು. ಅಂತುಮಲ್ಲದೆಯುಂ ತದ್ದಕ್ಷಿಣದಿಗ್ಭಾಗದ ಪಶ್ಚಿಮರಂಗಕ್ಷೇತ್ರದ ಕಾವೇರೀನದಿಯೆಸೆದಿರ್ದುದದೆಂತೆಂದೊಡೆ:—

ಜಲಕೇಳ್ಯಾಸಕ್ತಮೋದಾಮರವರಲಲನಾಕುಂಭಿಕುಂಭೋರುವಕ್ಷೋ।
ಜ್ಜ್ವಲಸತ್ಕಾಶ್ಮೀರಗಂಧಾಗರುಮೃಗಮದಸೌರಭ್ಯಸಂಭ್ರಾಂತಭೃಂಗಾ ॥
ವಳಿಝುಂಕಾರಾತ್ತಗಾನೋತ್ಸವನಿಯುತತಟೋದ್ಯಾನಕಾಸಾರನವ್ಯೋ ।
ತ್ಪಲಪಂಕೇಜಾತಜಾತೀಕುಸುಮಪರಿಮಳೋದ್ಘಾತಮಂದಾನಿಲಾಂಕಂ॥

ನುತಕಾವೇರಿ ವಿರಾಜಿಸಿರ್ದುದು ಮರಾಳಕ್ರೀಡೆಯಿಂ ಚಕ್ರಸಂ ।
ತತಿಯಿಂದೂರ್ಮಿಕೆಯಿಂ ನಿಮಜ್ಜಿತಬುಧರ್ಗತ್ಯಂತಹೃತ್ಕಾಮ್ಯಸ ॥
ದ್ಗತಿಯಿತ್ತೋವುವ ಪೆರ್ಮೆಯಿಂದುಭಯತೀರಸ್ಥಾಗ್ರಹಾರಸ್ಥಿತಾ ।
ಮಿತವಿಪ್ರಸ್ತುತಿಘೋಷದಿಂ ಕಮಲಕಲ್ಹಾರಂಗಳಿಂ ಮೀನ್ಗಳಿಂ ॥೩೦॥

ವ॥ ಆನದಿಯಿರ್ತೆಱಂಬಿಡಿವು ಪರಿವ ಪರಿಕಾಲ್ಗಳಿಂ ರಂಜಿಸಿ ಬೆಳೆದ ನೆಲ್ಲ ಗರ್ದೆಗಳಿರ್ದುವದೆಂತೆನೆ:—

ತೂಗುತ್ತುರ್ವುತೆ ತೊನೆಯುತೆ ।
ಬಾಗುತೆ ಬಳ್ಕುತೆ ಗಂಧಮಾಂತುರೆ ಸೊಗಸಿಂ ॥
ರಾಗಿಸಿ ಪದುಳವ ಮನುಜ ।
ರ್ಗಾಗಿಸಿ ತೆನೆವಡೆದ ಶಾಲಿವನಮೆಸೆದಿರ್ಕುಂ ॥ ॥೩೧॥

ವರಕೀರಾವಳಿಚಂಚುಖಂಡನಗಳಚ್ಚೂತಕ್ಷಮಾರುಟ್ಫಲೋ ।
ತ್ಕರಜಂಬೂರಸದಾಡಿಮೇಕ್ಷುರಸಧಾರಾಸಾರದಿಂದುರ್ವಿ ಭಾ ॥

ಸುರವರಾಗಿರ್ದ ಸುಗಂಧಶಾಲಿವನದೊಳ್ ಕೀರಾಳಿಯಂ ಕಾವ ಪಾ ॥
ಮರಿಯರ್ ಪಾಂಥಜನರ್ಗೆ ಹರ್ಷದೊದವಂ ತರ್ಕುಂ ವಿಲಾಸಾನ್ವಿತಂ ।

ವ॥ ಅವರೊಳೊರ್ವ ಪಾಮರಿ ಗಿಳಿಯುಂ ಸೋವಲೆಂದು

ಸರಸಿಜಗುಣದಿಂದೇಱಿಸಿ ।
ವರಕೈರವನಾಳಧನುವನಂಬುಜಮುಖಿ ತಾ ॥
ನಿರದಾಱಡಿಮೀಂಟೆಯುನೊ ।
ತ್ತರಿಸಿಟ್ಟೋಡಿಸಿದಳಾದುರ್ ಶುಕಸಂತತಿಯಂ ॥ ॥೩೩॥

ಮತ್ತಮೊಂದೆಡೆಯೊಳ್

ಪಾಲ್ದಿನೆಯ ಸಾರ ದುಚಿಯನ ।
ದೊಲ್ದಿಂಟಯೆ ಸೊರ್ಕಿ ನಲಿದು ಸವಿನುಡಿಯಿಂದಂ ॥
ಕಾಲ್ದಿಗಸಲಾರ್ವ ವಧುಗಳ ।
ಬಲ್ದನಿಗಂಜದೆ ಶುಕಾಳಿ ಗರ್ದೆಯೊಳೆಸೆಗುಂ ॥ ॥೩೪॥

ಮತ್ತಮೊರ್ವ ಪಾಮರಿ

ಜಾಱೆ ಕುಚಾಂಬರಂ ಕುಣಿಯೆ ಕರ್ಣದೊಳೋಲೆ ಲಲಾಟದೊಳ್ ಕುರುಳ್
ಮೀಱಿಯೆ ನರ್ತಿಸಲ್ ನಡುಗೆ ನುಣ್ಮೊಲೆ ಬಳ್ಕೆ ಸುಮಧ್ಯಮುಂ ಕರಂ ॥
ಚಾರುನಿತಂಬಮುಂ ಪ್ರೊಡರೆ ನೂಪುರಕಂಕಣರಾವಮುಣ್ಮೆಯೊ ।
ಯ್ಯಾರದೊಳಟ್ಟಿ ಕೈರವದಿನೋಡಿಸಿದಳ್ ಮುದಕೀರವೃಂದಮಂ ॥೩೫॥

ವ॥ ಅಲ್ಲಿಂ ದಕ್ಷಿಣದಿಶೆಯ ಮಹಿಷಾಪುರದ ರಮಣೀಯ ಮಾರ್ಗಸ್ಥಲದೊಳ್

ಎಳಗೌಂಗೊಳ್ಗಂಬದಿಂದಂ ಕದಳಿಯ ತೊಲೆಯಿಂದಿಕ್ಷುದಂಡಂಗಳಿಂ ಕಂ।
ಗೊಳಿಸಿರ್ಪಾಜಂತೆಯಿಂ ಚೆಂದಳಿರ ಪ್ರೊದಕೆಯಿಂ ಮಲ್ಲಿಕಾಸೂನದಾಮಂ ॥
ಗಳನಾಪುಲ್ಲಾಬ್ಜಘಂಟಾವಳಿಯಿನಳಿರವ್ರೋಲ್ಲಾಸದಿಂ ರಮ್ಯಕಾಂತಾ ।
ವಿಳಸನ್ನೇತ್ರಾಂಶುವಿಂದೊಪ್ಪಿದುವು ವಿಗೆ ಪ್ರಪಾಶಾಲೆಗಳ್ ಸೌಖ್ಯದಿಂದಂ॥

ಅಪ್ರಪಾಶಾಲೆಯೊಳೊರ್ವ ಕಾಂತೆ

ಪೊಳೆವಕ್ಷಿದ್ಯುತಿ ಪೊಣ್ಮೆ ಕಂಕಣರವಂ ಕೈಗಣ್ಮೆ ದೇಹಾಂಶು ತಾಂ ।
ಪೊಳೆಯಲ್ ಸುಸ್ಮಿತಕಾಂತಿಯುಣ್ಮೆ ವದನಾಬ್ಜಂ ಮುದ್ದುವೀಱಲ್ ಬಹೂ
ಜ್ಜ್ವಳಭೂಷಾರುಚಿ ರಾಜಿಸಲ್ ಸ್ಫಟಿಕಪಾತ್ರಂವಾಳ್ದು ಹಸ್ತಾಬ್ಜದೊಳ್
ತಿಳನೀರಂ ಪಥಿಕರ್ಗೆ ನೀಡಿ ರಸಸಲ್ಲಾಪಂಗಳಿಂದೊಪ್ಪಿದಳ್ ॥ ೩೭॥

ಮತ್ತಮೊಂದು ಪಾನೀಯಶಾಲೆಯೊಳೊರ್ವಳ್

ಸ್ಫುರಿತಾಪಾದನಖಸ್ಮಿತಾಂಶುತತಿಯಿಂ ಸ್ವಚ್ಛತ್ವಮಂ ಮಾಡಿ ಭಾ ।
ಸುರನಾಸಾಶ್ವಸಿತಂಗಳಿಂ ಬಿಡದೆ ಶೈತ್ಯಂಗೈದು ಸೌರಭ್ಯಮಂ ॥
ವರದೇಹೋತ್ಥಸುಗಂಧದಿಂ ರಚಿಸಿ ಹಸ್ತಾಂಭೋಜದೊಳ್ ಸತ್ಸುಧಾ ।
ಕರಕಾಂತೋಜ್ಜ್ವಲಪಾತ್ರೆಯಂ ತಳೆದು ಪನ್ನೀರಿತ್ತಳಾನಂದದಿಂ ॥ ೩೮

ಮತ್ತೊಂದು ಪ್ರಪಾಶಾಲೆಯೊಳ್

ಕರಪುಟವಾರಿಬಿಂಬಿತವಧೂರುಚಿರಾಧರಮೀಕ್ಷಿಸುತ್ತೆ ತಾ ।
ಳ್ದುರುತರಹರ್ಷದಿಂ ಸವಿದು ಚಪ್ಪರಿದಂಗನೆಯೋಷ್ಠಸಾರಮಂ ॥
ದುರೆ ಮಱಸುತ್ತೆ ತಾಂ ತಣಿವನೈದದೆ ತೇಲಿಸಿ ಕಣ್ಗಳಂ ಪಥಾಂ ।
ತರದ ಬಟಿಲ್ಕೆಯುಂ ಕಳೆಯುತಿರ್ದನಪೇಕ್ಷೆಯೊಳೊರ್ವ ಮಾರ್ಗಿಕಂ ॥

ಇಂತೊಪ್ಪುವೆತ್ತ ಪ್ರಪಾಶಾಲೆಯ ಮುಂಗಡೆಯ ಪುರಮಾರ್ಗದೊಳ್

ಚಾರುಸುವರ್ಣವಾರಿಪರಿಪೂರಿತಕುಂಭಮನೈದೆ ಪೊತ್ತು ಸಂ ।
ಚಾರಿಪ ಕಾಮಿನೀಕುಚಗಳನ್ಮೃಗನಾಭಿಸುಗಂಧಸಾರಕಾ ॥
ಶ್ಮೀರರಜಂಗಳಂ ಬಿಡದೆ ಮಾರ್ಗದೊಳಾನೆಗಳೊಲ್ದು ಚೆಲ್ಲಿ ಕೊಂ ।
ಡಾರಯೆ ಗಂಧಹಸ್ತಿತತಿಯಾದುವು ಪೇಳ್ವೆನದೇನನದ್ಭುತಂ ॥ ೪೦॥

ಅಂತುಮಲ್ಲದೆಯುಂ ಸುರುಚಿರಮಾದ ಭೂಸತಿಯ ಮುಖಾಬ್ಜದಂತೆ ಮೆಱೆವ ಮಹಿಷಾಪುರಮಂ ವರ್ಣಿಪೆನದೆಂತೆನೆ:—

ಭೂಮಿಯ ಸಂಪದಂಗಳನಭೀಕ್ಷಿಪೆವೆಂದೊಡನೈದೆ ಬಂದು ಸು ।
ಪ್ರೇಮದೆ ನೋಳ್ಪ ನಾಗಸುದತೀಜನದಕ್ಷಿಯ ಕಾಂತಿಯೊಳ್ ಪುಷ ॥

ಸ್ತೋಮದನುಸ್ಫೂರ್ಗರ್ ಮೆಱೆದುದೊಪ್ಪುವ ತತ್ಪರಿಖಾಂಬುಮಧ್ಯದೊಳ್
ಶ್ರೀಮದಿಳಾತಳಕ್ಕಧಿಕವಾದುದು ತನ್ಮಹಿಷಾಪುರೇಶ್ಯಮುಂ ॥ ೪೧॥

ಸಸಿನೀಪತ್ತನಮಧ್ಯದಲ್ಲಿ ಹರಿ ಲಕ್ಷ್ಮೀಯುಕ್ತನಾಗಿರ್ಪನೆಂ ।
ದೊಸೆದಾವಾಸುಕಿ ನಾಗಲೋಕದಿನಿಳಾಭಾಗಕ್ಕೆ ಸಾರ್ತಂದು ತ ॥
ನ್ನ ಸಹಸ್ರೋರುಫಣಂಗಳಂ ಬಿಡದೆ ತಾಂ ವೇಷ್ಟಿಸಿ ನೋಳ್ಪಂತೆ ಕ ।
ಣ್ಗೆಸೆದತ್ತಾಪುರದಲ್ಲಿ ರನ್ನದೆನೆಗಳ್ ಸುತ್ತಲ್ ವಲಂ ಚೆಲ್ವಿನಿಂ ॥೪೨॥

ಚಾರುಸುವರ್ಣಕಾಂತಿ ಮಿಱುಗುತ್ತಿಹ ಕೋಟೆಯಿಸಿಂದುಕಾಂತದಾ ।
ಳ್ವೀರಿಯಿನೊಪ್ಪುವೆತ್ತ ಮುಗಿಲಟ್ಟಳೆಯಿಂ ಕನಕಧ್ವಜಂಗಳಿಂ ॥
ವೀರಭಟಾಳಿಯಿಂದಿಭಸಮೂಹತುರಂಗನಿಕಾಯದಿಂ ಲಸೆ ।
ದ್ದ್ವಾರದ ಹೇಮಸೌಧರುಚಿಯಿಂ ಮಿಗೆ ರಂಜಿಸಿದತ್ತು ತತ್ಪುರಂ ॥೪೩॥

ಪುರವಧು ತನ್ನೊಳಿರ್ಪ ನರರೆಲ್ಲರತೀವವಿಭೂತಿಯುಕ್ತರೀ ।
ಧರೆಯೊಳಗಾರಿವರ್ಗೆ ಸರಿಯುಂಟೆನುತೊಲ್ದುರೆ ನಕ್ಕು ಹಿಗ್ಗುವಂ ॥
ತಿರೆ ಕಮನೀಯ ಸೌಧತತಿಕಾಂತಿ ವಿರಾಜಿಕುಮಲ್ಲದಂಶುವಾ ।
ನರಪತಿಕೀರ್ತಿಯಾವರಿಸಿ ಪರ್ವಿದ ಮಾಳ್ಕೆಯೆನಲ್ ವಿರಾಜಿಕುಂ ॥ ೪೪॥

ಮಿಱುಗುವ ಸೌಧರೋಚಿ ನವಚಂದ್ರಿಕೆಯಂತೆ ತದಗ್ರಪದ್ಮರಾ ।
ಗರುಚಿರಕಾಂತಿ ಸಂಜೆಯೆನೆ ತತ್ಕಲಶಾವಳಿಕಾಂಚನಪ್ರಭೋ ॥
ತ್ಕರಮದು ಪೊಂಬಿಸಿಲ್ಗರೆ ಪರಿವ್ರೆಲಾಗೆ ತ್ರಿಕಾಲಮುಮಾಪುರಾಂತದೊಳ್ ।
ಸ್ಫುರಿಸೆ ವಿಕಾಸಮಾಂತೆಸಗುಮುತ್ಪಲಪಂಕರುಹಂಗಳಾವಗಂ ॥೪೫॥

ನೃಪಸೇವಾರ್ಥದೆ ಬಂದ ಭೂಪತಿಪದಾಲಂಕಾರರತ್ನಾಂಶುವಿಂ ।
ದ್ವಿಪದಾನಾಂಬುನಿತಾಂತಸಂಭ್ರಮಿತಭೃಂಗವ್ಯೂಹಝಂಕಾರದಿಂ ॥
ವಿಪುಲಾಗಾರವಿಹಾರವಾರವನಿತಾದೇಹೋತ್ಥಗಂಧಾಳಿಚೋ ।
ರಪವಿತ್ರಾನಿಲನಿಂದೆ ರಂಜಿಸುಗುಮಾಗ್ರಾಮಾಂತವೀಥಿಗಳ್ ॥ ॥೪೬॥

ಅಲ್ಲಿಯುಂ,

ಮುನಿದಿಹ ಕಾಂತೆಯಾಲಯಕೆ ಮೆಲ್ಲನೆ ಪೋಗಿ ವಿಲಾಸಮಾಂತು ಗ ।
ಬ್ಬನೆ ನಲಿದೀಯಲೀಲಲಿತವೀಟಿಕೆಯಂ ಸವಿನೋಡಿದಾಕ್ಷಣಂ ॥
ಮನದೊಲವಿಂದೆ ಕೋಪಮನೆ ಬಿಟ್ಟು ವಿನೋದದಿನಪ್ಪಿ ಚುಂಬಿಪಳ್ ।
ವಿನಯದೆ ನೋಡಿಮೆಂದು ಸಿತಪರ್ಣಮನಾಂತೆಸೆದರ್ ಪರಾಂಗಿಯರ್ ॥

ಆಮುಂಗಡೆಯೊಳ್

ಚಂದನಕುಂಕುಮಾಗುರುಮೃಗೋದ್ಭವಸದ್ಘನಸಾರಸಾರಮಂ ।
ಸಂದಿಸಿ ಚಂದ್ರಕಾಂತಶಿಲೆಯೊಳ್ ಮಿಗೆ ತೇದುರೆ ಗಟ್ಟಸುತ್ತಿಹರ್ ॥
ಮಂದಸುಹಾಸದಿಂ ವಿಟಜನಗಿರ್ರಜಿತ್ತು ತದೀಯನೇತ್ರಕಾ ।
ನಂದದ ರೂಪುದೋಱಿಸುತೆ ರಂಜಿಸಿದರ್ ವರಗಂಧವಾಟಿಯೊಳ್ ॥ ೪೮ ॥

ನಿಜದೇಹೋದ್ಭವಗಂಧದಿಂ ಪೊರೆದು ವಕ್ತ್ರಾಂಭೋಜಸುಸ್ಮೇರದಿಂ
ಸೃಜಿಸುತ್ತುಂ ಮಿಗೆ ಸೊಂಪಿನಬ್ಜಗುಣದಿಂ ಮಾಲಾಳಿಯಂ ಗೈದು ಪಂ ॥
ಕಜಪತ್ರಾಂಬಕಿಯರ್ ಭುಜಂಗನಿವಹಕ್ಕೊಲ್ದಿತ್ತು ಸಂತೋಷದಿಂ ।
ಸುಜನಾವಾಸವಿಲಾಸಯುಕ್ತಮಹಿಷಗ್ರಾಮಾಢ್ಯದೊಳ್ ರಾಜಿಕುಂ ॥

ಪೊಂಗಳ ರಾಸಿಯಿಂ ವರದುಕೂಲನಿಕಾಯದ ರತ್ನಯೂಥದಿಂ ।
ಮಂಗಳವಾದ ವಿದ್ರುಮಸಮೂಹದೆ ಕಾಂಚನಪಾತ್ರವೃಂದದಿಂ ॥
ಸಿಂಗರಮಾದ ಚಾರುಮಣಿತೋರಣದಿಂ ಗಣಿಕಾಲಯಂಗಳಿಂ ।
ದಂಗಡಿಬೀದಿಯೊಪ್ಪಿದುದು ಭೂವರಪುತ್ರರ ಜೂದಿನೇಳ್ಗೆಯಿಂ ॥ ೫೦ ॥

ವರಸೌಧಾಗ್ರಮನೋಜಕೇಳಿವಿಸತ್ಕಾಂತಾಂಗಸೌರಭ್ಯಮಾಂ ।
ತುರುಹಸ್ತಿವ್ರಜದಾನಗಂಧರುಚಿಯುಂಡುತ್ಸಾಹದಿಂ ಮಾಂದುಪು ।
ಷ್ಪರಸಂಗೊಂಡುರೆ ಸೊರ್ಕಿ ಝುಂಕರಿಪ ರೋಲಂಬಾಳಿಯಿಂ ರಾಜಿಕುಂ
ತರಣೀಂದುಸ್ಫುಟವೀಧಿಯಿಂ ಯುವಜನಾಪಾಂಗಪ್ರಭಾಭಾಸುರಂ ॥ ೫೧ ॥

ಇಂತು ಮೆಱೆವ ಪುರಮಧ್ಯದೊಳ್

ಪುರಲಕ್ಷ್ಮೀಕನಕಾಬ್ಜಕರ್ಣಿಕೆಯೆನಲ್ ಸ್ವರ್ಣಾರ್ಗಳರತ್ನಾಂಶುಭಾ ।
ಸುರಸೌಧಪ್ರಭೆಯಿಂದೆ ಹೇಮರಚಿತಪ್ರಾಕಾರದಿಂ ಮಾಧುರೀ ॥

ಸುರವಂಗೈವ ಕಪೋತಸಂತತಿಯಿನುದ್ಯತ್ಸ್ತಂಭಸುಶ್ರೇಣಿಯಿಂ ।
ಧರಣೀಂದ್ರಾಲಯವೊಪ್ಪಿದತ್ತು ಶತಭಾಸ್ವತ್ತೇಜದಿಂ ಚೆಲ್ವಿನಿಂ ॥ ೫೦

ನೀಲದ ಲೋವೆ ಪಚ್ಚೆಯ ಸುವೇದಿಕೆ ವಜ್ರದ ಕಂಭವಿಂದುಕಾಂ ।
ತಾಲಿಯ ಭಿತ್ತಿ ವಿದ್ರುಮದ ಜಂತೆ ಸುವರ್ಣಕವಾಟವಿರಾಜಿಸಲ್ ॥
ಮೇಲಪ ಪುಷ್ಯರಾಗದುರುಗೇಹಳ ಮೌಕ್ತಿಕಸದ್ವಿಟಂಕವುಂ ।
ಮಾಲಿಕೆ ಮಾಣಿಕಂಗಳ ವಿಳಾಸದ ಹರ್ಮ್ಯಮದೊಪ್ಪುಗುಂ ವಲಂ ॥ ೫೩

ಆನಗರಿಯೊಳತಿರಮ್ಯನ ।
ವೀನಾಂಗಜರೂಪನಾದ ಚಿಕದೇವಧರಾ ॥
ಮಾನಿನಿಯುರಸಂ ಬುಧತತಿ ।
ಗಾನಂದಮನೀಯುತೊಪ್ಪಿದಂ ಮುದದಿಂದಂ ॥ ॥ ೫೪ ॥

ಶ್ರೀರಮೆಯೆಂಬ ಕಲ್ಪಲತೆಯೊಪ್ಪುಗುಮುನ್ನತಶೌರ್ಯಶಾಲಿಪ್ರ ।
ಥ್ವೀರಮಣಾಳವರ್ಯ ಚಿಕದೇವಮಹೀಶನ ಗೇಹದಲ್ಲಿ ವಿ ॥
ಸ್ತಾರನಿಜೋಲ್ಲಸತ್ಪ್ರಸದನಾಮಿತಪುಷ್ಪವಿರಾಜಿತಂ ಸಿತಾಂ ।
ಭೋರುಹನೇತ್ರಕಲ್ಪಕಯುತಂ ಪುರುಷಾರ್ಥಫಲಾಳಿದಾಯಕಂ ॥ ೫೫ ॥

ಆನರಪಾಲನ ವಂಶಮ ।
ನಾನುಸಿರ್ವೆಂ ಬಲ್ಲ ತೆಱದೆ ಹೃದಬ್ಜಾಂಬುಜದೊಳ್ ॥
ಜಾನಿಸಿ ಗೋಪಾಲನ ಚರ ।
ಣಾನುಪಮಾಂಭೋಜಮಂ ಬುಧಾಳ್ಯನುಮತಿಯಿಂ ॥ ॥ ೫೬ ॥

ಅದೆಂತೆಂದೊಡೆ—

ಶ್ರೀಶಜನಪಾರಿಜಾತಸುರರಾಜಕುಲಾಬ್ಧಿಮನಬ್ಜಜಾಂದಸಂ ।
ಕ್ಷತಿಪರಿರಕ್ಷಣಾತಿಪಟುಶಾಸನಶಕ್ತಿಸಮನ್ವಿತಂ ರಮಾ ।
ಪತಿ ಸುರಮೌಳಿಕೋಟಿಮಣಿದೀಪವಿರಾಜಿತಪಾದಪಂಕಜಂ ।
ಕ್ಷಿತಿಕಮಲಾನನಾಬ್ಜಮಕರಂದಮಧುವ್ರತನಾದನಾದಿಯೊಳ್ ॥ ॥ ೫೭ ॥

ವರನಾರಾಯಣನಾಭಿಯಂಬುಜದಿನಾವಿರ್ಭೂತನಾದಂ ಲಸ ।
ತ್ಸರಸೀಜಾಸನನಾತ್ಮಸನ್ನಿಭಕುಮಾರಂ ಸತ್ಪ್ರಪಂಚೋದಯಂ ॥
ತರದಿಂದೊಪ್ಪುವ ಲೋಕಚೇಷ್ಟೆಯದು ತಾನಾರಿಂದಮುದ್ಭಾವಿಕುಂ ।
ಸ್ಫುರಿತಾಸ್ಯಾಬ್ಜಚತುಷ್ಟಯಂ ವಿಧಿಯುಮತ್ರ್ಯಾಗಾರಾಧ್ಯಪಾದಾಂಬುಜಂ ॥

ಸಾರಸಯೋನಿಗರ್ಭಧರೆಯೊಳ್ ಮುನಿಸಂತತಿಗೇಯಮಾನನು ।
ವೀರರಮಣಾಳಿಯುದ್ಭವದವನೀತ್ರಿದಶರ್ಕಳ ಮೂಲಕಂದಮೆಂ ॥
ಬಾರಮಣೀಯಪುಣ್ಯಯಶನುದ್ಭವಿಸಿರ್ದನುದಾರನತ್ರಿ ತಾಂ ।
ಭೂರಿವನಪ್ರಜೇಶತಿಲಕಂ ನಿಜಗೋತ್ರಜಭೂಪಸೇವಿತಂ ॥೪೯॥

ಇಂದು ಸುಧಾಮಯೂಖನುರುಲೋಕವಿಲೋಕನಭಾಗ್ಯಭೂಮನಾ ।
ನಂದಕರಂ ಲಸದ್ಭಗಣವೇಷ್ಟಿತನತ್ರಿಮುನೀಶ್ವರಾಕ್ಷಿಯೊಳ್ ॥
ನುದನನಾಗಿ ಪುಟ್ಟಿಯತಿರಂಜನದಿಂದಮೆ ರಾಜನಾಗಿ ತಾ ।
ನೊಂದಿ ಸಮಸ್ತವಿಪ್ರತತಿರಾಜತೆಯಂ ದ್ವಿಜರಾಜನೊಪ್ಪಿದಂ ॥೫೦॥

ಆಕುಮುದೇಶ್ವರಂಗೆ ಬುಧನೆಂದೆನಿಪಾತ್ಮಜನಾದನೊಪ್ಪೆ ವಿ ।
ದ್ಯಾಕಲೆಗಾದಿಕಾರಣನದಾಗಿ ವಿಳಾಸದಿನೂಹಿಸಲ್ ಸದಾ ॥
ಲೋಕನಸೂಚ್ಚಸಂಸ್ಥಿತಿಯ ಲಾಲನೆಯಿಂ ಚಿಕದೇವರಾಯನಂ ।
ತಾಕೃತಿವೆತ್ತು ರಾಜಕುಲಭೂಷಣನಾಗಿ ಸಮಂತು ರಾಜಿಕುಂ ॥೫೧॥

ಆತನ ಗರ್ಭದೊಳ್ ವರಪುರೂರವನೆಂಬ ತನೂಜನಾದನಂ ।
ತಾತನ ಭೋಗಮೇ ತನುತೆಯಂ ಪಡೆದಂತೆ ಸುರಾಂಗನಾಳವಿ ॥
ಖ್ಯಾತೆ ವರಾಂಗಿಯೂರ್ವಶಿಯೊಳಾಯುವೆನಿಪ್ಪ ಕುಮಾರನಾದನಂ ।
ತಾತನ ಪುಣ್ಯಮುದ್ಭವಿಸಿದಂತೆ ಲಸನ್ನಹುಷಾಖ್ಯನೊಪ್ಪಿದಂ ॥೫೨॥

ಮುಖಶತಕಂಗಳಂ ಪಡೆದು ನಿರ್ಜರಸಂತತಿಯಾಧಿಪತ್ಯಮಂ ।
ಸುಖಮುಖದಿಂದಮಿರ್ದ ನಹುಷಕ್ಷಿತಿನಾಥನ ಗರ್ಭವಾರ್ಧಿಯೊಳ್ ॥
ನಿಖಿಲಕಲಾನ್ವಿತಂ ಕುವಲಯಾಧಿಪನೂರ್ಜಿತಕಾಂತಿಶೋಭಿ ಸ ।
ರ್ವಖಲಜನಾಂಧಕಾರಹರನಿಂದುವಿನಂತೆ ಯಯಾತಿ ಪುಟ್ಟಿದಂ ॥೫೩॥

ಅನತರಪಾಲಮೌಳಿಮಣಿಗಾತ್ಮಜರಾದರವರ್ಗಳೈವರು ।
ವೀರ್ನುತಸಚ್ಚರಿತ್ರರನು ತುರ್ವಸು ದೃಹ್ಯ ಯದೂರ್ವರೀಶಸ ॥
ತ್ವಾನುವಿಲಾಸಿ ಪೂರುವೆನಿಪಾಕಮನೀಯಯಶಸ್ವಿಗಳ್ ಪ್ರತಿ ।
ಷ್ಠಾನಪುರಾಖ್ಯದಲ್ಲಿ ನೆಲಸಿರ್ದರುದಾರಗುಣಾಳಿಮಂಡಿತರ್ ॥ ೬೪ ॥

ಪಡೆದವರಲ್ಲಿ ಜ್ಯೇಷ್ಠತನುಜಂ ಬಹುಶೌರ್ಯಯುತಂ ವರಪ್ರತಾ ।
ಪದ ನಿಧಿ ಚಾರುಕೀರ್ತಿವರಚಂದ್ರಿಕೆಯಿಂ ಬೆಳಗುತ್ತೆ ಲೋಕಮಂ ॥
ಯದುವಸುಧಾಧಿಪಂ ಚತುರನುದ್ಧೃತವೈರಿ ಸಮಸ್ತಸಂಪದಂ ।
ಪಮುಳಮನಾಂತು ರಂಜಿಸಿದನೊಪ್ಪುಮನ್ಯದಿ ಕುಲಾತಿಭೂಷಣಂ ॥ ೬೫ ॥

ಯಾದವವಂಶಜಾತರವನೀಂದ್ರರತೀವಯಶೋಧನರ್ ಸದಾ ।
ಭೂದಿವಿಜಾಳಿಪೋಷಣರತರ್ ಬಹುಶೌರ್ಯಕಳಾಧುರಂಧರರ್ ॥
ವೇದಪಥಾನುವರ್ತಿಗಳನಂತಪರಾಕ್ರಮರಾಯುವಂತರಂ ।
ತಾದರುದಾರಿಗಳ್ ಮಧುರೆಯೊಳ್ ಪರಿಪಂಥಿನೃಪಾಲಮರ್ದನರ್ ॥ ೬೬ ॥

ಆಯದುವಂಶಕಲ್ಪತರುಬೀಜಮೆ ತಾನೆನೆ ನಂದಕಂದನ ।
ಬ್ಜಾಯತಲೋಚನಂ ಶಕಟಧೇನುಕಕಾಳಿಯಪೂತನಾದಿದು ॥
ರ್ಜೇಯಧರಾತಿಭಾರಖಲರಂ ಮಿಗೆ ಭಂಜಿಸಿ ಸಚ್ಚರಿತ್ರಮಂ ।
ಶ್ರೀಯುವನಾಶ್ರಿತಪ್ರತತಿಗಾಗಿಸಿ ಕೃಷ್ಣನೆನಿಪ್ಪ ನಾಮದಿಂ ॥ ೬೭ ॥

ಆವನ ಪಾವನಾಮಲಚರಿತ್ರಮನೊರ್ವನೆ ವರ್ಣಿಸಲ್ಕೆ ಸ ।
ದ್ಭಾವನನಾಗಮಪ್ರತತಿಕೋವಿದನೂರ್ಜಿತಪುಣ್ಯಮೂರ್ತಿ ವೇ ॥
ದಾವಳಿಕಲ್ಪಭೂಜಫಲದುನ್ನತಸಾರರುಚಿಜ್ಞನಾವನು ।
ವೀರ್ವರಬೋಧನೈಕಮತಿ ಬಲ್ಲನವಂ ಶುಕಯೋಗಿಮೌನಿಪಂ ॥ ೬೮ ॥

ಪರಮದಯಾಳು ಕೇಳಿಗುಣಲೋಲುಪನಚ್ಯುತನಿಂದಿರಾವರಂ ।
ಪರಿಕಿಸಿ ಕೋಟಿಪುತ್ರರೊಡಗೂಡಿ ವಿನೋದದೆ ದುಷ್ಟದೈತ್ಯಸಂ ॥
ಹರಣಮನಾಗೆಮಾಡಿ ಸುಜನಾಳಿಗೆ ಹರ್ಷಮನಿತ್ತು ನಿರ್ಜರೊ ।
ತ್ಕರಕೃತಿತುಷ್ಟಿಯಿಂ ನಲಿಸಿ ರಂಜಿಸಿದಂ ಪರಮೇಷ್ಠಿವಂದಿತಂ ॥ ೬೯ ॥

ವಾರಿಜನೇತ್ರನೊರ್ವ ಕುಲವರ್ಧನನಾಗಲಿಪೇಳ್ವಿಕ್ಕುವೋದು ತ್ವ।
ದ್ವಾರಕೆಯೆಂಬ ತನ್ನ ಪುರಮಂ ಜಳರಾಶಿಗೊಳ್ಳಾಱಸಂದು ಸು ॥
ಸ್ಮೇರಮುಖಾಂಬುಜಂ ಪಡೆದು ವಾಕ್ಯಮನಾಡಿದನೊಂದನೈದೆ ದೈ ।
ತ್ಯಾರಿಸನಾತನಂ ಕರೆದು ತನ್ನ ವಿರಾಜಿಪ ಯೋಗಮಾಯೆಯಂ ॥ ೨೦॥

ತೆಂಗಿ ಮದೀಯವಂಶಜನ ದೇವನನಾಡಿಯೊಳೊಯ್ದು ಯಾದವೋ ।
ತ್ತುಂಗಧರಾಗ್ರದಲ್ಲಿರಿಸಿದಂ ಸನಕಾಖ್ಯಮಹಾಮುನೀಶ್ವರಂ ॥
ಕಂಗೊಳಿಪಂತೆ ರುಕ್ಮಿಣಿಯ ಸಂತತಿಯಂ ಪರಿಪಾಲಿಸೀಗಳೆಂ ।
ದಿಂಗಿತದಿಂದೆ ನೀನವರ ಕಾಮ್ಯವನಿತ್ತು ಮನೋನುರಾಗದಿಂ ॥೨೧॥

ಜಿತದೈತ್ಯಂ ಪೇಳ್ದ ಮಾತಂ ಸ್ಫುರಿತಕರುಣೆ ಕೇಳ್ದಾಗಲೇ ಪ್ರೀತಿವ
ಟ್ಟಾ । ಕ್ಷಿತಿಯೊಳ್ ಕರ್ಣಾಟದೇಶಾಧಿಕಮಹಿಷಪ್ರದಕ್ಷಾದ್ರಿದೊಳ್ ತಾ
ನೆ ಬಂದಿ ॥ ದುರ್ಗ ತ್ತಜೀಯಕ್ಷ್ಮಾಧಿನಾಥರ್ಕಳಸಿಭರಿಪ್ರಪೀಠಸ್ಥಿರಂ ಮಾಡಿ
ದುರ್ಗಾ । ಸತಿ ತದ್ರಕ್ಷಾರ್ಥಮಿರ್ಪಳ್ ಮಹಿಷದನುಜಹೃಚ್ಛಲ್ಯಯಾ
ನಂದದಿಂದಂ ॥ ॥೨೨॥

ವರದಂ ನಾರಾಯಣಂ ಯಾದವನೃಪನಿವಹಾರಾಧ್ಯಪಾದಾಂಬುಜಂ
ಭಾಸುರದಿವ್ಯಾಂಗಂ ಲಸದ್ಯಾದವಗಿರಿಯೊಳೆ ತಾನಿರ್ಪನುತ್ತೊಂದಿ ದೇ
ವ್ರೋ ॥ ತ್ಕರಹೃತ್ಪದ್ಮಸ್ಥ ಕೃಷ್ಣಾನುಜೆ ವಿಲಸಿತಚಾಮುಂಡಿಕಾನಾಮ
ಮಂ ತಾ । ಳ್ದುರುಕಾರುಣ್ಯಾಂಗಿಯಿರ್ಪಳ್ ಮಹಿಷಪುರಮಹಾಗ್ರಾಮ
ದೊಳ್ ಸ್ಥೈರ್ಯದಿಂದಂ ॥ ॥೨೩॥

ವನಜಾತಾಕ್ಷಮಣಿಸ್ಫುರನ್ಮುಕುಟಮಂ ಕೊಂಡುಯ್ಯಲಾಗಳ್ ವಿರೋ।
ಚನದೈತ್ಯಂ ತರಲಂತದಂ ಖಗವರಂ ಸೀಳ್ದಿಕ್ಕಿ ಯಾದ್ರೈತ್ತನಂ ॥
ಘನಕೋಟೀರವನೈದೆ ಕೊಂಡು ಬರುತುಂ ಗೋಮಂತಶೈಲಾಗ್ರದೊಳ್।
ಮನವೊಲ್ದೀಕ್ಷಿಸಿ ಕೃಷ್ಣನಂ ಹರಿಯು ತಾನಂದಿತ್ತ ನಾಮಾಳಯಂ ॥

ಅನವರತ್ನರಂಜಿತಕಿರೀಟಮನಾವ್ರಜಭಾಮಿನೀಪ್ರಿಯಂ ।
ಜಾನಿಸಿ ನೈಜವಂಶಜನವೇವತೆಯಾಗಿಹ ಯಾದವಾಚಲ ॥

ಸ್ಥಾನನಿವಾಸಿಗಿತ್ತನದುಕಾರಣಮಿಂಗಳತೀವಕಾಂತಿಯಿಂ ।
ಭಾನುವಿನಂತೆ ವೈರಮುಡಿಯೆಂಬ ಶುಭಾಖ್ಯಮನಾಂತು ರಂಜಿಕುಂ॥ ೨೫

ಮೊದಲೊಳ್ ಶ್ರೀದೇವಕೀಗರ್ಭದೊಳಿಪ್ಪ ಬಲನಂ ತಂದು ತಾಂ ರೋ
ಹಿಣೀಗ । ರ್ಭದೊಳಂತಾಯೋಗಮಾಯಾಸತಿಯಿರಿಸಿದಳಂತಾಯದು
ಕ್ಷ್ಮೇಂದ್ರವಂಶಾ ॥ ಸ್ಪದಪೃಥ್ವೀನಾಥರಂ ದ್ವಾರಕೆಯಿನತಿದಯಾಪಾಂಗೆ
ಚಾಮುಂಡಿ ತಂದು । ನ್ಮುದದಿಂದಂ ಸ್ಥಾಪನಂಗೆಯ್ದಳನಘ ಮಹಿಷಗ್ರಾ
ಮದೊಳ್ ವರ್ಧಿಸುತ್ತುಂ ॥ ॥೨೬॥

ಮಿಗೆ ಭಕ್ತ್ಯುನ್ನತಿಯಿಂ ಹೃದಂಬುಜದೊಳಾಚಾಮುಂಡಿಕಾದೇವಿಯಂ।
ನಗುತುಂ ಧ್ಯಾನಿಸಿ ತತ್ಪದಾಂಬುಜಮನಂತಾರಾಧನಂಗೆಯ್ಯುತುಂ ॥
ಮೃಗರಾಜೋರುಪರಾಕ್ರಮರ್ ಶಶಿಕುಲೋತ್ತಂಸರ್ ಜನಾನಂದಕರ್ ।
ಸುಗುಣರ್ ಯಾದವವಂಶಸಾರಸದಿನೇಶರ್ ಶೋಭಿಸಿರ್ದರ್ ನೃಪರ್ ॥೨೭॥

ಚಿರಕಾಲಂ ಶಶಿವಂಶಮಿರ್ದುದು ಮುದಂಬೆತ್ತಾಪ್ರತಿಷ್ಠಾನದೊಳ್ ।
ಪರಿಪ್ರಾಪ್ತೋರ್ಜಿತ್ಸವಮಾಂತು ಸನ್ಮಧುರೆಗಂ ಬಂದಾಬಳಿಕ್ಕೈಮ್ರದಿಯೊ ॥
ಪ್ಪಿರಲಾದ್ವಾರಕಿಯೆಂಬ ಪತ್ತನಮನುದ್ಯತ್ಸೌಖ್ಯಮಾಂತಿರ್ದು ಬಂ ।
ಧುರಕರ್ಣಾಟಕದೇಶಮಂ ಕ್ರಮದೆ ಸೇರಿತ್ತುನ್ನತಾನಂದದಿಂ ॥೨೮॥

ಕುಮುದಾಪತ್ಯನ್ವಯದಲ್ಲಿ ಗರ್ವಿತರಿಪೂರ್ವೀಶಂದ್ರೋತ್ತಮಾಂಗಸ್ಫುರ
ತ್ಕಮನೀಯಾಮಿತ್ರಮೌಳಿರತ್ನರುಚಿಸಂಘಾಪಾದ್ಯಾಂಘ್ರಿಪದ್ಮಂ ಲಸ ॥
ತ್ಸುಮನೋಭೂರುಹಮಧ್ಯದೊಳ್ ಮೆಱೆವಂತಾಪಾರಿಜಾತಂ ಧರಾ ।
ರಮಣಂ ಬೆಟ್ಟದಚಾಮರಾಜನುರುಸೌಂದರ್ಯಾಲಯಂ ಪುಟ್ಟಿದಂ ॥ ೨೯॥

ಆನೃಪಚಕ್ರವರ್ತಿಗೆ ತನೂಭವರಾದನೂನಮಾದ ವೈ ।
ತಾನಧನಂಜಯತ್ರಯವಿಭಾಸಿತಕಾಂತಿವಿಲಾಸಮೂರ್ತಿಗಳ್ ॥
ಸೂನಶರೋಪಮರ್ ಪಿರಿಯನಂತವರೊಳ್ ಮತಿಮ್ಮರಾಜನು ।
ವೀರನುತಕೃಷ್ಣರಾಜನುರುಚಾಮನೃಪಂ ನಲಿ ಮೂವರುಂತವರ್ ।

ಅರಿಭೂಪವ್ರಜಮಂ ವಿದಾರಿಪ ಮಹಾಖಡ್ಗಾಂಬುಧಾರಾಳಿಯೊಳ್ ।
ನಿರುತಂ ವಾರಿವಿನೋದಕೇಳಿಯೆಸಗುತ್ತಿರ್ಪಂತೆ ಮಾಳ್ಪಂ ಸ್ಫುರ ॥
ದ್ವರರಾಜ್ಯೇಂದಿರೆಯುಂ ಪ್ರತಾಪಮಹಿತಂ ಕೀರ್ತ್ಯೂರ್ಜ್ಜ್ವಲಂ ಸಂಪದು।
ದ್ಧುರಿತಂ ರಂಜಿಸಿದಂ ಕರಂ ಧರಣಿಯೊಳ್ ಶ್ರೀತಿಮ್ಮರಾಜಾಧಿಪಂ ॥೮೧॥

ಬಿರುದೆಂತೆಂಬರ ಗಂಡನೆಂದೆನಿಪ ರಾಜಂ ನಾಮಮಂ ತಾಳ್ದು ಭೂ ।
ಸುರಭೂಮೀಶ್ವರ ತಿಮ್ಮರಾಜನುರುಶೌರ್ಯೋನ್ನತ್ಯಮಂ ಕೇಳ್ದು ತಾಂ॥
ಪರಿಪಂಥಿವ್ರಜಮಂತೆ ಕಂಪನಮನಾಂತಿರ್ದಂಜಿದಂತಾಗಳು ।
ಚ್ಚರಿಸಲ್ ಬಣ್ಣಿಸಲಾರ್ಗೆ ಶಕ್ಯಮವನುದ್ಯಚ್ಛೌರ್ಯಧೈರ್ಯಾಂಗವಂ ॥

ನುತತೇಜಸ್ವಿಸಮೂಹದೊಳ್ ಮೊದಲಿಗಂ ಶ್ರೀತಿಮ್ಮರಾಜಕ್ಷಮಾ ।
ಪತಿಯುಂ ತತ್ಸಹಜಾತ ಚಾಮಜನಪಂ ಯುದ್ಧೋರ್ವಿಯೊಳ್ಗೆಲ್ದನುಂ
ಡಿತಶೂರಾಗ್ರಣಿ ಚಾಮರಾಜನೃಪಸೇನಾಧೀಶನಂ ವಿಕ್ರಮೋ।
ದ್ಧತನಂ ರೇಮಟಿವೆಂಕಟೇಂದ್ರನನಿಳಾಚಕ್ರಂ ಪೊಗಳ್ವಂತೆವೋಲ್॥೮೩॥

ಮೊದಲೊಳ್ ನಂದಾತ್ಮಜಾನುಗ್ರಹದಿನಶನಿಬಂದಾಗಳೇ ಶಕ್ತಿ ತಾನಿ ।
ಲ್ಲದೆ ಬಿರ್ದಂತಿರ್ದುದಾಪಾರ್ಥನ ಕರಪುಟದೊಳ್ ಚಾಮರಾಜೇಂದ್ರನಂತಾ
ಗಿದ ವಜ್ರಂ ಕೇಶಮಂ ಕೊಂಡಿರದೆ ಗಮಿಸಿತಾಪಾರ್ಥನೀತಂ ಕಣಾ! ಎಂ।
ದೊದರ್ವಂತೀಕ್ಷೋಣಿಗಾದೇವಿಯು ಕರುಣದಿನೇವೇಳ್ವೆನಾಶ್ಚರ್ಯಮಲ್ತೇ॥

ಧರಣೀಶಾಗ್ರಣಿ ಚಾಮಭೂಪತಿಗೆ ನಾಲ್ವರ್ ನಂದನರ್ ಪುಟ್ಟಿದರ್ ।
ಪಿರಿಯಂ ರಾಜನೃಪಂ ಸುಮಾಸ್ತ್ರವಿಲಸತ್ಸೌಂದರ್ಯಸಾರಂ ದಯಾ ॥
ಸ್ಫುರಿತಂ ಬೆಟ್ಟದ ಚಾಮರಾಜಜನಪಂ ಶ್ರೀದೇವರಾಜಂ ಯಶೋ ।
ಭರಿತಂ ಚೆನ್ನವಸುಂಧರಾಪತಿ ಬುಧವ್ರಾತಾಮರೋರ್ವೀರುಹಂ ॥೮೫॥

ಸರಸಂ ರಾಜನೃಪಂ ಪ್ರತಾಪರುಚಿಯಿಂ ಬಾಲಾರ್ಕನಂತೊಪ್ಪಿ ತಾಂ।
ನಿರುತಂ ಕಾರುಗಹಳ್ಳಿಯಾಕ್ಷಿತಿಪನಂ ಸಂಗ್ರಾಮದೊಳ್ ಗೆಲ್ದು ತ॥
ನ್ನುರುಹಸ್ತಾಬ್ಜಕಶಾಗ್ರದಿಂ ಬಡಿದು ನಾಸಾಚ್ಛೇದನಂಗೈದು ಭೂ।
ವರರೊಳ್ ಶೌರ್ಯದೊಳಂ ಪ್ರತಿಜ್ಞೆಯೊಳುಮಾಪಾರ್ಥಂಬೊಲಾರಾಜಿಕಂ

ಕ್ಷಿತಿಪಾಲಾಧಿಕರಾಜಭೂಪತಿ ಬಲೋದ್ದಂಡಂ ರಣಕ್ಷೋಣಿಯೊಳ್ ।
ಖತಿಯಿಂ ಕಾರುಗಹಳ್ಳಿಯಾಣ್ಮನುರುನಾಸಾಚ್ಛೇದನಂಗೈದನೆಂ ॥
ತು ತದೀಯಾಪ್ರತಿಮರ್ ಭಟರ್ ಮಿಗೆ ಯಥಾ ರಾಜಾ ತಥೈವ ಪ್ರಜಾ ।
ತತಿಯೆಂಬಾಜಿಯೊಳಾಂತು ನಿಂದ ರಿಪುನಾಸಾಚ್ಛೇದಮಂ ಪ್ರಾಣ್ದಪರ್ ॥

ಜನನಾಥಂ ರಾಜನೃಪ್ವೀಪತಿ ತಿರುಮಲೆರಾಜೇಂದ್ರನಂ ಶೌರ್ಯದೊಳ್ ಗೆ॥
ಲ್ದನವದ್ಯಂ ಯಾದವಾದ್ರೀಶ್ವರಮುಹಿಷಪುರಗ್ರಾಮಚಾಮುಂಡಿಕಾಮು ॥
ಧ್ಯನವೀನಾವಾಸಮಂ ಕಾಮಿಸಿ ಮಿಗೆ ಮೆಚ್ಚಿಪಾರಂಗನಾಥಾಂಗಶಯ್ಯಾ
ಭಿನವಶ್ರೀರಂಗರಾಪ್ಪತ್ತನದೊಳಧಿಕಸಾಮ್ರಾಜ್ಯಮಂ ತಾಳ್ದನಾಗಳ್ ॥

ಇಂತು ಸುಖಸಂಕಥಾವಿನೋದದಿನಿರ್ಪ ಸಮಯದೊಳ್

ಇದು ತಾನಚ್ಚರಿಯಲ್ತೆ ವೇಂಕಟಗಿರೀಶಂ ಭಕ್ತನೊರ್ವಂಧಕಂ ।
ಗೆ ದಯಾಸಾಗರನೇಕದೃಷ್ಟಿಯೊಸೆದಿತ್ತಿನ್ನೊಂದು ಕಣ್ಣಂ ಕಲಾ ॥
ಸದನಂ ರಾಜನರೇಂದ್ರನಿಂ ಪಡೆಯಲೈದೆಂದಾಡಿದಾಮಾತಿನ ।
ಭ್ಯುದಯಂಗೊಂಡವನಲ್ಲಿಗಲ್ಲಿಗಱಸುತ್ತುಂ ರಾಜಭೂಮೀಶನಂ ॥ ೪೯॥

ಬಂದುಱೆ ರಾಜಭೂಪತಿಗೆ ವೇಂಕಟನಾಥನುಸಿರ್ದ ವಾಕ್ಯಮಂ ।
ಸಂದಿಸೆ ನಕ್ಕು ಲೇಸೆನುತುಮಕ್ಷಿಯನಿತ್ತನಭೀಕ್ಷಿಸೆನ್ನ ನೀ ॥
ನೆಂದೆನಲಾಕ್ಷಣಂ ಪರಿಜನಾಳಿಗೆ ವಿಸ್ಮಯಮಾಗಲಂಬಕಂ ।
ಬಂದುದವಂಗೆ ರಾಜನೃಪನಂ ಪೊಗಟುತ್ತವನಾಗಳೈದಿದಂ ॥ ೫೦॥

ಕರುಣಾಂಭೋನಿಧಿರಾಜಭೂಮಿಪತಿ ವೈಕುಂಠಕ್ಕೆ ಪೋಪಾಗಳ ।
ಚ್ಚರಿಯೊಂದಾದುದು ಯಾದವಾಚಳದ ಶ್ರೀನಾರಾಯಣಾಗಾರದೊಳ್ ॥
ದೊರೆ ತಾಂ ಬಂದಸೆನುತ್ತೆ ವಾದ್ಯರವದಿಂ ದೀಪಾಳಧೂಪಂಗಳಿಂ ।
ದಿರದಾರಾಧಿಸಿ ದೇವನಂ ನೃಪತಿಯುಂ ಕಂಡಾಗಳೆಲ್ಲಾ ಜನಂ ॥ ೫೧॥

ಭರದಿಂದೆರ್ದಿರೆ ದೇವಗೇಹದೊಳಪೊಕ್ಕಂ ಪೊಕ್ಕುದಂತಲ್ಲದೆ ।
ಲ್ಲರ ನೇತ್ರಾವಳಿಗೈದೆ ಕಾಣಿಸದಿರಲ್ಕಾಶ್ಚರ್ಯಮಾಂತಿರ್ದರು ॥

ಜ್ಜ್ಯರಿಸಲ್ ಪ್ರೂರ್ವದ ಷೋಡಶಾವನಿಪರೊಳ್ ರಾಜಕ್ಷಮೇಕಂಗದಾರ್ ।
ಸರಿಯಂ ಕಾಣೆನದೆಂಬಿನಂ ಗವಿಸಿದಂ ನಾರಾಯಣಸ್ಥಾನಮಂ ॥೯೦॥

ಮೆಱೆನ್ತ್ರದ್ಯದ್ವಿಪದಿಂ ಮುಬ್ಬಸಿದ ಮಿಱುಪ ಪಂಚಿಂತುಟಾರಾಜಭೂಮೀ । ಶ್ವರಚೂಡಾರತ್ನರವ್ಯಾನುಜನೆನಿಸುವ ಶ್ರೀದೇವರಾಜಂಗೆ ಪುತ್ರರ್ ॥ ವರಸೀತಾರಾಮನೊಳ್ ಲಕ್ಷ್ಮಣನ ನಡತೆವ್ರೊಲ್ ದೊಡ್ಡದೇವೇಂದ್ರನೊಳ್ ಭೂ । ಧರಧೈರ್ಯಂ ಚಿಕ್ಕದೇವಕ್ಷಿತಿಪತಿಯೆಸೆವಂ ಜ್ಯೇಷ್ಠಸದ್ಭಕ್ತಿಯಿಂದಂ ॥ ॥೯೨॥

ಬಱಿಕಾದೇವನೃಪಾಲನಲ್ಲಿ ಮಱಿದೇವೇಂದ್ರಂ ಮಹಾಭಕ್ತಿಯಂ ।
ತಳೆದಿರ್ಪಂ ಭರತಕ್ಷಮಾಪತಿಯೊಳಾಶತ್ರುಘ್ನನೆಂತಂತೆ ಭೂ ॥
ತಳದೊಳ್ ನಾಲ್ವರಿವರ್ ಲಸದ್ಗುಣಯುತರ್ ಸತ್ಯಾತಿಶೀಲರ್ ಯಶೋ ।
ವಿಳಸರ್ ಸನ್ನಯಶಾಲಿಗಳ್ ಜನಿಸಿದರ್ ಲಾವಣ್ಯಸಾರೋನ್ನತರ್ ॥೯೪॥

ಸಾರಗುಣಂಗಳಿಂ ವಿನಯದಿಂ ವರನೀತಿಯನಾಂತ ಶೌರ್ಯದಿಂ ।
ಚಾರುಗಭೀರದಿಂ ನತಜನಾಳಿಗೆ ಮಾಳ್ಪ ಮನೋನುರಾಗದಿಂ ॥
ಪ್ರೂರಿತಕೀರ್ತಿಯಿಂ ಲಲಿತಸಂಪದದಿಂ ರಘುನಾಥನಂತೆ ಪೃ ।
ಥ್ವೀರಮ ದೊಡ್ಡದೇವಜನನಾಯಕನಂತವರೊಳ್ ವಿರಾಜಿಕುಂ ॥೯೫॥

ಜಲಜಾತಾಯತಲೋಚನಂ ಕುಮುದಿನೀಕಾಂತಾನನಂ ಕಂಬುಮಂ ।
ಜುಲಕಂಠಂ ಮೃದುಪಲ್ಲವಾಂಘ್ರಿ ಸುವಿಶಾಳೋರಸ್ಥಳಂ ದೀರ್ಘಬಾ॥
ಹುಲತಾಯುಕ್ತನನಂಗನಂ ಜಱಿವ ಲಾವಣ್ಯಾಂಗಸಾರಂ ಜನಾ ।
ವಲಿ ಕಂಡಾಕ್ಷಣಮುತ್ಸವಂದಳೆಯಲೊಪ್ಪಿರ್ದಂ ಧರಾವಲ್ಲಭಂ ॥೯೬॥

ಸುರುಚಿರ ದೊಡ್ಡದೇವನರನಾಥನ ರೂಪಿಗೆ ಸೋಲ್ತು ನಾರಿಯರ್ ।
ಸ್ಮರಶರಬಾಧೆಯಾಂತು ಪರಿದೈತರೆ ನೋಡದೆ ಧೈರ್ಯದಿಂದೆ ನಿ ॥
ರ್ಜರಸತಿಪುತ್ರನೂರ್ವಶಿಗೆ ಸೋಲದೆಯಿರ್ದನದೆಂತುಟಂತುಟಾ ।
ನರನೆನಲೊಪ್ಪಿ ಕಾವಿಸದೆ ಶ್ರೀದೊಡದೇವಜನೇಶನೊಪ್ಪಿದಂ ॥೯೭॥

ಮೃದುಭಾಷಂ ಸತ್ಯಸಂಧಂ ವಿಬುಧರುಚಿರಸುಗಂ ರಮಾಧೀಶಪೂಜಾ ।
ಮುದಿತಸ್ವಾಂತಂ ದಯಾಂಭೋನಿಧಿಸಕಲಜನಾಹ್ಲಾದಕೃತ್ಯಂ ಪ್ರತಾಪಾ॥
ಸ್ಪದನುದ್ಯದ್ಧೈರ್ಯವಂತಂ ನಿಪುಣತಿಲಕನಂತೇಕಪತ್ನೀವ್ರತಸ್ಥಂ ।
ಮದನಾಕಾರಂ ವಿನೋದಂಬಡೆದೊಸೆದೆಸೆದಂ ದೊಡ್ಡದೇವೇಂದ್ರಭೂಪಂ॥

ಕುಮುದಸಖಂಗೆ ಚಂದ್ರಿಕೆಯದೆಂತು ಸುಧರ್ಮಕೆ ಕೀರ್ತಿಯೆಂತು ಭೂ ॥
ರಮಣನ ದೊಡ್ಡದೇವನರನಾಥನ ಪಟ್ಟದರಾಣಿಯಾಗಿ ಸ ॥
ದ್ವಿಮಲಗುಣಾಭಿರಾಮೆ ವರಶೀಲೆ ಸುರೂಪಿಣಿಯೊಪ್ಪಿದಳ್ ರಮಾ ।
ರಮಣಿವೊಲಂಗನಾಕುಲಶಿರೋಮಣಿ ತಾನಮೃತಾಂಬೆಯೀಕ್ಷಿಸಲ್ ॥

ಕ್ಷಿತಿಯಲ್ಲಿರ್ಪುರುಸತ್ಕಲಾಸಮುದಯೋತ್ಸಂಲಾಲನಾರ್ಥಂ ಕುಲೋ।
ನ್ನತಧರ್ಮಾವಳಿಪಾಲನಾರ್ಥಮಮೃತಾಂಬಾದೇವಿ ಪೆತ್ತಳ್ ಕರಂ ॥
ಸುತರತ್ನದ್ವಯಮಂ ಮಹಾನಿಧಿಗಳೊಳ್ ಶಂಖಾಖ್ಯಪದ್ಮಂಗಳಂ ।
ತತಿಶೂರಾಗ್ರಣಿ ದೊಡ್ಡದೇವಜನರಾಟ್ಪುಣ್ಯಂ ಕವಲ್ತಂತೆವೋಲ್ ॥

ಕ್ಷೀರಾಂಭೋನಿಧಿಯಲ್ಲಿ ಕೌಸ್ತುಭಲಸಚ್ಚೂಡಾಮಣಿದ್ವಂದ್ವಮಂ ।
ತಾರಯ್ವಲ್ ಗಗನಾಗ್ರದೊಳ್ ರವಿಸುಧಾಧಾಮರ್ ಸುಶೀಲರ್ ಸ್ಮರಾ ॥
ಕಾರರ್ ಶ್ರೀಚಿಕದೇವರಾಜವಿಲಸತ್ಕಂಠೀರವೇಂದ್ರರ್ ಧರಾ ।
ನಾರೀಶಾಧಿಕದೊಡ್ಡದೇವನೃಪವರ್ಯಂಗಾದರಿರ್ವರ್ ಸುತರ್ ॥೧೦೧॥

ರಾಮನ ಪಾದುಕಾದ್ವಯಮನರ್ಚಿಸಿಯಂತೆದನಿಟ್ಟುಕೊಂಡು ಭೂ ।
ರಾಮೆಯನಾಳ್ದನೆಂತು ಭರತಂ ಪದಿನಾಲ್ಕು ಮಹಾಬ್ದಮಂತೆ ಸು ॥
ಕ್ಷೇಮದೆ ದೊಡ್ಡದೇವನೃಪನಂಘ್ರಿಯ ಭಕ್ತಿಯೊಳಾಳ್ದನಿಂದ್ರಭೋ ।
ಗಾವಿತಭಾಗ್ಯದೇವನೃಪಮೌಳಿ ಚತುರ್ದಶವರ್ಷಮುರ್ವಿಯಂ ॥೧೦೨

ಆದೇವಕ್ಷಿತಿಪಾಲನಿಂದೊಗೆದುವಾಯಜ್ಞಾಳಿಗಳ್ ಸಂತತಂ ।
ಭೂದೇವಾವಳಿಗಗ್ರಹಾರಬಹಳಸ್ವಾಸ್ಥ್ಯಂಗಳಂತಾಬುಧಾ ॥
ಹ್ಲಾದಂಗಳ್ ಮಿಗಲಲ್ಲಿಗಲ್ಲಿಗೆ ಮಹಾಸತ್ರಾಳಿಯುಂ ಪ್ರೋನ್ನತೆ ।
ಲ್ಲಾದಾನಂ ಶ್ರುತಿವೃಂದಮಂತೆಸೆದುದಾದರ್ ಲಬ್ಧಕಾಮರ್ ನರರ್॥೧೦೩॥

ವಿಲಸತ್ಬ್ರಹ್ಮಾಂಡಸಪ್ತಾಂಬುಧಿಕನಕರಥೇಭಾಶ್ವಸತ್ಕಲ್ಪವಲ್ಲೀ ।
ಲಲಿತಪ್ರೋದ್ವೀತಚಕ್ರಾಮರತರುಮಣಿಗೋಸ್ವರ್ಣಭೂಸ್ವರ್ಣಗರ್ಭಾ
ಕಲಿತಶ್ರೀಕಾಮಧುಕ್ಪಂಚಹಲವರತುಲಾಪೂರುಷಂ ಗೋಸಹಸ್ರಾ ।
ಖಿಲಭೂತವ್ಯೂಹರಾಜದ್ಘಟಮಿಳಿತಮಹಾದಾನಮಂ ದೇವರಾಜಂ॥೧೦೪॥

ಫಲವೃಂದಂ ತಿಲರಾಶಿ ವಸ್ತ್ರಮಹಿಷೀದಾನಂ ಘೃತಂ ಧಾನ್ಯಸಂ ।
ಕುಲದಾನಂ ಮಿಗೆ ಕಾಲಪೂರುಷಮುಖಪ್ರೋದ್ದಾನಯೂಥಂಗಳಂ ॥
ನಲಿದಿತ್ತುರ್ವಿಯ ನಿರ್ಜರರ್ಗೆ ರಘುನಾಥಂಗೀನೃಪಂ ಸಾಟಿಯೇ ।
ದುಲಿಯುಲ್ ಸರ್ವಜನಂಗಳಂತೆಸೆದನಾದೇವಕ್ಷ್ಮಾವಲ್ಲಭಂ ॥೧೦೫॥

ಶ್ರೀರಂಗೇಶ್ವರಪಾದಪಂಕರುಹಭಕ್ತ್ಯುತ್ಸಾಹದಿಂ ವೈರಿರಾ ।
ಡ್ವಾರೋತ್ಖಂಡನದಿಂ ಸದಾವಿತರಣವ್ಯಾಪಾರದಿಂ ಸತ್ಯವಾ ॥
ಕ್ಸಾರಳ್ಯಾಪದಿನುಲ್ಲಸತ್ಕರುಣದಿಂದಾದೇವರಾಜಂಗದಾ ।
ರಾರಯ್ಯಲ್ ಸಮರಾದ ಭೂಪತಿಗಳನ್ನಿಲ್ಲೆಂಬಿನಂ ರಾಜಿಕುಂ ॥೧೦೬॥

ಧರಣೀತಳಾಗ್ರಮಂ ವಹಿಸಿ ದುರ್ಜನನಿಗ್ರಹ ಸಜ್ಜನಾಳಬಂ ।
ಧುರಪರಿರಕ್ಷೆಯಾಂತ ವರದೇವಧರಾಪತಿ ದೇವನಾಥನಂ ॥
ತಿರೆ ಧನಪಾಲವೈಭವಯುತಂ ಚಿಕದೇವಜನೇಶನೆಂಬ ಭಾ ।
ಸುರಸದುಪೇಂದ್ರನೊಲ್ದವನಿಪಾಲನೆಗಾದನುದಾರವಿಕ್ರಮಂ ॥೧೦೭॥

ವಿಲಸತ್ಸಂಗೀತಕಾವ್ಯಂ ಮಧುರಸುಶಾಸ್ತ್ರೀರಸಾರಜ್ಞ ಭಾವಂ ।
ಸಲೆ ವಿದ್ವತ್ಸತ್ಕಲಾಪ್ರೌಢಿಯನುಱೆ ತಿಳಿಯಲ್ ಸೂಕ್ಷ್ಮಮಾದಂತರಂಗಂ
ನೆಲೆಗೊಂಡೊಂದಿರ್ಪುದಾರೊಳ್ ಕವಿಜನಹೃದಯಾಭೀಷ್ಟಮಿತ್ತಾಳ್ದ
ನುರ್ವೀ । ತಂಮಂ ಸದ್ಧರ್ಮದಿಂದೋವುವನನೆ ಪೊರೆಗುಂ ಚಿಕ್ಕದೇ
ವೇಂದ್ರಭೂಪಂ ॥ ॥೧೦೮॥

ಕಮಲೇಶಕ್ಷೇತ್ರಯೂಥಂಗಳೊಳುರುವಿಬುಧಸ್ತೋಮಮಂ ಪೋಷಿ
ಸುತ್ತುಂ । ಕಮನೀಯಾಂಭೋಜನಾಭಾಂಘ್ರಿಯ ಶುಭಕರಸಾಹಸ್ರ

ನಾಮಾರ್ಚನಾಳಿ ॥ ಕ್ರಮದಿಂದಂ ಧರ್ಮಕೋಶಂಗಳನೆಡೆವಿಡದಂತುರ್ವಿ
ಸುತ್ತುಂ ಪ್ರತಾಪೋ । ತ್ಸವಮುದಾಯಂಗೊಂಡು ಪೃಥ್ವೀತಳದೊಳಧಿಕ
ನೀಂ ಚಿಕ್ಕದೇವೇಂದ್ರನಿರ್ಕುಂ ॥ ॥೧೦೯॥

ಮಿಗೆ ನಕ್ರಂ ಪಿಡಿಯಲ್ ಬಹುಶ್ರಮದೆ ಮಾಂ ತ್ರಾಯಸ್ವ ಲಕ್ಷ್ಮೀ
ಶ ಎಂ । ದುಗಿದಂ ಕೂಗಿದ ವಾರಣೇಂದ್ರಪರಿರಕ್ಷಾರ್ಥಂ ಮಹಾವೇಗ
ದಿಂ ॥ ಖಗವಾಹಂ ತವೆ ಬಂದು ಶಾಂತನಹನಾಕಲ್ಯಾಣಿಯಾತೀರದೊಳ್ ।
ಸೊಗಸಿಂದೀವ ಸುನಾಳಿಕೇರಲಸದಿಕ್ಷ್ವನ್ನಾದಿಯಿಂ ಭೂಮಿಪಂ ॥

ಚಾರುಸುವೃತ್ತದಿಂ ವಿಶದಕಾಂತಿಯಿನುಜ್ಜ್ವಲಸದ್ಗುಣಾಂಕದಿಂ ।
ಭೂರಿಪರೀಕ್ಷೆಯಿಂ ವಿಗತದೋಷದಿನುನ್ನತವಂಶರಮ್ಯರ ॥
ತ್ನೋರುಬುಧಾಳಿಯಿಂ ಸಲೆ ಪ್ರಸಿದ್ಧಿಯನಾಂತಿಹ ರತ್ನಯೂಥದಿಂ ।
ದಾರಯೆ ರಾಜಿಸಿತ್ತು ಚಿಕದೇವಜನಾಧಿಪನಗ್ರಹಾರಮುಂ ॥

ಜಲಜಾತಾಂಬಕ ರಂಗನಾಥನನಿಶಂ ಶ್ರೀಕಾಮಿನೀಯುಕ್ತನಾ ।
ಗಿ ಲಸದ್ಭೂವರ ಚಿಕ್ಕದೇವಹೃದಯಾಂಭೋರಾಶಿಯಲ್ಲಿರ್ದಪಂ ॥
ಸಲೆ ತತ್ಪ್ರೇರಣೆಯೆಂಬ ಸೇತುವಡೆದೀಭೂಪಾಬ್ಧಿ ಸಂತೋಷದ ನಿ ।
ಶ್ಚಲಕಂಠೀರವರಾಜನೆಂಬಣುಗನಂ ತಾಂ ಪೆತ್ತುದುದ್ಯದ್ಬಲಂ ॥೧೧೨॥

ಅನಪಾಯಾಧಿಕಸಿದ್ಧಲಕ್ಷ್ಮಿವಿಲಸದ್ಗಂಧರ್ವವಿದ್ಯಾರಸಂ ।
ಮನವೊಲ್ದಾನನೊಳಿರ್ಪುದಾವಿಬುಧಸುಪ್ರೇಮಂ ಕುಮಾರೇಂದ್ರರಂ ॥
ಜನಸೇನಾಧಿಪತಿತ್ವಮಂತೆ ಚಿಕದೇವೇಂದ್ರಾಖ್ಯನಿಂದ್ರಂಬೊಲಂ ।
ತನಘೋಪೇಂದ್ರಸಮಾನುಜತ್ವಮೆಣೆಸಲ್ ಕಂಠೀರವಕ್ಷ್ಮೇಶನಂ ॥೧೧೩॥

ಪರಿಪಂಥಿಕ್ಷಿತಿರಾಡ್ಯಶೋರುಚಿಸುಕರ್ಪೂರರಾಳಿಯುಂ ತಂದು ಭೂ ।
ಧರವರ್ಯಂ ಚಿಕದೇವಭೂಪತಿಗೆ ತತ್ಕೀರ್ತ್ಯುಜ್ಜ್ವಲತ್ಕಾಂತೆ ತಾಂ ॥
ಸ್ಫುರಿಸಲ್ ಪ್ರೀತ್ತಿಸಿ ತತ್ಪ್ರತಾಪಶಿಖಿಯೊಳ್ ನೀರಾಜನವ್ಯೂಹಮಂ ।
ನಿರುತಂಗೈದಂಜಿ ಮಂಗಳಾರತಿಯನೆತ್ತುತ್ತಿರ್ದಪಳ್ ಮೋದದಿಂ ॥೧೧೪॥

ಮುದದಿಂದಿತ್ತಪನಾದರಂ ಮಿಗೆ ಧರಾಮರ್ತ್ಯರ್ಗೆ ಸತ್ಸೌಂದರಾ ।
ಸ್ಪದಕನ್ಯಾತತಿಯುಂ ತದುದ್ವಿತರಣವ್ಯಾಪಾರಹಸ್ತಂ ಸಮಂ ॥
ತೊದವಿಂ ಕ್ಷತ್ರಿಯವೃತ್ತಿಶತ್ರುಜನಕಂ ದೇವಾಂಗನಾನೀಕಮಂ ।
ಪದುಳಂದಾಳ್ದಿರದೀವುದಾತನ ಮಹಾಖಡ್ಗಾಂಬುಧಾರಾನ್ವಿತಂ ॥ ೧೧೫ ॥

ವರಕೌಕ್ಷೇಯಕಖಂಡಿತಾರಿನೃಪರುದ್ಯತ್ಕೀರ್ತಿ ತಾಂ ಭೂಮಿಯೊಳ್ ।
ನೆರೆ ಸಂಚಾರಕೆ ತಾಣವಿಲ್ಲದೆ ತೊಳಲ್ದೆಯ್ತಂದು ರೂಪಾಂತರಾ ॥
ವರಣಂಗೈದುಱೆ ಚಿಕ್ಕದೇವಜನರಾಟ್ಪಾರ್ಶ್ವಂಗಳೊಳ್ ಚಾರುಚಾ ।
ಮರದಾಕಾರಮನಾಂತಿನಿತ್ತನಗೆ ಸಾಕೆಂದುರ್ವಿ ತಾನುರ್ವುಗುಂ ॥ ೧೧೬ ॥

ಸಕಲಜ್ಞಾದೃತಸರ್ವಮಂಗಳಶಿರೋರತ್ನಂ ಶುಭಾಂಗಂ ಲಸ ।
ತ್ಪ್ರಕಟಶ್ರೀಕುಲಕಂದಮಾದ ಶಶಿಯುಂ ಶ್ರೀಚಿಕ್ಕದೇವೇಂದ್ರಮು ॥
ಸ್ತಕಮಾಘ್ರಾಣಿಸುವಂತೆ ರಂಗವಿಭು ಸೇವಾಧಿಕ್ಯದಿಂ ನೋಡುತಿ ।
ರ್ದು ಕರಂ ತಾಳ್ದು ನಿರಂತರಂ ಚರಿಯಿಪಂ ಶುಭ್ರಾತಪತ್ರಾಂಗಮಂ ॥

ವ॥ ಇಂತತಿಶಯಪ್ರತಾಪಕೀರ್ತಿಗುಣವಿತರಣಶೌರ್ಯಗಾಂಭೀರ್ಯಧೈರ್ಯ ಸ್ಥೈರ್ಯವಿನಯೋಕ್ತಿಗಳಂ ಯದುವಂಶಚೂಡಾರತ್ನಮಾಗಿರ್ದ ಚಿಕದೇವಮಹಾರಾಜನಾಕರ್ಣಿಸಿ ಸಂಗೀತಸಾಹಿತ್ಯರಸಪ್ರಮೋದಿತಹೃದಯನುಮಾರೋಗಣೆಯಂ ಗೈದು ಶಯ್ಯಾಲಯದ ದರದಳಿತಪರಿಮಳಮಿಳಿತಕುಸುಮವಿಸರಶಯನಾಂಚಿತಮಣಿಪರ್ಯಂಕಪೀಠಹಂಸತೂಲಿಕಾತಲ್ಪಸ್ಥಲದೊಳ್ ಸುಖನಿದ್ರಾಸಕ್ತನಾಗಿರ್ದನಾಪ್ರಸ್ತಾವದೊಳ್

ಜಲಪಕ್ಷಿಗಳುಲಿಯಿಂದಂ ।
ಕಲಹಂಸಂ ಕಮಲತಲ್ಪದಿಂದೇಳ್ವಂತೀ ॥
ಯಿಳೆಯರಸಂ ಗಾಯಕಮಂ ।
ಗಳಗಾನಮನಾಲಿಸುತ್ತೆ ಶಯನಸ್ಥಲದಿಂ ॥ ॥೧೧೮॥

ಮನಃಶಾಪ್ರೋತ್ತೀದಯದಲ್ಲಿ ರಂಗವಿಭುಪಾದಾಂಭೋಜಮಂ ಸ್ವಾಂತದೊಳ್ ।
ನೆನೆದೆರ್ದಾಗಳೆ ನೋಡಿ ದರ್ಪಣದೊಳಾತ್ಮೀಯಾಸ್ಯಮಂ ದಂತಧಾ ॥

11958



ವನಮಂ ಮಾಡಿ ಸುಗಂಧಸೋಷ್ಣಜಲದಿಂದಂ ವಕ್ತ್ರಪಂಕೇಜಮ ॥
ಜ್ಜನಮುಂಗೈದಿಭವೈರಿಪೀಠದೊಳ್ ಕುಳ್ಳಿರ್ದಂ ಧರಾವಲ್ಲಭಂ ॥೧೦೯॥

ಮಿಸುಪ ಹಿರಣ್ಯಚಾರುಗುಣರಂಜಿತಚೇಲಮನಾಂತು ಶೀರ್ಷದೊಳ್।
ಧರಿಸಿ ಕಿರೀಟಮಂ ತಳೆದು ಮೌಕ್ತಿಕಶೋಭಿತಕರ್ಣಭೂಷಮಂ ॥
ಸುರುಚಿರಮಾಗಲಿಟ್ಟು ಹುರುಮಂಜಿಯ ಮುತ್ತಿನ ಕಂಠಮಾಲೆಯಂ ।
ಸ್ಫುರಿಸುವ ರನ್ನಮಾಂತ ಪದಕಂದಳೆದೊಪ್ಪಿದನುನ್ನತೋತ್ಸವಂ ॥೧೧೦॥

ಮಣಿರಾಜತ್ಕಂಕಣಂಗಳ್ ಮಿನುಗೆ ಧರಿಸಿ ಮಂಜೀರಸತ್ಕ್ಷುದ್ರಘಂ
ಟಾ । ರಣಿತಂ ತಾಂ ಪೊಣ್ಮಿರಲ್ ಸೂಡಿಯೆ ಕನಕಕಟೀಸೂತ್ರಮಿಂಬಾಗಿ
ರಲ್ಬಿ ॥ ನ್ನಣದಿಂದಂ ಕಂಚುಕಂದಾಳ್ದೆಳಗೆ ನವಸುಮಾಸ್ತ್ರಂಬೊ
ಲೊಪ್ಪಿರ್ದನೀಧಾ । ರಿಣಿಯಾಣ್ಮಂ ಚಿಕ್ಕದೇವಪ್ರಭು ಕವಿಜನಸಂತಾನ
ಮಂದಾರಭೂಜಂ ॥ ॥೧೧೧॥

ನಾಮಸುತೀರ್ಥಮಂ ರಚಿಸಿ ವಿಪ್ರಸಮರ್ಚಿತದೇವಗೇಹಮಂ ।
ಪ್ರೇಮದಿನೈದಿ ಕೇಶವಪದಾಂಬುಜರಾಜಿತತೀರ್ಥಮಿಂಟ ಸು ॥
ಕ್ಷೇಮದೆ ನಿತ್ಯಹೋಮವಿಧಿಯಂ ನೆರೆ ಮಾಡಿ ವಸುಂಧರಾಮರ ।
ಸ್ತೋಮಕೆ ದಾನವಿತ್ತು ಚಿಕದೇವಮಹೀಶವರಂ ವಿರಾಜಿಕುಂ ॥೧೧೨

ಇಂತು ಕೃತಯಥೋಚಿತನಿತ್ಯಕೃತ್ಯನುಂ, ಮಕುಟಕುಂಡಲಹಾರಕೇಯೂರಕಟಕಕಂಕಣಾಂಗುಳೀಯಕಕಟಸೂತ್ರನೂಪುರಾದ್ಯಾಭರಣಮಣಿಗಣಕಿರಣರಂಜಿತಕಳೇಬರನುಂ, ಹರಿಚರಣಸರೋಜಾರ್ಪಿತಪ್ರಸಾದಸುಧಾರಸಾಸ್ವಾದನನಿರತಹೃದಯನುಂ, ರಸಕರ್ಪೂರತಾಂಬೂಲಸಾರರುಚಿಸುರಭಿತಮುಖಾಂತರ್ವಳಯನುಂ, ಮಣಿಗಣಖಚಿತಕನಕಾಂದೋಳಿಕಾರೂಢನುಮಾವೃತಚ್ಛತ್ರಚಾಮರವ್ಯಜನಸೀಗುರಿಪತಾಕಾಸಮೂಹನುಂ, ಕರುಣಾಕಟಾಕ್ಷಾವಲೋಕನಮಾತ್ರಪರಿಹೃತದೀನದೈನ್ಯವಚನನುಂ, ಅಕರ್ಣ್ಯಮಾನಸ್ವಕೀಯಬಿರುದೋಚ್ಚಾರಣವಂದಿಜನಪರಿಪಾಲನುಂ, ಪರಿವೃತಮಕುಟವರ್ಧನಕಿರೀಟಮಣಿಗಣಘೃಣಿಬಾಲಾತಪಮಂಡಿತತರುಣಾದಿತ್ಯನಾ

ಚಿಕದೇವರಾಯುಂ ನವರತ್ನಕನಕರುಚಿಶೋಭಿತಸಭಾಮಂಟಪಕ್ಕೈತಂದು ಅತ್ಯಂತಸಂತೋಷದಿಂ ಸಿಂಹಾಸನಾರೂಢನಾಗಿರ್ದನಾಸಮಯದೊಳ್

ಸಚಿವವ್ರಾತಂ ಕವೀಶಾವಳಿ ವಿಬುಧಸಮೂಹಂ ರಸಜ್ಞಾಳಿಗಾನ ।
ಪ್ರಚುರವ್ಯೂಹಂ ನಟಸ್ತ್ರೀತ್ಕರಮುರುಗಮಕಿಸ್ತೋಮಮುದ್ವಂದಿ
ವೃಂದಂ ॥ ನಿಚಿತಂ ಯೋಧವ್ರಾತಂ ಪ್ರಬಲಿತತುರಗಾರೋಹಣವ್ರಾ
ಢಯೂಥಂ । ರಚಿಸಲ್ ಮಲ್ಲವ್ರಜಂ ಸೊಂಪಿಡಿದು ಸಭೆಗೆ ಸಂತೋಷ
ದಿಂ ಬಂದುದಾಗಳ್ ॥ ॥೧೨೩॥

ಕುಂಚದ ತಾಳವೃಂತಕದ ವೀಳ್ಯದ ಗಂಧದ ಪುಷ್ಪಮಾಲೆಯಾ ।
ಸಂಚಿಯ ಖಡ್ಗದಾರತಿಯ ಗಿಂಡಿಯ ಚಾಮರದಂಗರಾಗದಾ ॥
ಕಂಚುಕದಂಗಮರ್ದನದ ಬಿಜ್ಜಣದೂಳಿಗಮಾಂತ ಭೃತ್ಯವ ।
ರ್ಗಂ ಚಿಕದೇವಭೂವಿರಮಣೀಪ್ರಿಯಸತ್ಸಭೆಯೊಳ್ ವಿರಾಜಿಕುಂ ॥

ಪೊರೆದೆಳವೀಸೆ ನೀಳ್ದ ನಗೆಗಣ್ ತೊಳಗುತ್ತಿಹ ಕರ್ಣಭೂಷಣಂ ।
ಮಿಱುಗುವ ದಂತಪಙ್ಕ್ತಿ ಲಲಿತಾನನಮಂಡಲಮೊಪ್ಪೆ ನುಣ್ಗೊರಲ್ ॥
ಕರದೊಳಗಾಂತ ಖಡ್ಗರುಚಿ ರಂಜಿಸೆ ಹಾರಮರೀಚಿಯುಣ್ಮೆ ಭೂ ।
ವರತತಿ ಬಂದು ರಂಜಿಸಿದುದಾಚಿಕದೇವಸಭಾಂತರಾಳದೊಳ್ ॥೧೨೫॥

ತೊಳಗುವ ತೋಂಟಿವಾಯ್ದುಱಿಯ ಮುದ್ದಿನಮಾತಿನ ಸರ್ಪವೇಣಿಯೊಳ್ ।
ತಳೆದ ಸುಗಂಧಮಾಲಿಕೆಯ ನೀಳ್ದಲ*ರ್ಗಣ್ಗಳ ಚಂದ್ರಬಿಂಬಮಂ ॥
ಪೞಿವ ಶುಭಾಸ್ಯದಿಂದುಟಿಯ ನುಣ್ಬೊಗರಂಗದ ವಾರನಾರಿಯರ್ ।
ಬೆಳಗುತಪಾಂಗಕಾಂತಿಗಳನುರ್ವರ್ತೆ ಸೊರ್ಕುರ್ತೆ ಬಂದರೊಪ್ಪಿರಲ್॥೧೨೬

ನಸುನೋಟಂ ಪೊಸವೇಟಮುಂ ಯುವನೃಪಾಲಶ್ರೇಣಿಯೊಳ್ ಮೀಱಿ ಪು
ಟ್ಟಸೆ ಹಸ್ತಾಬ್ಜದೊಳಾಂತು ಚಾಮರಮನಂದಂಬೆತ್ತು ಚಿಮ್ಮುತ್ತೆ ರಾ ॥
ಜಿಸಿದರ್ ನೋಟ್ಪ ಭುಜಂಗರಂ ಮದನಬಾಣಕ್ಕೀಡುಮಾಡುತ್ತೆ ರಾ ।
ಜಸಮೂಹಪ್ರಣತಾಂಘ್ರಿಪದ್ಮಚಿಕದೇವೇಂದ್ರಾಮಳಾಸ್ಥಾನದೊಳ್ ॥

ಮಣಿಯುತ್ತಿರ್ಪ ನೃಪಾಲಮೌಳಿಮಣಿಸುದೋಃಹಾಂಶುವಿಂದಂ ಸ್ಫುರ
ದ್ಗಣಿಕಾನಾರಿಯರಕ್ಷಿಹಾಸರುಚಿಯಿಂದಾಭೂಷಣಚ್ಛಾಯೆಯಿಂ ॥
ದೆಣಿಸಲ್ ವೀರಭಟಾಳಿ ಚಿಮ್ಮುವ ಮಹಾಕೌಕ್ಷೇಯಕದ್ಯೋತಿಯಿಂ ।
ಪ್ರಣುತಾನಂದಕಚಿಕ್ಕದೇವನೃಪನಾಸ್ಥಾನಾಲಯಂ ಶೋಭಿಕುಂ ॥ ೧೨೮

ಪಾಡುವ ಗಾಯಕಪ್ರತತಿಯಿಂ ಬಿರುದಾವಳಿಯಂ ಸಮಂತು ಕೊಂ ।
ಡಾಡುವ ವಂದಿಯಿಂದಭಯಮಂ ಮಿಗೆ ಬೇಳ್ಪ ನೃಪಾಲವೃಂದದಿಂ ॥
ದಾಡುವ ವಾರಕಾಂತೆಯರಿನೋಡುವ ಸತ್ಕರಿಯುಾಧದಿಂದೆ ಸೊಂ ।
ಪೀಡಿಱಿದಿರ್ದುದೊಪ್ಪಿತು ಲಸತ್ಸಭೆ ಶ್ರೀಚಿಕದೇವರಾಯನಾ ॥೧೨೯॥

ಸಲೆ ಸುಮನೋರಥಪ್ರಕರಸಂಯುತಮುನ್ನತರಾಜಹಂಸಮಂ ।
ಡಲರುಚಿರಂಜಿತಂ ಸುಕರಮಂಗಳಸೌವ್ಯಕವಿಪ್ರಸೇವಿತಂ ॥
ವಿಲಸಿತಚಿಕ್ಕದೇವಧರಣೀಂದ್ರಸಭಾಲಯಮೊಪ್ಪಿದತ್ತು ಮಂ ।
ಜುಲಸರದಂತೆ ಪುಷ್ಕರದವೋಲ್ ಘನಚಕ್ರವಿಲಾಸಮಂಡಿತಂ ॥ ೧೩೦॥

ಆಪ್ರಸ್ತಾವದೊಳ್

ಪೆಱಸಾರ್ ಮಾಗಧ ಕುಳ್ಳಿರಿಲ್ಲಿ ಮಲಯಾಳಕ್ಷ್ಮೇತ್ರ್ಯಶ ನೀಂ ಕಾಣ್ಕೆಯಂ।
ನೆಱೆ ನೀಡಂಗ ಕಳಿಂಗ ನಿಲ್ ತಡೆ ವಿದರ್ಭಾಧೀಶ ಚೋಳಂಗೆ ನೀಂ ॥
ತೆಱಪಂ ಮಾಡು ಕರೂಷ ಹುಂ ಗಳಪದಿರ್ ಬಂಗಾಳ ಮತ್ಸ್ಯೇಶ ಸೈ ।
ತಿರೆನುತ್ತುಂ ಮಿಗೆ ವೇತ್ರಧಾರಿಗಳುಸಿರ್ದರ್ ತತ್ಸಭಾಸ್ಥಾನದೊಳ್ ॥

ಇದು ಪಾಂಡ್ಯೇಶ್ವರನಿತ್ತ ಹಾರವಿದು ಚೋಳಾಧೀಶನೊಲ್ದಿತ್ತ ಹೇ।
ಮದ ಪಲ್ಲಕ್ಕಿ ಕಳಿಂಗನಿತ್ತ ಮದಮಾತಂಗಾಳಿ ಕಾಶ್ಮೀರನು ॥
ನ್ಮುದದಿಂ ಕೊಟ್ಟ ದುಕೂಲಸಂತತಿ ಕರೂಷಂ ಕೊಟ್ಟ ಖಡ್ಗಾಳಿಯಿಂ ।
ತಿದು ಕಾಂಭೋಜಕನಿತ್ತ ವಾಜಿಯಮಧಾನೋರ್ವೀಶಚೂಡಾಮಣೀ ॥

ಇಂತೆಂದು ಕಂಚುಕಿಗಳುಗ್ಗಡಿಸುತ್ತುಮಿರೆ ಆಸಮಯದೊಳ್ ಮಿಂಚಿನ ಲತೆಯಂತೆ ಪೊಳೆದು ನಿಂದಚ್ಚರಿಯರಂ ವಿಡಂಬಿಪ ನರ್ತಕಿಯರ ಶ್ರುತಿ ತಾಳ ಮೃದಂಗ ತಂತ್ರಿಗಳ ನುಣ್ಚರದೊಡನೆ ಸೊಪ್ಪಡಂಗಿ ಕಡಂಗಿ ಬೆಡಂಗು ಮೀಱೆ ನಟಸಿದರದೆಂತೆನೆ:—

ಜತಿ ಲಯ ತಾಳ ರೀತಿ ಗಮಕಂ ಯುತತೋಪು ಕಳಾಸಧಾತು ಮೇ ।
ಱತಿರಸಭಾವಬಿಂಕಮುಱೆ ಬಿನ್ನಣದಪ್ಪದೆ ನೇತ್ರವಕ್ತ್ರಪಾ(?) ॥
ದತಳಕರಂಗಳೊಳ್ ರುಚಿರಗಾನಸುತಾಳದ ಮಾರ್ಗಮೊಪ್ಪುವಂ ।
ಶತಿಚತುರತ್ವದಿಂದಭಿನಯಂಗಳನೂಹಿಸುತಾಡಿ ತೋಱದರ್ ॥೧೩೩॥

ನಿಡುಜಡೆಯಿಂದಲರ್ ಜಗುಳೆ ಕಣ್ಗಳನುಣ್ಬ್ಗರುರ್ವೆ ವಕ್ತ್ರವಿಂ ।
ಪಿಡಿಯೆ ಬೆಮರ್ ತೆರಂಬೊಳೆಪೆ ನುಣ್ಗದಪ್ಪುಣ್ಮರೆ ದಂತಕಾಂತಿ ಮೆ ॥
ಲ್ಲಡಿಯ ಸುವರ್ಣಕಿಂಕಿಣಿಯು ಮೆಲ್ಲುಲಿ ರಂಜಿಸೆ ಲಾಸ್ಯಮಾರ್ಗದೊಳ್
ಬಿಡದೆ ಬೆಡಂಗುವಿೞೆ ಮಿಗೆ ನರ್ತಕಿಯರ್ ಸೊಗಸಿಂದಮೊಪ್ಪಿದರ್ ॥

ಇಂತಾಡಿದನರ್ತಕೀಜನಕ್ಕೆ ಸಂಗೀತಸಾಹಿತ್ಯರಸಜ್ಞನಾಶ್ರಿತಕನಕವಸಂತಂ ಪಸದನಂಗೊಟ್ಟು ಮುದಂಬಡೆದಿರ್ಪ ಚಿಕದೇವರಾಯನ ಮುಂದೆ ಮೆಯ್ಯುರ್ವಿ ಕೆಯ್ಯಂ ನೆಗಪಿ ವಂದಿಗಳ್ ಪರಾಕು ಪರಾಕೆಂದು ಬಿರುದಾವಳಿಯನುಚ್ಚರಿಸುತಿರ್ದರದೆಂತೆನೆ:—

ಶ್ರೀಮದನಂತಕಲ್ಯಾಣಗುಣಮಣಿಗಣವಿಭೂಷಣವಿಳಸಿತಕಳೇವರ ಪರಾಕು! ಶ್ರೀರಮಣೀರಮಣರಂಗನಾಥಸುರಚಿರಚರಣಚಾಮೀಕರಸರೋಜಪರಾಗಕಾಶ್ಮೀರಲಲಾಮರಾಜಿತಫಾಲ ಪರಾಕು! ಸಮಧಿಗತಸಂಪೂಜ್ಯಸಾಮ್ರಾಜ್ಯಲಕ್ಷ್ಮೀಲಕ್ಷಣದಕ್ಷಿಣಬಾಹೂದ್ದಂಡೋತ್ತಂಭಿತಮಂಡಲಾಗ್ರಖಂಡಿತರಿಪುಮಂಡಲೇಂದ್ರವೇತಂಡಕುಂಭತ್ಕುಂಭತಟಮುಕ್ತವಿಮಲಮುಕ್ತಾಫಲಾವಳೀಪರಿಷ್ಕೃತಹಾರಕಂಕಣಕುಂಡಲಾದ್ಯಾಭರಣ ಪರಾಕು! ಸಮದಸಮಸ್ತಪ್ರಶಸ್ತಸಾಮಂತಭೂಕಾಂತಕಾಂತಾಸಂತಾನಸೀಮಂತಸಿಂದೂರರೇಖಾಪಲ್ಲವರಸಹರಣಕುಶಲವಿತತಪ್ರತಾಪಖರಕಿರಣಕರನಿಕರಪರಿಹೃತಸರಸಿಜಭವಾಂಡಭಾಂಡಬಹಿಸ್ತಮಸ್ತೋಮ ಪರಾಕು! ಆತ್ಮೀಯಕಟಾಕ್ಷವೀಕ್ಷಣವಳಕ್ಷರುಚಿಸಾಂದ್ರಚಂದ್ರಿಕಾಮುದಿತವಿದ್ವಜ್ಜನಚಕೋರೋದ್ಧಾರ ಪರಾಕು! ಪರಿಪಂಥಿನೃಪಾಲಜಾಲವಿಶಾಲಕಪಾಲಕೀಲಾಲಪಾನಾಸಕ್ತಿಯುಕ್ತವಿತತವಿಶಿಖನಿಸರವಿಳುತೋದ್ದಂಡಕೋದಂಡದಂಡ ಪರಾಕು! ಸ್ವಕೀಯಪದಾಶ್ರಿತಜನವನಜವನವಿಕಸನತರುಣಾರುಣೋಪಮ ಪರಾಕು! ನಿಖಿಲವೈರಿನಿಕರಧರಾಕ್ರಮಣಾಭಿಲಾಷಪ್ರೇಷಿತವಿಶೇಷಪರಾಕ್ರಮ, ವೀರಾವೇಶಪರಾಕ್ರಮಘೋಷರೋಷಸಂಘಟ್ಟ

ತಪದಾತಿಸಮುದಯ, ಹೇಷಾರವವಿಡಂಬಿತಶುಂಭದ್ದಂಭೋಳಿಸ್ವನತುರಂಗಸಂಘ, ಬೃಂಹಿತನಿನದಕಬಳಿತಬಗಳಿತಮದಜಲಧಾರಾಲಂಘಿತಪ್ರಳಯಜಳಧರಪಟಲಕಟುಸ್ತನಿತವರ್ಷ, ಸಾರವಾರಣವಾರ, ಜೃಂಭದ್ಬೃಂಭಾಧ್ವನಿಬಧಿರಿತದಿಕ್ಪಾಲಕರ್ಣಕೋಟರಸೇನಾಧಿಪಪ್ರಮುಖವೀರರಸೋದಾರ, ಸಮಗ್ರವಿಗ್ರಹನಿಪುಣೋದಗ್ರದಂಡನಾಥಯೂಥಸಂಯುಕ್ತಸೈನ್ಯಸಮಾಜಕರಧೃತಕಠೋರಕುಠಾರಸಬಳಖಡ್ಗಸುರಗಿಕುಂತಮುಸಲಮುದ್ಗರಪ್ರಾಸಪರಿಘಮುಸುಂಡಿಭಿಂಡಿವಾಳಶೂಲಭಲ್ಲಚಕ್ರಚಾಪಶಿಲೀಮುಖಗದಾಂಕುಶಾದ್ಯಾಯುಧನಿಶಿತಧಾರಾಚೂರ್ಣೀಕೃತಮುರಾಪುರಚಿಕ್ಕಲಿಂಗನಾಯಕಶಾದಮಂಗಲರಾಮಚಂದ್ರನಾಯಕವೇಲಾಪುರವೇಂಕಟಾದ್ರಿನಾಯಕಜಡಕನದುರ್ಗನರಸನಾಯಕಪ್ರಭೃತಿರಿಪುಜನಪಾಲದೃಪ್ಯದ್ವಾಹಿನೀವ್ಯೂಹಪರಾಕು! ಅತಿತ್ವರಿತಪರಾಜಿತಕುಟಿಲವಿರೋಧಿರಣರಂಗಸ್ಥಳಪ್ರಸಭಾಕ್ರಾಂತಕೌಕ್ಷೇಯಕಶರಸಬಳಫಲಕಚಕ್ರಕೋದಂಡಸುರಗಿಮುಖ್ಯಶಸ್ತ್ರಸಂಚಯಹಸ್ತಿಹಯೋಷ್ಟ್ರಶಕಟನಿಕರಕಾಂಡಪಟಚಟುಳಚತುರಂತಯಾನವಿತಾನಧನಮಣಿಗಣಭೂಷಣಸಮಸ್ತವಸ್ತುಸ್ತೋಮ ಭೇರೀಮುರಜಡಿಂಡಿಮಕಹಳಾದ್ಯನೇಕವಾದ್ಯಸಂರಂಭಸಂದರ್ಶನವಿಕಸಿತನಿರ್ಮಲಹೃದಯಾಂಬುಜ ಪರಾಕು! ತತ್ಕ್ಷಣವಶೀಕೃತಾನಂತಗಿರಿಮುಟ್ಟಾಂಜಟ್ಟಿ ಮಳಲಿ ಪರಮತಿ ಅರ್ಕಲಗೂಡು ಜಡಕನದುರ್ಗಾದ್ಯನೇಕ ಸಂಪತ್ಸಮೃದ್ಧಿತಗ್ರಾಮನಿಕಾಯ ಪರಾಕು! ನಿಜಸ್ಥೈರ್ಯಧೈರ್ಯ ಶೌರ್ಯಾತಿಶಯಪರಾಭೂತಸೇನಾವ್ರಾತಭೀತರಾಮಚಂದ್ರನಾಯಕಮಳವರಾಯವೇಂಕಟಾದ್ರಿನಾಯಕಪ್ರಮುಖಶರಣಾಗತನರಪತಿಸಂರಕ್ಷಣವಿಚಕ್ಷಣಚಿತ್ತಪರಾಕು! ಆನೀತದಿಗ್ವಿಜಯವಾರ್ತಚರನಿಕರೋಕ್ತವಚನರಚನಾಕರ್ಣನಜನಿತಮೋದಸಮುಪ್ರಯುಚ್ಛ್ರಿತಾಂದೋಳಿಕಾಭರಣವಸ್ತ್ರಗಜಾಶ್ವಕ್ಷೇತ್ರತಾಂಬೂಲಾದಿತ್ಯಾಗಸಮಾಂಗಸಂತೋಷಸರಸಕವಿರಾಜ ಪರಾಕು! ಅಮಂದಕುಂದಮಂದಾರಹಾರಹೀರಘನಸಾರಪಟೀರನೀಹಾರಶಾರದನೀರದಕಂದಳಿತಪುಂಡರೀಕಡಿಂಡೀರಷಂಡಪಯಃಕಾಂಡಧಕುಂಡಲಿಪರಿಶಿ (?) ಮಂಡಲಾಧಿಕಪಾಂಡುರಾಖಂಡಯಶಶ್ಶ್ರೀಖಂಡವಿಲೇಪನಮಂಡಿತನಿಖಿಲಕಕುಭಾಂಗಣೋತ್ತುಂಗಸ್ತನಕನತ್ಕನಕಲಶ ಪರಾ

ಕು! ಸುಕವಿದಾರಿದ್ರ್ಯವಿದ್ರಾವಣಕನಕಪ್ರವರ್ಷಕರಾಗ್ರಧರೀಕೃತ
ಸುರಮಹೀರುಹಪ್ರಭಾವ ಪರಾಕು! ಅನವರತವಿನಮದವನೀಧವನಿ
ವಹಮಕುಟತಟಘಟಿತಮಂಜುಳಮಾಣಿಕ್ಯಪುಂಜಸಂಜಾತಕಾಂತಿಪಾಟಲಿ
ತಪದನಖಮಯೂಖ ಪರಾಕು! ನಿಜತನುಲಾವಣ್ಯಜಿತನಲಕೂಬರಜ
ಯಂತವಸಂತಲತಾಂತಶರರೂಪ ಪರಾಕು! ದೇವಭೂವರಗರ್ಭಪಯಃ
ಪಾರಾವಾರರಾಕಾಸುಧಾಕರ ಪರಾಕು! ಸಂತತತತಘನಸುಷಿರಾನದ್ಧ
ದೇಶಿಯಾತ್ಯಾಹತಪ್ರತ್ಯಾಹತಕಂಪಿತಮೂರ್ಛಾಗಮಕಸ್ಥಾಯಿಸಂ
ಚಾರಿಸಂಕೀರ್ಣಶುದ್ಧಸಾಳಗಮಂದ್ರಮಧ್ಯತಾರಸ್ವರಮಾಧುರ್ಯತರಸಂಗೀ
ತಶ್ರವಣಲೋಲ ಪರಾಕು! ಅನಿಶಜಾತಿರೂಪರಸಪಾಕಶಯ್ಯಾರೀತಿ
ವರ್ಣನೋಪಮೋತ್ಪ್ರೇಕ್ಷಾಭಾವಚಿತ್ರಾದಿಗುಣಸಮ್ಮಿಶ್ರಸುಧಾರಸಾ
ಯನಾತಿಮಧುರತರಸಾಹಿತ್ಯವಿದ್ಯಾವಿಷಯಾನುರಕ್ತಮಾನಸ ಪರಾಕು!
ಅಜಸ್ರದ್ವಿಜಮೂಹಪರಿಪೋಷಣದತ್ತಾತ್ಯಂತಹಿರಣ್ಯರಾಶಿದಾನವಾರಿ
ಧಾರಾಪ್ರವಾಹಪ್ರಹಸಿತಲಸಿತಕನಕಾಚಲಪುರದೀರ್ಘಿಕ ಪರಾಕು!
ನಿರಂತರವಿಪ್ರಾಳೀಕೃತಾಮೋಘಾಶೀರ್ವಚನಪರಿವರ್ಧಿತಾಷ್ಟೈಶ್ವರ್ಯಲ
ಕ್ಷ್ಮೀನಿವಾಸ ಪರಾಕು! ನಿಜತನುಸಹಜಪರಿಮಳಸಂಭ್ರಾಂತಬಾಲ
ರೋಲಂಬಜಾಲವಿಸರ್ಜನನಿಪುಣಸುದತೀಜನಕರತಳವಿಲುಳಿತ ವ್ಯಜನಜಾ
ತಮೃದುಪವನನಿಪಾತ ನವೀನವಿತಾನಸುಗಂಧಮಲ್ಲಿಕಾಪ್ರಸೂನ ಪ್ರ
ತಾನಮಕರಂದಬಿಂದುಸಂದೋಹಕರ್ದಮಿತಭೂಭಾಗ ಪರಾಕು! ಜ
ಯರವಮುಖರಮುಖವಂದಿಜನವೃಂದಪರಿಪಠಿತಪ್ರಚುರ ಕವಿನಿಚಯರ
ಚಿತರುಚಿರತರಬಿರುದಗದ್ಯಪದ್ಯಸಮುದಯಸಮುದ್ಘೋಷಸಹಚರಿತಮೃ
ದುಮೃದಂಗಮಂಗಳಸಂಗೀತಶೃಂಗಾರರಸತರಂಗಸಂಗತ ವಾರಾಂಗನಾವಿ
ಲಾಸಲಾಸ್ಯಶಿಂಜಾನಮಂಜುಳಮಂಜೀರಧ್ವನಿಪ[illegible]ಪಟಹಶಂಖಭೇರೀತಾ
ಳಜಂಬುಕಮುರಜಢಕ್ಕಾತಂಬಟವೇಣುವೀಣಾಕಾಹಳಾದ್ಯನೇಕಲೋಕಾ
ಕರ್ಣನಕೌತುಕಕರಹೃದ್ಯಾನವದ್ಯವಾದ್ಯನಿನಾದಬಧಿರೀಭೂತಸಕಲದಿಶಾ
ನಿವೇಶ ಪರಾಕು! ಶುಂಭನ್ನಿತಂಬಸ್ಥಲೋಪಲಂಭಿತಕೌಸುಂಭಾಂಬ
ರೋಪರಿಚುಂಬಿತಮೇಖಲಾವಳಯಕಲಿತಕಲಕಿಂಕಿಣೀಗಣಝಣಝಣರ
ಣಿತಸಂಕರಕಂಕಣನಿನದಮನೋಜ್ಞಕರಸರಸಿಜತರುಣೀಜನಚಾಲಿತಚಾ

ಮುರರಂಜಿತಪಾರ್ಶ್ವಯುಗ್ಮ ಪರಾಕು! ಪಾಂಡ್ಯಮಂಡಲಾಧಿಪತುಂಡವಿಖಂಡನತಾರ್ಕ್ಷ್ಯ ಕೇರಳಧರಣೀಶ್ವರನೀರದಪ್ರಚಂಡಪ್ರಭಂಜನ, ಅಂಗಭೂಪಾಂಧಕಾರಪತಂಗ, ವಂಗರಾಜತುರಂಗಶಾರ್ದೂಲ, ತುರುಷ್ಕಸರಸಿಜವನಕುಂಜರ, ಬಾಹ್ಲೀಕಪಾರ್ಥಿವಸ್ವಾಂತಕುಂತ, ಮಲಯಾಳಧರಾಧಿಪಶಿಲೋಚ್ಚಯಕುಲಿಶದಂಡ, ಕಳಿಂಗವಿಭುಲತಾಲವಿತ್ರ, ಕಾಶ್ಮೀರಪ್ರಭುಕಪೋತಶ್ಯೇನ, ಮಾಗಧಪತಿಕರ್ದಮನಿದಾಘಾತಪ, ಸಿಂಧುರಾಜನ್ಯಮದಸಿಂಧುರಹರ್ಯಕ್ಷ, ಪರಾಕು! ಬರ್ಬರನಾಯಕ ಕುವಲಯಪ್ರಚಂಡಮಾರ್ತಾಂಡ ಪರಾಕು! ವಿದರ್ಭನರನಾಥರಥಾಂಗಸುಧಾಮಯೂಖ, ಆಂಧ್ರಕ್ಷಿತೀಂದ್ರಹೃದಯಶೂಲ, ಕಾಂಭೋಜಕುಂಭಿನೀಧವಾಂಬೋಧಿಕುಂಭಸಂಭವ, ವರಾಟನರೇಶ್ವರಾಟವೀಪಟುವೀತಿಹೋತ್ರ, ಕುರುಧರಣೀವರತರುಕುಠಾರ, ಸೌವೀರವಲ್ಲಭಶರಭಭೇರುಂಡ, ನೇಪಾಳಕ್ಷ್ಮಾಪಾಲಮತ್ಸ್ಯನಿಗ್ರಹಣಬಡಿಶದಂಡ, ಸಿಂಹಳಗಂಹರೀಭರ್ತೃಮಸ್ತಕಾಂಕುಶ, ಮಾಳವಪೃಥ್ವೀಮರ್ಮವಿಭೇದನ, ಶೂರಸೇನಭೂಭೃದ್ವಿಕ್ರಮವಿಭಾಡ ಪರಾಕು! ಮರುಯವನವಿಶ್ವಂಭರೇಶಮದಿತಮದನಮದಹರರುದ್ರ, ನಿಷಧವಸುಧಾಪರಿವೃಢಗರ್ವನಿರ್ವಾಪಣ, ಸೇವಣಭೂಸ್ವಾಮಿಪ್ರಭಾವನಿಬರ್ಹಣ, ಮಾದ್ರವಸುಂಧರೇಂದ್ರಗೌದ್ರವಿದ್ರಾವಣ, ಅವಂತೀಚೋಳಗುರ್ಜರಲಾಟಮೋಟಕಗೌಳಪಾರಸಿಕಕರೂಷಕೋಸಲಚೇದಿಬಂಗಾಳಪಾಂಚಾಳಗಾಂಧಾರಹಮ್ಮೀರಾದಿಸಕಲದೇಶಾಧೀಶಸಮುದಯಸೈಕತಸೇತುಘ್ನಸಿಂಧುಪ್ರವಾಹ ಪರಾಕು! ನಿತ್ಯಸ್ಥಿರಾಮಾತ್ಯಸಂದೋಹ ಧರಣೀಶ್ವರಸಮೂಹ ಕವಿನಿವಹ ಗಮಕಿಶ್ರೇಣಿ ವಾದಿಸ್ತೋಮ ವಾಗ್ಮಿಕಸಂತಾನ ವಿಬುಧವಿತಾನ ಗಾಯಕನಿಕಾಯ ನಟಸಮುದಯ ಸಂಧಿವಿಗ್ರಹಿಸಂಚಯ ಭೃತ್ಯಜನವರ್ಗ ಭಟನಿಕುರುಂಬ ರಥಿಕಯೂಥ ಜೋದಕದಂಬ ವಾಹಳಿಕವ್ಯೂಹ ಸಚಿವನಿಚಯ ವಿಪ್ರಪ್ರಕರ ರಸಿಕವಿಸರ ವಂದಿವೃಂದ ವಾರಕಾಂತಾವಾರ ಸಮಂಚಿತಕಾಂಚನಮಣಿಮಯಸಭಾಮಂಟಪರಂಜಿತ ಸಿಂಹಾಸನಾರೂಢ, ಪ್ರಸನ್ನವದನಾರವಿಂದಮಧುರಮಯಭಾಷಣ, ಸುಧರ್ಮಪ್ರತಿಪಾಲಕಸೌಭಾಗ್ಯಸಂಯುತ, ಯಜನಾಧ್ಯಯನದಾನತ್ರಯನಿರತ, ಪ್ರಭುಮಂತ್ರೋತ್ಸಾಹಶಕ್ತಿತ್ರಯಸಮೇತ, ಸಾಮದಾನಭೇದದಂಡ

ಚತುರೋಪಾಯಕುಶಲ, ಸುಗಂಧವನಿತಾವಸ್ತ್ರಗೀತತಾಂಬೂಲಭೋಜನಶಯ್ಯಾವಿಭೂಷಣಾದ್ಯಷ್ಟಭೋಗಧುರಂಧರ, ದಾಸೀಭೃತ್ಯಸುತಮಂತ್ರಿವಸ್ತುವಾಹನಧನಧಾನ್ಯಸುವನ್ನ, ಶೋಭನಾಂಗ, ಪ್ರತಿಜ್ಞಾಪರಶುರಾಮ, ದುಷ್ಟನಿಗ್ರಹ, ಶಿಷ್ಟಪ್ರತಿಪಾಲಕ, ಅದ್ವೈತಪರಾಕ್ರಮ, ವೀರಾಗ್ರೇಸರ ರಾಜಾಧಿರಾಜ, ರಾಜಪರಮೇಶ್ವರ ರಾಜಮಾರ್ತಂಡ, ರಾಜಹಂಸ, ಯಾದವಕುಲಚೂಡಾರತ್ನ, ಆತ್ರೇಯಗೋತ್ರೋದ್ಭವ, ಬಿರುದಂತೆಂಬರಗಂಡ, ಮಹಿಷಪುರವರಾಧೀಶ್ವರ, ಯಾಚಕಜನಮಂದಾರ, ಶರಧಿಗಭೀರ, ದೇವಭೂವರಕುಮಾರ, ಸತ್ಯಭಾಷಾಹರಿಶ್ಚಂದ್ರ, ವೈಭವದೇವೇಂದ್ರ, ಚಿಕದೇವರಾಯ, ಮಹಾರಾಜೇಂದ್ರಚಂದ್ರ, ಪರಾಕು! ವಿಜಯೀಭವ! ವಿಜಯೀಭವ!

ವೀರರ ದೇವನಾಗು ರಮಣೀಜನಮನ್ಮಥನಾಗು ಸಂತತೋ ।
ದಾರಗುಣಾಢ್ಯನಾಗು ಕರುಣಾರಸಸಾಗರಚಂದ್ರನಾಗು ಸ ॥
ತ್ಪೂರಿತಕಾಮನಾಗು ವಿಬುಧಾವಳಿವಾಂಛಿತದಾನಕೃತ್ಯಮಂ ।
ದಾರಸಮಾನನಾಗು ಚಿಕದೇವ ಮಹೀಶ್ವರ ರಾಜಶೇಖರಾ ॥ ॥೧೩೫॥

ಮಂಗಳರೂಪನಾಗು ಸಮರಾಂಗಣಶುಭ್ರತುರಂಗನಾಗು ಸ ।
ತ್ಸಂಗತಿಲೋಲನಾಗು ಪರಭೂವರಮೌಳಿನತಾಂಘ್ರಿಪದ್ಮನಾ ॥
ಗಿಂಗಿತವೇದಿಯಾಗಖಿಳಶಾತ್ರವಭಂಜನಚಿತ್ರನಾಗು ಕೀ ।
ರ್ತ್ಯಂಗನೆಗಾಳ್ದನಾಗು ಚಿಕದೇವಮಹೀಶ್ವರ ರಾಜಶೇಖರಾ ॥೧೩೬॥

ನಗಧೈರ್ಯಂಗೆ ನರಾಧಿಪಂಗೆ ನತಭೂಪವ್ರಾತಪಾಲಂಗೆ ಪ ।
ನ್ನಗಜಿದ್ವಿಕ್ರಮಸಂಯುತಂಗೆ ಜನಚಿತ್ತಾಹ್ಲಾದಕೃತ್ಯಂಗೆ ಮಂ ॥
ದಿಗಣಾಶಾಫಲದಾಯಕಂಗೆ ಕುಸುಮಾಸ್ತ್ರಾತ್ಯಂತರೂಪಂಗೆ ಶ್ರೀ ।
ಚಿಕದೇವಕ್ಷಿತಿಪಾಲಕಂಗೆ ಗುಣಭೂಷಂಗಂ ಜಯಂ ಮಂಗಳಂ ॥

ಇಂತೆಂದು ಸ್ತುತಿಸಿದ ವಂದಿಜನಕ್ಕೆ ಪಸಾಯನಮಿತ್ತು ಸಭಾಸ್ಥಾನದಿಂದೆರ್ದು ಬಂದು ಸಕಲರುಂ ತಂತಮ್ಮ ನಿವಾಸಂಗಳ್ಗೆ ಕಳಿಪಿ ಅರಮನೆಯಂ ಪೊಕ್ಕು ರಂಗನಾಥನ ಕೃಪೆವೆತ್ತು ಪೂರ್ವದ ಷೋಡಶಮಹಾರಾಜರಂ ಮಿಗಿಸಿ ಸುಖದಿಂ ವರ್ಣಾಶ್ರಮಧರ್ಮಂ ತಪ್ಪದಂತೆ ಭೂಮಂಡಲದ ಸಾಮ್ರಾಜ್ಯಮನಾಳುತಿರ್ದಂ.

ಚಿಕ್ಕದೇವೇಂದ್ರವಂಶಾವಳಿ ಸಂಪೂರ್ಣಂ.

KARNATAKA

# Kavya Kalanidhi Series,

No 4.

ಶ್ರೀನಿವಾಸಕವಿ ವಿರಚಿತ

ಶ್ರೀಮದ್ರಾಜಾಧಿರಾಜ ಶ್ರೀಕೃಷ್ಣರಾಜ ಸಾರ್ವಭೌಮ

# ವರ್ಷವರ್ಧಂತೀಶತಕಂ.

ಎಸ್. ಜಿ. ನರಸಿಂಹಾಚಾರ್

ಲೈಬ್ರೇರಿಯನ್ ಗಾರ್ನಮೆಂಟ್ ಓರಿಯಂಟಲ್ ಲೈಬ್ರರಿ ಮೈಸೂರ್,

ಮತ್ತು

ಎಂ. ಎ. ರಾಮಾನುಜೈಯಂಗಾರ್

ಅಸಿಸ್ಟೆಂಟ್ ಮಾಸ್ಟರ್ ವೆಸ್ಲಿಯನ್ ಮಿಷನ್ ಹೈಸ್ಕೂಲ್ ಮೈಸೂರ್

ಇವರುಗಳಿಂದ ಶೋಧಿಸಲ್ಪಟ್ಟು

ಮೈಸೂರ್:

ಸ್ಟಾರ್ ಪ್ರೆಸ್ಸಿನಲ್ಲಿ ಮುದ್ರಿತವಾಯ್ತು.

1901.

# ಪೀಠಿಕೆ.

ಈ ಗ್ರಂಥಕರ್ತನಿಗೆ ಶ್ರೀವಾಸನೆಂದು ಹೆಸರು. ಈತನು ಗೋಕರ್ಣನಿವಾಸಿ; ಶಾಂಡಿಲ್ಯಗೋತ್ರದ ವೈಷ್ಣವ ಬ್ರಾಹ್ಮಣನು. ಇವನ ತಂದೆಗೆ ನಾರಾಯಣನೆಂದು ಹೆಸರು. ಕವಿಯು ಮುಮ್ಮಡಿ ಕೃಷ್ಣರಾಜಒಡೆಯರವರ ವರ್ಷವರ್ಧಂತಿಯ ಮಹೋತ್ಸವವನ್ನು ನೋಡುವುದಕ್ಕಾಗಿ ಪತ್ನೀಪುತ್ರರೊಡನೆ ಗೋಕರ್ಣದಿಂದ ಮೈಸೂರಿಗೆ ಬಂದು, ಅಲ್ಲಿ ತಾನು ಕಂಡ ಮಹೋತ್ಸವದ ವಿಭವಗಳನ್ನೆಲ್ಲಾ ವಾರ್ಧಿಕಷಟ್ಪದಿಗಳಿಂದ ಈ ಗ್ರಂಥರೂಪವಾಗಿ ರಚಿಸಿದ್ದಾನೆ. ಇದರ ಬಂಧವು ಲಲಿತವಾಗಿಯೂ ಶುದ್ಧವಾಗಿಯೂ ಇದೆ.

ಇದರಲ್ಲಿ ರಾಜಧಾನಿಯಾದ ಮೈಸೂರು ನಗರದ ವರ್ಣನೆಯೂ, ವರ್ಧಂತೀಮಹೋತ್ಸವದಲ್ಲಿ ನಡೆವ ಎಲ್ಲಾ ಪದ್ಧತಿಗಳೂ ಕ್ರಮವಾಗಿ ವರ್ಣಿಸಲ್ಪಟ್ಟಿರುವುದರಿಂದ, ಮೈಸೂರು ದೇಶದ ಕನ್ನಡಿಗರಿಗೆಲ್ಲಾ ಇದು ಆಹ್ಲಾದಕರವಾಗದೆ ಇರಲಾರದು.

# ಶ್ರೀಮದ್ರಾಜಾಧಿರಾಜ ಶ್ರೀ ಕೃಷ್ಣರಾಜ ಸಾರ್ವಭೌಮ

# ವರ್ಷವರ್ಧಂತೀಶತಕಂ.

(ವಾರ್ಧಿಕ ಷಟ್ಪದಿ.)

ಶ್ರೀಕಮಲವಾಸಿನಿಯ ನೀಲಕುಂತಲಗಳಂ ।
ಶ್ರೀಕಮಲಲೋಚನೆಯ ಕಚ್ಛಪಾಂಘ್ರಿದ್ವಯಂ ।
ಶ್ರೀಕಮಲವದನೆಯ ಸುಕುಂದವರರದನಂಗಳಂ ಮಹಾಪದ್ಮೆಯೆಂಬ ॥
ಕೇಶವಪ್ರಿಯೆಯ ವರಶಂಖಸತ್ಕಂಠಮುಂ ।
ಶ್ರೀಕಾಮಿನೀಮದನರೇಖಾಕುಚಂಗಳುಂ ।
ಶ್ರೀಕರಮುಕುಂದರಮಣಿಯ ಕರವುಮೆಮಗಧಿಕಮೋದಮಂ ತಾಂ ಮಾಡುಗೆ ॥ ೧

ಸಾಗರಾತ್ಮಜೆಯ ನಸುನಗೆಗಳೇಂ ಪಸರಿಸಿತೊ ।
ಭೋಗಿವಲ್ಲಭಭೋಗಕಾಂತಿಗಳ್ ವ್ಯಾಪಿಸಿತೊ ।
ರಾಗರಹಿತರ ಮನದ ವಾಸದಿಂ ಸತ್ವಗುಣಮೆಟ್ಟ್ವೆರ್ದೆಂದೂಹಿಪ ॥
ವಾಗೀಶಮೂರುತಿಯ ಕಾಂತಿಮಯಚಂದ್ರಿಕೆಯ ।
ಸಾಗರಾಮೃತಪಾನಗೆಯ್ದು ಸಂತಸದಿಂದ ।
ಬೇಗದಿಂ ಬೆಂಬಿಡದೆ ನಲಿವ ಮನ್ಮಾನಸಚಕೋರಮೇ ಧನ್ಯಮಿಳೆಗೆ ॥ ೨

ಇಂದುಶಕಲಾಧರಾನಂದದಾಯಕಿಯೆ ಮುದ ।
ದಿಂದಲಾಯದುಕುಲದ ಭೂಪರಂ ಪಾಲಿಸಲು ।
ಬಂದು ಚಾಮುಂಡಿಯೆಂಬದ್ರಿಯೊಳ್ ನೆಲೆಗೈದು ಸುಂದರಾಂಗಿಯೆ ಬೇಗದಿ ॥
ಅಂದು ಯದುಕುಲತಿಲಕಚಾಮರಾಜೇಂದ್ರಂಗೆ ।
ಕುಂದದಂತಾಕುಲವು ಕುಂದೇಂದುರದನೆ ಮುದ ।
ದಿಂದ ಸಂತಾನಮಂ ಸಕಲಸೌಖ್ಯಗಳಿತ್ತು ಚಾಮುಂಡಿಕಾಂಬೆ ಸಲಹು ॥ ೩

ಜಲನಿಧಿಗಳೊಳ್ ಕ್ಷೀರಜಲಧಿ ರಾಜಿಸುವಂತೆ ।
ಲಲಿತಶೈಲಂಗಳೊಳ್ ಕನಕಗಿರಿ ಮೆಱೆವಂತೆ ।
ಲಲಿತಸರಸಿಗಳೊಳಗೆ ಮಾನಸಸರೋವರಂ ಪೊಳೆವಂತೆ ಮೇದಿನಿಯೊಳು ॥
ಫಲಿತದ್ರುಮಂಗಳಿಂ ಬೆಳೆಗಳಿಂ ಕೊಳಗಳಿಂ ।
ಸಲೆ ವಿರಾಜಿಸುತಿರ್ಪ ಕರ್ನಾಟಜನಪದಂ ।
[illegible] ದೇಶಂಗಳೊಳ್ ಸಕಲಸಂಪತ್ತಿ[illegible] ॥ ೪

ಆದೇಶಪರಸುಗಳ ಸಂತತಿಗೆ ಶೇಖರಂ ।
ಶ್ರೀದೇವಕೀತನಯಭಕ್ತಿರತ್ನಾಕರಂ ।
ಭೂದೇವಸಮುದಯಕೆ ಸಕಲಸಂಪತ್ಕರಂ ಶ್ರೀಕರಂ ಕೀರ್ತಿಕರನು ॥
ಆದರದಿ ನಿಜಕುಲದ ಜನಕೆ ಬೋಧಾಕರಂ ।
ಯಾದವಾನ್ವಯವೆಂಬ ಜಲಧಿಗೆ ಸುಧಾಕರಂ ।
ಶ್ರೀದಸದೃಶನು ಕೃಷ್ಣರಾಜನೃಪನೆಂಬರಸು ಸೊಗಸಿಂದ ರಾಜಿಸುವನು ॥ ೫

ಅವನಿಭುವಿನಪರಿಮಿತಸಂಭ್ರಮೋತ್ಕರ್ಷದಿಂ ।
ತೀವಿದೊಡ್ಡಂತಿಯುತ್ಸವದ ವರ್ಣನೆಯನತಿ ।
ಕೋವಿದಜನೋತ್ತಂಸ ನಾರಾಯಣಾಖ್ಯಸದ್ವೈಷ್ಣವತನೂಜಾತನು ॥
ಶ್ರೀವಾಸನೆಂಬೊರ್ವ ಶಾಂಡಿಲ್ಯಗೋತ್ರಸಂ ।
ಭಾವಿತಬ್ರಾಹ್ಮಣಂ ಕರ್ಣಾಟಭಾಷೆಯಿಂ ।
ಗೈವನದ್ಭುತವಾದ ವಾರ್ಧಿಕಸಷಟ್ಪದೀವೃತ್ತದಿಂ ಪದ್ಯರೂಪದೊಳ್ ॥ ೬

ದಿವ್ಯರತ್ನಾಕರಂ ಗುಂಜೆಯುಂ ಗ್ರಹಿಸುವಂ ।
ಭವ್ಯಗಂಗಾಧರಂ ಕಲಶಜಲಸೇವಕನು ।
ಮಾವ್ಯಯಪ್ರೀತಿಯಿಂ ಸ್ವೀಕರಿಪನುಂ ಮಾನ್ಯಸಾವಿತ್ರ್ಯನುಂ ಪ್ರೇಮದಿ ॥
ನವ್ಯಪೂಜೆಯೊಳೊಂದು ದೀಪಕೋಚಿತನಪ್ಪ ।
ಸೇವ್ಯವಿದ್ಯಾಸಿಧಿಗಳುಂ ಬಾಲಕಲ್ಪಿತದ ।
ಕಾವ್ಯಮಂ ಪ್ರೀತಿಯಿಂ ಗ್ರಹಿಪರೆಂಬಾಶೆಯಿಂ ಪೇಳ್ವೆ ನಾ ಸರ್ಗದುದ್ದಗಲಂ ॥ ೭

ಜಗದೊಡೆಯ ಮುಕ್ಕಣ್ಣ ಜಗವ ಜನವುಳಿವಂತೆ ।
ವಿಗಡವಿಷಮಂ ತನ್ನ ಕಂಠದೊಳ್ ತೊಡನಿಟ್ಟ ।
ನಗಜೆಯ ಪ್ರಿಯನಮೃತಕರನ ಸಿಖರದೊಳಗೆ ಪೊತ್ತು ತಾ ಮೆರೆಯಿಸುವನು ॥
ಸುಗುಣೈಕಪಕ್ಷರಾದಖಿಳಸಜ್ಜನರೆನ್ನ ।
ವಿಗುಣಕಾವ್ಯದೊಳಿರ್ಪ ದೋಷಂಗಳಂ ತಿದ್ದಿ ।
ಸುಗುಣವೆಳ್ಳಿಷ್ಟಿರ್ನೊರ್ಣಪದನೆ ಪರ್ವತದಂತೆ ಗೈವರು ಕರುಣದಿಂದ ॥ ೮

ಕಬ ಗಳ ಸರಣಿಯನ್ನರಿಯದವಪ್ರೌಢನಿಂ ।
ಕಬ ರಚನೆಯು ಪುಣ್ಯನೃಪಕಥಾಸಂಗದಿಂ ।
ದಬ ರದಿ ಸಜ ನರ ಮನಕೆ ಸಂತಪ್ತಿಯಂ ತಂದೀವಿರದೆಂಬೆನು ॥
ಸಬ ಜನರಿಂದರಿಯಬಹುದು ಸಕ್ಕರೆಯಿಂದ ।
ನಿಬ್ಬರದಿ ಕೂಡಿದಾಕೂಪಜಲವಂ ರಸಿಕ ।
ರಬಿ ಪತಿಸರಾಸದಿಂ ಕಾಣಿಸುದಿರ್ದರೆ ಪೇಳು ಕಬ್ಬಿಗರ ತಿಲಕರಿಂದು ॥ ೯

ಕನ್ನಡದ ಭಾಷೆಯಿದು ಸಂಸ್ಕೃತದ ಸೊಲ್ಲಿಂಗೆ ।
ಸನ್ನುತತ್ವದಿ ಸರಿಯು ಬಪ್ಪುದಲ್ಲೆಂದುಲಿವ ।
ರನ್ಯಗುಣದೂಷಕರ್ ತತ್ಕಾವ್ಯದ ಸಾರವಂ ನನ್ನಿಯಿಂ ತಾವಱಿಯದೆ ॥
ಕನ್ನೆಯರ ಕಲ್ಮಷದ ಕಾಯುವಂ ಬಣ್ಣಿಸುವ ।
ನನ್ಯಸಮಸಂಸ್ಕೃತದ ಸೊಲ್ಲು ಸಾಯುಜ್ಯವಂ ।
ಮುನ್ನಿಗಿತ್ತಪ್ಪೈ ಕನ್ನಡದ ಹರಿನಾಮ ಕೈವಲ್ಯವನ್ನೀಯದೆ ॥ ೧೦

ದುಷ್ಟರಾದವರಿಂದು ಮಾತ್ಸರ್ಯಗುಣದಿಂದ ।
ಶಿಷ್ಟರ ಕವಿತ್ವವಂ ಕೇಳದೆ ಕುಬುದ್ಧಿಯಿಂ ।
ತುಷ್ಟಿಸದೆ ಪ್ರೋದೊಷಾಸತ್ಕವಿತೆಗೇಂ ದೋಷಮುಪ್ಪುದೇ ಧಾರಿಣಿಯೊಳು ॥
ದುಷ್ಟಘೂಕಂಗಳುಂ ಜಾರರುಂ ಚೋರರುಂ ।
ಕಷ್ಟನಿವನೆಮಗೆಂದು ಭುವನಜನವೆಲ್ಲರ್ಗೆ ।
ತುಷ್ಟಿಪಡಿಸುವ ಕಮಲಬಾಂಧವನ ಬಯ್ದೊಡವಗೆಳ್ಳಷ್ಟು ದೋಷಮುಂಟೇ ॥ ೧೧

ಗೋಕರ್ಣಪತಿಶಯನ ಗೋರಾಶಿಜಾರಮಣ ।
ಗೋಕರ್ಣರಿಪುಗಮನ ಗೋಜಾತಸಮವದನ ।
ಗೋಕುಲೋಲ್ಲಸಿತಶುಭಗೋಕನಾಲ ಗೋವಿಂದ ಗೋಕರ್ಣನಗರದೊಡೆಯ ॥
ಗೋಕುಲಾಧ್ಯಕ್ಷ ವರಗೋಪನರಹರಿಯೆನ್ನ ।
ಗೋಕುಲಂಗಳ ತಾನೆ ಗೋಪತಿಯು ನಲಿವಂತೆ ।
ಗೋಕುಲಲಿಗಳು ಕೇಳ್ದು ಪದುಳಿಸಂತೀಕಾವ್ಯರಚನೆಯಪ್ಪಂತೆ ಗೈವಂ ॥ ೧೨

ಇಂತು ಪೀಠಿಕಾ ಸಂಧಿ.

## ದ್ವಿತೀಯ ಸಂಧಿ.

ಸೂಚನೆ ॥ ಜಗಕೆ ಪಾವನವಾದ ನಳಯುಧಿಷ್ಠಿರರಂತೆ ।
ಸೊಗಸಿಂದ ರಾಜಿಸುವ ಕೃಷ್ಣರಾಜೇಂದ್ರಾಖ್ಯ ।
ಸುಗುಣ ಪುಣ್ಯಶ್ಲೋಕರಾಯಸ್ತ್ವಸ್ತವಂ ಕವಿಯು ನಿಜಸತಿಗೆ ಪೇಳ್ದಂ ॥

ಪರಮಪಾವನವಾದ ಹೇಮಾಪಗಾತಟದೊ ।
ಳಿರೆಹಿರಣ್ಯಕಶಿಪುವ ಸೀಳ್ದ ನರಹರಿ ಪೊರೆಯು ।
ತಿರುವ ಗೋಕರ್ಣಪುರವರದೊಳಗೆ ವಾಸಿಪ ಶ್ರೀವಾಸನೆಂಬಾತನು ॥
ನರಹರಿಗೆ ಪೊಡೆಮಟ್ಟು ಮುದದಿಮಕ್ಕಳಕೂಡಿ ।
ಕರುಣಿ ಕೃಷ್ಣೇಂದ್ರನೊಡ್ಡಂತಿಯುತ್ಸವವಸತಿ ।
ಹರುಷದೊಳು ನೋಡಲ್ಕೆ ಪೊಱಮಟ್ಟು ಮಹಿಶೂರನಗರವಂ ಸಾರ್ದನಾಗ ॥ ೧

ಬಾಳೇಂದುಶೇಖರಪ್ರಿಯಳಿಗಾನಂದದಿಂ ।
ಪಾಲಯಂ ತಾನಾಗಿ ಪರಮಪಾವನ ತುಹಿನ ।
ಶೈಲದಂತಾರಾಜಿಸುತ ಸಕಲನಿಬುಧಜನಸಂಸೇವ್ಯವಾಗಿ ಮತ್ತೆ ॥
ತಾಳೆದಾಳಿಂಬಗಳು ತಿಲಕತರುನಿಂಬಗಳು ।
ಬಾಳೆಹಲಸುದ್ರೋಣಬಕುಳಚಂಪಕಬಾಣ ।
ಸಾಲಂಗಳಿಂ ಮೆಱೆವ ಚಾಮುಂಡಿಗಿರಿವರವ ನೀ ನೋಡು ಕಾಣ್ಬುದಿಲ್ಲಿ ॥ ೨

ಹರಿಪರಬ್ರಹ್ಮೇಂದ್ರವಹ್ನಿಯಮರಾಕ್ಷಸೇ ।
ಶ್ವರವರುಣವಾಯುಪೌಲಸ್ತ್ಯಪಂಕಜಮಿತ್ರ ।
ಹರಿಣಾಂಕರಂತಷ್ಟವಿಷಪಸವಿಬುಧಸದ್ರುಚಿಗಳಿಂ ಲಸಿತವಾಗಿ ॥
ವರಮಹಿಷಪಾಲಾಶರನಿಚಯಮಸಾರಂಗ ।
ವರಪುಣ್ಯಜನಗೋಕದಂಬಲಕ್ಷಣಗಳಿಂ ।
ಗಿರಿ ವಿರಾಜಿಸುತಿರ್ಪುದೇನೆಂಬೆ ನೋಡು ನೀ ಪುರದ ತೆಂಕಣ ದೆಸೆಯೊಳು ॥ ೩

ದಿಟ್ಟಪರಿಗರ್ಧಚಂದ್ರಾಕೃತಿಯೊಳಿರ್ಪನ್ನ ।
ದಿಟ್ಟ ಕುಸುಮಾಸ್ತ್ರನಂ ಮದನ ಶಿವನೆದೆಗೆಸೆಯೆ ।
ತಟ್ಟನತ್ಯುಗ್ರದಿಂದದು ಶಿವನ ವಕ್ಷದೊಳ್ ನಾಂಟಿ ನಿವಿಷಾರ್ಧದೊಳಗೆ ॥
ತಟ್ಟಿಗಿದು ತಲೆಯೊಳಗೆ ಪೊಱಟೆಂದುಮನಿಸಿತಾ ।
ನಟ್ಟಹಾಸದಿ ಮೆಱೆಯೆ ಶಿವಸಾಂಬನಾದ ಗಡ ।
ದಿಟ್ಟಿಸಿ ನ್ನೋಱ್ಪೆವೆಂದಗಸೆಗಳ್ ಗಗನಕಡಹಾಯ್ವಂತೆ ನಲಿವುವಿಲ್ಲಿ ॥ ೪

ಮಱೆಬಿಸಿಲುಗಾಳಿಗಳ ಬಾಧೆಗಳ ತಾ ತಾಳ್ದು ।
ಕಳವಳಿಸಿ ತಾಪದಿಂ ಬಂದ ದಾರಿಗರನ್ನು ।
ಸುಱಿದ ಮಾತ್ರದಿ ಛಾಯೆಯಿಂದ ವಿಶ್ರಮಗೊಳಿಸಿ ಕಲ್ಗಳಿಂ ಬಡಿಸಿಕೊಂಡು ॥
ಪುಱಿದೋರೆಕಾಯ್ಗಳಂ ಕೊಟ್ಟವರ ಹಸಿವನ್ನು ।
ಕಳೆದು ಸಜ್ಜನರಂತೆ ಪರಹಿತವ ಗೈವ ನವ ।
ತಳಿರಿಡಿದ ಮಾವುಗಳ್ ಫಲಪುಷ್ಪಭಾರದಿಂ ಮೆಱೆವುದೀಗಿರಿವರನೊಳು ॥ ೫

ಚಿಕ್ಕತನದಲಿ ತನಗೆ ತಕ್ಕಷ್ಟು ನೀರ್ಗಳ ।
ನ್ನಕ್ಕರದಿ ಪೊಯ್ದು ಪರಿಪಾಲಿಸಿದರಿವರೆಂದು ।
ಸಕ್ಕರೆಗೆ ಸದೃಶವಾದೆಳನೀರುಗಳ ತಮ್ಮ ಶಿರದೊಳಗೆ ಪೊತ್ತುಕೊಂಡು ॥
ಉಕ್ಕಿದತಿಹರುಷದಿಂ ನಿಜಜೀವವಿರುವನಕ ।
ಕಕ್ಕುಲಿತೆಬಿಡದೆ ಕೊಡುತಿಪ್ಪ ಕೆಂದೆಂಗುಗಳ್ ।
ಸೊಕ್ಕಿನಿಂ ಬೆಳೆದಿರ್ಪುವಿಲ್ಲಿ ಕೃತವಂ ಮಱೆಯದಿರುತಿರ್ಪ ಮನುಜರಂತೆ ॥ ೬

ಮೊಲ್ಲೆಮಲ್ಲಿಗೆಜಾಜಿ ಮಗಮಗಿಪ ವಾಸಂತಿ ।
ಸಲ್ಲಲಿತಕೇತಕಿಯು ಸುರಹೊನ್ನೆ ಮಾದವಿಯು ।
ಫುಲ್ಲಸೇವಂತಿಗೆಯು ಪಾದರಿಯು ಕಣಿಗಿಲೆಯು ಪಾರಿಜಾತವು ಸಂಪಗೆ ॥
ಅಲ್ಲಲ್ಲಿ ರಾಜಿಸುವ ಸನ್ನಾಗಕೇಸರವು ।
ಚಲ್ಲೆಗಣ್ಣಳ್ ನೋಡು ಚಟುಲಸುರಗಿಯ ಬೀಡು ।
ಸೊಲ್ಲಿಗಳವಡದೆಂಬ ಸುಮತರುಲತಾಳಿಗಳ್ ಸೊಂಪಿನಿಂದಿಲ್ಲಿರ್ಪುವು ॥ ೭

ಮಂದಮಾರುತನಟನು ಮಂದಗಮನದಿ ಬಂದು ।
ಚೆಂದದಿ ಲತಾಪಣ್ಯಸುಂದರಾಂಗಿಗಳನ್ನು ।
ನಿಂದು ವನಗರುಡಿಯೊಳ್ ಚೆಂದದಿಂ ನಟಯಿಸುವನೆಂದೆಂಬವೋಲ್ ನಟಿಸುವ ॥
ಇಂದುಧವಳಿತಕುಸುಮವೃಂದಸುಸ್ಮಿತದಿಂದ ।
ಬಂಧುರಸ್ತಬಕಕುಚದಿಂದಲುಂ ಜನಗಳಿಗೆ ।
ಚೆಂದಮಂ ತೋಱಿಸುವ ಕುಂದಾದಿಲತೆಗಳಿಲ್ಲೆಂಬೆಂದು ಶೋಭಿಸುವುವು ॥ ೮

ವನಮಾಲೆಯಿಂ ಮಿಳಿತವಾಗಿ ನಗವನು ಪೊತ್ತು ।
ವಿನುತವಿಬುಧೋತ್ತಮರಿಗಾಶ್ರಿತಂ ತಾನಾಗಿ ।
ದನುಜಾರಿಯನ್ನು ಮತ್ತರ್ಜುನಾವೃತವೃಕೋದರಲಲಿತನೆನಿಸಿಕೊಂಡು ॥
ಘನನಕುಲಸಹದೇವಶೋಭಿತನುಮಾಗಿ ಯಮ ।
ತನುಜನಂ ಸಮಗೊಳಿಸಿ ಸಶಿವಶಂಕರನೆನಿಸಿ ।
ಯನುದಿನಂ ಶಶಿಕಾಂತರುಚಿಗುಹಾಶ್ರಿತಮಾಗಿ ರಮಣೀಯಗಿರಿ ಮೆಱೆವುದು ॥ ೯

ಶುಕಶಾರಿಕಾನಿವಹಮಧುಮಧುರವಚನದಿಂ ।
ಪಿಕಪುಂಜಪರಿಪಠಿತಪಂಚಮಸ್ವರದಿಂದ ।
ಸುಕಲಷಟ್ಚರಣಗಳ ಸಂಗೀತರಾಗದಿಂ ಸೋಗೆಗಳ ಶಬ್ದದಿಂದ ॥
ಸುಕಪೋತಸಂತತಿಯ ಹೂಂಕಾರದಿಂದಲುಂ ।
ಸಕಲಸಿರಿಯಿಂದೆಸೆವ ಕೃಷ್ಣನೃಪನಿಲಯದಂ ।
ತಕಳಂಕಚಾಮುಂಡಿಗಿರಿಪರವು ಸಲೆ ವಿರಾಜಿಸುತಿರ್ಪುದೇವೇಳ್ವೆನು ॥ ೧೦

ದಿವ್ಯದೇವಾಲಯದ ದರ್ಶನದಿ ಲೋಚನಕೆ ।
ಭವ್ಯತೀರ್ಥಂಗಳುದಪಾನದಿಂ ರಸನೆಗುಂ ।
ನವ್ಯಸುಮಗಂಧದಿಂ ನಾಸಿಕಕ್ಕನಿಲಸಂಸ್ಪರ್ಶದಿಂದಲು ಚರ್ಮಕೆ ॥
ಹವ್ಯಕವ್ಯಂಗಳಿಂ ದೇವಪಿತೃಪೂಜೆಯುಂ ।
ಹವ್ಯವಹದೊಳ್ ಗೈವ ಮುನಿಮನುಗಳಿಂ ಕಿವಿಗೆ ।
ಯುವ್ಯಮಪ್ರೀತಿಯನ್ನಿಂತು ಪಂಚೇಂದ್ರಿಯಂಗಳ್ಗೆ ಪುದಿಸಿಬರಿಯು ॥ ೧೧

ಭೋಗಿಶಯನಾಂಶನಾದೀಕೃಷ್ಣಭೂಪಾಲ ।
ನೀಗ ತಾನಾವಾಸವಾಗಿರಲ್ ವೇಳ್ಕೆಂದು ।
ಬೇಗದಿಂದೀಗಿಳಿಯು ಬಡಗಡೆಸೆ ಸೈರಿರ್ಪ ವಿಪುಲದುಗ್ಧಾಬ್ಧಿಯಂತೆ ॥
ರಾಗದಿಂ ರಾಜಿಸುವುದೆಂದು ಪದ್ಮಾಕರಂ ।
ತ್ಯಾಗಿ ಕೃಷ್ಣೇಂದ್ರನಂತಖಿಳರಿಗೆ ಜೀವನವ ।
ಭೋಗಿಸಲು ಕೊಡುವುದಿನು ಕೃಷ್ಣನೃಪಮನದವೊಲ್ ಸ್ವಚ್ಛತರವಾಗಿರ್ಪುದು ॥ ೧೨

ಕೃಷ್ಣನೃಪಭುಜದಂತೆ ಭುವನಧಾರಣದಿಂದ ।
ಕೃಷ್ಣವಿಭುವಚನದಂತತಿಮಧುರರಸದಿಂದ ।
ಕೃಷ್ಣರಾಜಾಪಾಂಗದಂತೆ ಪದ್ಮಾಲಸಿತಲಾಸ್ಯದಿಂ ಶೋಭಿಸುವುದು ॥
ಕೃಷ್ಣನೃಪಸಭೆಯಂತೆ ಸುಕವಿಮಂಡಲದಿಂದ ।
ಕೃಷ್ಣನೃಪಮುಖದಂತೆ ಕಮಲಕಾಂತಿಗಳಿಂದ ।
ಕೃಷ್ಣರಾಜಾಧಿಪನ ಚಿತ್ತದಂತಾಮೋದದಿಂದ ಕೆರೆ ರಾಜಿಸುವುದು ॥ ೧೩

ಇಲ್ಲಿ ನೋಡೆಲೆ ಕಾಂತೆ ನಗರದೀಕೋಟೆಯಂ ।
ಸಲ್ಲಲಿತರತ್ನಮಯವಾದ ಬಾಗಿಲ್ಗಳಿಂ ।
ದಲ್ಲಲ್ಲಿ ರಾಜಿಸುವ ಕೊತ್ತಳಗಳಿಂದಲುಂ ಸಲೆ ವಿರಾಜಿಸುತಿರ್ಪುದು ॥
ನಲ್ಲೆ ಪದ್ಮೋದ್ಭವನು ಸೃಷ್ಟಿಸಿದ ಧರಣಿಯೊಳ್ ।
ಗೆಲ್ಲಿಯುಂ ಕಾಣೆ ನಾನಿದಱಗಳ್ತಿನಾಳವಂ ।
ಬಲ್ಲವರು ಜಗದೊಳಗೆ ಶೇಷಕೂರ್ಮರು ಪೊಱತು ಮತ್ತೊರ್ವರಿಲ್ಲ ಕಾಂತೆ ॥ ೧೪

ಭೂದೇವತೆಯ ದಿವ್ಯಭುಜಲತೆಗಳಂತೆ ಸುಮ ।
ಮೋದಾನುರಂಜಿತಸುಕಸ್ತೂರಿಕಾಮಲಯ ।
ಜೋದಕಗಳಿಂದಲತಿಶೀತಳಂಗಳುಮಾದ ರಾಜಬೀದಿಗಳ ನೋಡು ॥
ಆದರದಿ ನಿಜರಮಣರೊಡಗೂಡಿ ಕೇಳಿಯಂ ।
ಸಾದಿಸಾಯಾಸಮಂ ಕಳೆಯಲೋಸುಗ ಲಲಿತ ।
ಸೌಧವಾತಾಯನದಿ ಮುಖಗಳಂ ಚಾಚಿರ್ಪ ನಾರಿಯರ ನೋಡು ಕಾಂತೆ ॥ ೧೫

ಈನಗರಮಧ್ಯದೊಳು ಸಲೆ ವಿರಾಜಿಸುತಿರ್ಪ ।
ಭೂನಾಥಕೃಷ್ಣರಾಜೇಂದ್ರನರಮನೆಯನ್ನು ।
ನಾನೆಂತು ಪೊಗಳುವೆನು ಶೇಷನಿಗುಮಸದಳಂ ನೋಡಿ ಸುರಪತಿ ಮಣಿಯನು ॥
ಏನೆಂದು ಪೇಳುವೆನು ಮಂದಿರದ ಭಿತ್ತಿಯೊಳು ।
ತಾನೆ ಬಾಣಾಸುರಂ ಚಿತ್ರಮಂ ಬರೆದನೋ ।
ನೀ ನೋಡು ಮತ್ತೆರಡು ಕೈಯುಳ್ಳ ಜನರಿಂದಲಿದು ಬರೆಯಬಹುದೆ ರಮಣೀ ॥ ೧೬

ನವರತ್ನಕಾಂತಿಯಿಂ ಜಿತತಮನು ತಾನಾಗಿ ।
ನವಸುಧಾರೋಚಿಯಿಂ ಚಂದ್ರಿಕಾಯುತನಾಗಿ ।
ನವಕುಂಕುಮಾಸ್ತರಣದಿಂದಮಂಗಳನಾಗಿ ಸಭೆಯಿಂದ ಸಬುಧನಾಗಿ ‖
ನವಧನಗಳಿಂ ಯಕ್ಷಪತಿಗೃಹಕೆ ಗುರುವಾಗಿ ।
ನವಸರೋವರಗಳಿಂ ಕವಿವಿಲಾಸಿತವಾಗಿ ।
ನವಬುಧಪತಿಜನರಿಂದ ಮಂದಗತಿಯುತವಾಗಿ ಗ್ರಹ ನೃಪಗೆ ಸುಖವಿರ್ಪುದು ‖ ೧೩

ಕೈಲಾಸಗಿರಿಯಂತೆ ಶ್ರೀಮೋದವಿಲಸಿತಂ ।
ಶ್ರೀಲಕ್ಷ್ಮಿಯುರಸನಾಲಯುದಂತೆ ಹರಿಯುತಂ ।
ಪೌಲೋಮಿಯು ತ್ರಿಭುವನ ಭವನವಂತಪ್ಸರೋಗಣಯುತಂ ಸತ್ಯದಂತೆ ‖
ಕಾಲತ್ರಯಂಗಳೊಳು ವೇದಗಾನೋಲ್ಲಸಿತ ।
ಮಾಲಲಿತವರುಣಾವಮಂದಿರದಂತೆ ಬಹುರತ್ನ ।
ಜಾಲಸಂಶೋಭಿತಂ ತಾನೆಂದು ಕೃಷ್ಣರಾಜೇಂದ್ರನರಮನೆ ನಲಿವುದು ‖ ೧೪

ಭೋಗದಿಂದಿಂದ್ರನಂ ಸೌಮ್ಯದಿಂ ಚಂದ್ರನಂ ।
ತ್ಯಾಗದಿಂ ಶ್ರೀದನಂ ತೇಜದಿಂದರ್ಕನಂ ।
ರಾಗದಿಂ ಜಯಿಸಿರುವಶ್ರೀರಾಜನೆಂಬವರ ಭವನಂಗಳೊಂದುಗೂಡಿ ‖
ಈಗಲೀಯರಮನೆಯು ಚಂದದಿಂದೈದಿಯನು ।
ರಾಗದಿಂ ಶ್ರೀಕೃಷ್ಣರಾಜೇಂದ್ರಚಂದ್ರಂಗೆ ।
ಭೋಗಂಗಳನುದಿನಂ ಕೊಡುತಿರ್ಪವೆಂಬಂತೆ ತೋರುತಿದೆ ನೋಡು ಕಾಂತೆ ‖ ೧೫

ಈಮನೆಯೊಳುದ್ಯಾನಕಮಲಾಕರಂಗಳೊಳ ।
ಗೀಮಹಾವಿಭುಗೈವ ದಾನೋದಕಂಗಳುಂ ।
ಸಾಮಜಘಟಾಕರಟಗಳಿತಮದಜಲಗಳುಂ ಚಂದ್ರಕಾಂತಂಗಳಿಂದ ‖
ಕಾಮಿನೀವದನೇಂದುದರ್ಶನೋದ್ಗಳಿತಮಾ ।
ದೀಮಹಾಜಲಗಳುಂ ಶ್ರೀಕೃಷ್ಣಭೂಪನಿ ।
ತ್ತಾಮನಃಪಾಕನಕಮಂ ಪ್ರೋತ್ಸಾಹಿಪ್ಪ ಸ್ನಾನನಾರಿಗಳ ತಾಂಬಿರ್ಪುವು ‖ ೧೬

ಅಂದು ಹರಿ ನಿಜಜನನಿಗಾನಂದದಿಂ ಮುಖದಿ ।
ನಂದುನಿಜಭಕ್ತನಾದರ್ಜುನಗೆ ಸಂಗರದಿ ।
ಸಂದೇಹವಿಲ್ಲದೇ ಬ್ರಹ್ಮಾಂಡಮಂ ತೋರ್ದ ಬಗೆಗಳೀಪರಿಯೊಳು ‖
ಚೆಂದದಿಂ ಶ್ರೀಕೃಷ್ಣರಾಜನವತಾರದಿಂ ।
ನಂದನಿಜಜನರಿಂಗೆ ಕೃಪೆಯಿಂದ ತೋರ್ಪ [illegible] ।
[illegible] ‖ ೧೭

ಸುರವರರ ಮಹಿಮೆಗಳನಳವಟ್ಟ ಮಹಿಪತಿಯು ।
ಪರಮಪಾವನವಾದ ಮಂದಿರದ ವಿಭವಗಳ ।
ತರುಣಿ ನೀನೋಡಿದೆಯ ಕಣ್ಣಾರೆ ದಣಿದುಪೇ ಮತ್ತೊಮ್ಮೆ ಬೇಗ ನೋಡು ॥
ತರಣಿಯುಸ್ತಾದ್ರಿಯಂ ಸಾರ್ದನದುಕಾರಣಂ ।
ಪುರದೊಳಲ್ಲಾದರುಂ ಪೋಗಿಬಿದು ನಾಳೆ ನಾ ।
ವರಸನಾದೀಕೃಷ್ಣರಾಜನೊಡ್ಡಂತಿಯನ್ನುದಯದೊಳ್ ನೋಳ್ಪೆವೇಳು ॥ ೨೩
ಎಂದು ನಿಜಸತಿಸುತರನೊಡಗೊಂಡು ಕೆರೆಯೊಳಗೆ ।
ಬಂದು ಸಂಧ್ಯಾದಿಗಳ ಗೈದು ಸಂತೋಷದಿಂ ।
ನಂದನರುಸಹಿತ ರುಚಿಭೋಜನವ ಮಾಡಿ ನಿಜಸತಿರಚಿತಶಯನದಲ್ಲಿ ॥
ಇಂದೀನೃಪಾಲಕನ ಸಂಪದಾಲೋಕನವ ।
ಚೆಂದದಿಂ ಗೋಕರ್ಣನಗರನರಹರಿಯಿತ್ತ ।
ನೆಂದಾತನಂ ಮನದೊಳಿಟ್ಟು ಮಲಗಿದನಂದು ಕವಿಯು ನಿಜತನಯರೊಡನೆ ॥ ೨೪

ಇಂತು ದ್ವಿತೀಯಸಂಧಿ.

## ತೃತೀಯ ಸಂಧಿ.

ಸೂಚನೆ ॥ ಸಾಧುಜನರಂ ಪೊರೆಯಲೋಸುಗಂ ದುಷ್ಟರಂ ।
ಬಾಧಿಸಲು ಸದ್ಧರ್ಮಸಂತತಿಯ ನಿಲಿಸಲುಂ ।
ಶ್ರೀಧರಾಂಶದೊಳುದಿಸಿದೀಕೃಷ್ಣಭೂಪನೊಡ್ಡಂತಿಯಂ ಬಣ್ಣಿಸಿದನು ॥

ಗುರುತಲ್ಪಗಾಮಿ ದೋಷಾಕರಂ ಮಿತ್ರಸ ।
ತ್ತುರಕಾಂತಿಯೊಳ್ ಬಿನ್ನನಾಗುವೆಂ ನಟಜಟಾ ।
ವರಣಜಲದೊಳ್ ಪೊರಳುತಿರುವೆ ಸಕಳಂಕತನು ಬುಧಕತ್ತುವಾಗಿರ್ಪೆನು ॥
ಪರಮಜಡರಾತ್ರಿಚರನಾಗಿರುವೆನದರಿಂದ ।
ಸುರರಾಜಸದೃಶನಾದೀಕೃಷ್ಣರಾಜನೃಪ ।
ವರನ ಪರಮೋತ್ಸವದ ದರ್ಶನಕೆ ಪುಣ್ಯವೆನಗಿಲ್ಲೆಂದು ಶಶಿ ತೊಲಗಿದಂ ॥ ೧
ಧರಣಿಯೊಳು ದುಷ್ಟರನ್ನಡಗಿಸುತ ಸದ್ಗ್ರಹ ।
ಸರಣಿಯಂ ಪಾಲಿಸುತ ವಿಷ್ಣುಪದಭಕ್ತನಾ ।
ಗಿರುತ ಜಗದೊಳ್ ತಮಸ್ಸುಗಳನಪಹಾಸುತ್ತ ತನ್ನಂತೆ ರಾಜಿಸುವನು ॥
ಕರುಣಾರಸಾರ್ದ್ರನುಂ ಶಾಂತನುಂ ಶಿತಯಶೋ ।
ವರ ಚಂದ್ರಿಕಾಲಲಿತನಾಗಿರ್ಪನದ್ಭುತಂ ।
ಸರಿಯೆಂದು ಸೂರ್ಯನೀಕೃಷ್ಣನೃಪನುತ್ಸವವ ನೋಡಲೈತಂದನಾಗ ॥ ೨

ವರಪುಣ್ಯಜನವೈರಿ ಪುರುಹೂತನಗ್ನಿಯುಂ ।
ನಿರುತವಾಶ್ರಿತತತಿಯು ತಿಂಬನೀಸಮವರ್ತಿ ।
ವರದಕ್ಷಿಣಾಶೆಯೊಳ್ಪ್ರಯನೀತ ರಾಕ್ಷಸಂ ವರುಣನೋ ಜಡನಿಲಯನು ॥
ಮರುತನಿವ ರಂಧ್ರವಂ ಹುಡುಕುವಂ ಶಿವಸಖನು ।
ಪರಧನಾಸಕ್ತನೀಶಂ ವಿರೂಪಾಕ್ಷನೀ ।
ಧರಣಿಪಾಲಕಗಿವರು ಗುಣದಿ ಸರಿಯಲ್ಲೆನುತಲೊದಱಿದುವು ವಾದ್ಯಂಗಳು ॥ ೩

ಇಷ್ಟುವರುಷಗಳಿಂದ ಭೂಲೋಕದೊಳ್ ಪುಟ್ಟಿದ ।
ಕೃಷ್ಣಭೂಪಾಲನದಱಿಂದಲಲ್ಲಿರ್ಪವರು ।
ತುಷ್ಟಿಯಿಂ ನಿನ್ನ ಲೋಕವಾಸದಾಸೆಯುಂ ಬಿಟ್ಟು ಸುಖವಿರ್ಪರೆಂದು ॥
ವಿಷ್ಣುವಿಗೆ ಪೇಟಲೋಸುಗ ಬಹಳಘೋಷದಿಂ ।
ದಟ್ಟಹಾಸಂಗೈವ ಗುಂಡುಗಳ ಜನರು ಕಿವಿ ।
ಗೊಟ್ಟಾಲಿಸುತಕ್ಷತ್ರಕೃಷ್ಣನೃಪನೊಡ್ಡೋಲಗಮಂ ನೋಡಲನುವಾದರು ॥

ಗರುಡವಾಹನ ಹರಿಯೆ ನಿನ್ನಂಶಜಾತನಾ ।
ಗಿರುವ ಕೃಷ್ಣೇಂದ್ರನೊಡ್ಡೋಲಗಮಂ ನೀ ನೋಡ ।
ಬರಬಹುದೆ ಬೇಗದಿಂ ತಲ್ಪದಿಂದೇಳೆಂದು ಭೇರೀನಿನಾದಂಗಳು ॥
ಪರಮಸಂತೋಷದಿಂ ಹರಿಯನೆಬ್ಬಿಸಲಿಕ್ಕೆ ।
ಪರಮಪದವನ್ನಡರಲೋಸುಗಂ ಬ್ರಹ್ಮಾಂಡ ।
ಪರಕಟಾಹವನೀಗಳೊಡೆಯುತಿವೆಯೆಂಬಂತೆ ಸರ್ವರಿಗೆ ಕೇಳಿಸಿದುವು ॥ ೫

ಆಗಲೀಕವಿಯೆದ್ದು ಸತಿಯನೆಬ್ಬಿಸಿ ತಾನು ।
ಬೇಗ ಸಂಧ್ಯಾದಿಗಳನಾಚರಿಸಿ ಶುಚಿಯಾಗಿ ।
ನಾಗಶಾಯಿಯ ಹರಿಯ ಪೂಜೆಯಂಗೈದು ನಿಜಸತಿಸುತರ ಕೂಡಿಕೊಂಡು ॥
ತ್ಯಾಗಭೂಷಿತಕೃಷ್ಣರಾಜೇಂದ್ರನುತ್ಸವವ ।
ರಾಗದಿಂ ನೋೞ್ಪೆನೆಂದತಿಕುತೂಹಲಭರಿತ ।
ನಾಗಿ ಪೊಱಮಟ್ಟು ಶುಭಲಕ್ಷಣಗಳಿಂದಸೆವ ಬೀದಿಯೊಳ್ ಬರುತಿರ್ದನು ॥ ೬

ಗಂಗಮ್ಮ ನೀನೇಳ್ ರಂಗನಾಯಕಿ ಬಾರೆ ।
ಸಿಂಗಮ್ಮ ಬರುವೆಯೋ ಸಾವಿತ್ರಿ ತಡವೇಕೆ ।
ಸಿಂಗಮ್ಮ ನಿಮ್ಮತ್ತೆ ಯೇಕೆ ಬರಲಿಲ್ಲವೇ ಗಾಳಿ ನೀನೆಲ್ಲಿ ಪೋಪೆ ॥
ತಂಗಿ ಜಡೆಗಟ್ಟುವೆನು ಬೇಗೇಳು ಭಾಗಮ್ಮ ।
ಸಿಂಗರಿಸಿಕೊಳ್ಳು ಯಾಲಮೇಲಮಂಗಮ್ಮ ನೀ ।
ರಂಗಾಸ್ಥಾನವಂ ನೋಡೆ ಮತ್ತ್ಯಾರು ಬರುವರೆ ಕೇಳೆ ॥ ೭

ಬಾಯೊಳೊಂದಾದರುಂ ಹಲ್ಲಿಲ್ಲದಗಿಯುವರ ।
ನಾಯಾಸದಿಂದಲ್ಲಿಗಲ್ಲಿ ನಡುವೆತ್ತುವರ ।
ಕಾಯುವಂ ನಡುಗಿಸುತ ಕೋಲೂರಿ ನಡೆವವರ ಬಿಳಿದಲೆಯ ಕಟ್ಟಿನವರನು ॥
ರಾಯನಿಗೆ ಗೋಧಿಕಲ್ಲೆಣ್ಣೆ ಶಾಸ್ತ್ರಂಗಳಂ ।
ಗೈಯಲೋಸುಗ ತಮ್ಮ ಮಱಿಮಕ್ಕಳೊಡನೆ ಸುನಿ ।
ಕಾಯದಿಂದೈತಪ್ಪ ವೃದ್ಧಮುತ್ತೈದೆಯರ ತಂಡವಂ ನೋಡು ಕಾಂತೆ ॥ ೮

ಲಸದೂರ್ಧ್ವಪುಂಡ್ರಂಗಳಂ ಧರಿಸಿ ಮಲ್ಲಿಕಾ ।
ಕುಸುಮಮಾಲೆಗಳನ್ನು ಜುಟ್ಟುಗಳವಡಿಸುತ್ತ ।
ಬಿಸತಂತುಸದೃಶವಹ ಯಜ್ಞಸೂತ್ರಂಗಳಂ ಪದ್ಮಾಕ್ಷಮಾಲೆಯಿಂದ ॥
ವಸನದ್ವಯಂಗಳಿಂ ಶಂಖಚಕ್ರಾಂಕನವಿ ।
ಲಸಿತಭುಜಯುಗಳದಿಂ ನಿತ್ಯಸೂರಿಗಳಂತೆ ।
ವಸುದೇವಸುತಸದೃಶಕೃಷ್ಣನೃಪನೋಲೈಸಲೈತಹವರು ನೋಡು ಕಾಂತೆ ॥ ೯

ಫಾಲದೊಳು ಭಸ್ಮತ್ರಿಪುಂಡ್ರಭೂಷಿತರಾಗಿ ।
ಚೇಲಂಗಳನ್ನುಟ್ಟು ರುದ್ರಾಕ್ಷಮಾಲೆಗಳ ।
ಲೀಲೆಯಿಂ ಕಂಠಪ್ರದೇಶಮೊಳಗಳವಡಿಸಿ ಸುಫಲಮಂತ್ರಾಕ್ಷತೆಗಳ ॥
ಲೋಲಕರತಳದೊಳಗೆ ಧರಿಸಿ ಬಹುವೇಗದಿಂ ।
ಶೀಲಕೃಷ್ಣೇಂದ್ರನೃಪನುತ್ಸವವ ನೋಡಲ್ಕೆ ।
ಶೀಲೆ ಬರುವೀಸ್ಮಾರ್ತಸದ್ವಿಜರ ತಂಡವಂ ನೋಡಿ ನೀ ಧನ್ಯಳಾಗು ॥ ೧೦

ದಿವ್ಯಮುದ್ರಿಕೆಯಿಂದಲೂರ್ಧ್ವಪುಂಡ್ರಂಗಳಂ ।
ದಿವ್ಯಮುದ್ರೆಗಳನ್ನು ಫಾಲ ಕಾಯಂಗಳೊಳ್ ।
ದಿವ್ಯತುಲಸೀಮಣಿಯ ಮಾಲಿಕೆಗಳನ್ನು ನಿಜಕಂಠದೊಳ್ ಧರಿಸಿಕೊಂಡು ॥
ಭವ್ಯಮಂತ್ರಾಕ್ಷತೆಯ ಫಲಸಹಿತ ಕೈಕೊಂಡು ।
ಭವ್ಯಭೂಪಾಲಕನ ವರ್ಷದೊಡ್ಡಂತಿಯ ।
ನ್ನವ್ಯಯಪ್ರೀತಿಯಿಂ ನೋಡಲ್ಕೆ ಬರುವಮ್ವೈಷ್ಣವಶ್ರೇಷ್ಠರಿಲ್ಲಿ ॥ ೧೧

ನವರತ್ನಖಚಿತಮಾದಾಭರಣಜಾಲಮಂ ।
ನವದುಕೂಲಂಗಳನ್ನುಷ್ಣೀಶಶಾಲುಗಳ ।
ನವಸರದಿ ಕಾಯದೊಳ್ ತೊಟ್ಟುಟ್ಟು ಶಸ್ತ್ರಾಸ್ತ್ರನಿಕರಮಂ ಹಿಡಿದುಕೊಂಡು ॥
ಭುವನೈಕಮಾನ್ಯಕೃಷ್ಣೇಂದ್ರನೊಡ್ಡಂತಿಯು ।
ತ್ಸವದೊಳಗೆ ಕಾಣಿಕೆಯನಿತ್ತು ಪೊಡೆಮಡಲೀಗ ।
ಭವನದಿಂ ಪೋಪ ಕ್ಷತ್ರಿಯರ ಸಂಭ್ರಮವ ನೀನಿತ್ತ ನೋಡು ಕಾಂತೆ ॥ ೧೨

ಬಗೆಬಗೆಯ ರತ್ನಗಳ ಭಂಗಾರಹೊನ್ನುಗಳ ।
ಬಗೆಬಗೆಯ ಮುತ್ತಿನ ತುರಾಯಿಗಳ ಹಾರಗಳ ।
ಬಗೆಬಗೆಯ ವಸ್ತ್ರಗಳ ಬಹುವಸ್ತುಜಾಲಗಳ ಬಗೆಬಗೆಯ ಕುಂಡಲಗಳ ॥
ಬಗೆಬಗೆಯ ಗಜಗಳಂ ಕುದುರೆಗಳ ಮಂಚಗಳಂ ।
ಸೊಗಸಿಂದ ಶೋಭಿಪ್ಪೊಡ್ಡಂತಿಯುತ್ಸವದೊಳಗೆ ।
ಸುಗುಣಕೃಷ್ಣೇಂದ್ರಂಗೆ ಕೊಟ್ಟು ಕಾಲ್ಗೆ ಉಗಲೀವೈಶ್ಯರೈದುವರು ನೋಡು ॥ ೧೨

ಪರಿಪರಿಯ ಧಾನ್ಯಗಳ ಪೊತ್ತಿರುವ ಯೆತ್ತುಗಳ ।
ತರತರದ ಫಲಗಳಂ ತುಂಬಿರುವ ಭಂಡಿಗಳ ।
ಸುರಪುರದ ಸುರಭಿಸುಮಧೇನುಗಳ ಹೋಱಗಳ ಕೋಣಗಳ ತಗರುಗಳನು ॥
ಪರಿಪರಿಯ ಕಾಳಗವ ಕಲಿತ ಹಕ್ಕಿಗಳನ್ನು ।
ಧರಣೀಶಮೌಳಿಮಣಿ ಕೃಷ್ಣರಾಜೇಂದ್ರಂಗೆ ।
ವರುಷವೊಡ್ಡಂತಿಯೊಳ್ ಕೊಟ್ಟು ನಮಿಸುತ್ತಿರುವ ಶೂದ್ರರಂ ನೋಡು ಕಾಂತೆ ॥ ೧೩

ಸಂಚರಿಪ ಸುರತರುವೊ ಸುಕುಮಾರಸುರಮಣಿಯೊ ।
ಮಿಂಚುಸಿಡಿಲುಗಳಿಲ್ಲದಿರ್ಪ ಸನ್ಮೇಘವೋ ।
ಪಂಚಪಾಂಡವರಲ್ಲಿ ಪ್ರಿಯನಾದ ಕರ್ಣನೋ ಸುಜ್ಞಾನಸುರಧೇನುವೋ ॥
ಅಂಚೆ ವಾಹನವಾದ ಬೊಮ್ಮನೀನೃಪನಂ ಪ್ರ ।
ಪಂಚದ ದರಿದ್ರರಂ ಪೋಗಾಡಲೀ ನಿರ್ಮಿಸಿದ ।
ಚಂಚಲತ್ವವ ಬಿಟ್ಟು ಬನ್ನಿರೆಂದೆನ್ನುತ್ತ ಬರುವ ಯಾಚಕರ ನೋಡು ॥ ೧೪

ತ್ರಿಜಗದಧಿಪತಿಯಾದ ಶಕ್ರನೀಧರಣಿಯಂ ।
ಕುಜನರಾಕ್ರಮಿಸಿರ್ಪರವರ ಶಿಕ್ಷಿಸಿ ತಾನು ।
ಸುಜನರಂ ಪಾಲಿಸುವೆನೆಂದು ಸಂತೋಷದಿಂ ಕೃಷ್ಣೇಂದ್ರರೂಪನಾಗಿ ॥
ಪ್ರಜೆಗಳಂ ಪಾಲಿಸುವನೆನುತಿಲ್ಲಿಗಪ್ಪರೋ ।
ವ್ರಜವೈದಿತೋ ಎಂಬ ತೇಜದಿಂದಲರಮನೆಗೆ ।
ಸುಜನರಕ್ಷಕ ಕೃಷ್ಣರಾಜನನ್ನೋಲೈಸೆ ಪೋಪ ಗಣಿಕೆಯರ ನೋಡು ॥ ೧೫

ಇಂತು ಬರುತಿರುವ ಜನಸಂದಣಿಯ ನೋಡುತ್ತ ।
ಕಂತುಸಮವಿಗ್ರಹನರೇಂದ್ರನಂ ನೋಡಲ್ಕೆ ।
ಸಂತಸದೊಳಾಸ್ಥಾನಮಂಟಪಕ್ಕೈದಿದಂ ಸತಿಸುತರ್ಸಹಿತ ಕವಿಯು ॥
ಕುಂತಖಡ್ಗಾದಿದಿವ್ಯಾಯುಧಗಳಂ ಧರಿಸಿ ।
ನಿಂತಿರುವ ಭಟರ ಪಟುರವಗಳಂ ಕೇಳುತ್ತ ।
ಲಂತರಿಸಿ ನಿಂತಲ್ಲಿಸೇ ನೋಡ್ಬುಮೀನೃಪನನೆಂದು ನಿಜಸತಿಗೆ ಪೇಳ್ದಂ ॥ ೧೬

ಸಾಕೇತಪುರದ ದಿವ್ಯಾಸ್ಥಾನಮಂಟಪದಿ ।
ಭೂಕಾಂತ ರಾಮನೊಡ್ಡೋಲಗಂಗೊಡುವಂತೆ ।
ಲೋಕೇಶ್ವರಾಂಶದೊಳ್ಪುಟ್ಟಿದೀ ಕೃಷ್ಣರಾಜೋತ್ತಮಂ ರಾಜಿಸುವನು ।
ಈಕೃಷ್ಣರಾಜನಂ ನೋಡದವರಿಗೆ ಕಣ್ಣ ।
ನೇಕೆ ವಿಧಿ ಸೃಷ್ಟಿಸಿದನೋ ವೃಥಾಯಾಸದಿಂ ।
ನಾಕೆಮ್ಮ ಕಣ್ಣುಗಳ್ ಸಫಲನಾದುವು ಕಾಂತೆ ನಾವೇ ಕೃತಾರ್ಥರಿಂದು ॥ ೧೮

ಅಂದು ಹರಿಯುಂಗುಟದಿ ಗಂಗೆ ಪುಟ್ಟಿದ ತೆಱದೊ ।
ಳಿಂದು ನಖಕಾಂತಿಯೆಂಬಮರಗಂಗೆಯು ನೃಪನ ।
ಚೆಂದವಾದಂಗುಲಿಗಳಿಂ ಪೊಱಮಡುತಿದೆ ನೋಡು ಕಾಂತೆಯಿನಗಂಗೆಯಲ್ಲಿ ॥
ಸುಂದರಾಕೃತಿಯಿಂದ ಶೋಭಿಸುವ ಜಲರುಹಗ ।
ಳೆಂದು ಜನರೆಂಬಂತೆ ಪದಗಳಾರಾಜಿಪುವು ।
ಕುಂದನಸ್ಮಿತೆ ನೋಡು ಕೃಷ್ಣಭೂಪಾಲಕನ ಸೊಬಗೆಂತು ಬಣ್ಣಿಸುವೆನು ॥ ೧೯

ಈನದಿಯ ಸಂಗಮದಿ ಶೋಭಿಪ ಸರಸ್ವತಿಯೊ ।
ಳೀ ನೋಡು ನವಿಪ ಸಾಮಂತರಾಜೋತ್ತಮರ ।
ಭಾನುಕಿರಣೋಜ್ಜ್ವಲಿತಮೌಳಿರತ್ನಪ್ರಭಾಜಾಲವಂ ಕಣ್ಮುಚ್ಚುವೇ ॥
ಈನದೀತ್ರಯದೊಳಗೆ ಕೂಡಿರಲ್ಬೇಕೆಂದು ।
ಭಾನುತನುಜಾತೆ ಬಂದಿರುವಳೋ ಎಂಬಂತೆ ।
ಯಿನೀಲಮಣಿಪಾದಪೀಠಕಾಂತಿಗಳೀಗ ಪಸರಿಸುತ್ತಿವಿಲ್ಲಿ ನೋಡು ॥ ೨೦

ಪಾವನತರಂಗಳಾದೀನದೀತ್ರಯಗಳೀ ।
ಪಾವನಾಕೃತಿಯಾದ ಕೃಷ್ಣರಾಜಾಂಘ್ರಿಯೊಳ್ ।
ತಾವು ನೆಲೆಯಾಗಿರ್ಪವೆಂದು ಜನಕಾಪನೆಯು ಕೌತುಕದಿ ನೋಡಲೀಗ ॥
ಶ್ರೀವಿಲಾಸಿತವಾದ ನೃಪನ ಕಟಿತಟದಿಂದ ।
ತಾ ವಿನೋದದಿ ಕಾಲ ವರೆಗಿಱಿದು ಶೋಭಿಪ್ಪವೊ ।
ಭಾವಿಸುತ ನೋಡು ಕೃಷ್ಣೇಂದ್ರನೃಪನುಟ್ಟ ಕನಕಾಂಬರದ ಕಾಂತಿಯನ್ನು ॥ ೨೧

ಭೋಗವಿಲಸಿತನಾಗಿ ಬಹುರತ್ನಚಯದಿಯಾ ।
ವಾಗಲುಂ ಶೋಭಿಸುತ ಶಾರ್ಙ್ಗಪಾಣಿಯು ಭಕ್ತ ।
ನಾಗಿ ಭೂಭಾರವಂ ತನ್ನಂತೆ ಕೃಷ್ಣನೃಪ ಧರಿಸಿರ್ಪನೆಂದು ಕೇಳಿ ॥
ಭೋಗೀಶನ್ಮೈತಂದು ಭೂಪನಂ ತಕ್ಕೈಸೆ ।
ಬೇಗ ಕನಕಾಂಬರದ ಕಾಂತಿಯಿಂ ಹೊಂಬಣ್ಣ ।
ನಾಗಿರುವನೆಂಬಂತೆ ರಾಜಿಸುವ ಚಿನ್ನದೀನೇವಣಿಪ ನೋಡು ಕಾಂತೆ ॥ ೨೨

ನವರತ್ನಖಚಿತವಾದಂಗಿಯುನ್ನಳವಟ್ಟು ।
ಕುವಲಯದಳಶ್ಯಾಮಕೃಷ್ಣಭೂಪಾಲಕಂ ।
ಕುವಲಯಪ್ರಿಯನಾಗಿ ರತ್ನಭುಜಭಾಪುರಿಗಳಂ ತೊಟ್ಟು ಶೋಭಿಸುವನು ॥
ಭುವನಜನರ್ಗೆ ಕೊಡುವ ದಾನಜಲದೂರ್ವಿಕೆಗ ।
ಳಿವು ಹಸ್ತಭೂಷಣಗಳಾಗಿರ್ಪ ನೃಪನ ಪ ।
ಲ್ಲವಪಾಣಿಯಿಂ ರತ್ನದೂರ್ವಿಕೆಗಳಾರಾಜಿಸುವುವು ನೀ ನೋಡು ಕಾಂತೆ ॥ ೭೩

ಕಸ್ತೂರಿಯ ತಿಲಕದ ಕಳಂಕಿನಿಂದಧರದ ।
ತ್ಯುತ್ತಮಸುಧಾರಸದ ಶೋಭೆಯಿಂ ಸರ್ವದಾ ।
ಚಿತ್ತದಿ ರಾಜಿಸುವ ಸಕಲಸತ್ಕಳೆಗಳಿಂ ರಾರಾಜವಾನಸಾದ ॥
ಚಿತ್ತಜಾಕೃತಿಯಿಂದ ಶೋಭಿಸುವ ಕೃಷ್ಣರಾ ।
ಜೋತ್ತಮನ ವದನೇಂದುಬಿಂಬವನ್ನೋಲೈಸ ।
ಲಿತ್ತ ಬಂದುಡುಮಾಲೆಯೆಂಬಂತೆ ಮುತ್ತುಗಳ ಹಾರಗಳು ರಾಜಿಸುತ್ತವು ॥ ೭೪

ಮಗನಿಗೆ ಸಹಾಯಮಂ ಮಾಡಬೇಕೆಂತೆಂದು ।
ಜಗದೀಶನಾದಿಂದ್ರನಾಗ ನಗರಿಯ ಪೊಕ್ಕು ।
ಸುಗುಣಿ ಕರ್ಣನ ಬೇಡಿತಂದು ನಿಜಕಾರ್ಯವಮಂ ಸಂತಸದಿ ಮಾಡಿಕೊಂಡು ॥
ಜಗದ ಜನರೆಲ್ಲರುಂ ಮೆಚ್ಚುವಂತೀಚರಮ ।
ಯುಗಕರ್ಣನೆನಿಸಿಕೊಂಡಿರುವ ಕೃಷ್ಣೇಂದ್ರನೃಪ ।
ನಿಗೆ ಕೊಟ್ಟನೆಂಬಂತೆ ರತ್ನಮಯಕುಂಡಲಗಳಾರಾಜಿಸುವುವು ನೋಡು ॥ ೭೫

ಅಂದು ಘನವೃಷ್ಟಿಯಿಂ ಗೋಪರಂ ಪಾಲಿಸಲು ।
ನಿಂದು ಗೋವರ್ಧನಾಚಲವ ಮಧುಸೂದನಂ ।
ಚೆಂದದಿಂ ಪೊತ್ತವೋಲ್ಕೃಷ್ಣರಾಜೋತ್ತಮಂ ನವರತ್ನಮಕುಟವನ್ನು ॥
ಸುಂದರಶಿರಸ್ಸಿನೊಳು ಧರಿಸಿ ಭೂಮಿಯ ಜನರ ।
ನಂದದಿಂ ಪಾಲಿಸುವನೀನೃಪೋತ್ತಮನ ಶುಭ ।
ಸಂದರ್ಶನಂ ಪುಣ್ಯಶಾಲಿಗಳಿಗಲ್ಲದೇ ಮಿಕ್ಕವರಿಗೇಂ ದೊರೆಗುಮೇ ॥ ೭೬

ನವರತ್ನಖಚಿತಮಕುಟಾಗ್ರದೊಳ್ವಿಭ್ರಾಜಿ ।
ಸುವ ಸೂರ್ತಿಮುತ್ತಿನ ತುರಾಯಿಗಳ ಕಾಂತಿಗ ।
ಳ್ತನೆ ಗುಂಪುಗೂಡಿ ಮೇಲ್ಮಂಡಲಾಕೃತಿಯಿಂದ ರಾಜಿಸುವುವೆಂಬ ತೆರದಿ ॥
ಕವಿಕಲ್ಪತರುಕೃಷ್ಣನೃಪನ ಮೇಲ್ಭಾಗದೊಳ್ ।
ಸುವಿಶಾಲವಾಗಿ ಶೋಭಿಸುವ ಧವಳಾತಪ ।
ತ್ರವ ನೋಡು ಕಾಂತೆ ನೀರಾಕೇಂದುಬಿಂಬಸಾಕಾರವಾಗಿರ್ಪುದಿಲ್ಲಿ ॥ ೭೭

ಸುರರು ಪೂಮಳೆಗಳಂ ಕೃಷ್ಣರಾಜೋತ್ತಮನ ।
ವರಶಿರೋಭಾಗದೊಳ್ ಪರಮಸಂತೋಷದಿಂ ।
ಸುರಿಯಲವು ಮಕುಟದೊಳ್ ಬಿದ್ದೆರಡುಪಾಲಾಗಿ ವ್ಯಜನಗಳ ಗಾಳಿಯಿಂದ ॥
ಪರಿದು ವ್ಯೋಮಾಗ್ರಕ್ಕೆ ಪೋಪುವೆಂಬಂತೆ ವರ ।
ತರುಣಿಯರ್ಕರಗಳಿಂ ಢಾಳಿಸುತ್ತಿರುವ ಶಿತ
ತರಚಾಮರದ್ವಯಂ ಶೋಭಿಸುವುದೀಗಳಿದ ಬೇಗದಿಂ ಕಾಂತೆ ನೋಡು ॥ ೨೮

ಈಮಹಾದುಃಖಸಂಸಾರದೊಳ್ ಬಿದ್ದ ಜನ ।
ರಾಮಹಾಭೃತ್ಯ ಹರಿಯೋಗಿ ಪೇಳಿದ ತೆರದೊ ।
ಶ್ರೀಮಹಾವಿಭು ಕೃಷ್ಣಭೂಪನೇ ಪ್ರಭು ವಿಷ್ಣು ಭಾವಜ್ಞ ನಿರ್ಲೋಭನು ॥
ಶ್ರೀಮಹಿಷನಗರದೊಳು ಸಲೆ ವಿರಾಜಿಪನೀತ ।
ನೇ ಮಹಾಸಾರವಾದಾಶ್ರಯಂ ತಮಗೆಂದು ।
ಕಾಮಿತವನೀವ ಕೃಷ್ಣೇಂದ್ರಭೂಪಾಲನನ್ನೋಲೈಪರಿಲ್ಲಿ ನೋಡು ॥ ೨೯

ಶ್ರೀಕೃಷ್ಣಭೂಪನೇ ಶೂರನುಂ ಧೀರನುಂ ।
ಶ್ರೀಕೃಷ್ಣಭೂಪನೇ ತ್ಯಾಗಿಯುಂ ಭೋಗಿಯುಂ ।
ಶ್ರೀಕೃಷ್ಣಭೂಪನೇ ದುಷ್ಟಶಿಕ್ಷಕಶಿಷ್ಟಪಾಲಕಂ ಕರುಣಾಬ್ಧಿಯುಂ ॥
ಶ್ರೀಕೃಷ್ಣಭೂಪನಂ ಪೋಲ್ವರಾರುಂಟೆಯೊ ।
ಶ್ರೀಕೃಷ್ಣಭೂಪನೇ ದೀನಸಂತತಿಗೆ ಸ ।
ಪ್ರೋತ್ಕೃಷ್ಟದಾಯಕನುಯೆಂದೆನುತ ವಂದಿಗಳ್ ಸ್ತುತಿಸುವರ್ ಕೇಳು ಕಾಂತೆ ॥ ೩೦

ಪಟಹಡಿಂಡಿಮಢಕ್ಕೆಕಹಳೆನವಪತ್ತುಗಳ್ ।
ಸ್ಫುಟಗಳಾದಿಂಗ್ಲೀಷುವಾದ್ಯಗಳ ಸಾಲುಗಳ್ ।
ಪಟುವಾದ ಬಾರುತಂಬೂರಿತುತ್ತೂರಿಗಳ್ ಭೇರಿನಿಸ್ಸಾಳಂಗಳು ॥
ಕಠಿನದುಂದುಭಿಡಮರುತಾಳಮದ್ದಳೆಗಳುಂ ।
ಚಟುಲವಾದೋಲಗಗಳುಂ ಕೂಡಿ ಸಕಲದಿ ।
ಕ್ತಟಗಳೊಳ್ ಮೊಳಗುತಿವೆ ಕುಟಿಲಕುಂತಳೆ ಕೇಳು ನೀನಿವುಗಳೆಲ್ಲಿ ಕೇಳ್ವೆ ॥ ೩೧

ಶೋಭನಾನ್ವಿತನಾದ ಕೃಷ್ಣರಾಜೇಂದ್ರಂಗೆ ।
ಶೋಭನವ ಪಾಡಿಯಾರತಿಯನೆತ್ತುವರನ್ನು ।
ಶೋಭನಾಕ್ಷತೆಕುಸುಮಫಲಗಳಂ ಕೊಡುವರಂ ನಜರಿತ್ತು ನಮಿಸುವರನು ॥
ಶೋಭನಸ್ವರದಿಂದ ವೀಣೆಯಂ ನುಡಿಸುವರ ।
ಶೋಭನಕ್ರಮದಿಂದ ನರ್ತನಂ ಗೈವವರ ।
ಶೋಭನಸ್ತುತಿಗಳಿಂ ಜಯಶಬ್ದವಂ ಪೇಳ್ವ ಜನರ ಸಂಭ್ರಮವ ನೋಡು ॥ ೩೨

ಈವಿಧುವಿನೊಷ್ಟಂತಿಯುಂ ನೋಡ್ಪ ಸಮಯದೊಳ್ ।
ಸ್ತ್ರೀವಿಲಾಸಿನಿಯೊರ್ವಳಂತಃಪುರಂಗಳೊಳ್ ।
ಭಾವಜಾಂಗನೆ ರತಿಯು ಸೊಬಗುಳ್ಳ ರಾಣಿಗಳ ದರ್ಶನವಗೈದು ಬಂದು ॥
ಈವಿಪ್ರವಂಪತಿಗಳಡಿಯೊಳಗೆೈನಿಂದಿರ ।
ಲ್ಕೀವಿದಾನಂದದಿಂದೀದ್ವಿಜೋತ್ತಮನ ಸತಿ ।
ರೂಪವನಿತೆಯುಂ ನೋಡಿ ಕೇಳ್ದಳಂತಃಪುರದ ಮಹಿಷಿಗಳ ಸೊಬಗನಂದು ॥ ೨೩

ಎಲೆ ಮಾನಿನೀಮಣಿಯೆ ಕೃಷ್ಣಭೂಪಾಲಕನ ।
ಲಲಿತಮಾದಾಕೃತಿಯು ಲಾವಣ್ಯಮಂ ನೋಡಿ ।
ಫಲಿತಮಾಯ್ತೆಮ್ಮ ನಯನೋತ್ತಮಮಹೀರುಗಳೀನೃಪನ ಮಹಿಷಿಗಳನು ॥
ಲಲನೆ ನಾನಾದೊಡಂ ನೋಡ್ಪೆನೆಂದರು ಬಿಡರು ।
ಫಲವೇನು ಪೇಳು ಯೆನ್ನಯ ಕಿವಿಗಳಾವರುಂ ।
ಕಲಿತಸಂತುಷ್ಟಿಯಿಂ ಕೇಳ್ದು ಸಫಲಗಳಾಗಲವರ ಗುಣಗಳನು ಪೇಳು ॥ ೨೪

ಎಂದು ಕೇಳಿದೊಡಾಕೆ ವಿಪ್ರನಾರಿಯು ಕುಱಿತು ।
ಮಂದಸುಸ್ಮಿತೆ ಕೇಳು ನಿನಗೊರೆವೆ ತಿಳಿದಷ್ಟು ।
ಸುಂದರಾಂಗಿಗಳಾದ ರಾಣಿಗಳ ಗುಣಶೀಲರೂಪಲಾವಣ್ಯಗಳನು ॥
ಚೆಂದದಿಂ ಕಿವಿಗೊಟ್ಟು ಕೇಳಮರರಾಜನಾ ।
ಮಂದಿರದೊಳಿವರ ಸೊಬಗೈಶ್ವರ್ಯಭೋಗಮಂ ।
ಸುಂದಿರುವ ಕಾವಿನಿಯರಿಲ್ಲೆಂದು ಸಕಲರುಂ ಪೇಳುವುದು ಧಿಟವು ಕಾಂತೆ ॥ ೨೫

ಎಲ್ಲರುಂ ಪತಿಭಕ್ತಿಯಿಂ ಪೂರ್ಣವಾಗಿರುವ ।
ರೆಲ್ಲರುಂ ಸಕಲಸದ್ಗುಣಗಳಿಂ ತುಂಬಿರುವ ।
ರೆಲ್ಲರುಂ ಸೌಂದರ್ಯದಿಂ ಜಲಧಿಕನ್ಯಕಾರೂಪಮಂ ಜಯಿಸಿರ್ಪರು ॥
ಎಲ್ಲರುಂ ತ್ಯಾಗಗುಣದಿಂ ಸುರಭಿಯಂತಿರ್ಪ ।
ರೆಲ್ಲರುಂ ಸೌಜನ್ಯಸಾಶೀಲ್ಯಸಮ್ಮಿಳಿತ ।
ರೆಲ್ಲರುಂ ಪತಿಪರಾರಾಧನೆಯೊಳಾಸಕ್ತರೆಲ್ಲರುಂ ಪ್ರೀತಿಯುತರು ॥ ೨೬

ಎಲ್ಲರುಂ ಮಾತ್ಸರ್ಯಗುಣರಹಿತರಾಗಿರುವ ।
ರೆಲ್ಲರುಂ ಲೋಭಮಂ ತೊಱೆದು ಶೋಭಿಸುತಿರುವ ।
ರೆಲ್ಲರುಂ ಗರ್ವಗುಣಮಂ ಸ್ವಪ್ನದೊಳ್ಮರೆರೆಲ್ಲರುಂ ಮದರಹಿತರು ॥
ಎಲ್ಲರುಂ ಸರ್ವದಾ ಪ್ರಸನ್ನರಾಗಿರುವರ ।
ರೆಲ್ಲರುಂ ಕಾಠಿನ್ಯಗುಣಹೀನರಾಗಿರ್ಪ ।
ರೆಲ್ಲರುಂ ಸ್ತ್ರೀಧರ್ಮದಿ ಸ್ವಪತಿ ಶುಶ್ರೂಷೆಯಿಂ ಧನ್ಯರಾಗಿರ್ಪರು ॥ ೨೭

ನಳಮಹಾರಾಜಂಗೆ ದಮಯಂತಿಯಂತೆಯುಂ ।
ಬಲರಾಮನನುಜಂಗೆ ವೈದರ್ಭಿಯಂತೆಯುಂ ।
ವಲವೈರಿಶಕ್ರಂಗೆ ಪೌಲೋಮಿಯಂತೆಯುಂ ಕಶ್ಯಪಂಗದಿತಿಯಂತೆ ॥
ಕಲಶಾಬ್ಧಿಶಯನನಿಗೆ ರಮೆಯಂತೆಯುಂ ಸುಗುಣ ।
ನಿಲಯನಾದೀಕೃಷ್ಣರಾಜಭೂಪಾಲಕಗೆ ।
ಲಲನಾಶಿರೋಮಣಿಗಳಾಗಿರುವ ಮಹಿಷಿಗಳ್ ಸಲೆ ವಿರಾಜಿಸುತಿರ್ಪರು ॥ ೩೮

ಕುಸುಮಬೃಂದಗಳಂತೆ ಶೋಭಿಸುವ ನಗೆಗಳಿಂ ।
ಕುಸುಮಗುಚ್ಛಗಳಂತೆ ಶೋಭಿಸುವ ಕುಚಗಳಿಂ ।
ಕಿಸಲಯಂಗಳಂತಿರ್ಪ ಪಾಣಿಪಾದಂಗಳಿಂ ಭೃಂಗಕುಂತಳಗಳಿಂದ ॥
ಅಸಮಫಲನಿಚಯದಂತಿರ್ಪಧರಂಗಳಿಂ ।
ದೆಸೆವ ಕನಕದ ಲತೆಗಳಂತೆ ಮಹಿಷೀಜನಗ ।
ಳಸಮಸಾಯಕಸದೃಶಕೃಷ್ಣನೃಪಕಲ್ಪಕವನಾಶ್ರಯಿಸಿ ನಲಿಯುತಿಹರು ॥ ೩೯

ಸ್ಮಿತಚಂದ್ರಿಕೆಗಳಿಂದ ತಿಲಕದ ಕಳಂಕದಿಂ ।
ನತಮಧ್ಯದಾಕಾಶದಿಂದಧರಸುಧೆಯಿಂದೆ ।
ಅತಿಧವಳಮುಕ್ತಾಲಲಂತಿಕಾನಕ್ಷತ್ರತತಿಗಳಿಂ ಲಲಿತಮಾದ ॥
ರತಿಯಂತೆ ರಾಜಿಸುವ ಪಟ್ಟಮಹಿಷೀಜನರ ।
ಹಿತಚಂದ್ರಸದೃಶಮುಖಕಾಂತಿಗಳನಾವಗಂ ।
ಪತಿಕೃಷ್ಣರಾಜಲೋಚನಚಕೋರಂ ಕುಡಿದು ಸಂತಸದಿ ನಲಿಯುತಿಹುದು ॥ ೪೦

ಕುಂತಳಘನಂಗಳಿಂ ಕಂಕಣಗಳಿಂದಲುಂ ।
ಸಂತತಂ ಕೊಡುವ ದಾನೋದಕದಧಾರೆಯಿಂ ।
ಕಂತುಶರದಂತೆಸೆವ ಕಡೆಗಣ್ಣ ನೋಟಗಳ ರುಚಿಯೆಂಬ ಮಿಂಚಿನಿಂದ ॥
ಅಂತರಹಿತಾಭರಣಕಾಂತೀಂದ್ರಚಾಪದಿಂ ।
ದಿಂತು ಪೊಳೆಯುತ್ತಿರುವ ರಾಜಮಹಿಷಿಗಳೆಂಬ ।
ನೂತನವರ್ಷಾಕಾಲವಂ ಕಂಡು ಕೃಷ್ಣನೃಪಚಿತ್ತಬರ್ಹಿಯು ಕುಣಿವುದು ॥ ೪೧

ಕೃಷ್ಣೇಂದ್ರಪಟ್ಟಮಹಿಷಿಗಳಂದಚಂದಗಳ ।
ನೆಷ್ಟೆಂದು ಬಣ್ಣಿಸಲಿ ಭುವನತ್ರಯಂಗಳೊಳ ।
ಗಿಷ್ಟು ಸೊಬಗುಳ್ಳವರ ನಾ ಕಾಣೆನೆಂದೊರೆದು ಪೋದಳವಳಿತ್ತಲಿವರು ॥
ಕೃಷ್ಣರಾಜೇಂದ್ರಸಂದರ್ಶನಪ್ರಾಪ್ತಿಯಿಂ ।
ತುಷ್ಟಮಾನಸರಾಗಿ ತಿರುಗಿ ತಾವಿಬ್ಬರಿರ್ದ ।
ಧಿಷ್ಣ್ಯಕ್ಕೆ ಬರುತ ಕವಿ ಮತ್ತೆ ಸಂತೋಷದಿಂ ಪ್ರಿಯಸತಿಗೆ ಪೇಳ್ವನಾಗ ॥ ೪೨

ಇಲ್ಲಿ ನೋಡೆಲೆ ಕಾಂತೆ ಕೃಷ್ಣಧರಣೀಪಾಲ ।
ನೆಲ್ಲಲ್ಲಿಯುಂ ಮಾಡಿಸುವ ಸುಸಂತರ್ಪಣೆಗ ।
ಳಲ್ಲಿ ಘೃತಸೂಪದಧಿಭಕ್ಷ್ಯಶಾಕಾದಿಮೃಷ್ಟಾನ್ನಂಗಳಂ ಭುಂಜಿಸಿ ॥
ಚೆಲ್ಲಿ ಕೊಡುತಿರುವ ದಕ್ಷಿಣೆಗಳಂ ಕೈಕೊಂಡು ।
ನಿಲ್ಲದೆ ನಿಜಾಲಯಕೆ ಸತಿಸುತರನೊಡಗೊಂಡು ।
ಪಲ್ಲವಿಸಿದಾನಂದದಿಂ ಪೋಪ ಸದ್ವಿಜರ ತಂಡತಂಡಂಗಳನ್ನು ॥ ೪೩

ಸಕಲಸದ್ಗುಣಸಾಂದ್ರಕೃಷ್ಣಭೂಪಾಲಕನ ।
ಸಕಲಭೋಜನಶಾಲೆಯೊಳ್ ಭೋಜನಂಗೈದ ।
ಸಕಲಜನರಿಷ್ಟೆಂದು ಬರೆವ ಕರಣಿಕರೊರ್ವರಿಲ್ಲವೀನಗರದೊಳಗೆ ॥
ಸಕಲಗಗನಸ್ಥಳಂ ಪತ್ರಂಗಳಾದೊಡಂ ।
ಸಕಲಜಲನಿಧಿಗಳುಂ ಕಲೆತು ಮಸಿಯಾದೊಡಂ ।
ಸಕಲಶೂರೋತ್ತಂಸ ಕಾರ್ತವೀರ್ಯಾರ್ಜುನಂ ಬರೆದೊಡಂ ಮುಗಿಯದಾಗ ॥ ೪೪

ದ್ವಿಜರುಂಡು ಚೆಲ್ಲಿದೀತುಪ್ಪ ಹಾಲ್ಮೊಸರುಗಳು ।
ನಿಜವಾದ ಜಲಧಿಗಳ ತೆಱದಿ ಹರಿಯುತ್ತಲಿದೆ ।
ಅಜನ ಸೃಷ್ಟಿಯೊಳಿಲ್ಲವೀಶಾಕರಾಜಿಗಳ್ಭಕ್ಷ್ಯಗಳ ಪೆಸರದೇನೊ ॥
ಕುಜನಶಿಕ್ಷಕಕೃಷ್ಣಭೂಪೇಂದ್ರ ಭೂಸುರ ।
ವ್ರಜಕಿತ್ತ ಪಾಯಸಾಮೃತವಿದೆಂಬಂತೀಗ ।
ಸುಜನರುಸುರುವುದೇನು ಪುಸಿಯೆ ನೋಡೆಲೆ ಕಾಂತೆಯುಂಡವರದೆಷ್ಟುಜನವೋ ॥ ೪೫

ಇಂತು ಸಂತರ್ಪಣೆಯ ಸೊಬಗನುರೆ ಬಣ್ಣಿಸುತ ।
ಸಂತಸದಿ ಮನೆಗೈದಿ ಮಾಧ್ಯಾಹ್ನಿಕಾದಿಗಳ ।
ನಂತೆಲ್ಲವಂ ಗೈದು ಶುಚಿಯಾಗಿ ಸತಿಗೈದ ಪಾಕವಂ ಹರಿಗರ್ಪಿಸಿ ॥
ಅಂತರದಿ ಸುತರೊಡನೆ ರುಚಿಯಾಗಿ ಭುಂಜಿಸಿದ ।
ನಂತರದೊಳಾಸತಿಯು ಭೋಜನಂಗೈದ ಬಳಿ ।
ಕಂತರಹಿತಾಹ್ಲಾದದಿಂದ ಜನರಲ್ಸ್ವರಟ ನೋಡಲ್ಕೆ ಪೊಱಮಟ್ಟನು ॥ ೪೬

ಬಂದು ಸತಿಸುತರೊಡನೆಯರಮನೆಯ ಬಾಗಿಲೊ ।
ಳ್ನಿಂದಿರುವ ಗಜಹಯವರರಥಾದಿರೋಹಕರ ।
ಸಂದಣಿಯ ಬಾಯ ಭಲ್ಲಗಳ ಹಿಡಿದಿರ್ಪವರನಿಂಗ್ಲೀಷ ವಾದ್ಯದವರ ॥
ಚೆಂದದಿಂ ಶ್ರುತಿವಾರಿಕೊಳಲುಗಳ ನುಡಿಸುವರ ।
ಬಂದುರದಿ ಕಹಳೆತುತ್ತೂರಿಗಳನೂದುವರ ।
ನಿಂದು ಸಾನಂದದಿಂ ಪೇಟೆಗಾರಿಗಳ ಬಡಿವವರ ತೋರಿಸಿದನು ॥ ೪೭

ವೇಗದಿಂ ಗಾಳಿಯುಂ ಜಯಿಸಿರುವ ಕುದುರೆಗಳ ।
ಬೇಗದಿಂದೇಱಿರುವ ತುರುಪಿನ ಸವಾರರಂ ।
ನಾಗಂಗಳೊಳ್ಧ್ವಜವ ಪಿಡಿದು ಕುಳಿತಿರುವರನ್ನಹಷಾಮುಬಾರಿನವರ ॥
ಆಗಸವ ತಿವಿವಂತೆ ಬೆಳ್ಳಿಕಟ್ಟೇಟಿಗಳ ।
ಕೈಗಳಿಂ ಪಿಡಿದಿರುವರಂ ಹಸರುಬಲ್ಲೆದವ್ನ।
ರೀಗ ನೀನೋಡಿವರ ಕಂಡ ಮೊತ್ರದೊಳಿಗಳಿದೆ ಬಿಱುಯದಿರ್ಪ್ಪದೇನೆ ॥ ೪೮
ಚಪ್ಪನ್ನದೇಶದೊಳ್ಸಾಮ್ರಾಜ್ಯಮಂಗೈಯು ।
ತಿಪ್ಪ ಭೂಮಿಪರೊಡನೆ ಮತ್ತಾರಿಗುಂಟೆ ನೋ ।
ಡಿಪ್ಪಸರದೊಳ್ ಜನರು ಪಿಡಿದಿರ್ಪ ಶಂಖಚಕ್ರಾದ್ಯಖಿಳಬಿರುದುಗಳನು ॥
ತಪ್ಪದೆ ಸುನೀತಿಯುಂ ಧರಣಿಯುಂ ಪಾಲಿಸು ।
ತ್ತಿಪ್ಪ ಕೃಷ್ಣೇಂದ್ರನೀಬಿರುದಗಳ ಸಾಲುಗಳ ।
ನಪ್ಪ! ಬಣ್ಣಿಸಲೆನಗೆ ಸದರಮಲ್ಲಿನ್ನಾರು ಬಣ್ಣಿಪರೊ ಕಾಣೆ ನಾನು ॥ ೪೯
ನೋಡಹಹ! ಕೋಟಿದಿನಕರರು ಧರಣಿಯೊಳೊಂದು ।
ಗೂಡೀಗ ಬರ್ಪರೆಂಬಂತೆ ನವರತ್ನಗಳ ।
ಜೋಡಿಸಿರುವೀಕನಕಕರ್ಣಾಟಪಾಲಕಿಯ ಮಧ್ಯದೊಳ್ ಕೃಷ್ಣೇಂದ್ರನು ॥
ರೂಢಿ ಮಿಗೆ ವಿಷ್ಣುವಂದದಿ ಪೊಳೆಯುತಿರ್ಪವನ ।
ನಾಡಾಡಿಗಳು ನೋಡಲಮ್ಮರೇ ಭುವನದೊಳ್ ।
ನೋಡೀಮಹಾಪ್ರಭುವಿನಪ್ರತಿಮತೇಜಸ್ಸ ಪೊಗೞಬಲ್ಲಾತನಾರು ॥ ೫೦
ಚೆಂದದಿಂ ಗಜಹಯವರೂಥಾದಿಗಳನೇಱಿ ।
ಪಿಂದೆ ಮುಂದೈತಪ್ಪ ನಾನಾಧಿಕಾರಿಗಳ ।
ನಂದದಿಂದೆರಡು ಪಾರ್ಶ್ವಂಗಳೊಳ್ತಾಳ ಮದ್ದಳೆಸಿತಾರ್ಸಾರಂಗಿಯು ॥
ಚೆಂದದಿಂ ಮುಖವೀಣೆ ಮೋರ್ಚಂಗ್ಪಿಟೀಲುಗಳ ।
ಪಿಂದೆ ನುಡಿಪಿಂಮೇಳದವರೊಡನೆಯೊಲಪಿನಿಂ ।
ನಿಂದು ಕುಣಿಯುತ್ತಿರುವ ವಾರಕಾಂತಾವೃಂದಮಂ ನೋಡು ನೀನು ರಮಣೀ ॥ ೫೧
ಭೂಪಕುಲದೀಪಕೃಷ್ಣೇಂದ್ರನ ಸವಾರಿಯೊಳ್ ।
ಗಾಫಣಿಪನಾದಿನಪನಾಸುರಪನುಂ ಸೈನ್ಯ ।
ದಾಪೂರೆಯ ಭಾರದಿಂ ಪದಘಾತದಿಂದೇಳ್ವ ದೂಳಿನಿಂ ಯತ್ನದಿಂದ ॥
ಕಾಪುರುಷರಂತೆ ತಲೆ ಕುಗ್ಗಿ ಕಾಣಿಸದೆಯುಂ ।
ತಾಪದಿಂದತಿಭೀತರಾಗಿಯುಂ ಪೋದರವ ।
ರೀಪರಿಯ ಸೇನೆಯುಂ ಕಂಡೋಡದಿರ್ಪರಾರೀನೃಪನ ವೈರಿಗಳೊಳು ॥ ೫೨

ಈರೀತಿಯಿಂದಖಿಲಸಂಭ್ರಮದಿ ನಡೆತಂದು ।
ಧೀರಕೃಷ್ಣೇಂದ್ರನೃಪ ನಜರಬಾದಿನೊಳಿರ್ಪ ।
ಸಾರತರವಾದ ನೃಪಮಂದಿರದ ಚಂದ್ರಶಾಲಾಮಧ್ಯದೊಳ್ ರಾಜಿಸ ॥
ಪಾರವಿಲ್ಲದ ರತ್ನಕಾಂತಿಯಿಂ ಜ್ವಲಿಪ ಭಂ ।
ಗಾರದಾಸನದಲ್ಲಿ ಮಂಡಿಸಲ್ ಮಿಕ್ಕ ಪರಿ ।
ವಾರ ನೃಪಸೇವೆಯೊಳ್ನಿರತರಾಗಿರುತಿರಲು ಸುರುಟಿಂಗೆ ಷಾಜೊದಗಿತು ॥ ೨೫೩

ಈವೀರಕೃಷ್ಣರಾಜೋತ್ತಮನ ಪೆಸರಿಂದ ।
ನಾವು ನಿಜಖಡ್ಗಮಂ ಪಿಡಿದು ಯುದ್ಧಕೆ ಪೋದ ।
ಡಾವೈರಿನೃಪರು ನಿಜಖಡ್ಗಮಂ ಕೆಳಗಿಟ್ಟು ಬಾಯೊಳಗೆ ಪುಲ್ಲ ಕಚ್ಚಿ ॥
ಸಾವಿಗಂಜುತ ಕೈಯ ಮುಗಿವರದಱಿಂದನಾ ।
ಮೀವಿಭುವಿನಿದಿರಿನೊಳ್ ಸಾಹಸವ ತೋರ್ಪೆವೆಂ ।
ದಾವರಿಸಿ ಜರ್ನಲ್ಲುಕರ್ನಲ್ಲುಮೊದಲಾದ ಸರದಾರರೈತಂದರು ॥ ೨೫೪

ಆಜನರ ಸನ್ಮಾನದಿಂ ಕಂಡು ಕೃಷ್ಣನೃಪ ।
ರಾಜರಾಜೋತ್ತಮಂ ತಾನಾಜ್ಞೆಯಂ ಕೊಡಲು ।
ಸೋಜಿಗವಿದೆಂಬಂತೆ ವಾಹಿನೀವ್ಯೂಹಮಂ ರಚಿಸಿದರ್ ವೇಗದಿಂದ ॥
ಈಜಗದೊಳಿವರಂತೆ ರಚಿಪರಂ ನಾ ಕಾಣೆ ।
ತೇಜಸ್ವಿಯಾದ ಭಾರದ್ವಾಜಸುತನಂದು ।
ರಾಜೇಂದ್ರನಾದ ಕುರುರಾಜನ ವರೂಥಿನಿಯೊಳಿಂತು ರಚಿಸಿರ್ದನೇನೋ ॥ ೨೫೫

ಈಪರಿಜ ಕಣ್ಣಿಂದ ನೋಡಲಾರಿಗೆ ಶಕ್ಯ ।
ಮೀಪರಿಯರೌದ್ರರಸವನ್ನೆಂತು ಸಹಿಸಬಹು ।
ದೀಪಾಟಿಮಾಸ್ತ್ರಗಳ ವೇಗದೊಳ್ಮೇಲೆಂತು ಧೈರ್ಯದಿಂ ಕುಳಿತಿರ್ಪರೋ ॥
ಈಪಟುರವಂಗಳಂ ಕೇಳ್ವಕೂಡದು ಕಿವಿಯೊ ।
ಳೀಪದ್ಮಸಂಭವಂ ಸೃಷ್ಟಿಸಿದ ಧರಣಿಯೊಳ ।
ಗೀಪರಿಯ ಯುದ್ಧಮಂ ಪಿಂದೆ ಗೈದವರಿಲ್ಲ ಸುರದನುಜಮನುಜರೊಳಗೆ ॥ ೨೫೬

ಪ್ರಳಯದೊಳ್ ಪ್ರಜ್ವಲಿಪ ವೀತಿಹೋತ್ರನ ಧೂಮ ।
ಗಳು ಜಗವ ಮುಸುಕುವಂತೀತೋಪುಗಳ ಧೂಮ ।
ಗಳು ಮುಸುಕೆ ಶ್ರೀಜನರನೊಬ್ಬರಂ ಕಾಣೆ ನೀನೆಲ್ಲಿರ್ಪೆ ಮಕ್ಕಳಿಲ್ಲಿ ॥
ಪ್ರಳಯದೊಳಗಾರ್ಭಟಿಪ ಮೇಘರವಗಳ ತೆಱದಿ ।
ಮೊಳಗುತಿವೆ ತೋಪುಗಳು ಬಾಲಕರ್ ಬೆದಱುವರ್ ।
ನಿಲಲುಕೂಡದು ಬೇಗ ಮಕ್ಕಳನ್ನೆತ್ತಿಕೊ ದೂರದೊಳ್ನಿಲ್ವೆವೀಗ ॥ ೨೫೭

ಇಂತು ಕನಿ ಸತಿಸುತರನೊಡಗೊಂಡು ದೂರದೊ ।
ಳ್ಸಿಂತು ಮುತ್ತೈ ಸುರುಟ ಸಂಭ್ರಮದಿ ನೋಡುತಿರೆ ।
ಸಂತುಷ್ಟನಾಗಿ ಕೃಷ್ಣೇಂದ್ರ ಸರದಾರರಿಗೆ ಮನ್ನಣೆಯ ಗೈದ ಬಳಿಕ ॥
ಸಂತವಿಸಿ ಕೊಳುತಿರುವ ಸಕಲಸೇನಾಜನವು ।
ಸಂತಸದಿಯಾಯ್ದುಕೊಳಲೆಂದಮಿತಧನಗಳನ ।
ನಂತವಸ್ತ್ರಂಗಳನ್ನೆಱಚಿಸಿ ವಿನೋದದಿಂದರಮನೆಗೆ ಪೊಱಮಟ್ಟನು ॥ ೫೮

ಹೊಱಟು ಬೀದಿಗಳೊಳಗೆಯಾರತಿಯ ತಂದೆತ್ತು ।
ತಿರುವ ಮುತ್ತೈದೆಯರಿಗಾಭರಣ ಧನರತ್ನ ।
ವರವಸ್ತ್ರಗಳ ಕೊಡುತ ಸಂಭ್ರಮದೊಳಾನೆಬಾಗಿಲ ಬಳಿಗೆ ಬಂದು ನಿಲಲು ॥
ಹರುಷದಿಂ ಸಕಲಜನರಂಜಲಿಗಳಂ ಮಾಡಿ ।
ತರತರದಿ ಕೂಗುತ್ತ ಜಯಶಬ್ದಮಂ ಗೈಯೆ ।
ವರರತ್ನದಾರತಿಗಳಂ ನಿವಾಳಿಸಿದರಂತಃಪುರದ ಸ್ತ್ರೀಯರಾಗ ॥ ೫೯

ಬಳಿಕ ಕೃಷ್ಣೇಂದ್ರನೃಪನಂಬಾವಿಲಾಸದೊಳ್ ।
ತಳತಳಿಸುತಿರುವ ನವರತ್ನಭದ್ರಾಸನದಿ ।
ಕಲಿತಸಂತೋಷದಿಂ ಕುಳಿತಿರಲು ಸಕಲಾಧಿಕಾರಗಳ್ ಭಕ್ತಿಯಿಂದ ॥
ನೆಲತನಕ ತಲೆಗಳಂ ಬಾಗಿಸುತ ಮುಜುರೆಯಂ ।
ಕಲಿಕಾಲಕೃಷ್ಣನಾದೀಕೃಷ್ಣರಾಜಂಗೆ ।
ನಿಲವಿಲ್ಲದೇ ಗೈದರೀಮಹಾವಿಭುಸದೃಶರಾರುಂಟು ಲೋಕದೊಳಗೆ ॥ ೬೦

ನಿಜಶಾಖೆಗಳ ಪದಕ್ರಮಜಟೆಗಳಂ ಪೇಳಿ ।
ಸುಜನೋತ್ತಮದ್ವಿಜರು ಸುಫಲಮಂತ್ರಾಕ್ಷತೆಯ ।
ಸುಜನರಕ್ಷಕಕೃಷ್ಣರಾಜರಾಜೇಂದ್ರಂಗೆ ವರಸಿ ಕೊಡುತಿರ್ದರಾಗ ॥
ಭುಜಗಶಯನಾಂಶನಾದೀಕೃಷ್ಣನೃಪವರಗೆ ।
ನಿಜಶಿರಗಳಂ ಬಾಗಿ ಭಯಭಕ್ತಿಯಿಂದತುಲ ।
ಭುಜಬಲಪರಾಕ್ರಮಿಗಳ್ಗೈದಿ ಪೊಡೆಮಡುತಿರ್ದರಾಗಲತಿಸಂಭ್ರಮದೊಳು ॥ ೬೧

ಸಕಲಮುತ್ತೈದೆಯರು ಶೋಭನಂಗಳ ಪಾಡಿ ।
ಯಕಳಂಕಕೃಷ್ಣನೃಪಗೆತ್ತುವಾರತಿಗಳಂ ।
ನಿಖಿಲನಿರ್ವ್ಯಾಜ್ಯನರು ಗೈವಾಶಿಷೋಕ್ತಿಯಂ ಸತಿ ನೋಡು ಧನ್ಯರಾವು ॥
ಚಿಕುರಾದಿನಖದವರೆಗೀಕೃಷ್ಣಭೂಪತಿಯ ।
ಸಕಲಾಂಗಗಳ ನೋಡು ಬೇಗದಿಂದಿನ್ನೊಮ್ಮೆ ।
ಯುಖಿಳಭುವನೇಂದ್ರ ಭದ್ರಾಸನವ ಬಿಟ್ಟು ಬಿಜಯಂಗೈವ ಠೀವಿಯಿಂದ ॥ ೬೨

ಇಂತು ಸಂಭ್ರಮದಿಂದ ಕೃಷ್ಣರಾಜೇಂದ್ರನೊ।
ಪ್ಪಂತಿಯುತ್ಸವವ ಕವಿ ಸತಿಸಹಿತ ನೋಡುತ್ತ ।
ಸಂತಸದಿ ಪೊಗಳುತ್ತ ನಲಿದು ಕುಣಿದಾಡುತ್ತ ಮಕ್ಕಳಿಗೆ ತೋಱಿಸುತ್ತ ॥
ಸಂತೋಷವಾಯಿತೇ ನಿಮಗೆಂದು ಕೇಳುತ್ತ ।
ಕಂತುಸಮ ಕೃಷ್ಣೇಂದ್ರದರ್ಶನದ ಪುಣ್ಯಮೆಮಗ ।
ಗಂತವಿಲ್ಲದ ಸಕಲಸಂಪತ್ತುಗಳ ಕೊಡುವುದೆಂದು ತಾಪೇಳ್ದ ಸತಿಗೆ ॥ ೬೭

ಜಯ ಸಕಲಗುಣಸಾಂದ್ರ ಜಯ ವದನಜಿತಚಂದ್ರ ।
ಜಯ ಯದುಕುಲೋತ್ತಂಸ ಜಯ ಹೃಷೀಕೇಶಾಂಶ ।
ಜಯ ಚಾಮರಾಜಸುತ ಜಯ ಭೂಷಣೋಲ್ಲಸಿತ ಜಯ ಸಕಲಶಾಸ್ತ್ರಲಲಿತ ॥
ಜಯ ದೀನಜನಕರುಣ ಜಯ ಸಮೂಖ್ಯಾಭರಣ ।
ಜಯ ಕಾಮಸಮರೂಪ ಜಯ ರಾಜಕುಲದೀಪ ।
ಜಯ ಕೆಂಪನಂಜಾಂಬಾಸುಗರ್ಭಸಂಜಾತ ಜಯ ಜಯ ಕೃಷ್ಣರಾಜನೃಪತೇ ॥ ೬೮

ಶ್ರೀಭೋಜರಾಜಸಂದರ್ಶನದಿ ಸರ್ವರಿಗೆ ।
ಯಾಭಾರತೀದೇವಿಯೊಲಿದು ತಾ ಬರ್ಪವೋ ।
ಲೀಭೂಮಿಪಾಲ ಕೃಷ್ಣೇಂದ್ರನ ಸ್ಮರಣೆಯಿಂದಾತನೊಪ್ಪಂತಿಯನ್ನು ॥
ನಾ ಬಣ್ಣಿಪಂತೆನಗೆ ವಾಗೀಶ ಕೃಪೆಗೈದ್ದ ।
ನೀಭುವನದೊಳಗೆಲ್ಲ ರಾಜಿಪಂತೀಕೃತಿಯು ।
ನೀಭೂತದಯೆಯುಳ್ಳ ಕೃಷ್ಣರಾಜೇಂದ್ರನೇ ಪ್ರೀತಿಯಿಂ ಪೊರೆಯಲೀಗ ॥ ೬೯

ಗೋಕರ್ಣನಗರನರಹರಿಯು ಕೃಪೆಯಿಂದಾನು ।
ರಾಕೇಂದುವದನಕೃಷ್ಣೇಂದ್ರನೊಡ್ಡಂತಿಯು ।
ನ್ನೇಕಾಗ್ರಚಿತ್ತದಿಂ ವಿರಚಿಸಿದೆನೀಕೃತಿಯನೆನ್ನೊಳತಿಕರುಣದಿಂದ ॥
ಲೋಕದೊಳ್ಸಜ್ಜನರ್ಕಳೀಕ್ಷಿಸುತ ತಪ್ಪಿರಲ್ ।
ಜೋಕೆ ಮಿಗೆ ತಿದ್ದಿ ಮೆಱಸುವುದೆಂದು ಬೇಡುವೆಂ ।
ಮಾಕಾಂತನುರುದಯದಿ ಮೆಱೆಯಲೀಶತಕ ತಾನೀಭೂಮಿಯೊಳು ಸಂತತಂ ॥

ಇಂತು ತೃತೀಯ ಸಂಧಿ.

ಗ್ರಂಥಂ ಸಂಪೂರ್ಣಂ.

ಕರ್ಣಾಟಕ ಕಾವ್ಯಕಲಾನಿಧಿ, ಕೋಶಸಂಖ್ಯೆ–೩೭

# ಗಜೇಂದ್ರಮೋಕ್ಷ

ಉದಯರಾಗ

ದ್ವಿಪದಿ

ಎಂ. ಏ. ರಾಮಾನುಜಯ್ಯಂಗಾರ್ಯ

ಅಸಿಸ್ಟೆಂಟ್ ಮಾಸ್ಟರ್, ಮಹಾರಾಣಿ ಕಾಲೇಜ್, ಮೈಸೂರು

ಇವರಿಂದ

ಮೈಸೂರು:

ಶ್ರೀನಿವಾಸ ಮುದ್ರಾಶಾಲೆಯಲ್ಲಿ ಮುದ್ರಿತವಾಯ್ತು.

1912

ಕ್ರಯ ೧ ಆಣೆ

# ಪೀಠಿಕೆ

ಈ ಗ್ರಂಥವು ದ್ವಿಪದಿಯಲ್ಲಿ ಬರೆಯಲ್ಪಟ್ಟಿದೆ. ಇದನ್ನು ಪ್ರಾಯಶಃ ತ್ರಿಮತಸ್ಥ ಬ್ರಾಹ್ಮಣ ಹೆಂಗಸರು ಹಳುತ್ತಲೆ ಬೆಳಗಿನ ಜಾವದಲ್ಲಿ ಉದಯರಾಗವಾಗಿ ಹಾಡುತ್ತಾರೆ. ಈ ಗ್ರಂಥದಲ್ಲಿರುವ ದಶಾವತಾರ ಸ್ತುತಿಯಲ್ಲಿ ಬೌದ್ಧಾವತಾರವನ್ನು ಸ್ಮರಿಸಿರುವ ಕಾರಣ ಈ ಗ್ರಂಥಕರ್ತನು ಮಾಧ್ವ ಬ್ರಾಹ್ಮಣನಾಗಿರಬೇಕೆಂದು ತೋರುತ್ತದೆ. ಶೈಲಿಯಲಿನ್ನು ನೋಡಿದರೆ ಈ ಗ್ರಂಥವು ನೂರುವರ್ಷಗಳಿಗೆ ಹಿಂದೆಯೇ ಹುಟ್ಟಿರಬೇಕು. ಈ ಗ್ರಂಥವನ್ನು ಸಂಪಾದಿಸಿ ಪರಿಷ್ಕರಿಸಿ ಕಳುಹಿಸಿ ಕೊಟ್ಟುದಕ್ಕಾಗಿ ಮ|| ರಾ|| ಎಸ್. ಜಿ. ಗೋವಿಂದರಾಜಯ್ಯಂಗಾರ್ಯರಿಗೆ ಕೃತಜ್ಞನಾಗಿರುತ್ತೇನೆ.

ಪ್ರವರ್ತಕ.

# ಗಜೇಂದ್ರಮೋಕ್ಷ

॥ ಉದಯರಾಗ ॥

— ದ್ವಿಪದಿ —

ಶ್ರೀನಾಥ ಪಾರ್ವತೀನಾಥ ಶರಣೆಂಬೆ ।
ವಾಣಿಯರಸನನು ಗಜಮುಖನ ಬಲಗೊಂಬೆ ॥ ೧
ನಾನು ಬಲ್ಲನಿತ ಪೇಳ್ವಿದಪೆನೀಕಥೆಯ ।
ಶ್ರೀನಾಥ ಗಜರಾಜಗೊಲಿದ ಸತ್ಕಥೆಯ ೨
ಚಪ್ಪನ್ನದೇಶದಾಭೂನಾಥರೊಳಗೆ ।
ಒಪ್ಪುತಿಹ ಗೌಳಗುಜ್ಜರದೇಶದೊಳಗೆ ೩
ವಿಷ್ಣುಭಕ್ತನು ಸೋಮತೆ ಧ್ರುವನೆಂಬ ನೃಪನು ।
ಶಿಷ್ಟಭೂಸುರರನೊಲಿಸುತ್ತಿರ್ದನವನು ೪
ಚಿತ್ತದಲಿ ನರಹರಿಯ ನೆನೆದು ಚಿಂತಿಸುತೆ
ಪುತ್ರಮಿತ್ರಾದಿ ಬಂಧುಗಳ ವರ್ಜಿಸುತೆ ೫
ವ್ಯಾಳಶಯನಧ್ಯಾನದಲ್ಲಿ ನಡೆತಂದು ।
ಕೇಳಿಮಂದಿರದ ಸಾಮೀಪ್ಯಕ್ಕೆ ಬಂದು ೬
ಹಲವು ಕೊಳ ಹಲವು ತೋಟ ಹಲವು ಭೂಜಗಳು
ಹಲವು ಪರಿಪಕ್ಷಿಗಳು ನಲಿವ ಕೋಕಗಳು ೭
ಸುತ್ತ ಕಿನ್ನರರು ಗಂಧರ್ವರಿಹ ಸೀಮೆ
ಮೊತ್ತದಿಂ ಸುಳಿವ ಮೃಗಗಳಿಗೆ ನಿಸ್ಸೀಮು ೮
ಒಂದು ತೋಟದಲ್ಲಿ ಸ್ನಾನವ ಮಾಡಿ ನೃಪನು
ಚಂದಕಿಟ್ಟನು ದ್ವಾದಶೋರ್ಧ್ವಪುಂಡ್ರವನು ೯
ಸಂಧ್ಯವಂದನೆಮಾಡಿ ಪದ್ಮಾಸನದಲಿ ।
ಅಂದಿರ್ದನವಸಿಂದಿರೇಶನ ಧ್ಯಾನದಲಿ ೧೦
ಆಗಳಲ್ಲಿಗೆ ಕುಂಭಸಂಭವನು ಬರಲು ।
ಬೇಗದಿಂದೆದ್ದು ವಂದಿಸದೆ ನೃಪನಿರಲು ೧೧
ಕೋಪದಿಂ ಪರಿತಪಿಸಿಯೊಡನೆ ಕುಂಜರನ
ರೂಪಾಗೆನುತ್ತೆ ಶಪಿಸಿದನು ಭೂವರನ ೧೨

ತಪ್ಪಿದುದೆಲೆ ಮುನಿಯೆ ಕೇಳು ಬಿನ್ನಹವ ।
ತಪ್ಪುವುದು ಶಾಪವೆಂದಿಗೆ ಹೇಳು ರಹವ ೧೩
ಒಪ್ಪಚಕ್ರವು ಬಂದು ಸೋಂಕಿದೊಡೆ ನಿನ್ನ ।
ವಿಷ್ಣುಪೇಶನೆ ಶಾಪವಿದೆಯಹುದು ಬಿನ್ನ ೧೪
ಎಂದು ಮುನಿಯುಸುಹಲಾಗಳೆ ನೃಪನ ಜ್ಞಾನ
ಹಿಂದುಳಿದುದೊಡನೆ ಬೆಂಬತ್ತಿ ತದ್ಧ್ಯಾನ ॥ ೧೫
ಧ್ಯಾನವಶಗಿಡಿದನಗೆ ಮುಕ್ತಿದುದು ಮಾತಪೆ
ಆನೆಯಾದನು ನರಪನದನೇನನೊರೆವೆ ॥ ೧೬ ॥
ಮೊಲುಮಲೆಯಿಂ ಜಾಗು ಹರಿದು ಬರುವಂತೆ ।
ಕೀಳು ಮದ ಸುರಿಯುತಿರ್ದುದು ನಡೆಯೆ ದಂತಿ ೧೭
ಸಲಗನಿದು ನಿರ್ಭಯದೆ ಹಲುವಂಗಳೊಳಗೆ
ತೊಳಲುತಿರೆ ಬಂದುವಾನೆಗಳದಱ ಬಳಿಗೆ ೧೮
ಸೇನಾ ನಿಯೊಳು ಹಲವು ಮಱಿಗಳನು ಪಡೆದು
ಬಣ್ಣವೇಱುತೆ ಚರಿಸುತಂದು ಸೊಗವಡೆದು ೧೯
ಗಟ್ಟಬೆಟ್ಟಗಳನೇಱುತ್ತಲಿಳಿಯುತಲೆ
ಹಿಬ್ಬೆಸಗಿ ತನಿಮರಂಗಳನು ಮುರಿಯುತಲೆ ೨೦ ॥
ಹಿಂಡು ಹಿಂಡಾದ ತನ್ನಯ ಬಳಗಗೂಡಿ ।
ಬೆಂಡಾದ ಹಸಿವು ತೃಷೆಯಿಂ ಬಳಲಿ ಬಾಡಿ ೨೧
ಉರಿವ ಬೇಸಗೆಯ ಬಿಸಿಲಿನ ಬೇಗೆಯಿಂದೆ
ಕರಿಕಳಭಪರಿವೃತನು ಗಿರಿಯ ಮೇಲಿಂದೆ ೨೨
ಮದವ ಸೋವಡಿಂಗೆ ದುಂಬಿಗಳು ಮುಸುಱುತಿರಲು
ಪದುಮಗಳ ಕಂಪಿನಿಂ ತೀಡಲೊಂದೆರಲು ೨೩
ಬಡನೆ ಮದದಂತಿ ತೃಷೆಯಿಂ ನೊಂದ ಬಳಲ್ಕೆ
ಪಿಡಿಗಳೊಡನೆಯ್ದಿದುದು ಕೊಳನೆಡೆಗೆ ತೊಳಲ್ಕೆ ೨೪
ಕಮಲರೇಣುಗಳಿಂದೆ ಪರಿಮಳವನಾಂತ ।
ವಿಮಲ ಜಲವನು ಹೊಕ್ಕುದೊಡನೆಯಾದಂತಿ ೨೫ ॥
ತಣಿವನ್ನೆಗಂ ನೀರನೀಂಟಿ ಕರದಿಂದೆ
ಕ್ಷಣದೆ ಜಲವನು ಕೊಂಡು ಕೊಂಡು ಮುದದಿಂದೆ ೨೬
ಸುರಿದು ತನುವಿನ ಮೇಲೆ ತನ್ನ ಡಗೆಯಾಱಿ
ಕರಿಣಿಗಳ ಮೇಲೆ ಸುರಿದುದು ಬಳಿಕ ನೀರ ೨೭
ಜಳಕವಾಡಿಸಿ ನೀರನೂಡಿ ಮಱಿಗಳಿಗೆ ।
ನಲವಡಿಸಿ ಸೊಗವಿರ್ದುದಿಂತುಟರೆಗಳಿಗೆ ೨೮

ಇಂತಿರಲು ದೈವವಶದೊಳೊಂದು ಮಕರಿ ।
ದಂತಿಪನ ಕಾಲ ಪಿಡಿದುದು ಘಾತುಕಕರಿ ॥ ೧೯
ಎಳೆದು ನೋಡಿದುದೊಮ್ಮೆ ಸೆಳೆದು ನೋಡಿದುದು
ಬಳಸಿ ನೋಡಿದುದು ಬಿಡದಾ ಮಕರಿ ಕಾಲ ೨೦
ಅತ್ತಿತ್ತ ನೋಡಿದುದು ಸುತ್ತ ನೋಡಿದುದು ।
ಎತ್ತ ನೋಡಿದರು ಬಿಡದಾ ಮಕರಿ ಕಾಲ ೨೧
ತನ್ನ ಸತಿ ಸುತರೆಲ್ಲ ಸೆಳೆದರೊಂದಾಗಿ ।
ಇನ್ನಾಚೆವೆನುತೆ ತೆರಳಿದರೆಲ್ಲ ಬೇಗ ೨೨
ಎಮ್ಮ ಪಾಪದ ಫಲವು ಪೋದೆ ನೀನೆಂದು ।
ಮುಮ್ಮನವಿಂದಿರದೆ ಪೋದರವರಂದು ೨೩
ಕಚ್ಚುತಿದೆ ಕಡಿಯುತಿದೆ ಮಕರಿಯೀ ಕಾಲ ।
ಹೆಚ್ಚು ರಕುತವು ಸುರಿದು ಕೆಂಪಾಯ್ತು ಕೊಳನು ೨೪
ಕರಿ ನೆಲಕೆ ಸೆಳೆಯುವುದು ಜಲದೊಳಗೆ ಮಕರಿ
ಹಿರಿದಿವಕೆ ಯುದ್ಧವಾದುದು ಹಲವು ವರಿಸ ೨೫
ಬಲವುಡುಗಿ ಬಂಧನವ ಬಿಡಿಸಲಾರದೊಲು ।
ಸಿಲುಕಡೆಯುವಯುದಾಗಜವು ಬಳಲಿದುದು ೨೬
ಬಂಧುವೆನಿಪಾನೆಗಳು ಬಿಡಿಸಲರಿದಾಯ್ತು ।
ಬಂಧನವ ಕರಿಣಿಗಳದೆಂತು ಬಿಡಿಸುವುವು ॥ ೨೭
ನೊಸಳೆಯೆಂಬುವ ಕಾಲಪಾಶದಿಂ ಬಿಗಿದ ।
ಬಿಸಜಾಕ್ಷನೆ ನಾನು ಶರಣು ಹೊಂದುವೆನು ೨೮
ಈರೇಳು ಲೋಕಗಳ ಸಲಹುವನೆ ಯೆನ್ನ ।
ಪ್ರಾರ್ಥಿಸುತ್ತೆ ಮೊಱೆಯಿಟ್ಟ ಗಜವಾಸ್ಯ ೨೯
ಜಂಗಮಸ್ಥಾವರಂಗಳಲಿ ಪರಿಪೂರ್ಣ !
ಭಂಗವನು ಪರಿಹರಿಸಿ ಬಂಧನವ ಬಿಡಿಸೊ ೩೦
ಅಚ್ಯುತಾನಂತಕೇಶವ ಯೆನ್ನ ಕಾಯೊ ।
ಸಚ್ಚಿದಾನಂದ ಸರ್ವೇಶ್ವರನೆ ಕಾಯೋ ॥ ೩೧
ಭಕ್ತವತ್ಸಲ ದೇವ ಬಂಧನವ ಬಿಡಿಸೊ
ಮುಕ್ತನನು ಮಾಡೊ ಕರುಣಾಸಿಂಧು ಕಾಯೊ ೩೨
ವೇದವನು ಕದ್ದುಕೊಂಡುಯ್ದ ದಾನವನ ।
ಛೇದಿಸಿದೆ ಭೇದಿಸಿದೆ ನಿಗಮಗಳ ನೆಲೆಯು ೩೩
ವೇದವನು ತಂದು ಬಾಲಕನ ಬೊಮ್ಮಗಿತ್ತೆ ।
ವೇದಾಂತವೇದ್ಯ ಮತ್ಸ್ಯಾಕಾರ ಶರಣು ೩೪

ಸುರರು ದಾನವರಮೃತವನು ಕಡೆಯಲಂದು
ಮುರವೈರಿ ನೀ ಬಂದು ಲಕ್ಷ್ಮಿಯನು ತಂದೆ ೪೫
ಭರದಿಂದೆ ಮಂದರದ ಗಿರಿಯೆಡೆಗೆ ಬಂದು ।
ಗಿರಿಯನೆತ್ತಿದ ಕೂರ್ಮನವತಾರ ಶರಣು ೪೬
ಧರಣಿಯನು ಚಾಪೆಯಂದದಿ ಸುತ್ತಿ ಸುರರ
ನೆರಪಿಯನು ಮೆಟ್ಟಿ ಪಾತಾಳಕಿಳಿದವನ ೪೭
ಹಿರಣ್ಯಾಕ್ಷನನು ಕೊಂದು ಮೇದಿನಿಯ ತಂದ
ವರಹಾವತಾರ ಶ್ರೀಹರಿ ನೀನೆ ಶರಣು ೪೮
ಬಾಲಕನ ಮೊಱೆಗೇಳಿ ಕಂಬದೊಳು ಬಂದು
ಸೀಳಿ ದನುಜನನವನ ಕರುಳ್ಮಾಲೆಯಾಂತೆ ೪೯
ಬಾಲಪ್ರಹ್ಲಾದನಿಂಗಭಯವನು ಕೊಟ್ಟೆ
ಶ್ರೀಲಕ್ಷ್ಮಿಯರಸ ಶ್ರೀನರಸಿಂಹ ಶರಣು । ೫೦
ಬಲಿಯ ದಾನವ ಜೇಡೆ ವಟುವಾಗಿ ಪೋಗ
ಇಳೆಯ ಮೂಱಡಿ ಬೇಡಿಯಳೆದು ಕೊಂಡು ೫೧
ಚೆಲುವ ಪಾದದಲಿ ಭಾಗೀರಥಿಯ ತಂದ ।
ಚೆಲುವ ವಾಮನರೂಪ ಹರಿ ನೀನೆ ಶರಣು ೫೨
ಉತ್ತಮಕ್ಷತ್ರಿಯರನೆಲ್ಲ ತರಿದವರ ।
ರಕ್ತದಲಿ ಸ್ನಾನತರ್ಪಣಗಳನು ಮಾಡಿ ೫೩
ಪತ್ತೆಂಟು ಧನುರ್ಶಾಸ್ತ್ರಗಳ ಪಠಿಸಿರುವ ।
ಉತ್ತಮೋತ್ತಮವಿಪ್ರ ಭೃಗುರಾಮ ಶರಣು ೫೪
ಹರನ ಬಿಲ್ಲನು ಮುರಿದು ಧರಣಿಜೆಯ ಪಡೆದೆ
ದುರುಳರಾವಣನ ಶಿರಗಳ ಹತ್ತ ತರಿದೆ ೫೫
ಅವನ ತಮ್ಮನಿಗೆ ಲಂಕಾರಾಜ್ಯವಿತ್ತೆ ।
ಸೊವಗ ದಶರಥರಾಮ ಹರಿ ನೀನೆ ಶರಣು ೫೬
ಮಧುರೆಯಲಿ ಪುಟ್ಟಿ ಗೋಕುಲದೊಳಗೆ ಬಳೆದು
ಸದೆದೆ ರಕ್ಕಸರ ತಱುಗಳ ಕಾಯಲ್ಯೈದಿ ೫೭
ದುರುಳತನದಲಿ ಪಾಲುಬೆಣ್ಣೆಗಳ ಮೆದ್ದೆ ।
ಪರಮ ಶ್ರೀಕೃಷ್ಣ ಗೋವಳ ಎನ್ನ ಕಾಯೊ ೫೮
ತ್ರಿಪುರ ಸತಿಯರ ವ್ರತವನಪಹರಿಸಲೆಂದು ।
ವಿಪುಳ ಪೃಥಿವಿಯೊಳು ನೀನಶ್ವತ್ಥವಾದೆ ೫೯
ಅತಿಬಲರ ಕೈಯಲ್ಲಿ ಕೋಲಾಗಿ ನಿಂದು ।
ಮಥಿಸಿದಾಹರಮಿತ್ರ ಬುದ್ಧ ಹರಿ ಶರಣು ೬೦

ಧರ್ಮಕರ್ಮಗಳೆಲ್ಲವೊಂದಾಗಿ ಪೋಗೆ
ಸುಜ್ಞಾನದಿಂದೆ ತುರುಗವನೇಱಿ ಕೊಂಡೆ ॥೬೧
ಕರ್ಮವನು ಬಿಡಿಸೆ ಪಾಪಿಷ್ಠರನು ಕೊಂದೆ ।
ಧರ್ಮಸ್ವರೂಪ ಕಲ್ಕಿಯ ರೂಪ ಶರಣು ॥೬೨।
ಅಱಿಯದವನೆನುತಲಚ್ಯುತ ರಕ್ಷಿಸೆನ್ನ
ಮಱವನೆಂದೆನುತೆ ಮಾಧವ ರಕ್ಷಿಸೆನ್ನ ।೬೩।
ಕೇಳನೆಂದೆನುತೆ ಕೇಶವ ರಕ್ಷಿಸೆನ್ನ
ಜಾಣನೆಂದೊಡಲಸುವು ನಿಲ್ಲದಯ್ಯೋ ! ೬೪
ಏಗಳೈತಂದು ಹರಿ ರಕ್ಷಿಸುವೆಯೆಂದು ।
ಕೂಗಿ ಕೊಳದೊಳಗೆ ಮೊಱೆಯಿಟ್ಟ ಗಜರಾಜ ೬೫.
ವಾರಿಜಾಂಬಕನು ಕಿವಿಗೊಟ್ಟು ಕೇಳಿದನು ।
ಕ್ಷೀರಾಬ್ಧಿಯಲಿ ವೈಕುಂಠಪಟ್ಟಣದಿ ॥೬೬॥
ಸರ್ಪನಾಹಾಸಿಗೆಯ ಮೇಲೆ ಹರಿಯಿರಲು ।
ಒಪ್ಪುತಿಪ ಮಾಲಕುಮಿಯೊಡನೆ ಸಂಭ್ರಮದೆ ೬೭
ಆಲಿಸುತಲೀಮೊಱೆಯನಜನ ಪಡೆದವನು ।
ಕೇಳೀನಿಕೇತನದಿನೊಡನೆ ನಡೆತರಲು ॥೬೮॥
ವಜ್ರಮಾಣಿಕ್ಯಕುಂಡಲದೆ ಕದಪೆಸೆಯೆ ।
ಪಜ್ಜಳಿಪ ಪೀತಾಂಬರವು ನೆಲದೊಳೆಱೆಯೆ ॥೬೯॥
ಎದ್ದು ಬಂದನು ದಯಾವಾರ್ಧಿ ಬಂದಂತೆ ।
ಮುದ್ದಾನೆ ಯೊರಲುತಿದ್ದಾಬೞಿಗೆ ಬೇಗ ॥೭೦।
ಶಂಖಚಕ್ರಗಳ ಕರದೊಳು ಪಿಡಿಯದಂತೆ ।
ಬಿಂಕದಲಿ ಗುರುಡನಾಹೆಗಲೇಱದಂತೆ ।೭೧
ಪಂಕಜಾಲಯೆಯೊಡನೆ ತಾನುಸಿರದಂತೆ ।
ಪಂಕೇಜನಾಭನೆಯ್ದಿದ ಮಡುವಿನೆಡೆಗೆ ॥೭೨
ಬೊಮ್ಮರುಂ ಸುರರು ದೇವೇಂದ್ರನೊಡಗೂಡಿ ।
ಧರ್ಮಪಿತೃಗಳೆನಿಪ ಮುನಿಗಳೊಡಗೂಡಿ ೭೩
ದೇವರ್ಷಿ ಬ್ರಹ್ಮರ್ಷಿಯೆಲ್ಲರುಂ ನೆರೆದು
ನೀನದೇನಾತ್ಮಸಿದ್ಧಿಡೆಗಾಗಿ ಬರಲು ೭೪
ಅಂದಾಗ ಶಂಖಚಕ್ರಗಳೊಡನೆ ಬರಲು
ಮುಂದೆಸೆಯೊಳಗೆ ಗರುಡಗಂಧರ್ವರಿರಲು ॥೭೫
ಸುರರುಘೋಯೆಂದು ಮುಂಗಡೆ ಪಾಡುತಿರಲು
ಸರಸಕರುಣಾಳು ಚಕ್ರವ ಪಿಡಿದು ಹರಿಯು ೭೬

ಬರುವುದನು ಕಂಡು ಕರಿ ಕರದ ತಾವರೆಯ
ತಿರಿದೆತ್ತಿ ನೀಡಿತ್ತು ಪಾಲಿಪುದೆನ್ನನೆಯ ೭೭
ಎಂದು ಮೊಸಳೆಯ ಬಾಧೆಯಿಂದೆ ಕಂಗೆಟ್ಟು |
ಮುಂದುಗಾಣದೆ ದಂತಿಯೊಡನೆ ಬಾಯ್ಬಿಟ್ಟು ೭೮
ಜಯ ಜಯ ಜಗನ್ನಾಥ ಜಯ ವಿಶ್ವರೂಪ |
ಜಯ ಭಕ್ತಮಂದಾರ ಎಂದು ಭಕ್ತಿಯಲಿ ೭೯
ಜಯತು ಧ್ರುವನಿಗೆ ವರವನಿತ್ತವನೆ ದೇವ |
ಜಯತು ದ್ರೌಪದಿಯ ಮಾನವ ಕಾದ ದೇವ ೮೦
ದೂರುವುದ ಕೇಳಿ ಕರುಣಾಳು ಮಡುಕವಲಿ |
ಭೂರಿನಕ್ರನ ಚಕ್ರದಿಂದೊಡನೆ ಸೀಳಿ ೮೧
ಅಂದು ಗಜವೆದ್ದು ಬಂದುದು ಸಂಭ್ರಮದಲಿ |
ಗಂದರನ ರೂಪನಳವಡಿಸಿ ಬೇಗದಲಿ ೮೨
ಹರಿಯ ಹರಿಸಂಸ್ಪರ್ಶದಿಂದಲಜ್ಞಾನ |
ಕರಿಯೊಡನೆ ಹರಿಯ ರೂಪಂ ಮೋಹಿಸಿದುದು ೮೩
ಕರಿಯು ಪೊರೆವಾಹರಿಯ ಸಿರಿಮುಡಿಯ ಮೇಲೆ |
ಸುರರರಳ ಮಳೆಯ ಸೂಸಿದರು ಗಗನದಲಿ ೮೪
ದುಂದುಭಿಯು ಮೊಳಗಿದುದು ನಲಿದು ಚಾರಣರು
ಇಂದಿರೇಶನ ಸ್ತೋತ್ರ ಮಾಡಿದರು ಮಣಿದು ೮೫
ಸಗ್ಗದೊಳು ಸೂಳೆಯರು ಕುಣಿದರುತ್ಸವದೆ |
ಬಗ್ಗಿದರು ದೇವರ್ಷಿಮುಖ್ಯರತಿಜವದೆ ೮೬
ಜಲಜಾಂಬಕನು ದಂತಿಪನನಿಂತು ಪೊರೆದು |
ನಲಿವಿಂ ಸುರರು ಪೊಗಳುತ್ತಲೊಲವರಲು ೮೭
ವೈನತೇಯನನೇರಿ ಕರಿಯೊಡನೆ ಬೇಗ
ಶ್ರೀನಾಥನೈದಿದನು ಪಟ್ಟಣಕ್ಕಾಗ ೮೮
ಉದಯಕಾಲದೊಳಿದನು ಹೇಳಿ ಕೇಳುವರು |
ಪದುಮನಾಭನ ಪಾದಭಕ್ತಿ ನೆಲಸುವುದು ೮೯
ದುಸ್ಸಂಗ ದುರ್ಬುದ್ಧಿ ದುಸ್ವಪ್ನವಳಿದು
ಸತ್ಸಂಗ ಸಾಯುಜ್ಯಪದವಿ ದೊರೆಯುವುದು ೯೦
ಸರ್ಪಾರಿವಾಹನನ ನೆನೆ ಕಂಡ ಮನವೇ
ತಪ್ಪದೆಂದುಂ ಮುಕ್ತಿ ಮನುಜರ್ಗೆ ಮನವೇ ೯೧

|| ಸಮಾಪ್ತಂ ||

Printed by S. Nanjunda Sastri at the Sreenivasa Press, Mysore.

ಕರ್ಣಾಟಕ ಕಾವ್ಯಕಲಾನಿಧಿ, ಕೋಶಸಂಖ್ಯೆ ೩೨.

ತಿರುಮಲೆ ವೈದ್ಯ

ವಿರಚಿತಂ

# ಉತ್ತರರಾಮಾಯಣಂ

(ಭಾಮಿನೀ ಷಟ್ಪದಿ)



ಎಂ. ಎ. ರಾಮಾನುಜಯ್ಯಂಗಾರ್ಯ,

ಅಸಿಸ್ಟೆಂಟ್ ಮಾಸ್ಟರ್, ಮಹಾರಾಣೀ ಕಾಲೇಜ್, ಮೈಸೂರು

ಇವರಿಂದ ಪರಿಶೋಧಿಸಲ್ಪಟ್ಟು



ಮೈಸೂರು :

ಜಿ. ಟಿ. ಎ. ಮುದ್ರಾಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.

1910.

ಕ್ರಯ 1 ¾ ರೂಪಾಯಿ]

# ಭೂಮಿಕೆ.

ಈ ಗ್ರಂಥವು ಎರಡು ಪ್ರತಿಗಳ ಸಹಾಯದಿಂದ ಮುದ್ರಿತವಾಯಿತು. ೧. ಓಲೆಯಪ್ರತಿ; ಆಪ್ರತಿಯ ಕೊನೆಯಲ್ಲಿ ದುರ್ಮತಿ ಸಂವತ್ಸರದ ಆಷಾಢಶುದ್ಧ ೫ ಮಂಗಳವಾರದ ದಿವಸ ಬರೆಯಲ್ಪಟ್ಟಿತು ಎಂದಿದೆ. ಸುಮಾರು ೭೦ ವರ್ಷಕ್ಕೆ ಹಿಂದಣ ಪ್ರತಿಯಾಗಿದೆ. ಮತ್ತೊಂದು ಕಾಗದದ ಪ್ರತಿ, ಇದು ಗೌರ್ನಮೆಂಟ್ ಓರಿಯಂಟಲ್ ಲೈಬ್ರೆರಿಯದು.

ಈ ಕವಿಯು ಯಾವ ದೇಶದವನೋ ಯಾವ ಕಾಲದವನೋ ಎಂಬುವುದನ್ನು ನಿರ್ಧರಿಸಿ ಹೇಳುವುದಕ್ಕಾಗುವುದಿಲ್ಲ. ಈತನ ವಿಷಯವಾಗಿ ಈ ಗ್ರಂಥದಿಂದ ತಿಳಿಯಬರುವುದೇನೆಂದರೆ:—

ಕವಿಯು ತಾನು "ಮೇದಿನಿಗೆ ಪೆಸರಾದ ಗವಿಯಣ | ಮೇದಿನೀಸುರಸೂನು" ಎಂದೂ, ತನ್ನ ಹೆಸರು ತಿರುಮಲೆವೈದ್ಯನೆಂದೂ[1] ಹೇಳಿಕೊಂಡಿದ್ದಾನೆ. ಅದರಿಂದ ಈತನು ಬ್ರಾಹ್ಮಣನೆಂದು ತಿಳಿಯಬರುತ್ತದೆ. ನಾಂದೀಸಂಧಿಯಲ್ಲಿ ಮೊದಲು ಗ್ರಂಥವಿಷಯಪ್ರತಿಪಾದ್ಯನಾದ ರಾಮನನ್ನೂ ಅನಂತರ ಈಶ್ವರ, ವಿನಾಯಕ, ಶಾರದೆ—ಇವರನ್ನು ವರ್ಣಿಸಿರುವುದರಿಂದಲೂ, ಮತ್ತು "ಪ್ರಕೃತಿಪುರುಷಸ್ಥಿತಿಯೆನಿಪ ಕೂಟದಲಿ ಲೀಲಾ | ಗತಿಯೊಳಗೆ ಮಾಯಾನಿತಂಬಿನಿ ಪುಟ್ಟಿ" ಸರ್ಗಸ್ಥಿತಿಲಯಗಳನ್ನುಮಾಡುವುದಕ್ಕೋಸ್ಕರ "ಅಜಹರಿಹರ"ರೂಪವನ್ನು ಧರಿಸಿ ಪ್ರಪಂಚವನ್ನುನಿರ್ಮಿಸಿದಳು ಎಂದಿರುವುದರಿಂದಲೂ, ಈತನು ಬಂದುವೇಳೆ ಸ್ಮಾರ್ತಮತದವನಾಗಿರಬಹುದು.

ಕವಿಯು ಕನ್ನಡಕವಿಗಳಲ್ಲಿ ಯಾರ ಹೆಸರನ್ನೂ ಹೇಳಿಲ್ಲ. ಮತ್ತು ರಾಮಾಯಣದ ಆರುಕಾಂಡಗಳನ್ನು ತೊರವೆಯ ರಾಮಾಯಣವೆಂದು ಪ್ರಸಿದ್ಧವಾದ ಗ್ರಂಥವನ್ನಾಗಿ ಪರಿವರ್ತಿಸಿದ ಕುಮಾರವಾಲ್ಮೀಕಿಯ ಹೆಸರನ್ನು ಕೂಡ ಹೇಳಿಲ್ಲ. ತೊರವೆಯ ರಾಮಾಯಣದಲ್ಲಿ ಕಂಡುಬರುವ ಸಂಸ್ಕೃತ ಸಮಸ್ತ ಪದಗಳಲ್ಲಿರುವ ವ್ಯಾಕರಣದೋಷಗಳೂ ಪ್ರಾಸದೋಷಗಳೂ ಈ ಗ್ರಂಥದಲ್ಲಿ ಯಾವುವೂ ಕಂಡುಬರುವುದಿಲ್ಲ. ಈತನ

1. ಸಂಧಿ. ೧, ಪದ್ಯ, ೬.

ಬಂಧವು ಬಹಳ ಸರಳವಾಗಿಯೂ, ತೊರವೆಯ ರಾಮಾಯಣದ ಬಂಧಕ್ಕಿಂತ ಉತ್ಕೃಷ್ಟವಾಗಿಯೂ ಇದೆ. ಈತನು ಕುಮಾರ ವಾಲ್ಮೀಕಿಯ ಸಮಕಾಲದವನೋ, ಅಥವಾ ಅವನಿಗೆ ಹಿಂದಣ ಕಾಲದವನೋ ಎಂಬುದನ್ನು ನಿರ್ಧರಿಸಲಾಗುವುದಿಲ್ಲ. ಈತನು ಉತ್ತರಕಾಂಡವನ್ನು ಮಾತ್ರ ಕನ್ನಡಿಸಿರುವುದರಿಂದ ಕುಮಾರವಾಲ್ಮೀಕಿಯ ರಾಮಾಯಣವನ್ನು ನೋಡಿ, ಆತನು ಪೂರೈಸದೆ ಬಿಟ್ಟ ಉತ್ತರಕಾಂಡವನ್ನು ಬರೆದಿರಬಹುದು ಎಂಬ ಊಹೆಗೆ ಅವಕಾಶವುಂಟು. ಈತನು ಸುಮಾರು ೧೭ ನೆಯ ಶತಮಾನಕ್ಕೆ ಹಿಂದಿದ್ದವನೆಂದು ಬಂಧದಿಂದ ಊಹಿಸಬಹುದು.

ಇದರಲ್ಲಿ ೨೦ ಸಂಧಿಗಳಿವೆ. ೧೦೨೧ ಪದ್ಯಗಳಿವೆ. ವಾಲ್ಮೀಕಿಮಹರ್ಷಿಪ್ರಣೀತವಾದ ಉತ್ತರರಾಮಾಯಣದ ಆಧಾರದ ಮೇಲೆಯೇ ಈ ಗ್ರಂಥವು ರಚಿತವಾಗಿದೆ. ವರ್ಣನಾದಿಗಳೂ ಕೂಡ ಅದರಲ್ಲಿ ಇದ್ದಂತೆಯೇ ಇದೆ. ಆ ಗ್ರಂಥಕ್ಕೆ ಇದು ಷಟ್ಪದಿಯ ರೂಪವಾದ ಪರಿವರ್ತನೆಯೆಂದು ಕವಿಯು ಹೇಳಕೊಂಡಿರುವಂತೆಯೇ ಇದೆ.

ಈತನ ಬಂಧವು ಸರಳವಾಗಿಯೂ ಪದ್ಯಗಳು ಓದುವುದಕ್ಕೆ ಸ್ವಲ್ಪವೂ ತಡೆಯಿಲ್ಲದಂತೆಯೂ ಇವೆ. ಕುಮಾರವ್ಯಾಸನ ಭಾರತ, ಕುಮಾರವಾಲ್ಮೀಕಿಯ ರಾಮಾಯಣ, ಚಿತ್ಸಾತ್ಮನ ಭಾಗವತ, ಈಗ್ರಂಥ—ಇವುಗಳು ಬ್ರಾಹ್ಮಣಕವಿಗಳಿಂದ ರಚಿತವಾದ ಭಾಮಿನಿ ಷಟ್ಪದಿಗ್ರಂಥಗಳಲ್ಲಿ ಉತ್ತಮವಾದುವು.

ಈ ಗ್ರಂಥದಲ್ಲಿ ವಿಶೇಷವಾಗಿ ಅಲಂಕಾರಾಡಂಬರಗಳಿಲ್ಲದಿರುವುದರಿಂದ ಷಟ್ಪದಿ ಗ್ರಂಥಗಳನ್ನು ಅಭ್ಯಾಸಮಾಡುವವರಿಗೆ ಇದು ಅತ್ಯಂತೋಪಯೋಗವುಳ್ಳುದಾಗಿದೆ.

ಒಂದು ಪ್ರತಿಯನ್ನು ಕೊಟ್ಟು ಸಹಾಯಮಾಡಿದ ಮ॥ ರಾ॥ ಓರಿಯಂಟಲ್ ಲೈಬ್ರೇರಿ ಕ್ಯೂರೇಟರ್ ಮಹದೇವಶಾಸ್ತ್ರಿಗಳವರಿಗೂ, ಈ ಗ್ರಂಥವನ್ನು ಬರೆದು ಅಲ್ಲಲ್ಲಿ ಬಿದ್ದಿದ್ದ ಸ್ಖಾಲಿತ್ಯಗಳನ್ನು ಪರಿಶೋಧಿಸಿ ಕೊಟ್ಟುದಕ್ಕಾಗಿ ಮ॥ ರಾ॥ ಎಸ್. ಜಿ. ಗೋವಿಂದರಾಜಯ್ಯಂಗಾರ್ಯರಿಗೂ ಬಹಳ ಕೃತಜ್ಞನಾಗಿರುತ್ತೇನೆ.

ಪ್ರವರ್ತಕ.

ತಿರುಮಲೆವೈದ್ಯಕೃತ

# ಉತ್ತರರಾಮಾಯಣದ

## ವಿಷಯಸೂಚಿ.

ಪುಟಾದಿ ಸಂಖ್ಯೆ





॥ ಶ್ರೀಃ ॥

# ತಿರುಮಲೆ ವೈದ್ಯ ಕೃತ

# ಉತ್ತರರಾಮಾಯಣಂ



## ಭಾಮಿನೀಷಟ್ಪದಿ

ಶ್ರೀಮದನುಪಮನಾಮ ಸುಜನ ।
ಪ್ರೇಮ ಜಿತಸಂಗ್ರಾಮ ದಶಶಿರ ।
ಕಾಮಮದಹರಸೋಮಧರ ಸೀತಾಮನಃಪ್ರೇಮ ॥
ತಾಮರಸಭವವಾಮ ನತಸು ।
ತ್ರಾಮ ಶೌರ್ಯೋದ್ದಾಮ ದೇವಲ ।
ಶಾಮ ಪಾಲಿಸು ಭೀಮಬಲ ನಿಸ್ಸೀಮ ರಘುರಾಮ ॥೧॥

ನೀಲಕಂಠ ಗಿರೀಶ ನಿರ್ಮಲ ।
ಶೂಲಧರ ಶುಭಾಂಗ ಶುಭಕರ ।
ಕಾಲಕಾಲ ಕಪರ್ದಿ ಕರುಣಾಕರ ಕಪಾಲಧರ ॥
ಶೈಲಜಾವರ ಶಂಭು ಶಂಕರ ।
ಭಾಳಲೋಚನ ಭಕ್ತಭಾವನ ।
ಪಾಲಿಸೈ ಪರಮೇಶ ಪಾಪವಿನಾಶ ಮತ್ಕೃತಿಯು ॥೨॥

ಕರಿವದನ ವದನಾಬ್ಜಮಂಡಿತ ।
ಕರ ಕರೋತ್ಥಿತಶೀಕರೋತ್ಕರ ।
ಕರಚರಣಪರಿಶುದ್ಧ ಶುದ್ಧಾಕ್ಷರ ಪರಿಜ್ಞಾತ ॥
ಪರಮ ಕರುಣಾಲೋಕ ಲೋಕೇ ।
ಶ್ವರಮುಖಾಮರರಕ್ಷ ರಕ್ಷಿತ ।
ಶರಣಗಣ ಗಣಪಾಲ ಪಾಲಿಸು ಕೃತಿಗಲಂಕೃತಿಯು ॥೩॥

ಹಾರಹೀರ ಪಟೀರ ಶಶಿ ನೀ ।
ಹಾರ ವಿಮಲಕ್ಷೀರಪಾರಾ ।
ನಾರ ಘನಸಕರ್ಪೂರ ಧವಳಶರೀರೆ ಸುಖಪೂರ್ಣೆ ॥
ವಾರಿಜೋದ್ಭವ ಚಿತ್ತಕೀರವಿ ।
ಹಾರ ಚೈತ್ರೋದಾರವನಸಹ ।
ಶಾರೆ ಶಾರದೆ ಮತಿವಿಶಾರದೆ ಪಾಲಿಸೀಕೃತಿಯು ॥೪॥

ಆದಿಕವಿ ವಾಲ್ಮೀಕಿಮುನಿ ವೊದ ।
ಲಾದ ಸತ್ಕವಿಸಂತತಿಗೆ ಬಿಡ ।
ದಾದಿಯಲಿ ತಲೆವಾಗಿ ಬಣ್ಣಿಸಿ ಭಜಿಸಿ ಬಲಗೊಂಡು ॥
ಭೇದಬುದ್ಧಿಯ ಕುಜನರಿದಱೊಳು ।
ಭೇದಿಸದೆ ದೂಷಣವ, ದೂಷಣ ।
ಭೇದಕನ ಕತೆವೇಳ್ವೆನೆಂದೆನೆ ಸುಜನರಾಲಿಪುದು ॥೫॥

ಆದಿಯಲಿ ನಾರದನು ಪೇಳ್ದುದ ।
ನಾದಿಕವಿ ವಾಲ್ಮೀಕಿಗಾನುಡಿ ।
ಯಾದಿವಿಡಿದುಸಿರಿದನು ರಾಮಾಯಣಮಹಾಕೃತಿಯ ॥
ಮೇದಿನಿಗೆ ಪೆಸರಾದ ಗವಿಯಣ ।
ಮೇದಿನೀಸುರಸೂನು ಪೇಳ್ದನು ।
ಮೇದಿನಿಗೆ ಕನ್ನಡಿಸಿ ತಿರುಮಲೆವೈದ್ಯನೀಕೃತಿಯ ॥೬॥

ಕೃತಿಗೆ ಪೆಸರುತ್ತರ ಮಹಾಸ।
ನ್ನುತದ ರಾಮಾಯಣವಿದಕೆ ಕೃತಿ ।
ಪತಿ ರಘುಕ್ಷಿತಿನಾಥನೆಂದೊಡದಾರು ಬಣ್ಣಿಸರು ।
ನುತಿಸದಿಹರಾರಖಿಳಕವಿಸಂ ।
ತತಿಯೊಳುಳ್ಳ ಜನಂಗಳೊಳು ರಘು ।
ಪತಿಯ ಪಾವನಚರಿತಗಳ ನಿರ್ಧೂತದುರಿತಗಳ ॥೭॥

ಆಡಲೇನುಪಚಾರಶತವನು ।
ನೋಡಿ ಕವಿಗಳು ತಿರ್ದೆ [ಕೃತಿಗೇಂ!
ಕೇಡಹುದೆ ತಿರ್ದಿದೊಡೆ ನಿರ್ಮಲವಾಗಿ ನಿಲವಿಹುದೆ ॥
ಕೊಡೆ ಶುಭ್ರಾಂಶುವಿಗೆ ಶರದವು ।
ಮಾಡದೇ ವಿಮಲತೆಯನಿದು ನಾ ।
ಪಾಡಿಗಬ್ಬವೆ ರಾಮಕೃತಿ ನಿರ್ದೋಷಕರವೆಂದ ॥೮॥

ದೋಷವಿರೆ ರಕ್ಷಿಪುದು ದುರ್ಜನ ।
ರೀಷದಿರ್ಪ್ಪ ಚಿತ್ತವಿದಕದು ।
ದೂಷಣವೆ ಪುಣ್ಣೆಱಗುವುದು ಮಕ್ಷಿಕಕೆ ಸಹಜವಲ ॥
ದೂಷಿಪರು, ಸಜ್ಜನರು ಸುಗುಣಾ ।
ನ್ವೇಷಿಗಳು, ಸರಸಿಜದ ಗಂಧಕೆ ।
ತೋಷಿಸದೆ ಮಾಣ್ಪುವುದೆ ತುಂಬಿಯ ಸಾಲು ಸಂದಣಿಸಿ ॥೯॥

ಕಳೆಯ ಬಹುದೆ ಖಳಾಹಿಮುಖ ನಿ।
ರ್ಗಳಿತವಾಙ್ಮಯ ಕಾಳಕೂಟವ।
ನಿಳೆಯೊಳಿಹ ಸಜ್ಜನಸ್ತವವೆನಿಪ ಗಾರುಡವ ।
ತಿಳಿದು ಜಪಿಸಲು, ತನ್ಮಸಿವೆಗದು।
ತೊಲಗದಿಹುದೇ ಸುಜನರೀಕ್ಷಿಸಿ।
ಗಳಿತಲಜ್ಜರಸಾಖಲರ ನಾಗ್ಗಡಿಸದೇಕಿಹರು ॥೧೦॥

ದುರ್ಜನರ ಮಾತೇನು ಸಜ್ಜನ।
ರಾಜಿಸುವುದೀಕೃತಿಯು ಸದ್ಗುಣ।
ನಿರ್ಜರಾಮರತೆಯನು ವಾಕ್ಯಾಮೃತವಿಶೇಷವದು ॥
ಊರ್ಜಿತವಲಾ ಮತ್ತೆ ಖಲರಿದ।
ನಾರ್ಜಿಸೆಯಲಾರ್ತಪರು ದುಷ್ಟವಿ।
ಸರ್ಜನವೆ ಮತವೆಮಗೆ ಬಹುದೇನವರ ದೆಸೆಯಿಂದ ॥೧೧॥

ಪೇಳ್ದಪೆನು ರಾಮಾಯಣವಸಿದ।
ನಾಲಿಪುದು ಸಜ್ಜನರು ರಘುಭೂ।
ಪಾಲನೆನ್ನಯ ಮನದ ಮನೆಯೊಳು ತಾನೆ ನೆಲೆಗೊಂಡು ॥
ನಾಲಗೆಗೆ ನಾನಾವಿಧಾಕ್ಷರ।
ಜಾಲಗಳನುಚ್ಚರಿಸುವತಿಶಯ।
ಪೇಳ್ವೆಗೆಯನೊಲಿದಿತ್ತು ಮಾಡಿಸಿದನು ಲಸತ್ಕೃತಿಯ ॥೧೨॥

ಕ್ಷಿಪ್ರದಿಂದಾಲಿಪುದು ಶತಕೋ।
ಟಿಪ್ರವಿಸ್ತರ ವರಮಹಾಕೃತಿ।
ಸುಪ್ರಸಿದ್ಧವಲಾ ಜಗಕೆ ರಘುರಾಮಚರಿತವಿದು ॥
ಸುಪ್ರಕಟದಿತಿಹಾಸವಿದೆ ರಘು।
ಜಪ್ರಭಾವದ ಸೀಮೆಯಿದರೊಳು।
ಸುಪ್ರಯುಕ್ತದ ಸೀಮೆಮಿಸೆ ಬಣ್ಣಿಸುವರಾರಿದನು ॥೧೩॥

ಅಕ್ಷಯಾತ್ಮ ವಿಪಕ್ಷದಾನವ।
ಶಿಕ್ಷ ದುಷ್ಕೃತರೂಕ್ಷ ಸುಮನಸ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ।
ಯಕ್ಷಸುರಮುನಿರಕ್ಷ ಸುಜನಾ।
ಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥೧೪॥

ಇಂತು ನಾಂದೀಸಂಧಿ

## ಎರಡನೆಯ ಸಂಧಿ.

---

ಸೂಚನೆ ॥ ಪೇಳ್ದನು ಪೌಲಸ್ತ್ಯವಂಶವಿ ।
ಶಾಲವನು ರಘುಪತಿಗೆ ಮುನಿಜನ ।
ಪಾಲನೆನಿಸುವಗಸ್ತ್ಯಮುನಿವರನುಚಿತವಚನದಲಿ ॥

ದಾಳಿಯಲಿ ರಘುಪತಿ ನಿಶಾಚರ ।
ಜಾಲಸಹಿತಿದಿರಾದ ಲಂಕಾ ।
ಪಾಲಕನ ಮುರಿದಿಕ್ಕಿ ಸೀತಾಲಲನೆಯೊಡಗೂಡಿ ॥
ನೀಲನಳಸುಗ್ರೀವಮುಖ ಕಪಿ ।
ಜಾಲದೊಡನೆ ವಿಭೀಷಣಾದಿಗ ।
ಳೋಲಗಿಸುತ್ತೈತರಲಯೋಧ್ಯೆಗೆ ಬಂದನೊಲವಿನಲಿ ॥೧॥

ಪ್ರಜೆಗಳನು ಲಾಲಿಸುತ ಬಂಧು ।
ವ್ರಜವ ಮನ್ನಿಸಿ ಸೋದರರು ಗಜ ।
ಬಜಿಸದಂತುಚಿತದಲಿ ನಡೆಸುತ ಮಾತೃವರ್ಗಗಳ ॥
ಭಜಿಸುತಾಪುರವರದೊಳೊಪ್ಪುವ ।
ಸುಜನರನು ಸತ್ಕರಿಸುತಿರ್ದನು ।
ವಿಜಯಲಕ್ಷ್ಮೀವರನುದಾರಸಮಗ್ರವಿಭವದಲಿ ॥೨॥

ಕೌಶಿಕ ಯವಕ್ರೀತ ರೈಭ್ಯಮು ।
ನೀಶ ನಳ ಮೇಧಾತಿಥಿಯು ಮಗ ।
ನೀಶಸಮನೆನಿಸಿರ್ದ ಕಣ್ವಮುನೀಂದ್ರ ಮೊದಲಾದ ॥
ಆಶತಕ್ರತುಪಾಲಿತಾಶಾ ।
ದೇಶದವರೈತಂದು ರವಿಕುಲ ।
ದಾಶರಥಿಯನು ನೋಡಲೆಂದು ಮನೋನುರಾಗದಲಿ ॥೩॥

ಅಯುತದೊಳೊಡನೈದೆ ಸ್ವಸ್ತ್ಯಾ ।
ತ್ರೇಯ ನಮುಚು ಪ್ರಮುಚುಗಳು ನಿರ ।
ಪಾಯಮತಿಗಳು ಬರಲಗಸ್ತ್ಯಮುನೀಂದ್ರನೊಲವಿನಲಿ ॥
ಆ ಯಮುನ ದೆಸೆಯಿಂದ ರಾಘವ ।
ರಾಯನನು ನೋಳ್ಪೊಂದು ಕಜ್ಜದು ।
ಪಾಯದಿಂದೈದಿದನಯೋಧ್ಯೆಗೆ ನೆರವಿ ಬೆಡಗಾಗೆ ॥೪॥

ಕವಠ ಧೌಮ್ಯರು ಸಿದ್ಧ ಮೊದಲಾ ।
ದವರು ರೌದ್ರೇಯಾದಿ ಮುನಿಸಂ ।
ಭವರಯೋಧ್ಯೆಗೆ ಪಡುವಣವರೈದಿದರು ನಲವಿನಲಿ ॥
ರವಿಕುಲಾಂಬುಧಿಸೋಮನನು ರಾ ।
ಘವನ ರಾಕ್ಷಸಕುಲಕುಲಾಚಲ ।
ಪವಿಯನೀಕ್ಷಿಸಲೆಂದು ಕೌತೂಹಲಸಮನ್ವಿತರು ॥೫॥

ಅತ್ರಿಮುನಿಪ ವಸಿಷ್ಠ ವಿಶ್ವಾ ।
ಮಿತ್ರ ಗೌತಮ ಕಶ್ಯಪಾದಿ ಪ ।
ವಿತ್ರತರ ಜಮದಗ್ನಿ ಪಾವನಮುನಿ ಭರದ್ವಾಜ ॥
ಚಿತ್ರಚರಿತ ದಧೀಚಿಯವರತಿ ।
ಪಾತ್ರದಿಂದೈದಿದರು ನೋಡಲ್ಕೊಡೆ ।
ಮಿತ್ರಕುಲಸಂಭವನ ರಾಮನ ಸಪ್ತಋಷಿವರರು ॥೬॥

ಬಂದು ರಾಮನ ರಾಜಭವನದ ।
ಮುಂದೆ ನಿಂದಾದ್ವಾರಪಾಲನೊ ।
ಳೆಂದನಾಗಳಗಸ್ತ್ಯನತ್ರಿವಸಿಷ್ಠ ಮೊದಲಾದ ॥
ಸಂದ ಸಪ್ತಮಹರ್ಷಿವರರೈ ।
ತಂದರೆಂದಿನಕುಲಜಗರುಹೆನ ।
ಲಂದು ಪಡಿಯರನರುಹಿದನು ರಘುಪತಿಗೆ ಕೈಮುಗಿದು ॥ ೭॥

ಜೀಯ ಬಿನ್ನಹವಖಿಲಮುನಿಸಮು ।
ದಾಯವೈತಂದಿರ್ದಪುದು ರಘು ।
ರಾಯ ಬಾಗಿಲೊಳೆನಲು ಕೇಳ್ದು ಮನೋನುರಾಗದಲಿ ॥
ಕಾಯವಿರದುಬ್ಬರಿಸಿ ಪರಿತೋ ।
ಷಾಯತನತನುವಾಮುನೀಂದ್ರನಿ ।
ಕಾಯಕಾನತನಾಗಿ ಸತ್ಕರಿಸಿದನು ಮುನಿವರರ ॥೮॥

ಜನಪನವರ್ಗಿತ್ತರ್ಘ್ಯಪಾದ್ಯಾ ।
ಸನವನಿತ್ತೆ ಮುನಿಗಳಿರ ನಿಮ್ಮಯ ।
ಮನಕೆ ಸುಕ್ಷೇಮವೆ ಸುಖಂಗಳೆ ನಿಮ್ಮ ಶಿಷ್ಯರಿಗೆ ॥
ದನುಜ ಸಿಂಹ ವ್ಯಾಘ್ರ ಖಗಮೃಗ ।
ಜನಿತ ಬಾಧೆಗಳಿಲ್ಲಲೇ ನಿಮ ।
ಗೆನೆ ಮಹೀಪ್ರಜಮುಖ್ಯನೆನಿಸುವಗಸ್ತ್ಯನಿಂತೆಂದ ॥೯॥

ರಾಮ ಕೇಳೈ ಮುನಿಜನಕೆ ಸು ।
ಕ್ಷೇಮ ದಶಕಂಧರನ ಮರ್ದಿಸಿ ।
ಕಾಮಿಸೀಯುತನಾಗಿ ರಾಜ್ಯಶ್ರೀಯುಸನುಕರಿಸಿ ॥
ಕ್ಷೇಮದಿಂದೈತಂದ ನಿನ್ನಯ ।
ರಾಮಣೀಯಕ ಚರಿತವನು ಸು ।
ಕ್ಷೇಮದಿಂದೀಕ್ಷಿಪೊಡೆ ಬಂದೆವೆನುತ್ತಲಿಂತೆಂದ ॥೧೦॥

ಏನಿದಚ್ಚರಿ ರಾಮ ದೈವಾ ।
ಧೀನದಲಿ ದಶಶಿರನನಿಕ್ಕಿದೆ ।
ದಾನವಾಮರ ಯಕ್ಷ ರಾಕ್ಷಸ ಗರುಡ ಗಂಧರ್ವ ॥
ಮಾನವಾಹಿ ಪ್ರಮುಖ ಭಟಸಂ ।
ತಾನವಳುಕಿದುದವಗೆ ಜೀವದ ।
ಹಾನಿ ನಿನ್ನಿಂದಾದುದಿದು ಕೃತಪುಣ್ಯಫಲವೆಂದ ॥೧೧॥

ಆವರೊಳತಿಬಲಯುತನು ಕುಂಭ ।
ಶ್ರವಣನಾತನ ಕೊಂದೆ ಸುಭಟ ।
ಪ್ರವರ ಧೂಮ್ರಾಕ್ಷ ಪ್ರಹಸ್ತ ಮಹೋದರಾಸುರರ ॥
ಬವರದಲಿ ಬಿಱಿಕ್ಕಿದೆ ದನುಸಂ ।
ಭವ ಸುಪಾರ್ಶ್ವಕ ವಜ್ರದಂಷ್ಟ್ರರ ।
ನಿವಹವನು ಮುಱಿದಂದವಚ್ಚರಿಯಾದುದೆಮಗೆಂದ ॥೧೨॥

ಇಂದ್ರಜಿತುವನು ಗೆಲಿದೆ ರಾಜಮ ।
ಹೇಂದ್ರ ದೈವಾಧೀನದಲಿ ದನು ।
ಜೇಂದ್ರರೊಳಗಗ್ಗಳನಲಾ ಮಾಯಾಪ್ರಪಂಚದಲಿ ॥
ಇಂದ್ರ ಶಿಖಿ ಯಮ ವರುಣ ವಾಯು ದಿ ।
ನೇಂದ್ರರನು ಸದೆಬಡಿದ ಭುಜಬಲ ।
ಸಾಂದ್ರನಱಿದನು ನಿನ್ನ ನೆಸೆಯಿಂದೆಂದನಾಮುನಿಪ ॥೧೩॥

ಭೂಪ ಕೊಂದೆಯಕಂಪ ವಿಕಟವಿ ।
ರೂಪನೇತ್ರನ ತ್ರಿಶಿರಖರಮುಖ ।
ತಾಪಸವ್ರಜಭಂಜಕರ ಮಾಯಾಭಿರಂಜಕರ ॥
ಪಾಪಕರ್ಮರನತಿಭಯಂಕರ ।
ರೂಪ ದೇವನರಾಂತಕಾದ್ಯರ ।
ನಾಪುಲಸ್ತ್ಯಕುಲೋದ್ಭವರನಿಕ್ಕಿದುದು ಪೊಸತೆಂದ ॥೧೪॥

ಕುಂಭನನು ಮರ್ದಿಸಿದೆ ಮತ್ತೆ ನಿ।
ಕುಂಭ ದೈತ್ಯಾಧಿಪನನೊರಸಿದೆ।
ಕುಂಭಕರ್ಣತನೂಭವರ ಮಾಯಾಸಮುದ್ಭವರ॥
ಜಂಭರಿಪುಚೋದಿತ ಮಹಾಗಜ।
ಕುಂಭವಿದಳನ ವಿಪುಲಬಾಹಾ।
ಸ್ತಂಭರಳಿದುದು ಚಿತ್ರವೆನಗಿದು ರಾಮ ಕೇಳೆಂದ ॥೧೫॥

ಇನಿತು ದನುಜೌಘದಲಿ ಪೇಳ್ವೊಡೆ।
ಮನಕಿದಚ್ಚರಿ ರಾಮ ರಾವಣಿ।
ಯನುವರಕೆ ದಶವದನ ಕುಂಭಶ್ರವಣರೆಣೆಯುಹರೆ॥
ದನುಜ ದಿವಿಜ ಭುಜಂಗರೊಳಗಾ।
ತನ ಪರಾಕ್ರಮಪಟುತರಾಗ್ನಿಯ।
ಮೊನೆಗೆ ನಿಲುವವರಿಲ್ಲನಾತನ ಗೆಲುವುದರಿದೆಂದ ॥೧೬॥

ಎಲೆ ಮುನೀಶ್ವರ ರಾವಣನ ಭುಜ।
ಬಲವನಗ್ಗದ ಕುಂಭಕರ್ಣನ।
ಬಲುಹನಾಧೂಮ್ರಾಕ್ಷವಿಕಟ ಮಹೋದರಾಸುರರ॥
ಗೆಲಿದುದನು ಬಿಟ್ಟಿಂದ್ರಜಿತುವನು।
ಗೆಲಿದುದಗ್ಗಳವೆಂದಿರಾತನ।
ಬಲುಹನಾತನ ವರವನೆನಗಿನ್ನರುಹಬೇಕೆಂದ ॥೧೭॥

ಮಾಯವೋ ನಿಶ್ಚಯವೊ ಮೇಣತಿ।
ಕಾಯ ದೇವಾಂತಕ ನರಾಂತಕ।
ರಾ ಯಮೋಪಮವಜ್ರದಂಷ್ಟ್ರಪ್ರಮುಖಭಟರಿರಲು॥
ಜೇಯ ಶಕ್ರಾರಿಯ ಪರಾಕ್ರಮ।
ದಾಯತವ ಪೊಗಳುವಿರಿ ಬಹುದೈ।
ತ್ರೇಯರೊಳಗಿವನೆಂತು ಬಲ್ಲಿದನುಸಿರಬೇಕೆಂದ ॥೧೮॥

ವರವೊ ಸಹಜವೊ ರಾವಣಿಗೆ ಬಿ।
ತ್ತರಿಪುದಾತನ ಬಲುಹನಾದಶ।
ಶಿರನ ಬಾಹಾಬಲವನಾತನ ವರದ ಪಟುತನವ॥
ಸುರನರೋರಗಯಕ್ಷರಾಕ್ಷಸ।
ಗರುಡಗಂಧರ್ವಾದಿ ಸುಭಟರ।
ಪರಿಕುಮಾಡನ ಬಗೆಯನೆನಗಿನ್ನೊರೆಯಬೇಕೆಂದ ॥೧೯॥

ಆದೊಡಾಲಿಸು ರಾಮ ಕೃತಯುಗ।
ದಾದಿಯಲಿ ಕಮಲಾಸನನ ಸುತ।
ನಾದನೊರ್ವ ಪುಲಸ್ತ್ಯನೆಂಬ ಸರೋಜಸಂಭವನು ॥
ವೇದಶಾಸ್ತ್ರಾಗಮ ಪುರಾಣವ।
ನೋದಿ ತತ್ವಜ್ಞಾನವಿಸರದ।
ಬೀದಿಯಲಿ ಸುಳಿದನು ಸುಕರ್ಮಬ್ರಹ್ಮತೇಜದಲಿ ॥೨೦॥

ಇರುತಿರುತ ಸುರಗಿರಿಯ ತಪ್ಪಲ।
ಹೊರೆಯೊಳೆಸೆವ ತೃಣಾಗ್ನಿಯಾಶ್ರಮ।
ದುರುತರಕ್ಷೇತ್ರದಲಿ ತಪವಿರ್ದನು ಸರಾಗದಲಿ॥
ವರಸರೋವರದಿಂದ ಪುಷ್ಪೋ।
ತ್ಕರಫಲೋತ್ಕರದಿಂದ ಶೋಭಾ।
ಕರವೆನಿಸಿ ಮೆಱೆದಿಹುದು ತದ್ವನಭೂಮಿ ಕಣ್ಗಳಿಗೆ ॥೨೧॥

ಸನ್ನುತದೊಳೆಸೆವಾವನಕೆ ಸುರ।
ಕಿನ್ನರೋರಗಯಕ್ಷರಾಕ್ಷಸ।
ಕನ್ನಿಕೆಯರೈದಿದರು ವನಜಲಕೇಳಿಗೆಂದೆನುತ॥
ಇನ್ನು ಕೇಳೈ ರಾಮ ಮುನಿಸಂ।
ಪನ್ನನೆಸಗುವ ತಪದ ನೆನಹಿಗೆ।
ಭಿನ್ನಬುದ್ಧಿಯನೆಸಗಿದುದು ಮುನಿ ಮುನಿದು ಶಾಪಿಸಿದ ॥೨೨॥

ಇಂದು ಮೊದಲೀವನಕೆ ಕನ್ಯಾ।
ವೃಂದವೈತರೆ ಗರ್ಭವಾಗಲಿ।
ಹಿಂದುಗಳೆಯದು ತನ್ನ ನುಡಿಯೆನೆ ಕೇಳ್ದು ಭೀತಿಯಲಿ ॥
ಬಂದ ಕನ್ಯಾವ್ರಾತವೈದಿತು।
ನಿಂದೆಡೆಯೊಳಿದನಱಿಯದಾತೃಣ।
ಬಿಂದುವಿನ ಮಗಳೈದಿದಳು ಮುನಿಪನ ತಪೋವನವ ॥೨೩॥

ಮುನಿಪನಿರ್ದನು ಯೋಗವಿದ್ಯಾ।
ಜನಿತಸುಜ್ಞಾನದಲಿ ಧರ್ಮದ।
ನೆನಹಿನಾಹೃದಯದಲಿ ಶಿಕ್ಷಾಕಲ್ಪ ಮೊದಲಾದ ॥
ವಿನುತವೇದಾಂಗದ ಸುನಿಷ್ಠೆಯ।
ನೆನಹಿನಲಿ ಘನತರದ ನಿರ್ಮಲ।
ತನು ಪುಲಸ್ತ್ಯಬ್ರಹ್ಮಋಷಿ ತತ್ವೈಕನಿಧಿಯೆನಿಸಿ ॥೨೪॥

ನೋಡಿದಳು ಮುನಿವರನನಾವಧು ।
ಕೂಡೆ ಗರ್ಭವ ಧರಿಸಿದಳು ತೂ ।
ಗಾಡಿದಳು ಮಸ್ತಕವನಕಟಾ ಕೆಟ್ಟೆನೆಂದೆನುತ ॥
ಕೇಡು ಕುಲಕೊದವಿದುದು ನಾನಿದ ।
ನಾಡದೊಡೆ ಪಿತನೊಡನೆ ಹೊಳೆ ಮೆ ।
ಯ್ಗೂಡದಿರದೆನುತೋಡಿದಳು ತೃಣಬಿಂದುವಿರ್ದೆಡೆಗೆ ॥೨೫॥

ಕಂಡನಾಮುನಿ ಮಗಳ ಗರ್ಭದ ।
ಪಾಂಡುದೇಹವನೆತ್ತಣದುಬುತ ।
ಮಂಡಳೆವುದೆಲೆ ತಾಯೆ ಎನ್ನೊಳು ಹುಸಿಯದುಸಿರೆನಲು ॥
ಕಂಡೆನಲ್ಲದದೊರ್ವ ಮುನಿಯನು ।
ಕೆಂಡುದಿಲ್ಲನ್ಯವನು ಬಂದುದು ।
ಭಂಡತನವೆಲೆ ತಾತ ತನಗೆಂದಳು ಮುನೀಂದ್ರಸುತೆ ॥೨೬॥

ಧ್ಯಾನಿಸಿದನಾಮುನಿಪನಮಲ ।
ಜ್ಞಾನದಿಂದಱಿದನು ವಿರಿಂಚನ ।
ಸೂನುವಿನ ಶಾಪವನು ತನುಜೆಯುನಂಜಬೇಡೆನುತ ॥
ಅನಳಿನಸಂಭವನ ತನುಜನ ।
ಕಾನನವನೆಯ್ದಿದನು ಕಂಡನ ।
ನೂನವಿಮಲಬ್ರಹ್ಮತೇಜಪುಲಸ್ತ್ಯಮುನಿವರನ ॥೨೭॥

ಮುನಿಪ ಕನ್ಯಾಭಿಕ್ಷವನು ನೀ ।
ವಸುಕರಿಸಬೇಕೆಂದು ಮುನಿ ಸ ।
ದ್ವಿನಯದಿಂದೆಸಲಸ್ತುವೆನುತ ಪುಲಸ್ತ್ಯ ಕೈಕೊಂಡ ॥
ಜನಪ ಕೇಳ್ ತೃಣಬಿಂದು ಬೀೞ್ಕೊಂ ।
ಡನು ಪತಿವ್ರತೆ ಭಕ್ತಿಯಲಿ ಮಾ ।
ನಿನಿ ಸದಾಸೇವೆಯಲಿ ಸತ್ಕರಿಸಿದಳು ಮುನಿವರನ ॥೨೮॥

ಅಂದು ಮುನಿ ಮೆಚ್ಚಿದನು ಮಾನಿನಿ ।
ಗೆಂದನೆಲೆ ತರಳಾಕ್ಷಿ ಪಡೆದಪೆ ।
ನಂದನನ ನಯಯುತನನಮಲ ಜ್ಞಾನಸಂಯುತನ ॥
ಒಂದು ನಿನ್ನಿಂದೊಮ್ಮೆ ನಯವಿಧ ।
ದಿಂದ ನವಿಗ್ನ್ಮಶ್ರುತಿಯ ಕೇಳ್ದುದ ।
ಕಂದ ಜಗದ ಮಗನ ಹೆಸರದು ವಿಶ್ರವಸುವೆಂದ ॥೨೯॥

ಎನೆ ಹಸಾದವೆನುತ್ತ ಸತಿ ವೈ।
ಜನನವಾಸದೊಳೆಂದು ಪಡೆದಳು।
ತನುಜನನು ಮುನಿ ನಾಮಕರಣವ ಮಾಡಿದನು ಮಗಗೆ॥
ಜನಪ ಕೇಳೈ ವಿಶ್ರವಸುವೆಂ।
ದೆನಿಪ ಮಗನಾಗಮಗಳೆನಿಕೊಳ।
ವನಿತನೋದಿದನೆಸೆದನಮಲಬ್ರಹ್ಮತೇಜದಲಿ ॥೨೦॥

ಪರಮವೇದಾಗಮಪುರಾಣದ।
ಸರಣಿಯೊಳಗಡಿಯಿಡುವ ಮಗನಿಗೆ।
ವರಭರದ್ವಾಜಾಖ್ಯನಿತ್ತನು ತನುಭವೆಯು॥
ವರಿಸಿದನು ಪೌಲಸ್ತ್ಯನಾಮುನಿ।
ಸರಿಸಿದನತ್ತಲು ದೇವವರ್ಣಿನಿ।
ಬರಿಸಿದಳು ಚಿತ್ತವನು ಸದ್ಭಕ್ತಿಯಲಿ ಮುನಿವರನ ॥೨೧॥

ಇಂತು ಪತಿಭಕ್ತಿಯಲಿ ಮುನಿಪಗೆ।
ಸಂತಸವನೆಸಗಿದಳು ಪಡೆದಳು।
ಕಾಂತೆ ಮಗನನು ವಿಶ್ರವಸುಸಮರೂಪಸಂಯುತನ॥
ಎಂತು ನೆನಹೊ ಪಿತಾಮಹಗೆ ನಿಜ।
ಸಂತತಿಯೊಳೈತಂದು ಕಂಡನ।
ನಂತಪುಣ್ಯೋದಯಯುತನನಾವಿಶ್ರವಸುಸುತನ ॥೨೨॥

ಅವನಿಪತಿ ಕೇಳಾತನಿಗೆ ವೈ।
ಶ್ರವಣನೆಂಬಭಿಧಾನವನು ವಿಧಿ।
ವಿವರಿಸಿದನೈದಿದನು ಗಗನಕೆ ಬಹಳಹರ್ಷದಲಿ॥
ತವಕ ಮಿಗೆ ಪಿತನಾಜ್ಞೆಯಲಿ ವೈ।
ಶ್ರವಣನಾಚರಿಸಿದನು ತಪವನು
ವಿವಿಧನಿಯಮಂಗಳಲಿ ಶಾಸ್ತ್ರಸಮಗ್ರ ಸಂಪದವ ॥೨೩॥

ಸಪ್ತಸಪ್ತಸಹಸ್ರವರ್ಷ ಸ।
ಮಾಪ್ತಿಯಹ ಪರ್ಯಂತ ತನುವಿನ।
ತೃಪ್ತಿ ಜಲಮಾರುತನಿರಾಹಾರಂಗಳಲಿ ತನಗೆ॥
ಲುಪ್ತವಾಗದೆ ತಪವನೆಸಗುವ।
ದೀಪ್ತತೇಜನ ಬಳಿಗೆ ಭುವನಜ।
ನಾಪ್ತನೈದಿದನಬ್ಜಭವ ನೋಡಲ್ಕೆ ಮುನಿಸುತನ ॥೨೪॥

ಸಾಕು ಒಬಿಲಿದೆ ಮಗನೆ ತಪವನು ।
ನೂಕಿ ಕಳೆ ಬೇಡೇಬು ನಿನಗಿನಿ।
ಸೇಕೆ ಸಾಹಸ ಬೇಡು ವರಗಳನೀವೆನೆಂದೆನಲು॥
ಕೋಕನದಭವ ವಿತ್ತಪತಿಯುಹ।
ಲೋಕಪಾಲಕನಹ ವರಂಗಳ ।
ನೀ ಕರುಣಿಸೆನಗೆನಲು ನೀರಜಗರ್ಭನಿಂತೆಂದ ॥೩೫॥

ಕೇಳು ಮಗನೆ ಯಮೇಂದ್ರವರುಣರ ।
ಹೋಲುವೆಗೆ ಬಹ ನಾಲ್ಕನೆಯ ದಿ ।
ಕ್ಪಾಲನನು ಪಡೆವಂತರಂಗೋದ್ಯೋಗವಿಹುದೆಮಗೆ॥
ಕಾಲವರುಣೇಂದ್ರರವೊಲಾಶಾ।
ಪಾಲನಾಗು ಧನೇಶನಾಗು ವಿ ।
ಶಾಲಮತಿಯೆನುತಿತ್ತನಮಲವಿಮಾನ ಪುಷ್ಪಕವ ॥೩೬॥

ಆದುದಭಿಮತಸಿದ್ಧಿ ಗಗನವ ।
ನೈದಿದನು ವಿಧಿ ಪಿತನೆಡೆಗೆ ಬಂ ।
ನಾದರದೊಳೆಜಿಗಿದನು ಧನಪತಿ ನುಡಿದನೀಪರಿಸ ॥
ಆದರಿಸು ಮುನಿ ವರಗಳೈದಿದು ।
ವಾದುದಿಲ್ಲ ನಿವಾಸವೆನಗೆನ ।
ಲಾದಯಾಂಬುಧಿ ವಿಶ್ರವನು ವೈಶ್ರವಣಗಿಂತೆಂದ ॥೩೭॥

ಮಗನೆ ಕೇಳೈ ಪೂರ್ವದಲಿ ಕೃತ ।
ಯುಗದೊಳಸುರರು ಬಿಟ್ಟು ಲಂಕಾ ।
ನಗರಿಯನು ಹರಿಭಯದೊಳೋಡಿದರಾರಸಾತಲಕೆ ॥
ಹಗೆಗಳೆಯ್ದಲಸಾಧ್ಯವಂಬುಧಿ ।
ಯುಗಬದಕೆ ನೀನಲ್ಲಿಗೈದೆಂ।
ದೊಗುಮಿಗೆಯ ಹರುಷದಲಿ ಬೀಳ್ಕೊಟ್ಟನು ಧನೇಶ್ವರನ ॥೩೮॥

ಪಿತನು ಬೀಳ್ಕೊಡೆ ಯಕ್ಷರಕ್ಷೋ ।
ವಿತತಿಯನು ನೆರಹಿದನು ಖೇಚರ ।
ಗತಿ ಪಿತಾಮಹನಿತ್ತ ಪುಷ್ಪಕದೊಳು ಧನಾಧಿಪನು ॥
ವಿತತಕಿನ್ನರಗಾಯಕರ ವಿ ।
ಶ್ರುತದ ಮಂಗಳಪಾಠಕರ ಸಂ ।
ತತಿಯೊಳೈದಿದನಾಗಳಾಲಂಕಾಪುರಾಪುರಕೆ ॥೩೯॥

ಹೊತ್ತುಹೊತ್ತಿಗೆ ತಂದೆತಾಯ್ವಿರ ।
ಹತ್ತಿರಕೆ ನಡೆತರುತ ನಮಿಸುತ ।
ಮತ್ತೆ ಪುಷ್ಪಕದಿಂದ ಲಂಕೆಗೆ ಪೋಪನೆಸೆ ಕೇಳ್ದು ॥
ಉತ್ತಮಾಂಗವನೊಲಿದೊಲಿದು ಮುನಿ ।
ಪೋತ್ತಮನೆ ಸಂದಿಗ್ಧವೆನ್ನಯ ।
ಚಿತ್ತಕಿದು ಪೊಸತೆಂದು ಮತ್ತಿಂತೆಂದನಾರಾಮ ॥೪೦॥

ಚಿತ್ರವೆಸಗಿದು ಮುನಿ ಪುಲಸ್ತ್ಯನ ।
ಪೌತ್ರರಲ್ಲದೆ ಬೇಱೆ ದೈತ್ಯರು ।
ಧಾತ್ರಿಯೊಳಗುಂಟೆಂಬರವರಾರಾಪ ಮುನಿವರನ ॥
ಗೋತ್ರದವರಪರಾಧವನು ಶತ ।
ಪತ್ರನೇತ್ರಂಗೇನ ಮಾಡಿದ ।
ರಾತ್ರಿಯಾಮಾಚರರೆನಿಪ್ಪುದನುಸಿರಬೇಕೆಂದ ॥೪೧॥

ಆದಿಯಲಿ ಹರಿಯೊಡನೆ ದನುಜರು ।
ಕಾದಿ ಲಂಕಾನಗರವನು ಬಿ ।
ಟ್ಟೈದಿದುದನಳಕಾಧಿಪತಿಯೋನಾದನೆಂಬುದನು ॥
ಈದಶಾಸ್ಯಂಗೆಂತು ತತ್ಪುರ ।
ವೈದಿತೆಂಬುದನೆಲೆ ಮುನಿಪ ಮ ।
ರ್ಯಾದೆ ತಪ್ಪದೆ ಪೇಟಬೇಕೆನಗೆಂದನಾ ರಾಮ ॥೪೨॥

ಅಕ್ಷಯಾತ್ಮ ವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷಸುರಮುನಿರಕ್ಷ ಸುಜನಾ ।
ಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥೪೩॥

ಇಂತು ಎರಡನೆಯ ಸಂಧಿ ಮುಗಿದುದು.



## ಮೂಱನೆಯ ಸಂಧಿ.

---

ಸೂಚನೆ ॥ ಪೇೞಿದನು ಮುನಿ ಮಾಲ್ಯವಂತ ಸು ।
ಮಾಲಿ ಮಾಲಿಗಳೆಂಬ ದೈತ್ಯವ ।
ಧಾಳಿಯನು ರಘುಪತಿಗೆ ಸಂಶಯವಡಗಲುಚಿತದಲಿ ॥

ರಾಮ ಕೇಳಾದಿಯಲಿ ಪಡೆದನು ।
ತಾಮರಸಭವನುದಕವನು ಬೞಿ ।
ಕಾಮುಹೋದಕ ರಕ್ಷಣಾರ್ಥ ಪ್ರಾಣಿಗಳು ಸಹಿತ ॥
ಪ್ರೇಮಪೂರ್ವಕದಿಂದ ರಕ್ಷಿಪ ।
ನೇಮವನು ವಿಧಿ ಕೊಟ್ಟೊಡವರಿಗೆ ।
ಭೂಮಿ ಬಣ್ಣಿಸೆ ರಕ್ಷರೆಂಬಭಿಧಾನವಾಯ್ತೆಂದ ॥೧॥

ಎಲೆ ರಘು ಕ್ಷಿತಿನಾಥ ಕೇಳಾ ।
ಜಲಜಸಂಭವನೆಂದ ವಾಕ್ಯವ ।
ದಿಳೆಗೆ ಶಾಸನವೈಸೆ ರಕ್ಷಿಸಿದರು ಮಹಾಜಲವ ॥
ಬಲಸಮಗ್ರಸನಾಥರಕ್ಷಃ ।
ಕುಲದೊಳಾದರು ಸೋದರರು ನಿ ।
ಸ್ಖಲಿತಹೃದಯರು ರಾಕ್ಷಸರು ಹೇತಿ ಪ್ರಹೇತಿಗಳು ॥೨॥

ಸುರರಿಪುಗಳೊಳಗಾಪ್ರಹೇತಿಯೆ ।
ವರತಪೋನಿಷ್ಠೆಯಲಿ ಸಂದನು ।
ಚರಿಸಿದನು ಸಂಸಾರಕೃತ್ಯದ ಸುಖದೊಳಗೆ ಹೇತಿ ॥
ವರಿಸಿದನು ಭಯೆಯೆಂಬ ಹೆಸರಿನ ।
ತರುಣಿಯನು ವೈವಸ್ವತನ ಸೋ ।
ದರಿಯನತಿಮುದದಿಂದಲುಪಚರಿಸುತ ಸರಾಗದಲಿ ॥೩॥

ಹೇತಿದನುಜನಿನಾಭಯೆಗೆ ತನು ।
ಜಾತನಾದನು ಸತ್ಯನಿಧಿ ವಿ ।
ಖ್ಯಾತ ವಿದ್ಯುತ್ಕೇಶಿಯೆಂಬ ನಿಶಾಚರೇಶ್ವರನು ॥
ಆತಗಾದುದು ಯೌವನವು ಸಂ ।
ಧ್ಯಾತರುಣಿ ತನ್ನಾತ್ಮಸುತೆ ವಿ ।
ಖ್ಯಾತೆ ಸಾಲಕಟಂಕಟೆಯನಿತ್ತಳು ಸುರದ್ವಿಷಗೆ ॥೪

ಬಳಿಕ ವಿದ್ಯುತ್ಕೇಶಿಯಿಂದಾ ।
ನಳಿನಲೋಚನೆ ಗರ್ಭವಾಂತಳು ।
ತಳೆವವೊಲು ಘನಲೇಖೆ ಗರ್ಭವನಬ್ಧಿಸಂಗದಲಿ ॥
ಕಳೆದು ನವಮಾಸಗಳನಾವಧು ।
ವಿಬುಹಿ ಗರ್ಭವ ಬಿಸುಟು ಕಾಂತನ ।
ಒಳಿಗೆಯ್ದಿದಳಾರತಾರ್ಥಿನಿ ಮಂದರಾಚಲಕೆ ॥೫॥

ಏನುಪುಣ್ಯವೊ ಮನಸಿಜಾರಿ ಭ ।
ವಾನಿಸಹಿತಾಕ್ಷಣವೆ ಶಿಶುವಿಹ ।
ಕಾನನದ ಸರಿಸದಲಿ ಸುಳಿದನು ಗಗನಮಾರ್ಗದಲಿ ॥
ಆ ನಿಶಾಚರಶಿಶುವಿನಕ್ಕೆಯು ।
ನಾನಗಾತ್ಮಜೆ ಕೇಳ್ದು ಕೂಡೆ ಕೃ ।
ಪಾನಿರೀಕ್ಷಣೆಯಾಗಲದನಱಿದನು ಪುರಧ್ವಂಸಿ ॥೬॥

ತಾಯಿಗೆನಿತು ವಯಸ್ಸನಿತು ದೈ ।
ತೇಯಗಾಗಲೆನುತ್ತ ಶಿವನೆನ ।
ಆಯಿತನಿತು ವಯೋವಿಶೇಷವದೇನು ಮನಗರಿಪೆ ॥
ವಾಯುದಿಂದ ಸುಕೇಶಿಯೆಂಬಭಿ ।
ಧೇಯವನು ರಚಿಸಿದನು ಬಳಿಕ ಚಿ ।
ರಾಯುವಾಗೆಂದಿತ್ತನಂಬರದೊಳು ಮಹಾಪುರವ ॥೭॥

ಜನಿಸಿದಾಗಳೆ ಜವ್ವನದ ಸಿರಿ ।
ದನುಜಕುಲದೊಳು ನೆಲೆಗೊಳಲಿ ತ ।
ಜ್ಜನನಿಯರು ನಿಷ್ಕರುಣಿಯರು ಶಿಸುಗಳಿಗವಾರು ಗತಿ ॥
ಮನಸಿಜಾಂತಕ ಕರುಣಿಸೆನೆ ಗಿರಿ ।
ತನುಜೆಯುಸ್ತುವೆನುತ್ತ ಹರನಾ ।
ದನುಜನೊಡ ವರಲೈದಿದನು ಕೈಲಾಸಪರ್ವತವ ॥೮॥

ಒರ್ವನಾಗ್ರಾಮಣಿಯೆನಿಪ ಗಂ ।
ಧರ್ವಪತಿ ತನ್ನಾತ್ಮಭವೆಯನು ।
ಪೂರ್ವದೇವಂಗಾಸುಕೇಶಿಗೆ ಕೊಟ್ಟನೊಲವಿನಲಿ ॥
ಸರ್ವಭೋಗಂಗಳಲಿ ರಾಕ್ಷಸ ।
ಸಾರ್ವಭೌಮನಿರಲ್ಕೆ ಮಕ್ಕಳು ।
ಶರ್ವರೀಚರರುದಿಸಿದರು ಮೂವರು ಮಹಾಬಲರು ॥೯॥

ಮಾಲಿಯುಗ್ಗದ ಮಾಲ್ಯವಂತ ಸು।
ಮಾಲಿಯೆಂಬೀ ಹೆಸರ ದೈತ್ಯರು।
ಕಾಲಸದೃಶರು ಕಠಿನಹೃದಯರು ಹುಟ್ಟಿದಾಕ್ಷಣಕೆ ॥
ಶೈಲವನಸಂಘದಲಿ ಜಲಫಲ।
ಮೂಲಪವನಾಹಾರದಲಿ ಚಿರ।
ಕಾಲವಿರ್ದರು ತಪದೊಳತ್ಯುಗ್ರೋಗ್ರತರವೆಸಿಪ ॥೧೦॥

ಅಸುರಮುನಿಗಳ ಬಳಿಗೆ ಬಂದನು।
ಬಿಸಜಸಂಭವನೆಂದನೆಲೆ ರಾ।
ಕ್ಷಸತಪೋನಿಧಿಗಳಿರ ನಿಮ್ಮ ಮನೋರಥಂಗಳನು ॥
ಉಸಿರಬೇಕೆನೆ ಕೈಮುಗಿದು ಸುಮ।
ನಸನರೋರಗಲೋಕವನು ಶಿ।
ಕ್ಷಿಸುವ ವರವನೆ ಪಾಲಿಸೆಂದೆಱಗಿದರು ವಿಧಿಪದಕೆ ॥೧೧॥

ದುಷ್ಟರಿವದಿರು ಬೇಡಿದರು ಬಹು।
ಕಷ್ಟವಹ ವರಗಳನು ಸುಕೃತ।
ಭ್ರಷ್ಟರಿವರಳಿದಪರು ದುಷ್ಕರ್ಮದ ವಿಪಾಕದಲಿ ॥
ಇಷ್ಟವಿವರಿಗೆ ಸಲವೆನುತ ಪರ।
ಮೇಷ್ಠಿ ವರಗಳ ಕೊಟ್ಟು ಪೋದನು।
ವಿಷ್ಟಪತ್ರಯವಳುಕಿದುದು ದಾನವರ ಭುಜಬಲಕೆ ॥೧೨॥

ಬಳಿಕ ನರ್ಮದೆಯೆಂಬ ಹೆಸರಿನ।
ನಳಿನಮುಖಿ ಗಂಧರ್ವವಧು ಮನ।
ವೆಳಸಿ ಕನ್ಯಾತ್ರಯವನಿತ್ತಳು ರಾಕ್ಷಸತ್ರಯಕೆ ॥
ತಿಳಿಯೆ ಜ್ಯೇಷ್ಠಕ್ರಮದೊಳಾದುದು।
ಖಳರಿಗುದ್ವಾಹಪ್ರಯತ್ನದ।
ಬಳಕೆ, ಸುಖಿಸಿರ್ದರು ಸುರಾರಿಗಳಧಿಕಭೋಗದಲಿ ॥೧೩॥

ದನುಜಪತಿಗಾಮಾಲ್ಯವಂತಗೆ।
ವನಿತೆ ಸುಂದರಿಯಾಸುಮಾಲಿಗೆ।
ವಿನಯವತಿ ವಧು ಕೇತುಮತಿ ಮಾಲಿಗೆ ಮನಃಪ್ರೀತೆ ॥
ಜನಪ ಕೇಳೀ ವಸುಧೆಯೆಂಬೀ।
ಜನನುತದ ಗಂಧರ್ವತನುಜೆಯು।
ರನುನಯದೊಳಾದರು ಕಳತ್ರಗಳಸುರಪತಿಗಳಿಗೆ ॥೧೪॥

ಅದಿವಿಜರಿಪು ಮಾಲ್ಯವಂತನೊ ।
ಳಾದುದಾಸುಂದರಿಗೆ ದುರಪ ।
ತ್ರ್ಯೋದಯವು ಸುಪ್ರಜ್ಞಯಜ್ಞಾಂತಕಪಿರೂಪಾಕ್ಷ ॥
ಭೂದಿವಿಜರಿಪು ಯಜ್ಞಮುಷ್ಟಿಪ ।
ಲಾದ ಮತ್ತೋನ್ಮತ್ತ ದುರ್ಮದ ।
ರಾದಿಯಾದ ಸಲಾಹ್ವಯದ ಕನ್ಯಾಸಮನ್ವಿತದ ॥೧೫॥

ಅಸುಮಾಲಿಗೆ ಕೇತುಮತಿಯೊಳ ।
ಗಾಸುಪಾರ್ಶ್ವಕ ಕಾಲಕಾರ್ಮುಕ ।
ಭಾಸಕರ್ಣಪ್ರಘಸದೂರ್ವಾಸಪ್ರಹಸ್ತಶುಕ ॥
ವಾಸವಾರಿಯಕಂಪ ವಿಕಟ ಮ
ಹಾಸುರರು ಕುಂಭೀನಸೀ ಕ ।
ನ್ಯಾಸಮೇತರು ಕೈಕಸಿಯು ತಾನಾಗಿ ಜನಿಸಿದರು ॥೧೬॥

ವಸುಧೆಯೊಳು ಮಾಲಿನಿಗೆ ತನುಭವ ।
ರೆಸೆದರನಲಾನಿಲರೆನಿಪ ಬ ।
ಲ್ವೆಸರವರು ಸಂಪಾತಿಹರರೆಂದೆನಿಪ ರಾಕ್ಷಸರು ॥
ಉಸಿರಲೇನು ವಿಭೀಷಣಗೆ ಬ ।
ಲ್ವೆಸದ ಮಂತ್ರಿಗಳವನಿಗಾ ರ ।
ಕ್ಕಸರ ಗಾವಳಿ ಬೆದರಿಸಿತು ಸುರನರಭುಜಂಗಮರಾ ॥೧೭॥

ಕರೆದು ಖಳರಾವಿಶ್ವಕರ್ಮಂ ।
ಗೊರೆದರವರೆ ನಿವಾಸವನು ವಿ ।
ಸ್ತರಿಸು ಸುರಪಮಹೇಶನಿಲಯಂಗಳಿಗೆ ಮಿಗಿಲೆನಿಸಿ ॥
ಸುರಶಿಖರ ಹಿಮಶೈಲ ಮಂದರ ।
ಗಿರಿಗಳೊಳಗೆನೆ ಪೇಳ್ವುದೆಂದಾ ।
ಸುರರ ವರ್ಧಕಿ ದೈತ್ಯಭಟರಿಗದೊಂದು ಪುರವರವ ॥೧೮॥

ಕೇಳಿ ದಿತಿಸುತಸಾರ್ವಭೌಮರು ।
ಪೇಳ್ದಪೆ ನೆಲೆಂದೆಡೆಯನಾ ಸುರ ।
ಪಾಳನಾಜ್ಞಾಪಿಸಲು ಮಾಡಿದನೊಂದು ಪುರವರವ ॥
ಪೇಳಲೇನದು ದಕ್ಷಿಣಾರ್ಣವ ।
ಕೊಳದೊಳಗಿಹುದಾ ತ್ರಿಕೂಟದ ।
ಶೈಳದಗ್ರದೊಳದನು ಬಣ್ಣಿಸ ಬಲ್ಲರಾರೆಂದ ॥೧೯॥

ಚಿತ್ತರಿಪೊಡಾನಗರಿಯುದು ಮೂ।
ವತ್ತುಯೋಜನದಗಲ ನೀಳವ।
ದುತ್ತರೋತ್ತರವಾಗಿಹುದು ಶತಯೋಜನಾಂತರವು ॥
ಉತ್ತಮದ ಮಣಿಮಯದ ಕೋಟೆಯು।
ಸುತ್ತುವಳಯದ ನಿಳಯನಿಳಯದ।
ಭಿತ್ತಿಗಳ ಚೆಲ್ವೆಸೆವ ಲಂಕಾನಗರಿಯಿಹುದೆಂದ। ॥೨೦॥

ಎಂದೊಡೊಳ್ಳಿತ್ತೆನುತ ಖಲರೈ।
ತಂದರಾಪುರವರಕೆ ರಾಕ್ಷಸ।
ವೃಂದವನು ನೆರಹಿದರು ಶತಕೋಟಾನುಕೋಟಿಗಳ ॥
ಮುಂದೆ ನೋಜ್ಪೊಡೆ ಖಳರು ಸುರನರ।
ವೃಂದವನು ಸದೆಬಡಿದರಾ ಸಂ।
ಕ್ರಂದನನ ಪುರವಾದುದಮರಾರಿಗಳ ವಶವೆಂದ ॥೨೧॥

ಓಡಿತಮರರು ಭೀತಿಬಿಡದೊಡ।
ಗೂಡಿದರು ಸುರಗಿರಿಯ ತಪ್ಪಲೊ।
ಳಾಡಿದರು ತಮತಮಗೆ ದೈತ್ಯರ ಬಾಹುಸಾಹಸವ ॥
ಕೇಡು ಬಂದುದು ಸುರಕುಲಕೆ ನಾ।
ವಾಡಲೇನೆಂದೆಂಬ ವಿಬುಧರ।
ನೋಡಿ ಸುರಪತಿ ನುಡಿದನಮರರಿಗೊಂದು ಕಾರಿಯವ ॥೨೨॥

ಕೇಳಿರೈ ಸುಮನಸರ ದೈತ್ಯರ।
ದಾಜ್ಯಿಯನು ಪಶುಪತಿಗೆ ಪೇಜ್ಪೊಡೆ।
ಶೂಲಿ ತಾನೇ ರಕ್ಷಿಪನು ನೀವಂಜಬೇಡೆನುತ ॥
ನಿಲಲೋಹಿತನಿರ್ದೆಡೆಗೆ ಸುರ।
ಜಾಲಸಹಿತೈದಿದನು ನಿರ್ಜರ।
ಪಾಲನಿದಿರಲಿ ಕಂಡನಗಜಾವರನ ಶಂಕರನ ॥೨೩॥

ದೇವ ದೇವ ಮಹೇಶ ನೀಲ:
ಗ್ರೀವ ಮೃತ್ಯುಂಜಯ ತ್ರಿಯಂಬಕ।
ದೇವ ಘನಭುಜಂಗನಾಶ ಗಿರಿಜಾಧೀಶ ಸರ್ವೇಶ ॥
ದೇವ ದುರಿತವಿನಾಶ ರಜತ।
ಗ್ರಾವವಾಸ ಗಿರೀಶ ಶಂಕರ।
ಕಾವುದೈ-ಕರುಣಾಳುವೆನುತೆಱಗಿದನು ಚರಣದಲಿ ॥೨೪॥

ಈಶ ರಕ್ಷಿಸು ರಕ್ಷಿಸೈ ಗೌ।
ರೀಶ ಶರಣಾಗತರ ದೇವ ಸು।
ಕೇಶಿಕನೆಯು ಸುಮಾಲ್ಯವಂತ ಸುಮಾಲಿಮಾಲಿಗಳು ॥
ಈ ಸುರರನೆಬ್ಬಿದರು ಹರ ಪರ।
ಮೇಶ ದೈತ್ಯರನರಿದು ಸುರರಾ।
ವಾಸವನು ಬಿಡಿಸೆನೆ ಕೃತಾಂತಕೃತಾಂತನಿಂತೆಂದ ॥೨೫॥

ಆಸುಕೇಶಿಯು ಮೇಲೆ ಶಿವನಿಗೆ।
ದೇಸು ಕರುಣೆಯೊ ನಗುತ ನುಡಿದನು।
ವಾಸವಾದಿಸಮಸ್ತದಿವಿಜರಿಗೊಂದು ಕೌತುಕವ ॥
ಆ ಸುರಾರಿಗಳೆಷ್ಟು ದೆಸೆಯಿಂ।
ಪೈಸರಿಸುವವರಲ್ಲಸಿದು ಕಮ।
ಲಾಸನನ ಕಟ್ಟಳೆಯು ವರವೆಂದನು ಪುರಹರಂಗೆ ॥೨೬॥

ದೇವ ನೀನಿಂತೆಂದೊಡಮರರಿ।
ಗಾವುದೈ ಗತಿಯೆನಲು ಶಂಭು ಕೃ।
ಪಾವಲೋಕನನೆಂದನಸುರವಿನಾಶನೂತನವ ॥
ಶ್ರೀವರನನಮರಾರಿಭಟಕುಲ।
ದಾವಪಾವಾನಲನನೈದಿದೊ।
ಡಾವಿಭುವಿನಿಂದಪುದಭಿಮತಸಿದ್ಧಿ ನಿಮಗೆಂದ ॥೨೭॥

ಎನೆ ಹಸಾದವೆನುತ್ತ ಸಂಕ್ರಂ।
ದನನುಖಾಮರರೀಶನಂಘ್ರಿಗೆ।
ವಿನಯವಿನಮಿತರಾಗಿ ಬೀಳ್ಕೊಂಡರು ಸರಾಗದಲಿ ॥
ತನತನಗೆ ಮುಂಕೊಂಡು ಬಹುಯೋ।
ಜನಗಳನು ಕಳೆದೈದಿ ಕಂಡರು।
ವನಜನಾಭಾಶ್ರಯನಿಧಿಯನನುಪಮಸುಧಾಂಬುಧಿಯ ॥೨೮॥

ನಳಿನಗರ್ಭಕಟಾಹವಾರೊಡ।
ಲೊಳಗಿಹುದು ತದ್ವಿಭು ಮದಾಶ್ರಯ।
ನೊಳಗಿಹನು ಮನೆಯಳಿಯನಾಗಿಯನಂತಭೋಗದಲಿ ॥
ತಿಳಿಯೆ ಸಿರಿ ಮಗಳೆನಗೆ ರತ್ನಂ।
ಗಳಿ ಮಿಬಿಲು ತನಗಾರು ಸರಿಯೆಂ।
ಬೊಲುಮೆಯಲಿ ಮೆರೆದುದು ವಾರಿಧಿ ಬಹಳಲಹರಿಯಲಿ ॥೨೯॥

ಆಸಮುದ್ರದ ನಡುವೆ ಕಂಡರು।
ವಾಸುಕಿಯ ಮಂಚದಲಿ ಪಂಕರು।
ಶಾಸನಾದಿ ಸಮಸ್ತದಿವಿಜಕುಲಾವನೋತ್ಸವನ ॥
ವಾಸವಾದ್ಯಮರೌಘವೆಱಗಿದು।
ದಾಸುಪರ್ಣಧ್ವಜನ ಚರಣಕೆ।
ಸೂಸಿ ಸುರಕುಜದಲರ ಸರಿಯನು ಜಯನಿನಾದದಲಿ ॥೩೦॥

ಜಯ ಜಗದತ್ರಯಜನನಕಾರಣ।
ಜಯ ಸಕಲದುಷ್ಕೃತನಿವಾರಣ।
ಜಯ ಹಿರಣ್ಯಕಶಿಪುವಿದಾರಣ ಜಯ ಜಗನ್ನಾಥ ॥
ಜಯ ದನುಜವನಮತ್ತವಾರಣ।
ಜಯ ಚತುರ್ದಶಭುವನಧಾರಣ।
ಜಯ ಖಗೇಂದ್ರರಥಾಧಿರೋಹಣಯೆಂದುದಮರಗಣ ॥೩೧॥

ಕೂಡೆ ಸನ್ನತರೆದ್ದು ಬಿನ್ನಹ।
ಮಾಡಿದರು ದಿವಿಜರು ಸುರಾರಿಗ।
ಳೋಡಸಿದರಮರರನು ಸುರಪುರವಾದುದಸುರರಿಗೆ ॥
ಆಡಲೇನದನಿನ್ನು ಕರುಣವ।
ಮಾಡು ಸುರರನು ನೋಡು ಮುರಹರ।
ಪಾಡಳಿದೆನೆಂದೆನುತ ಮತ್ತೆಱಗಿದರು ಚರಣದಲಿ ॥೩೨॥

ಸಾಕು ಗಜಬಜವೇಕೆ ನಿಮಗೆ ಪಿ।
ನಾಕಿಸೂಚಿತಸೂತ್ರವಿದು ಧುರ।
ವಾಕಪರ್ದಿಗೆ ಮಿಗಿಲೆ ಕರುಣವಲಾ ಸುಕೇಶಿಯಲಿ ॥
ನೂಕುವೆನು ರಣದಲಿ ಸುಕೇಶಿದಿ।
ವೌಕಸಾರಿಯ ತನುಜರನು ರಣ।
ದಾಕೆವಾಳಿಕೆ ನಡೆಯೆನುತ್ತಮರರನು ಬೀಳ್ಕೊಟ್ಟ ॥೩೩॥

ಒಡನೆ ನಂಬುಗೆಗೊಂಡು ದಿವಿಜರು।
ತಡೆಯದೈದಿದರತ್ತ ದನುಜರ।
ಗಡಣ ಮಸಗಿತು ಕಾಲರುದ್ರನ ಪಡೆಗೆ ಮಿಗಿಲೆನಿಸಿ ॥
ನುಡಿದನಾಗ ಸುಮಾಲಿಮಾಲಿಗ।
ಳೊಡನೆ ವಿವರಿಸಿ ಮಾಲ್ಯವಂತನು।
ಕಡೆಯ ಕೆಲಸವಿದೆನುತೆನುತ ಸುರರೆಸಗಿದುಜ್ಜುಗನ ॥೩೪॥

ಬೇಱೆ ಮಾತೇನೆಮ್ಮನಮರರು ।
ದೂಱಿದರು ಗಡ ಹರನೊಡನೆ ರಣ ।
ಕಾಱೆನಸುರರೊಳೆಂದ ಗಡ ಕಾಮಾರಿ ಸುರರೊಡನೆ ॥
ಬೇಱೆ ಮದ್ವಧೆಗೊಂದು ಮಂತ್ರವ ।
ತೋಱಿದನು ಗಡ ಶೂಲಿಯುವರದ ।
ನೂಱಿದರು ಗಡ ಕೈಟಭಾರಿಯ ಕರ್ಣಪೂರದಲಿ ॥೩೫॥

ಆಮುರಾಂತಕನೆಂದ ಗಡ ಸು ।
ತ್ರಾಮನೊಡನೆ ಸುಕೇಶಿತನಯರ ।
ನಾಮಹಾಬಲಮಾಲ್ಯವಂತಸುಮಾಲಿಗಳ ॥
ಯಾಮಿನೀಚರಮುಖ್ಯರನು ರಣ ।
ಭೂಮಿಯಲಿ ಕೊಂದಪೆನೆನುತ ಸಂ ।
ಗ್ರಾಮಕಾಮುಕನಿಪ್ಪ ಗಡ ಬಱಿಕೇನು ಹದನೆಂದ ॥೩೬॥

ಹಿಂದೆ ಮಧುಕೈಟಭರನಾಹರಿ ।
ಕೊಂದ ಗಡ ತಮನೆಂಬ ದೈತ್ಯನ ।
ಮುಂದುಗೆಡಿಸಿದ ಗಡ ಹಿರಣ್ಯಕಶಿಪುವ ಸೀಳ್ದ ಗಡ ॥
ಇಂದು ನಾವಾತನ ರಣಕೆ ನಿಲು ।
ವಂದವರಿದೆನೆ ಮಾಲ್ಯವಂತಂ ।
ಗೆಂದರಾಗ ಸುಮಾಲಿಮಾಲಿಗಳೊಂದು ಕೌಶಲವ ॥೩೭॥

ಅಗ್ರಭವಕೇಳಾದೊಡಿನ್ನು ಸ ।
ಮಗ್ರಸನ್ನಾಹದಲಿ ದಿವಿಜರ ।
ನುಗ್ರತರಕರ್ಮದಲಿ ಕೊಂದಿಕ್ಕಿದೊಡೆ ಮುರಹರನ ॥
ವಿಗ್ರಹಕೆ ಮತ್ತಾರ ತರುವರು ।
ದಗ್ರಪಿಶುನರು ಮಡಿಯೆ ದನುಜಕು ।
ಲಾಗ್ರಣಿಯೆ ಹಗೆ ಹರಿಗೊಳೆಮಗಿಲ್ಲೆಂದರಖಿಲರು ॥೩೮॥

ಆಹುದು ಮತ್ತೇನೆನುತ ದನುಜರು ।
ಬಹಳ ಸನ್ನಾಹದಲಿ ಕರಿರಥ ।
ವಿಹಗ ತುರಗ ತರಕ್ಷುಋಕ್ಷಮಹೋಕ್ಷಹರ್ಯಕ್ಷ ॥
ಅಹಿಮಕರ ಭೇರುಂಡ ಸೂಕರ ।
ಮಹಿಷ ಚಮರ ಸೃಮರವೆನಿಸುವ ।
ಬಹುವಿಧದ ವಾಹನಗಳಿಂದೈದಿದರು ಸಂಗರಕೆ ॥೩೯॥

ದುರುಳ ರಜನೀಚರರು ಲಂಕಾ ।
ಪುರವ ಹೊಱವಟ್ಟಮರಲೋಕದ ।
ಸರಣಿವಿಡಿದೈತರೆ ಮಹೋತ್ಪಾತಗಳು ತೋಱಿದುವು ॥
ಪರಿಪರಿಯ ಭೂವ್ಯಂತರಿಕ್ಷೋ ।
ತ್ಥರುಷ ದೈವಿಕವೆಂಬವವ ಬಗೆ ।
ವರೆ ಮದೋದ್ಧತಖಳರು ನಡೆದರುದಾರಗರ್ವದಲಿ ॥೪೦॥

ಕಱೆದುವೆಲುವಿನ ಮಳೆಗಳುಲ್ಕಗ ।
ಳೆಱಗಿದುವು ಶೋಣಿತದ ಸರಿ ಮು ।
ಕ್ಕುಱುಕಿದುವು ಹದ್ದೆಱಗಿದುದು ಸೇನಾಸಮೂಹದಲಿ ॥
ಒಱಸಿಡಿಲು ಬಿಡದೊದರಿದುದು ಕೈ ।
ಪಱೆಗಳಲಿ ಪೇತಾಳತತಿ ಬೊ ।
ಬ್ಬಿಱಿದು ಕುಣಿದುವು ದೈತ್ಯಗಮನೋದ್ಯೋಗಯೋಗದಲಿ ॥೪೧॥

ಅಸುರಭಟರುದ್ಯೋಗವನು ಸುಮ ।
ನಸರು ಕಂಡಸುರಾರಿಗುಸಿರಲು ।
ಬಿಸಜನಾಭನು ದಿವಿಜದೂತರು ಪೇೞಿದಾಕ್ಷಣವೆ ॥
ಅಸಿಗದಾಂಬುಜಚಕ್ರಚಾಪಗ ।
ಳಸಮಸದೊಳೊಪ್ಪಿರೆ ಕರಂಗಳೊ ।
ಳಿಸೆದು ಕವಚನಿಷಂಗಗಳು ಸಂಗರಕೆ ಪೊಱಮಟ್ಟ ॥೪೨॥

ವೈನತೇಯನನಡರಿ ನಭದೊಳು ।
ದಾನವಾಂತಕನೈದಿದನು ರಿಪು ।
ಸೇನೆಯನು ಸೌಪರ್ಣಿ ಪಕ್ಷಾನಿಲನ ಹೊಯ್ಲಿನಲಿ ॥
ಆನಿಶಾಟಬಲಾಬ್ಧಿ ಮಥಿತಾಂ ।
ಭೋನಿಧಿಯೊಳೊಡಗಲಸೆ ಶಂಖ ।
ಧ್ವಾನಮಿಡಿದುದು ಪಾಂಚಜನ್ಯೋದ್ಭೂತಮರಿಬಲವ ॥೪೩॥

ಓಸರಿಸಲವಸರವೆ ಶಾರ್ಙ್ಗಶ ।
ರಾಸನವನೇಱಿಸಿ ಶರಾಂಬುಧಿ ।
ಸೂಸಿತೆಂಬಂತೆತ್ತನಗಣಿತಸಿತಶಿತಬಾಣದಲಿ ॥
ಕೇಸುರಿಯನುಗುಳುತೆ ನಿಶಾಚರ ।
ಪಿಹಾಸಲಱಿಯದ ತಲೆಯನರಿದುವು ।
ಕೇಶವನ ನಿಡುಗಣೆಗಳಂತಕನೆಗೆಗಳೆಂದೆನಿಸಿ ॥೪೪॥

ಕೆಡೆದರಗಣಿತದಾನವರು ಕಡಿ।
ವಡೆದ ತಲೆಗಳನೊಡೆದ ಕೈಗಳ।
ಸಿಡಿದ ಕಣ್ಗಳ ಮುರಿದ ತೊಡೆಗಳ ಹಾಯ್ದು ಮೂಳೆಗಳ॥
ನಿಡುಗರುಳ ಸೀಳ್ದೊಡಲ ರಕುತವ।
ಕುಡಿವ ಶಾಕಿನಿ ಡಾಕಿನಿಯರು।
ಗ್ಗಡದ ರಣಪೆಸೆದಿರ್ದುದದ್ಭುತವಾಗಿ ನಿಮಿಷದಲಿ ॥೪೫॥

ಕವಿದುದಸುರಬಲಾಬ್ಧಿಮಚ್ಯುತ।
ರವಿಯ ಮೇಲೆಡೆವಿಡದೆ ಮುಸುಕುವ।
ಕವಲುಗೋಲಿನ ಹೊಡೆವ ಪರಿಘದ ಪರಿವ ಶಕ್ತಿಗಳ॥
ತಿವಿವ ಶೂಲದ ಸುಱಿವ ಸುರಗಿಯ।
ವಿವಿಧ ನಿಶಿತಾಯುಧದ ಮಱೆಗಳು।
ತವಕದಲಿ ಮುಕ್ಕುಱುಕಿದುವು ಶತಕೋಟಿರಭಸದಲಿ ॥೪೬॥

ಹೂಣೆಹೊಕ್ಕರಿಬಲವನಾಹರಿ।
ಮಾಣದೀಕ್ಷಿಸಿ ಶಾರ್ಙ್ಗನಿರ್ಗತ।
ಬಾಣಕೋಟಿಗಳಿಂದ ಕವಿಸಿದನೇನನುಸಿರುವೆನು॥
ಗೋಣನರಿದುವು ಭಟರ ಜೀವವ।
ಕೇಣಿಗೊಂಡುವು ಯಮನ ನಗರಿಯ।
ಕಾಣಿಸಿದುವಂಬುಗಳು ಸಿಡಿಲಿನ ಕಡುಹಿನಂದದಲಿ ॥೪೭॥

ಚೆಲ್ಲಿದುದು ಬಲಜಲಧಿ ಸೇನಾ।
ವಲ್ಲಭರು ಮೊಗ್ಗರೆದರಱಿದರು।
ಬಲ್ಲಿದರು ಬಯಲಾದುವಾಕ್ಷಣವಖಿಲದಳತಂತ್ರ॥
ತಲ್ಲಣಿಸುತಿರೆ ಕಂಡು ಭಾರಿಯ।
ಬಿಲ್ಲನೊದರಿಸಿ ಕದನಚೌಪಟ।
ಮಲ್ಲನಾವನವಮಾಲಿಗಂಡು ಸುಮಾಲಿ ಮಾಱಾಂತ ॥೪೮॥

ಬೊಬ್ಬಿಱಿದು ಶತಕೋಟಿರಭಸದೊ।
ಳೆಬ್ಬಿಸಿದನಂಬುಗಳ ಮಱೆಯನು।
ಹಬ್ಬಿದುದು ಶರವಿತತಿ ಗಣನಾತೀತವೆಂದೆನಲು॥
ಉಬ್ಬಿ ಮಶಕವ್ರಾತ ಕುಲಗಿರಿ।
ಗುಬ್ಬಸವ ಮಾಡುವವೊಲಂಬಿನ।
ಮಬು ಕವಿದುದು ಮೇಘನಾವರಿಪಂತೆ ದಿನಮಣಿಯ ॥೪೯॥

ಕತ್ತರಿಸಿ ಕಪಿವಂಬನಸುರರ ।
ನೆತ್ತಿಸಿದನಸುರಾರಿ ಬಿಸಿಬಿಸಿ ।
ನೆತ್ತರೊರೆತುದು ಮಡಿದನಾತನ ಸೂತನಳವಿಯಲಿ ॥
ಮತ್ತೆ ಗರುಡನ ಗಱಿಯ ಗಾಳಿಗೆ ।
ಸಿತ್ತರಿಸದವನೋಡಿದನು ಬಱಿ ।
ಕಿತ್ತಲಿದಿರಾಗೆನುತೆ ಮಾಲಿ ಮುರಾರಿಗಿದಿರಾದ ॥೫೦॥

ನೀಲಶೈಲದ ಮೇಲೆ ಕಱೆದುದೊ ।
ನೀಲಘನಘಟೆ ಮಳೆಯನೆನೆ ಹರಿ ।
ನೀಲರುಚಿ ಸುರಚಿರಶುಭಾಂಗನ ಮೇಲೆ ಮುಸುಕಿದುವು ॥
ಕಾಳರಕ್ಕಸನೆಚ್ಚ ನಿಶಿತಕ ।
ರಾಳ ಕಾಳಾಯಸಶರಾಳಿ ತ ।
ಮಾಲಕೆಱಗುವ ಪಱಮೆವಱಿಗಳ ಸಾಲನನುಕರಿಸಿ ॥೫೧॥

ಮುಚ್ಚಿ ಮುಸುಕಿದ ಶರವ ಶರದಲಿ ।
ಕೊಚ್ಚಿದನು ಕೈಚಳಕದಲಿ ತೆಗೆ ।
ದೆಚ್ಚನಸುರನ ಮೇಲೆ ಮುರರಿಪು ಬಾಣಕೋಟಿಗಳ ॥
ಉರ್ಚಿದುವು ಹಯದಸುವನಾರಥ ।
ದಚ್ಚು ಮುರಿದುದು ಸೂತನಳಿದನು ।
ನಿಚ್ಚಟದೊಳಳಿದನು ನಿಶಾಚರರಾಜನಾಜಿಯಲಿ ॥೫೨॥

ರೋಸವೆಗ್ಗಳಿಸಿದುದು ಹೊಗೆದುದು ।
ಮೀಸೆ ನಾಸಾಶ್ವಾಸದುರಿಯಲಿ ।
ಕೇಸುರಿಯನುಗುಳಿದುವು ಕಣ್ಗಳು ಕಾಯ ಕಂಪಿಸಿತು ॥
ಆಸುರದ ಗದೆವಿಡಿದು ಮೇಲ್ವಾ ।
ಯ್ದಾ ಸುಪರ್ಣನ ಮಸ್ತಕವನಸು ।
ರೇಶನೆಱಗಿದನಶನಿ ಕುಲಗಿರಿಗೆಱಗುವಂದದಲಿ ॥೫೩॥

ನೊಂದು ಮೊಗದಿರುಹಿದನು ವಿನತಾ ।
ನಂದನನು ಹರಿಸಹಿತ ಜಯಿಸಿದೆ ।
ನೆಂದು ಬೊಬ್ಬಿಱಿದನು ನಿಶಾಚರನಂಬುಜೋದರನ ॥
ಇಂದಿವನ ಕೊಲ್ಲದೊಡೆ ಕೊರತೆ ಪು ।
ರಂದರನೊಳಾಡಿದ ನುಡಿಗೆ ಬಹು ।
ದೆಂದು ಹರಿ ಕತ್ತರಿಸಿದನು ಚಕ್ರದಲಿ ರಿಪುಶಿರವ ॥೫೪॥

ಸಿಡಿದುದಭ್ರಕೆ ತಲೆ ಧರಿತ್ರಿಗೆ ।
ಕೆಡೆದುದಸುರನ ದೇಹ ಶೋಕದ ।
ಕಡಲೊಳದ್ದರು ಮಾಲ್ಯವಂತಾದ್ಯಖಿಳ ರಾಕ್ಷಸರು ॥
ಮಡಿದುದಗಣಿತಸೇನೆ ಮಡಿದರು ।
ದಡಿಗದಾನವಭಟರು ಶಾರ್ಙ್ಗಿಯು ।
ನಿಡುಸರಳು ಕೊಡಹಿದುವು ಬೆನ್ನಟ್ಟಿದುವು ರಿಪುಬಲವ ॥೫೫॥

ಮಡಿದ ಮಾಲಿಯ ಕಂಡು ಕೋಪದೆ ।
ಕಡುಹಿನಗ್ಗದ ಮಾಲ್ಯವಂತನು ।
ನುಡಿದನಸುರಾಂತಕನಿಗಭಿಮುಖನಾಗಿ ಸಮರದಲಿ ॥
ಹಿಡಿ ಧನುವನಿದಿರಾಗು ಚಕ್ರವ ।
ತುಡು ಪರಾಜಿತನಾಗಿ ಮಾಲಿಯು ।
ಕಡಿವುದಿದು ಪಾರ್ಥಿವರ ಪಂತವೆ ಕಷ್ಟತರವೆಂದ ॥೫೬॥

ಮುಱಿದು ಪೊಗದಿರುಹಿದ ವಿರೋಧಿಯ ।
ಸೀಱಿವುದನುಚಿತವೆಂದೆನಲು ಕೈ ।
ಮುಱಿದ ಸುಭಟನನಿರಿವುದುಚಿತವೆ ನಿನಗೆ ಸಮರದಲಿ ॥
ಅಱಿಯೆ ನೀನೀ ಕ್ಷಾತ್ರಧರ್ಮದ ।
ತೆಱನನಭಿಮುಖನಾಗಿ ಕಾದಿದೊ ।
ಡಱಿಯಬಹುದೆಂದೆನುತ ಶಕ್ತಿಯನಿಟ್ಟನಚ್ಯುತನ ॥೫೭॥

ಭರದೊಳೈತಹ ಶಕ್ತಿಯನು ಮುರ ।
ಹರನು ಪಿಡಿದಾದಾನವನ ಪೇ ।
ರುರವನಿಟ್ಟೊಡೆ ಮರಳಿ ಘಟ್ಟಿಗಿದಡಗಿತವನಿಯಲಿ ॥
ತರಹರಿಸಿ ಶೂಲದಲಿ ತಿವಿದಾ ।
ಮುರಹರನನಾಖಗಕುಲೇಂದ್ರನ ।
ನಿರದೆ ಬಿಲ್ಲಂತರಕೆ ಪಿಮ್ಮೆಟ್ಟಿದನು ಸುರವೈರಿ ॥೫೮॥

ಮುಳಿದ ಗರುಡನ ಗಱಿಯ ಗಾಳಿಯು ।
ಸುಳಿವಿನಲಿ ಪಾಱಿದರು ದನುಜರು ।
ಸುಳಿದೆಱೆವ ಬಿಱುಗಾಳಿಯಲಿ ಮೇಘಾಳಿ ಪರಿವಂತೆ ॥
ಅಳುಕಿದನು ಕಲಿ ಮಾಲ್ಯವಂತನು ।
ಖಳಸುಮಾಲಿ ಪ್ರಮುಖರೋಡಿದ ।
ರಳವಿಯನು ಬಿಟ್ಟಾಗಳಾಲಂಕಾಮಹಾಪುರಕೆ ॥೫೯॥

ಇಂತು ದನುಜರು ಕಾದಿ ಲಕ್ಷ್ಮೀ ।
ಕಾಂತನೊಳು ನಿತ್ತರಿಸಲರಿಯದೆ ।
ಕಾಂತೆಯರು ಬಂಧುಗಳು ಭೃತ್ಯಾಪತ್ಯರೊಡಗೂಡಿ ॥
ಚಿಂತಿಸುತಲೈದಿದರು ಪಾತಾ ।
ಳಾಂತರಕೆ ಬಳಿಕಿತ್ತ ಶೂನ್ಯವು ।
ರಾಂತವಾದುದು ಲಂಕೆ ರಘುಭೂಪಾಲ ಕೇಳೆಂದ ॥೬೦॥

ಅಕ್ಷಯಾತ್ಮ ವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷಸುರಮುನಿರಕ್ಷ ಸುಜನಾ ।
ಪೇಕ್ಷ ಸರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥೬೧॥

ಇಂತು ಮೂರನೆಯ ಸಂಧಿ ಸಂಪೂರ್ಣಂ



## ನಾಲ್ಕನೆಯ ಸಂಧಿ.

ಸೂಚನೆ॥ ವನಿತೆ ಕೈಕಸೆಯೊಳು ಪುಲಸ್ತ್ಯನ ।
ತನುಜನಿಂದುದಿಸಿದರು ಮಕ್ಕಳು ।
ದನುಜದಶಮುಖ ಕುಂಭಕರ್ಣ ವಿಭೀಷಣಾದಿಗಳು ॥

ಕೇಳು ರಘುಪತಿ ಪೋದುದೈ ಚಿರ ।
ಕಾಲವೀಪರಿ ಸುಳಿದನೊಮ್ಮೆ ಸು ।
ಮಾಲಿ ಭೂಮಿಯ ಮೇಲೆ ಕೈಕಸೆಯೆಂಬ ಮಗಳೊಡನೆ ॥
ಲೀಲೆ ಮಿಗೆ ಪುಷ್ಪಕದೊಳಾಧನ ।
ಪಾಲನೈತರೆ ಕಂಡು ರಕ್ಕಸ ।
ರೇಖಾಗೆಗೆ ಮನದಂದು ಪೂರ್ವವ ನೆನೆದು ಬಿಸುಸುಯ್ದು ॥೧॥

ಸಿರಿಯ ಮದದಿಂದಿವನು ಲಂಕಾ ।
ಪುರವನಾಳ್ದಪನಕಟಕಟ! ಮ ।
ತ್ಪುರವನೆನ್ನಯ ಮುಂದೆ ಭೋಗಿಪನೇನ ಮಾಡುವೆನು॥
ಹರಿಯ ದೆಸೆಯಿಂದುಳಿದೆವೈಸಲೆ ।
ಘರಿಯಿಸಿದಕಿನ್ನೇನುಪಾಯಾ ।
ತರನೆನುತ ಕೈಕಸೆಗೊಳಾದನುಜೇಂದ್ರನಿಂತೆಂದ ॥೨॥

ಮಗಳೆ ಕೇಳೌ ತಾಯೆ ಕನ್ನಿಕೆ ।
ಮಿಗಿಲು ಸಂತಾನದಲಿ ವರನಿರೆ ।
ಸೊಗಯಿಪುದು ಪಿತೃಮಾತೃಕುಲ ಪರಿಶುದ್ಧಶೋಭೆಯಲಿ ॥
ಬಗೆಗೆಡುವುದಲ್ಲದೊಡೆ ಕಾಣೆನು ।
ಜಗದೊಳುತ್ತಮವರನನಿಹನೊ ।
ಪ್ಮೆಗೆ ಪುಲಸ್ತ್ಯನ ಸೂನು ನಿರ್ಮಲವಿಶ್ರವಸುವೆಂದ ॥೩॥

ವಂಸಲಾಪರೆ ಮುನಿಯ ಚಿತ್ತವ ।
ಬರಿಸು ಸಂತಾನಾಭಿವೃದ್ಧಿಯ ।
ಧರಿಸಬಹುದೆನೆ ಪಿತನ ವಚನವಲಂಘ್ಯವೆಂದೆನುತ ॥
ವರಮುನೀಂದ್ರನ ಬಳಿಗೆ ಬಂದಳು ।
ತರುಣಿ ಲಜ್ಜಾಭರದ ಬಾಗಿದ ।
ಶಿರದ ಭಾವದ ಕೈಕಸೆಯ ಮುನಿನಾಥನೀಕ್ಷಿಸಿದ ॥೪॥

ಆರ ಮಗಳೆಲೆ ತರುಣಿ ನಿನ್ನನ ।
ದಾರು ಕಳುಹಿದರಿಲ್ಲಿಗೈತಹ ।
ಕಾರಣವದೇನುಸಿರ ಬೇಕೆನೆ ವನಿತೆ ತಲೆವಾಗಿ ॥
ಕಾರುಣಿಕ ಮುನಿ ನೀನೆ ತಿಳಿದು ವಿ ।
ಚಾರಿಪುದು ಪೆಸರೆನಗೆ ಕೈಕಸೆ ।
ಸಾರಿದೆನು ನಿಮ್ಮಡಿಗಳನು ಮಜ್ಜನಕನಾಜ್ಞೆಯಲಿ ॥೫॥

ಎನಲು ದಿವ್ಯಜ್ಞಾನದಲಿ ಮುನಿ ।
ವನಿತೆ ಪುತ್ರಾರ್ಥಿನಿಯೆನಿಪ್ಪುದ ।
ಮನದೊಳರಿದನು ಮೆಚ್ಚಿದನು ಮಾನಿನಿಯ ಸದ್ಗುಣಕೆ ॥
ವನಜಲೋಚನೆಯಗ್ನಿಹೋತ್ರದ ।
ನೆನಹಿನಲಿ ಸತ್ಕ್ರೋಧರಾವೆ ।
ವ್ಮನುವಮಯದೆ ಬಂದು ಭಜಿಸಿದೆ ಕಾಂತೆ ಕೇಳೆಂದ ॥೬॥

ಅತಿಭಯಂಕರ ರೂಪರನು ದು ।
ಷ್ಕೃತಚರಿತ್ರರ ದಾನವರನು ।
ದ್ಧತಸುತರ ಸತಿ ಪಡೆವೆಯೆನೆ ಯಿದ ಕೇಳ್ದು ನಡನಡುಗಿ ॥
ಸುತನನೀವೊಡೆ ಮುನಿಪ ಕೊಡಿ ಸು ।
ವ್ರತನನೆನೆ ಕಡೆಗೊರ್ವನನು ವಿ ।
ಶ್ರುತನ ಪಡೆಪೆ ಮಗನನಂಜದಿರೆಂದನಾಮುನಿಪ ॥೭॥

ಎನಲದಕೆ ಸಾಕೆನುತ ಮುನಿಪದ ।
ವನಜಸೇವೆಯೊಳಿರ್ದು ಪಡೆದಳು ।
ತನುಜನನು ದಶಕಂಧರನ ದುರ್ಣಯಧುರಂಧರನ ॥
ಜನಪ ಕೇಳುತ್ಪಾತಗಳು ಸಂ ।
ಜನಿಸಿದುವು ಭೂವ್ಯೋಮಾಂತರಿಕ್ಷದೊ ।
ಳನಿಮಿಷರು ನಡನಡುಗಿದರು ದಶವದನನುದಯದಲಿ ॥೮॥

ಬಿದ್ದುದವನಿಗೆ ತಾರೆ ನಡುವಿರು ।
ಳೆದ್ದುದಭ್ರದೊಳಿಂದ್ರಧನು ಕವಿ ।
ದಿದ್ದುದೈ ದಿಗ್ದಾಹವೆಱಗಿದುದರುಣಮಯವರ್ಷ ॥
ಹೊದ್ದಿದುತ್ಪಾತಗಳನೀಕ್ಷಿಸು ।
ತಿದ್ದನಾಮುನಿನಾಥನಿವನಿಂ ।
ದದ್ದುವುದು ನೀರೊಳಗೆ ನಿಜಸಂತಾನವೆಂದೆನುತ ॥೯॥

ಅವನಿಗಾಮುನಿ ನಾಮಕರಣವ ।
ವಿವರಿಸಿದನು ದಶಾಸ್ಯನೆನುತು ।
ದ್ಭವಿಸಿದನು ಮತ್ತೊರ್ವನಾಕೈಕಸಿಯ ಗರ್ಭದಲಿ ॥
ದಿವಿಜರಿಪುವಾತನಿಗೆ ಕುಂಭ ।
ಶ್ರವಣನೆಂಬಭಿಧಾನವಾದುದು ।
ಯುವತಿ ಪಡೆದಳು ವಿಗತಭೀಷಣನನು ವಿಭೀಷಣನಾ ॥೧೦॥

ಆ ವನಿತೆ ಕೈಕಸೆಗೆ ಪುಟ್ಟಿದ ।
ಳೈ ವಿಕಟ ಶೂರ್ಪನಖಿ ಮತ್ತಾ ।
ಮೂವರಿಗೆ ಚೌಲೋಪನಯನಂಗಳನು ಮುನಿ ನೆಗಱೆ ॥
ಆ ವಿಗಡರಕ್ಕಸರು ಲೋಕಕೆ ।
ಹಾವಳಿಯನೆಬ್ಬಿಸಿದರಸುರರೊ ।
ಳಾವುದೈ ವಿವರಿಪೊಡೆ ಕೃತ್ಯಾಕೃತ್ಯವಿಧಿಯೆಂದ ॥೧೧॥

ಆದಶಾಸ್ಯಗೆ ಲೋಕಹನನೋ ।
ನ್ಮಾದವೇ ವಿಧಿ ಕುಂಭಕರ್ಣಗೆ ।
ಮೇದಿನಿಯ ಜನಜಾತವನು ತಿನುವುದೆ ಸದುದ್ಯೋಗ ॥
ವೇದಶಾಸ್ತ್ರಾಗಮವಿವಾದ ವಿ ।
ನೋದವೈದೆ ವಿಭೀಷಣನ ಬಗೆ ।
ಗಾದುದಿಂತಿರುತಿರ್ದರಾಶ್ರಮದೊಳು ಮುನೀಶ್ವರನ ॥೧೨॥

ಕಳೆದುದೈ ಬಹುದಿವಸವೀಪರಿ ।
ಸುಳಿದನೊರ್ವ್ವ ಕುಬೇರನಾತನ ।
ನಿಳಯುದಲಿ ಪುಷ್ಪಕವನೇರಿದು ಮುನೀಂದ್ರಗಭನವಿುಸಿ ॥
ತಳೆದು ಪಿತನಾಶೀರ್ವಚನವಮಂ ।
ಗಳವನತಿವಿಭವದಲಿ ಮೆರೆದಿರೆ ।
ನಳಿನಮುಖಿ ಕೈಕಸೆ ನಿರೀಕ್ಷಿಸಿದಳು ಧನೇಶ್ವರನ ॥೧೩॥

ಎಲೆ ಮಗನೆ ದಶಮುಖ ಪಿತಾಮಹ ।
ಕುಲದೊಳುದಿಸಿದೊಡೀಕುಬೇರನ ।
ವೊಲು ಸಮಗ್ರೈಶ್ವರ್ಯವಾಂತೊಡೆ ಸಫಲವಲ್ಲದೊಡೆ ॥
ಎಲವಕಾಯುಂತಹುದೆನಲು ವೆ ।
ಗ್ಗಳವೆ ನಿರ್ಮ್ಮೊಳು ತಾಯೆ ನುಡಿದೊಡೆ ।
ಗಳಹನೆಂಬಿರಿ ನೀವೆನುತ ದಶವದನನಿಂತೆಂದ ॥೧೪॥

ತಪವನಾಚರಿಸುವೆನು ಬೇಡುವೆ ।
ನಪರಿಮಿತವರಗಳನು ನಿಮ್ಮಯು ।
ಕೃಪೆಯೊಳಬ್ಜಾಸನನ ಮೆಚ್ಚಿಸಿಯುಸ್ಮದಗ್ರಜನ ॥
ವಿಪುಲಭಾಗ್ಯಕೆ ಮಿಗಿಲೆನಿಸಿ ಪಡೆ ।
ದಪೆನೆನುತ ಸೋದರರೊಡನೆ ದಶ ।
ಲಪನನಾಗೋಕರ್ಣಪುಣ್ಯಾಶ್ರಮಕೆ ನಡೆತಂದ ॥೧೫॥

ಅವನಿಪತಿ ತದ್ವಿಧಿವಿಧಾನದ ।
ವಿವಿಧ ನಿಯುಮಂಗಳಲಿ ತಪವನು ।
ದಿವಿಜರಿಪುಗಳು ಮಾಡಿದರು ವಿಷಮೋಗ್ರಕರ್ಮದಲಿ ॥
ಕವಲುವರಿಯದ ಚಿತ್ತದಲಿ ಸಂ ।
ಭವಿಸಿದಿಂದ್ರಿಯಭಾವದಲಿ ಮತಿ ।
ಬವಣೆಗೊಳದಿರ್ದರು ನಿರಾಹಾರದ ಸುನಿಷ್ಠೆಯಲಿ ॥೧೬॥

ಬಳಿಕ ಮೇಘಾಗಮ ಹಿಮಾಗಮ ।
ಗಳಲಿ ಗಿರಿಸಂಕಟನದೀಸಂ ।
ಕುಳದೊಳಿರ್ದು ನಿದಾಘವನು ಪಂಚಾಗ್ನಿಮಧ್ಯದೊಳು ॥
ಕಳೆದನೈ ವತ್ಸರಗಳನು ಖಳ ।
ತಿಳಕನಿಂತೀರೈದು ಸಾಸಿರ ।
ಗಳನು ಕುಂಭಶ್ರವಣನತಿನಿಷ್ಠುರದ ತಪದೊಳಗೆ ॥೧೭॥

ಐದುಸಾಸಿರ ವರುಷವೊಂದೇ ।
ಪಾದದಲಿ ಮಾಡಿದನು ಬಳಿಕಂ ।
ತ್ರೈದು ಸಾಸಿರ ವರುಷವಾದಿತ್ಯಾವಲೋಕನವ ॥
ಮೈದೆಗೆಯದಾಚರಿಸಿದನು ಮ ।
ರ್ಯಾದೆ ತಪ್ಪದೆ ಧರ್ಮಬುದ್ಧಿಗೆ ।
ಭೇದವಿಲ್ಲದೆ ವರವಿಭೀಷಣನಧಿಕತರತಪವ ॥೧೮॥

ಪರಿಸಮಾಪ್ತಿಯೊಳೊಂದು ಸಾಸಿರ ।
ವರುಷಕೊಂದೊಂದಾಗಿ ತಲೆಗಳ ।
ತರಿದು ಜೇಳಿದನಗ್ನಿಯೊಳಗೊಂಭತ್ತುಪರಿಯಂತ ॥
ಪರಿವಿಡಿಯೊಳೀರೈದುಸಾಸಿರ ।
ವರುಷದಂತದೊಳರಿವೆನುಳಿದಿಹ ।
ಶಿರವನೆಂಬ ದಶಾಸ್ಯನೆಡೆಗೈತಂದನಬ್ಜಭವ ॥೧೯॥

ಏಳು ಒಲಿದೆ ಮಗನೆ ದಶಶಿರ ।
ಕೇಳು ವರಗಳನೀವೆನೆನೆ ದಶ ।
ಮೌಳಿ ಕಂಡನು ಕಣ್ದೆಱೆದು ನಿಜಪಿತೃಪಿತಾಮಹನ ॥
ಫಾಳವನು ಚಾಚಿದನು ಚರಣಕೆ ।
ಪೇಳಿದನು ತನ್ನಿಷ್ಟವನು ಕರು ।
ಣಾಳು ಪಾಲಿಪುದೆನುತ ಕೆಯ್ಗಳ ಮುಗಿದು ಕರುಣದಲಿ ॥೨೦॥

ಸುರ ಮಹೋರಗ ಯಕ್ಷರಾಕ್ಷಸ ।
ಗರುಡ ದಾನವ ದೈತ್ಯ ವಿದ್ಯಾ ।
ಧರ ಮಹಾಬಲ ಸಿದ್ಧಸಾಧ್ಯಾದಿಗಳ ದೆಸೆಯಿಂದ ॥
ಮರಣವೆನಗೈದದ ವರಂಗಳ ।
ಕರುಣಿಸೈ ಪರಮೇಷ್ಠಿ ತಿರ್ಯ ।
ಕ್ಚರಿತಮಾನವರೆಂಬವರು ತೃಣಮಾತ್ರವೆನಗೆಂದ ॥೨೧॥

ಎನೆ ಚತುರ್ಮುಖನಾನಿಶಾಚರ ।
ಜನಪಗಿತ್ತನು ಬೇಡಿದಿಷ್ಟಗ ।
ಳೆನಿತನಿತನಗ್ನಿಯಲಿ ಜೇಳಿದ ನಿನ್ನ ತಲೆ ಮರಳಿ ॥
ಜನಿಸಲೆನಲುದ್ಭವಿಸಿದುವು ಮು ।
ನ್ನಿನ ಕ್ರಮದೊಳಾಪಳಿದ ತಲೆ ತೊ ।
ಟ್ಟನೆ ವಿಭೀಷಣಸಿರ್ದಡೆಗೆ ಬಂದನು ಸರಾಗದಲಿ ॥೨೨॥

ಎಲೆ ಮಗನೆ ಬಾರೈ ವಿಭೀಷಣ ।
ಒಲಿದಿದೆಯೊಲ್ಲೈ ಕಂದ ತಪದೊಳು ।
ಕುಲಶಿರೋಮಣಿ ಬೇಡು ವರಗಳನೀವೆನೆಂದೆನಲು ॥
ನಳಿನಸಂಭವನಡಿಗೆಱಗಿ ಕರ ।
ಗಳ ಮುಗಿಯುತೆಲೆ ದೇವ ತವಪದ ।
ತಳವ ಕಂಡೆನಪೂರ್ವವನು ಕೃತಕೃತ್ಯನಾನೆಂದ ॥೨೩॥

ದೇವ ಕರುಣಿಸು ವರವನೆಲೆ ರಾ ।
ಜೀವಸಂಭವ ಧರ್ಮಬುದ್ಧಿಯು ।
ಭಾವವೇ ಒಲಿದಿರಲಿ ಧರ್ಮಪದಂಗಳೆಂದೆನಗೆ ॥
ಈವುದಿದನಭ್ಯಾಸಿಸದೆ ರಾ ।
ಜೀವಗರ್ಭಾಸ್ತ್ರಪ್ರಭೃತಿ ವಿಶಿ ।
ಖಾವಳಿಯ ಸಂಧಾನವಿಜ್ಞಾನಗಳನೆನಗೆಂದ ॥೨೪॥

ದಾನವರೊಳುತ್ತಮನಲಾ ಮ ।
ತ್ತೇನೆನುತ ಕೊಟ್ಟನು ಚಿರಾಯುವ ।
ನಾನಿಶಾಚರಪತಿಗೆ ಶರವಿಜ್ಞಾನವನು ಸಹಿತ ॥
ಹಾನಿ ಹುಗದಿದಕೆಂದೆನುತ ಚತು ।
ರಾನನನು ಕುಂಭಶ್ರವಣನಿಹ ।
ಕಾನನಕೆ ನಡೆತರಲು ಚಿನ್ನಹಮಾಡಿದರು ಸುರರು ॥೨೫॥ ॥೨೫॥

ದೇವ ವರವನು ಕುಂಭಕರ್ಣಂ ।
ಗೀವುದನುಚಿತ ನರಭುಜಂಗಮ ।
ದೇವಲೋಕವ ತಿಂಬನಿವನೀತಗೆ ನಿಸರ್ಗವಿದು ॥
ಈವಿಗಡ ರಕ್ಕಸಗೆ ವರಗಳ ।
ನೀವ ನೆವದೊಳೆ ಮೋಹವನೆ ರಾ ।
ಜೀವಸಂಭವ ಮಾಳ್ಪುದೆಂದರು ಸುರರು ಕೈಮುಗಿದು ॥೨೬॥

ಬರಿಸಿ ವಾಗ್ದೇವಿಯನು ನುಡಿದನು ।
ಸರಸಿರುಹಭವನೆಲೆ ಸರಸ್ವತಿ ।
ಸುರರಭೀಷ್ಟವ ಸಲಿಸುವುದು ಖಳನಂತರಂಗದೊಳು ॥
ಬೆರಸಿ ಬುದ್ಧಿವಿಕಾರವನು ವಿ ।
ಸ್ತರಿಪುದೆನಲೆಸಗಿದಳು ದೈತ್ಯನ ।
ಕರಣಗಳು ಕಳವಳಿಸಿದುವು ದುರ್ಮತಿವಿಕಾರದಲಿ ॥೨೭॥

ಬಳಿಕ ಬಂದನು ಕುಂಭಕರ್ಣನ ।
ಬಳಿಗೆ ನೀರಜಗರ್ಭನೇಳ್ಯೆ ।
ಖಳಶಿರೋಮಣಿ ಬೇಡು ವರಗಳನೀವೆನೆಂದೆನಲು ॥
ನಳಿನಭವ ಚಿರಕಾಲ ನಿದ್ರಾ ।
ಲಲನೆಯುಪಭೋಗದೊಳಿರುವ ಕ ।
ಟ್ಟಳೆಯು ಮಾಡೆನಲಸ್ತುವೆನುತಡರಿದನು ವಿಧಿ ನಭವ ॥೨೮॥

ಅದುದಭಿಮತಸಿದ್ಧಿ ದಿವಿಜರಿ ।
ಗೈದಿದನು ವಿಧಿ ನಭಕೆ ಶಾರದೆ ।
ಪೈಡೆಗೆದಳಜನೊಡನೆ ದನುಜಗೆ ಪೋದುದಜ್ಞಾನ ॥
ಈದಿವಿಜರಿಂದಾದ ದೋಷೋ ।
ತ್ಪಾದವೆನಗೀಬುದ್ಧಿಯೆನುತ ವಿ ।
ಷಾದಚಿತ್ತದೊಳಸುರನಿರ್ದನು ಬೈದು ದುಷ್ಕೃತವ ॥೨೯॥

ಆತತಾಯಿಗಳಿದ್ದರೈ ಶಿ ।
ಪ್ಮಾತಕದ ವನದೊಳಗೆ ಲಬ್ಧವ ।
ರಾತಿಶಯದಲಿ ಮುಂದೆ ಮಾಡುವ ಕಾರ್ಯವೇನೆನುತ ॥
ಆತಗಳ ವರಲಾಭವನು ಸಂ ।
ಪ್ರೀತಿಯಿಂದ ಸುಮಾಲಿ ಕೇಳ್ದು ಮ ।
ಹೀತಳಕೆ ಬಂದನು ರಸಾತಲದಿಂದ ಹರ್ಷದಲಿ ॥೩೦॥

ವರಮಹೋದರ ವಜ್ರದಂಷ್ಟ್ರ ।
ಸುರ ಸುಪಾರ್ಶ್ವ ವಿರೂಪಲೋಚನ ।
ದುರುಳ ಮಾರೀಚ ಪ್ರಹಸ್ತಾಕಂಪ ಧೂಮ್ರಾಕ್ಷ ॥
ಹರವಿಕಟ ಸಂಪಾತಿ ಮುಖ್ಯ ।
ಮರವಿರೋಧಿಗಳೈದಿದರು ದಶ ।
ಶಿರನೆಡೆಗೆ ಶುಕಸಾರಣಾದಿ ನಿಶಾಟಭಟರೊಡನೆ ॥೩೧॥

ಬಂದು ದೌಹಿತ್ರನನು ಕಂಡನ ।
ದೊಂದು ಮನದುಬ್ಬಿನಲಿ ಚರಣಕೆ ।
ವಂದಿಸಲು ಹರಸಿದನು ಕೂಡೆ ಸುಮಾಲಿ ಬಿಗಿಯಪ್ಪಿ ॥
ತಂದೆ ವರವನು ಪಡೆದೆ ಗಡ ತಪ ।
ದಿಂದ ಸೋದರರೊಡನೆ ರಾಕ್ಷಸ ।
ಸ್ಪಂದನನು ನೆರಹಿದೆ ಘನಾರ್ಣವಗೆಣರ ಸೇನೆಂದ ॥೩೨॥

ಈಮಹೋದರನೀಪ್ರಹಸ್ತಸ।
ನಾಮನೀಮಾರೀಚನೆಂಬೀ
ತಾಮಸೀಚರರೀಸುಪಾರ್ಶ್ವಕ ಧೂಮ್ರಲೋಚನರು ॥
ಬಾ ಮಗನೆ ಮಾತುಲರು ನಿನಗೀ।
ಸಾಮದಾನೋಪಾಯ ಚತುರರು।
ಕಾಮಿತವು ಕೈಸಾರ್ದುದೆಮಗಿನ್ನೆಂದನಸುರೇಂದ್ರ ॥೩೩॥

ಎಲೆ ಮಗನೆ ಪೂರ್ವದಲಿ ಲಂಕಾ।
ನಿಲಯವೆಮ್ಮದು ವಿಷ್ಣುಭಯದಲಿ।
ನಿಲಲಝುಯುದೋಡಿದೆವು ಬಿಟ್ಟದನಾರಸಾತಲಕೆ ॥
ಬಳಿಕ ನಿನ್ನಗ್ರಜನು ಬಾಹಾ।
ಬಲದೊಳುಪಶೋಭಿಸುವನಾತನ।
ತೊಲಗನೂಂಕಿ ದಶಾಸ್ಯ ಲಂಕಾಧೀಶನಾಗೆಂದ ॥೩೪॥

ಅಹುದು ನೀವೆಂದಂತೆ ಮಾತಾ।
ಮಹ ಮದೀಯಾಗ್ರಜನಲಾ ಗುರು।
ವಹ ಕುಬೇರನಸಿರಿಪುದುಚಿತವೆ ಹೇಳಿ ನೀವೆನಲು ॥
ಗಹಗಹಿಸಿ ನಗುತೆಂದನತಿದು।
ಸ್ಸಹವ ನುಡಿದೈ ತಂದೆ ವೈರದೊ।
ಳಿಹುದೆ ಸಹಭವರೆಂಬ ಬಗೆ ದಶವದನ ಕೇಳೆಂದ ॥೩೫॥

ಅದಿತಿದಿತಿಯೆಂದೆಂಬ ಹೆಸರಿನ।
ಸುದತಿಯರು ಕಶ್ಯಪಕಳತ್ರಗ।
ಳದಿತಿ ಪಡೆದಳು ಸುರರ ದಿತಿ ಪಡೆದಳು ಸುರದ್ವಿಷರ ॥
ತ್ರಿದಶರಿಗೆ ಸರ್ವಾಧಿಪತ್ಯಗ।
ಳೊದವಿದುವು ದನುಜರನು ಮುರರಿಪು।
ಸದೆದನೈ ಸುಮನಸರ ದೆಸೆಯಿಂದಣುಗ ಕೇಳೆಂದ ॥೩೬॥

ಅದುಮೊದಲು ಸಾಪತ್ನವೈರಗ।
ಳುದಿಸಿದುವು ದೇವಾಸುರರೊಳಾ।
ತ್ರಿದಶರಿರಿದರು ಪೂರ್ವದೇವರನಗ್ರಭವರೊಡನೆ ॥
ಅದಿತಿಜರು ಮುನ್ನೆಸಗಿದರು ನಾ।
ವಿದಕೆ ಹಿಮ್ಮೆಟ್ಟಿದೊಡೆ ನಮ್ಮನು।
ದೆಯುದಿಹರೇ ಮಗನೆ ನಾವೆಂದಂತೆ ಮಾಡೆಂದ ॥ ॥೩೭॥

ಎಂದೊಡೊಳ್ಳಿತ್ತೆನುತ ಕರೆಸಿದ ।
ನಂದು ದಶಶಿರನಾಪ್ರಹಸ್ತನ ।
ನೆಂದನೆಲೆ ಮಾತುಲ ಮದೀಯಾಗ್ರಜನ ಬಳಿಗೆಯ್ದಿ ॥
ಹಿಂದೆ ಲಂಕಾನಗರಿ ರಾಕ್ಷಸ ।
ವೃಂದದಿಕ್ಕೆ ಧನೇಶ ಬಿಡಹೇ ।
ಳೆಂದು ದಶಶಿರನೆನ್ನನಟ್ಟಿದನೆನ್ನು ನೀನೆಂದ ॥೩೮॥

ಸಾಮದಲಿ ನುಡಿ ದಶಮುಖನ ಮಾ ।
ತಾಮಹನ ಪುರವಿದು ಸುನೀತಿಯು ।
ಸೀಮೆಯನು ವಿಭಜಿದಿರು ದೌಹಿತ್ರರಿಗೆ ಸಾರ್ಥವಲ ॥
ಕಾಮಿಸದಿರನ್ಯಾಯವನು ಬಿಡು ।
ಕಾಮಹಾಪುರವರವ ಬಿಡೆ ಸು ।
ಕ್ಷೇಮ ನಿನಗಹುದೆಂದು ನುಡಿ ಹೋಗೆಂದು ಬೀಳ್ಕೊಟ್ಟ ॥೩೯॥

ಲೇಸೆನುತ ಬೀಳ್ಕೊಂಡು ಲಂಕಾ ।
ವಾಸಕೈದಿದನಾಪ್ರಹಸ್ತಮ ।
ಹಾಸುರನು ಕಂಡನು ಸಭಾಮಧ್ಯದಲಿ ಧನಪತಿಯ ॥
ಓಸರಿಸದಾಡಿದನು ಬಿಡು ಯ ।
ಕ್ಷೇಶ ಲಂಕಾಪುರವನೆಂದೆನು ।
ತಾಸಚಿವಪತಿ ಪಙ್ಕ್ತಿಶಿರನೆಂದುಚಿತವಚನದಲಿ ॥೪೦॥

ಚಿಂತಿಸಿದನೊಂದರೆಗಳಿಗೆ ಪರಿ ।
ಯಂತ ದೈತ್ಯನನಲ್ಲಿರಿಸಿ ನಗ ।
ರಾಂತರವ ಹೊರವಟ್ಟು ಪಿತನೆಡೆಗೆಯ್ದಿ ಬೇಗದಲಿ ॥
ಇಂತು ದಶಮುಖನೆಂದನಾವೃ ।
ತ್ತಾಂತವನು ಮುನಿಗಳುಹೆ ಮುನಿಜನ ।
ಕಾಂತನಿಂತೆಂದನು ಧನಾಧೀಶಂಗೆ ವಿನಯದಲಿ ॥೪೧॥

ಮಗನೆ ಕೇಳೈ ದಶವದನನತಿ ।
ವಿಗಡನಾತಗೆ ಬಿಟ್ಟು ಲಂಕಾ ।
ನಗರಿಯನು ಕೈಲಾಸಪರ್ವತಕೈದು ಹರ್ಷದಲಿ ॥
ನಗರವನು ರಚಿಸಲ್ಲಿಯುತ್ತರ ।
ದಿಗಧಿಪತಿ ನೀನಾಗೆ ಬಂದಪು ।
ದಗಜೆಯರಸನ ಸಖ್ಯವಲ್ಲಿಡೆ ಹೋಗು ಬೇಗೆಂದ ॥೪೨॥

ಪಿತನಡಿಗೆ ತಲೆವಾಗಿ ಕಿನ್ನರ।
ಪತಿಯುತಿತ್ವರಿತದಲಿ ಲಂಕಾ।
ಗತ ಸಭಾಸ್ಥಳಕೈದಿದನು ತಾನಾವಿಮಾನದಲಿ ॥
ಕೃತಕವಲ್ಲೆಲೆ ಸಚಿವಪತಿ ನಿಜ।
ಪತಿ ಪುರದೊಳಿರಲೆನುತ ಜನಸಂ।
ತತಿಸಹಿತ ಪುಷ್ಪಕದೊಳೆಯ್ದಿದನುತ್ತರದ ದೆಸೆಗೆ ॥೪೩॥

ಅತ್ತ ಕೈಲಾಸಾದ್ರಿತಟದೊಳು।
ವಿತ್ತಪತಿಯಲಕಾಪುರಿಯನುಜ್ಜಿ।
ಚಿತ್ರರಿಸಿದನು ಸಖ್ಯವಾದುದು ಗೌರಿಯರಸನಲಿ ॥
ಇತ್ತ ಕೇಳ್ವೈ ರಾಮ ದೈತೇ।
ಯೋತ್ತಮನ ಬಳಿಗಾಪ್ರಹಸ್ತನು।
ದ[illegible]ತ್ತಮತಿ ಬಂದಱುಹಿದನು ಧನಪನ ಪಲಾಯನವ ॥೪೪॥

[illegible]ಬಂದು ಹೊಕ್ಕನು ಲಂಕೆಯನು ದಶ।
ಕ[illegible]ಧರನು ಹಿಮಗಿರಿನಿತಂಬದ।
ಕಂದರವ ಹುಗುವಂತೆ ಕೇಸರಿಯಧಿಕವಿಭವದಲಿ ॥
ಬಂದು ಕಂಡುದು ಯಕ್ಷರಾಕ್ಷಸ।
ವೃಂದವಾಪುರದತಿಶಯವ ನಲ।
ವಿಂದ ನೋಡುತ ನಡೆದನರಮನೆಗಧಿಕವಿಭವದಲಿ ॥೪೫॥

ರಚಿಸಿದರು ಪಟ್ಟಾಭಿಷೇಕವ।
ಸುಚಿತದಲಿ ಲಂಕಾಧಿನಾಥಗೆ।
ಸಚಿವಪತಿಗಳು ವರಸುಮಾಲಿಪ್ರಮುಖರೊಡಗೂಡಿ ॥
ಪ್ರಚುರತರವಿಭವದಲಿ ಪುರಜನ।
ನಿಚಯದುತ್ಸಾಹದಲಿ ಮಂಗಳ।
ವಚನದಾಶೀರ್ವಾದ ತೂರ್ಯತ್ರಯದ ರಭಸದಲಿ ॥೪೬॥

ಕರಸಿ ಜನನಿಯ ಶೂರ್ಪನಖಿ ಸೋ।
ದರಿ ವರಾರ್ಥಿನಿಯಾದಳೆಂದಾ।
ಕರಸಿ ಕೊಟ್ಟನು ಕಾಲಕೇಯರೊಳಧಿಕತರಬಲದ ॥
ದುರುಳ ವಿದ್ಯುಜ್ಜಿಹ್ವನೆನಿಸುವ।
ಸುರವಿರೋಧಿಗೆ ಬಳಿಕ ಲಂಕೇ।
ಶ್ವರನಧಿಕಹರ್ಷದಲಿ ಪಾಲಿಸುತಿರ್ದನಾಪೋಲ ॥೪೭॥

ಇಂತಿರುತ ಮೃಗಯಾವಿನೋದ ।
ಭ್ರಾಂತಿಯೊಳು ಮನವೆಳಸಿದುದು ವಿಪಿ ।
ನಾಂತರದೆ ತೊಟಲಿದನು ಬಹುಗಿರಿಗಹನಗಹ್ವರವ ॥
ಎಂತು ಪುಣ್ಯೋದಯದ ಜಗೆ ಮಯ ।
ನಂತರಿಕ್ಷದಿನಿಳಿದು ಗಿರಿಗಹ ।
ನಾಂತರದೆ ಮಗಳೊಡನೆ ಬರೆ ಕಂಡನು ದಶಗ್ರೀವ ॥೪೮॥

ಆರು ನೀನೀವಿಪಿನದೊಳಗಿಹ ।
ಕಾರಣವದೇನೀತರುಣಿ ತಾ ।
ನಾರ ಮಗಳುದ್ಯೋಗವಾವುದು ನಿನಗೆ ಹೇಳೆನಲು ॥
ವೀರ ಕೇಳೈ ಹೆಸರೆನಗೆ ಮಯ ।
ನಾರೊಳುಸಿರುವೆನೆನ್ನ ದುಕ್ಕದ ।
ಭಾರವನು ಪೇಳುವೆನು ಕಾರಣಸಹಿತ ಕೇಳೆಂದ ॥೪೯॥

ತಾತ ಬಲ್ಲೈ ಕೇಳ್ದು ಭುವನ ।
ಪ್ರೀತೆಯುಲ್ಲಾ ಹೇಮೆಯಪ್ಸರ ।
ಜಾತಿಯುಲಿ ದೇವತೆಗಳಿತ್ತರು ತನಗೆ ವಧುವಾಗಿ ॥
ಪ್ರೀತಿಯಿಂದೈನೂಱು ವರುಷವ ।
ನಾತರುಣಿಯುಪಭೋಗದೊಳಗಿರ ।
ಲಾತಳೋದರಿಯೊಳು ವಿಯೋಗವದಾದುದೆನಗೆಂದ ॥೫೦॥

ಆವನಿತೆ ಪಡೆದಳು ಕಣಾ! ಮಾ ।
ಯಾವಿ ದುಂದುಭಿಯೆಂಬ ಸುತನೊಡ ।
ನೀವಿಶದ ಶಶಿವದನೆ ಮಂಡೋದರಿಯೆನಿಪ ಸುತೆಯ ॥
ಆವನೈ ಪ್ರಿಯವಧುವಿಯೋಗದ ।
ನೋವಿನಲಿ ಜೀವಿಪನು ಬಱಿಕಿಂ ।
ತೀವಿಪಿನವಿಭ್ರಮಣೆ ಕಾರಣವಾಯ್ತು ಕೇಳೆಂದ ॥೫೧॥

ಹೇಮದಲಿ ಹೇಮಾಭಿಧಾನದ ।
ರಾಮಣೀಯಕ ಪುರವನೆಸಗಿದೆ ।
ನೈ ಮಹಾಮಾಯೆಯುಲಿ ತತ್ಪುರವರವನೀಕ್ಷಿಸದೆ ॥
ಈಮಗಳ ಕೈವಿಡಿದುಕೊಂಡೀ ।
ಭೂಮಿಯೊಳಗೀಕೆಗೆ ವರನನು ।
ದ್ದಾಮವಂಶೋನ್ನತನ ನೋಳ್ಪೆನು ನೀನದಾರೆಂದ ॥೫೨॥

ಆದೊಡಾನು ಪುಲಸ್ತ್ಯತನುಭವ ।
ನಾದ ವಿಶ್ರಾವಸುತನೂಜನು ।
ಮೇದಿನಿಯೊಳೆನ್ನನು ದಶಾನನನೆಂಬರೆನೆ ಕೇಳಿ ॥
ಆದುದಭಿಮತಸಿದ್ಧಿ ವರಸಂ ।
ಪಾದವಾತ್ಮಜೆಗಾದುದೆನುತ ವಿ ।
ನೋದದಲಿ ಮಯನಾಗ ದಶಕಂಧರನೊಳಿಂತೆಂದ ॥೫೩॥

ಎಲೆ ಮಹಿಮ ಕೇಳೈ ಪಿತಾಮಹ ।
ಕುಲದೊಳುದಿಸಿದ ನಿನ್ನವೊಲು ಸ ।
ತ್ಕುಲಜರುಂಟೇ ತನ್ನ ಮಗಳನು ವರಿಸಬೇಕೆನುತ ॥
ಕುಲವಧುಗಳೈತರೆ ಯದೃಚ್ಛಾ ।
ಬಲದೊಳಲ್ಲೆಂಬುವರೊಳರೆ ಭೂ ।
ವಲಯದೊಳು ದಶವದನನಸ್ತುವೆನುತ್ತ ಕೈಕೊಂಡ ॥೫೪॥

ಲೀಲೆಯೆಂತುಟೊ ಮಯನ ಪರಿಣಯ ।
ಶಾಲೆಯಾದುದು ನೆನೆದೊಡಾಕ್ಷಣ ।
ಬೇಳಿದನು ಹೋಮಾನಲನ ಬರಿಸಿದನು ಭೂಸುರರ ॥
ಮೇಲೆ ವೈದಿಕಧರ್ಮದಲಿ ದಶ ।
ಮೌಳಿಗಾದುದು ಮದುವೆ ಹರುಷವ ।
ತಾಳಿದನು ಮಯನುಸಿರಲೇನುದ್ವಾಹಸಂಭ್ರಮವ ॥೫೫॥

ಇತ್ತ ಸೈ ಮಯನಾಗ ದಶಶಿರ ।
ಗುತ್ತಮದ ಶಕ್ತಿಯನದಱೊಳಂ ।
ಗೊತ್ತಿದನಲಾಲಕ್ಷ್ಮಣನ ಪೇರುರವನಾಜಿಯಲಿ ॥
ಮತ್ತೆ ಕೇಳೈ ರಾಮ ದಶಶಿರ ।
ನುತ್ತರೋತ್ತರ ಕಾರ್ಯದಲಿ ಪುರ ।
ದತ್ತ ಸರಿದನು ಸತಿಸಹಿತ ಮಯನಡರಿದನು ನಭವ ॥೫೬॥

ಕೇಳಿದೈ ರಾಜೇಂದ್ರ ವಜ್ರ ।
ಜ್ವಾಲೆ ಪೌರೋಚನಸುತಾತ್ಮಜೆ ।
ಕಾಳರಕ್ಕಸಿಯರಸಿಯಾದಳು ಕುಂಭಕರ್ಣಗೆ ॥
ಮೇಲೆ ಶೈಲೂಷಾತ್ಮಭವೆ ಸರ ।
ಮಾಲಲನೆ ಗಂಧರ್ವವಧು ಕುಲ ।
ಪಾಲೆ ವಧುವಾದಳು ವಿಭೀಷಣಗಧಿಕವಿಭವದಲಿ ॥೫೭॥

ತರುಣಿ ಮಂಡೋದರಿಯೊಳಾದಶ ।
ಶಿರನೊಳಾದನು ಮೇಘನಾದಾ ।
ಸುರನವನೆ ಶಕ್ರಾರಿ ಪಿತನಿಂದಧಿಕಬಲಯುತನು ॥
ಪುರದೊಳಾತನ ಶೈಶವದ ನಿ ।
ಷ್ಠುರದ ರೋದನವಬ್ದರವದಂ ।
ತಿರೆ ಸುರಾರಿಗೆ ಮೇಘನಾದಾಭಿಖ್ಯೆಯಾಯ್ತೆಂದ ॥೫೮॥

ವಾರಿಜಾಸನನಿತ್ತ ನಿದ್ರಾ ।
ಭಾರ ಬಲಿದುದು ಕುಂಭಕರ್ಣಗೆ ।
ಸಾರಿದನು ದಶಕಂಧರನ ರಿಪುಕಾಲಕಂಧರನ ॥
ವೀರ ವಿರಚಿಪುದೆನಗೆ ನಿದ್ರಾ ।
ಗಾರವನು ಬೇಕೆನಲು ಕೇಳ್ದವು ।
ರಾರಿ ದೇವಸ್ಥಪತಿಯುನು ತಾ ಕರೆದು ನೇಮಿಸಿದ ॥೫೯॥

ಶಾತಕುಂಭಸ್ತಂಭಮಯ ಶೋ ।
ಭಾತಿಶಯವೈಡೂರ್ಯರತ್ನ ।
ವ್ರಾತಮಯ ಹರಿದಶ್ಮಮಯ ಶೋಣಾಶ್ಮಮಯವೆನಿಸಿ ॥
ಚಾತುರಿಯದಲಿ ಮಾಡಿದನು ದಿತಿ ।
ಜಾತನೆನಿತುನ್ನತಪಸಿತನಾ ।
ಯಾತುದಾನಾಧಿಪಗೆ ನಿದ್ರಾಮುದ್ರಿತಾಲಯವ ॥೬೦॥

ಎರಡುಗಾವುದ ನೀಳದಲಿ ವಿ ।
ಸ್ತರಿಸಿದನು ಗಾವುದದಗಲ ಮಂ ।
ದಿರವನಮರಸ್ಥಪತಿ ಜೀರ್ಣ್ಕೊಂಡನು ದಶಾನನನ ॥
ಸುರವಿರೋಧಿಯನೇಕ ಸಾಸಿರ ।
ವರುಷ ನಿದ್ದೆಯೊಳಿರ್ದನೈ ದಶ ।
ಶಿರನ ಶೌರ್ಯೋನ್ಮಾದ ದುಸ್ಸಹವಾದುದಿಳೆಗೆಂದ ॥೬೧॥

ಕೊಂದನಗಣಿತಮುನಿಜನಂಗಳ ।
ನಂದು ಮುರಿದನು ಮುನಿವನವನದ ।
ಬೆಂದ ದಾನವದೈತ್ಯಸುರನರನಾಗಕಿನ್ನರರ ॥
ಸಂದಣಿಯ ಸವರಿದನು ಭುಜಬಲ ।
ದಿಂದ ಕೆರೆ ತೊಱೆ ಕಟ್ಟೆ ಕಾಲುವೆ ।
ಸಂಪಸವ ನೆಗ್ಗಿದನು ಹಿಗ್ಗಿದನಧಿಕಹರ್ಷದಲಿ ॥೬೨॥

ನದಿಗಳನು ಕದಡಿದನು ಸೊಕ್ಕಿದ।
ಮದಕರಿಯು ತೆಱದಿಂದ ಕಾಲಿಂ।
ದೊದೆದು ಕೆಡಹಿದನದ್ರಿಸಮ ಕೃತಕಾದ್ರಿಸೌಧಗಳ ॥
ಕೆದಱಿದನು ಪುರಗೋಪುರಂಗಳ।
ಸದನಪಜ್ತ್ತಿಗಳೊಡನೆ ತುಱಿದೊಡೆ।
ಸದೆವನಮರವಿರೋಧಿ ಜನವನು ರಾಮ ಕೇಳೆಂದ ॥೬೩॥

ಅಕ್ಷಯಾತ್ಮ ವಿಪಕ್ಷದಾನವ।
ಶಿಕ್ಷ ದುಷ್ಕೃತರೂಕ್ಷ ಸುಮನಸ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ್ಮಣನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ।
ಯಕ್ಷಸುರಮುನಿರಕ್ಷ ಸುಜನಾ।
ಪೇಕ್ಷ ನರಹರ್ಯುಕ್ಷ ಪಾಲಿಸು ಮೋಕ್ಷಪದದಕ್ಷ ॥೬೪॥

ಇಂತು ನಾಲ್ಕನೆಯಸಂಧಿ ಸಂಪೂರ್ಣವು.



ಐದನೆಯ ಸಂಧಿ.

---

ಸೂಚನೆ॥ ಪಾತಕವ ಮಾಡಿದರು ಬಿಡು ದು।
ರ್ನೀತಿಗಳನೆಂದೆನೆ ಕುಬೇರನ।
ಘಾತಿಸಿದನೆತ್ತಿದನು ಹರಗಿರಿಯನು ದಶಗ್ರೀವ ॥

ಕೇಳು ರಘುಪತಿ ದಶವದನನು।
ಬ್ಬಾಳುತನವನದೇನನೆಂಬೆನು।
ತೋಳ ಬಲದಲಿ ಸವರಿದನು ಸುರನರಭುಜಂಗಮರ ॥
ಪೇಟಲಮ್ಮರು ಸೋದರರು ಭುವ।
ನಾಳಿಯೊಳುಕಿತಖಂಡಗರ್ವ ಛ।
ಡಾಳಿಸಿತು ಹತಕಂತುಕದ ತೆಱನಾದನಸುರೇಂದ್ರ ॥೧॥

ಕೇಳಿದನು ಧನಪತಿ ದಶಾನನ।
ನೂಱಿಗವನಕಟೆನುತ ದುಗುಡವ।
ತಾಳಿದನು ನಿಜವಂಶಕಾದುದು ಕೊರತೆಯೆಂದೆನುತ ॥
ಪೇಱು ಪೋಗೆಲೆ ದೂತ ಖಳ ದಶ।
ಮೌಳಿಯೊಳು ದುಷ್ಕೃತವ ಬಿಡು ಧನ।
ಪಾಲನಟ್ಟಿದನೆನ್ನ ನೆಂದುಚಿತದಲ ತಿಳುಹೆಂದ ॥೨॥

ಸಲುವುದೇ ನಿನಗಿದು ಪಿತಾಮಹ ।
ಕುಲದೊಳುದಿಸಿದವಂಗೆ ಧನಪನ ।
ಒಲುಮೆ ಮುಗ್ಗಿದುದಲ್ಲದುಷ್ಕೃತಕೆಂದು ನೀನುಸಿರು ॥
ಸುಲಭಮಪ್ಪುದು ಸುಕೃತಗತಿಯಲಿ ।
ಒಲುಹು ಸುಸ್ಥಿರಮಹುದೆನುತ ದಶ ।
ಗಳಗೆ ನೀತಿಯನುಸಿರು ಹೋಗೆಂದೆನುತ ಬೀೞ್ಕೊಟ್ಟ ॥೩॥

ಬಂದನಾತ ವಿಭೀಷಣನ ಬೞಿ ।
ಗಂದು ಕಾಣಿಸಿಕೊಂಡನುಚಿತದೊ ।
ಳೆಂದನಾಧನಪಾಲನಾಡಿದ ಮಾತನಿಂತೆಂದ ॥
ಕುಂದು ಪೌಲಸ್ತ್ಯಾನ್ವಯಕೆ ದಶ ।
ಕಂಧರನಿನಾದಪುದು ಗಡ! ತಿಳು ।
ಹೆಂದು ಕಳುಹಿದನೆನ್ನನಿಂದಸುರೇಂದ್ರನೆಡೆಗೆಂದ ॥೪॥

ಆದೊಡೊಳ್ಳಿತೆನುತ್ತ ಚರನೊಡ ।
ನೈದಿದನು ದಶಮುಖನ ಸಭೆಯನು ।
ಸೋದರನನುಚಿತದಲಿ ಮನ್ನಿಸಿ ನುಡಿದನಿಂತೆಂದು ॥
ಆದೊಡೆಲೆ ದನುಜೇಂದ್ರ ಧನಪತಿ ।
ಯಾದ ನಮ್ಮಗ್ರಜನ ಚರನಿವ ।
ನಾದರಿಪುದೆನಲೇನೆನುತ ದಶಕಂಠ ಬೆಸಗೊಂಡ ॥೫॥

ಎಲೆ ನಿಶಾಚರಪತಿ ಪಿತಾಮಹ ।
ಕುಲದೊಳುದಿಸಿದ ನಿನಗೆ ದುಷ್ಕೃತ ।
ಸಲುವುದೇ ಕೊಂದೆ ಗಡ! ಮುನಿಗಳ ಸದೆದೆ! ಗಡ ಸುರರ ॥
ಅೞಿದೆ ಗಡ! ಬಹುಯಾಗಮಂಟಪ ।
ಗಳನು ಮುರಿದೆ ಗಡಾರವೆಯನಿದ ।
ಕಬಲಿ ನಿಮ್ಮಗ್ರಜನು ಕಳುಹಿದನೆನ್ನ ಕೇಳೆಂದ ॥೬॥

ಆಲಿಸೆಲೆ ದನುಜೇಂದ್ರ ಧನಪತಿ ।
ಲೀಲೆಯಿಂದಾಚರಿಸಿದನು ಹಿಮ ।
ಶೈಲದಲಿ ರೌದ್ರವ್ರತವನಸಮಸಮಾಧಿಯಲಿ ॥
ಹೇೞಲೇನಗಜಾತೆ ಸುೞಿದಳು ।
ಶೈಲಸಾನುವಿನೊಳು ಸುರಸ್ತ್ರೀ ।
ಜಾಲದೊಡನೆ ವಿನೋದದಲಿ ವನಕೇಳಿಗೆಂದೆನುತ ॥೭॥

ಅಂಬಿಕೆಯನೀಕ್ಷಿಸಿದನ್ನೆ ಸ।
ವ್ಯಾಂಬಕದೊಳಗಜಾಪ್ರಭಾವವ।
ನೆಂಬುದೇನರಿದುದು ಕಣಾ! ಧನಪತಿಯ ವಾಮಾಕ್ಷಿ ॥
ಅಂಬಿಕಾಪತಿಯೆನುತ ಮೇರುನಿ।
ತಂಬದೊಳು ತಪವಿರುತಿರಲು ಭಾ।
ಳಾಂಬಕನು ಮೆಚ್ಚಿದನು ಬಂದನು ಧನದನಿದ್ದೆಡೆಗೆ ॥೮॥

ಎಲೆ ಧನೇಶ್ವರ ಮೆಚ್ಚಿದೆನು ನಿ।
ಶ್ಚಲಿತ ಭಕ್ತಿಗೆ ನಿನ್ನ ತಪವಿದು।
ಸುಲಭವೇ ದುರ್ಲಭ ಕಣಾ! ಬಹಿರ್ಮುಖರಾದ ಪುರುಷರಿಗೆ ॥
ಫಲಿಸಿದುದು ನಮ್ಮಿರ್ವರಿಗೆ ತಪ।
ವಿಳೆಯೊಳಗೆ ಮೂಱನೆಯ ಪುರುಷರು।
ಗಳ ಪರೀಕ್ಷಿಸಲಿಲ್ಲವೆಂದನು ಶೂಲಿ ಧನಪತಿಗೆ ॥೯॥

ಇಂದು ಮೊದಲಾಗೆಮ್ಮ ಸಖನಾ।
ಗೆಂದು ಕರುಣವ ತೋಱಿ ಗಿರಿಸುತೆ।
ಯಿಂದ ಹತವಾದಕ್ಷಿ ಪಿಂಗಳವರ್ಣವನು ತಾಳ್ದು ॥
ಸಂದಿರಲಿ ಧರೆಗೇಕಪಿಂಗಳ।
ನೆಂದು ನಿನ್ನಯ ಹೆಸರೆನುತ ಬಾ।
ಲೇಂದುಶೇಖರನೈದಿದನು ಕೈಲಾಸಪರ್ವತಕೆ ॥೧೦॥

ಇದು ಕಣಾ! ದುಷ್ಕೃತದ ಫಲ ತನ।
ಗೊದಗಿದುದು ಪಾಪದ ಫಲಂಗಳ।
ನೊದೆವುದರಿದದಱಿಂದ ಸುರಮುನಿಜನದ ದೆಸೆಯಿಂದ ॥
ನಿಧನವಾಗದೆ ಮಾಣ್ದಪುದೆ ದಶ।
ವದನಗಿದನಱುಹೆಂದು ಧನಪತಿ।
ಬೆದಱದಟ್ಟಿದನೆನ್ನನೆಂದನು ದೂತನಸುರಂಗೆ ॥೧೧॥

ಕೇಳಿ ದೂತನ ಮಾತನಾದಶ।
ಮೌಳಿ ಕೋಪವ ತಾಳಿದನು ರೋ।
ಮಾಳಿಗಳು ಹೊಗೆಯೆದ್ದುವಂಗದ ಝಳದ ಝಾಡಿಯಲಿ ॥
ಆಲಿಗಳು ಕೇಸುರಿಯ ಸುರಿದುವು।
ಕಾಲರುದ್ರನ ಮುಸಕದೆಸಕವ।
ನೇಱಿಸುವ ಬದ್ಧಭ್ರುಕುಟಿ ಮುಖನೊಡನೆ ಖತಿಗೊಂಡ ॥೧೨॥

ಎಲವೊ ಹರಸಖನೆಂಬ ಗರ್ವದ ।
ಬಲವನೆನಗಱುಹೆಂದು ನಿನ್ನನು ।
ಕಳುಹಿದನಲಾಸುರಮುನಿಗಳಿಂದೆನಗೆ ಮರಣ ಗಡ ॥
ಕೊಲುವೆನಗ್ರಜನಾದೊಡಾಗಲಿ ।
ಹಲವು ಮಾತೇನಣಕಸಣಕದ ।
ಬಳಿಕೆ ಗಡ ತನ್ನೊಡನೆನುತ ಹಲುಗಡಿದನಸುರೇಂದ್ರ ॥೧೩॥

ಜಡಿದು ಕಡುಗಪನವನನಿಕ್ಕಡಿ ।
ಗಡಿದು ತಿನಲಿತ್ತಸುರಭಟರಿಗೆ ।
ನಡೆದನೈ ಪ್ರಸ್ಥಾನಮಂಗಳಬಲಿಯಿದೆಂದೆನುತ ॥
ಬಿಡದೆ ಶುಕಸಾರಣಮಹೋದರ ।
ರೊಡನೆ ಧೂಮ್ರಾಕ್ಷಪ್ರಹಸ್ತರು ।
ನಡೆಯೆ ಮಾರೀಚಾದಿ ಷಟ್ಸಚಿವರು ಸರೋಷದಲಿ ॥೧೪॥

ಲೋಕವನು ಸಂಹರಿಪೆನಿನ್ನೀ ।
ಲೋಕಪಾಲರನಾಕೃತಾಂತನ ।
ಲೋಕವನು ಹುಗಿಸುವೆನು ಕೊಲ್ವೆನು ಸುರನರೋರಗರ ॥
ಜೋಕೆಗಿಡಿಸುವೆನಿಂದ್ರಚಂದ್ರಾದಿ ।
ನಾಕರಾದ್ಯರನೆನುತ ರಥವನು ।
ನೂಕಿದನು ದಶವದನನುತ್ತರಕಾಗಿ ಬೇಗದಲಿ ॥೧೫॥

ಒಡನೆ ನಡೆದುದು ಸೇನೆ ವಾದ್ಯದ ।
ಗಡಣದಲಿ ಗಜರಥಹಯಾಳಿಯು ।
ಕಡುಭರದೊಳುಬ್ಬೇಱು ಬೊಬ್ಬಿಱಿದಾರ್ವ ಪಟುಭಟರ ॥
ಪೊಡವಿ ಪೆತ್ತುದೊ ಬಲವನೆನ್ನದೆ ।
ಪಡೆಯುನೀಂದುದೊ ಜಂಗಮಾದ್ರಿಗ ।
ಳಡಿಯಿಡುವುವಿವು ಚೋದ್ಯವೆನೆ ಬಱುಸಂದು ರಾವಣನಾ ॥೧೬॥

ನಗರ ಖೇಡ ಮಡಂಬ ಪತ್ತನ ।
ನಿಗಮ ಖರ್ವಡಮೆಂಬ ಪುಟಭೇ ।
ದಗಳ ಗಿರಿವನ ನದನದೀಸಂಕುಲವನುಱೆ ಕಳೆದು ॥
ವಿಗಡ ರಕ್ಕಸನೈದಿದನು ಹರ ।
ನಗತಟಪ್ರಾಂತವನು ರಿಪುಸಂ ।
ಯುಗಸಮುಗ್ರಭುಜಾಗ್ರನಳಕಾಹ್ವಯಮಹಾಪುರವ ॥೧೭॥

ನಿಂದು ನಗರದ್ವಾರದೊಳು ಕರೆ ।
ದೆಂದನಾಪುರರಕ್ಷ ಯಕ್ಷನೊ ।
ಳಿಂದು ದಶಕಂಧರನು ಸಮರಕೆ ಬಂದನೆಂದುಸಿರು ॥
ಕೊಂದೊಡಲ್ಲದೆ ಧನಪತಿಯು ಬಿಡೆ ।
ನೆಂದನೆನು ನಿನೊ ಡೆಯನೊಳಗೆನ ।
ಲಂದು ಪರಿದನು ಯಕ್ಷನಳಕಾಧ್ಯಕ್ಷನಿರ್ಪೆಡೆಗೆ ॥೧೮॥

ಏಟು ಧನಪತಿ ಕಾದು ನಡೆ ದಶ ।
ಮೌಳಿಯೊಳು ತವಪದಪಯೋಜವ ।
ನೋಲಗಿಸಲೆಯ್ದಿದನು ಗಡ ಖಂಡೆಯದ ಕಡುಹಿನಲಿ ॥
ಕೋಳ ತೀಟೆಯು ಕಳೆವ ಗಡ ನ ।
ಮ್ಮಾಳ ಕೊಲೆಗೆಲಸದಲಿ ತಾನಿದ ।
ಹೇಟುವೊಡೆ ತೆಱಹಿಲ್ಲ ಕದನಕೆ ಕಳುಹಬೇಕೆಂದ ॥೧೯॥

ಹೇಟು ಹೇಟ್ಟಿನ್ನೊಮ್ಮೆ ದಶಶಿರ ।
ನಾಳುತನದಾಳಾಪವನು ದಿಟ ।
ಕಾಳೆಗವೆ ನಮ್ಮೊಡನೆ ಶಿವಶಿವ ಕಾಲಗತಿಯ್ಯೆಸೆ ॥
ಖೂಳದನುಜನ ಕಾಳೆಗಕೆ ನ ।
ಮ್ಮಾಳ ಕರೆಯೆನೆ ಯಕ್ಷಕಿನ್ನರ ।
ಜಾಳ ನೆರೆದುದು ಕೆಣಕಿದುದು ದಶಶಿರನನಾಜಿಯುಲಿ ॥೨೦॥

ಆದೊಡೆಲವೊ ದಶಾಸ್ಯ ಧನಪನ ।
ಸೋದರನೆನುತೊಮ್ಮೆ ಮನ್ನಿಸಿ ।
ಪ್ಯೆದೆಗೆದೊಡಾವದಕೆ ನೀ ಕಲಿಯಾದೆಯುಕಟೆನುತ ॥
ಕೈದುಗಳ ಸುಟಿಸಿದರು ಕವಿದರು ।
ಕೈದುಡುಕಿದರು ನಿಶಿತಶಸ್ತ್ರಮ ।
ಹೋದಧಿಯೊಳಾಟಿಸಿದರೇಟಿಸಿದರು ಪರಾಕ್ರಮವ ॥೨೧॥

ಏನನೆಂಬೆನು ಯಕ್ಷರಾಕ್ಷಸ ।
ಸೇನೆಗಾದುದು ಸಮರವಂಬಿನ ।
ಸೋನೆ ಸುರಿದುದು ಸುರಗಿ ಸುರಿದುವು ಹೊಳೆದುವಸಿಧೇನು ॥
ದಾನವರ ಕಿನ್ನರರ ರುಧಿರಾಂ ।
ಭೋನಿಧಿಯೊಳಂಭೋಧಿ ತಟ್ಟುದ ।
ದೇನು ರೌದ್ರರಸಾತಿರೇಕವೊ ಪೇಟಲರಿದೆಂದ ॥೨೨॥

ಮುರಿದುದಸುರರ ಸೇನೆ ಬಱಸಿಡಿ ।
ಲೆಱಗಿದದ್ರಿಯುವೊಲು ಕೃತಾಂತನ ।
ಗರವೆ ಬಱುದೋಕರಿಸಿದಂತಿರೆ ತರಿದ ತಲೆವಿುದುಳ ॥
ಹರಿಗರುಳ ಸೀಱ್ದೊಡಲನೆಲುಗಳ ।
ನಿರಿದೊವಲ ನಿಡುಮೂಳೆಗಳ ಬಿಡ ।
ದೊರೆವ ನೆತ್ತರ ನೆಣದ ರಣವತಿಚಿತ್ರವಾಯ್ತೆಂದ ॥೨೩॥

ನೋಡಿದನು ನಿಜಸೇನೆ ಕಣ್ಗೆ ।
ಟ್ಟೋಡುವುದನಮರಾರಿ ಕೋಪವ ।
ಮಾಡಿದನು ಕೊಂಡನು ಗದಾದಂಡವನು ಕೋಪದಲಿ ॥
ಆಡಲೇನದನೊಣಗಿದಡವಿಯ ।
ಬೀಡಿಕೆಯ ಕಾಱ್ಗಿಚ್ಚಿ ಸವಱಿದ ।
ನೋಡಲೀಯದೆ ಬಂದ ಯಕ್ಷರನಾದಶಗ್ರೀವ ॥೨೪॥

ಕೆಡೆದರಗಣಿತ ಯಕ್ಷಕಿನ್ನರ ।
ರೊಡೆದ ತಲೆಗಳ ಸಿಡಿದ ಪಲ್ಗಳ ।
ನಿಡುಗರುಳ ತುಂಡಿಸಿದ ತೋಳ್ಗಳ ನೆಗ್ಗಿದವಯವದ ॥
ಬಿಡುಮುಡಿಯ ಬಸಿವರುಣಜಲಧಿ ।
ಕ್ಕಡಿಗಡಿದ ತೊಡೆ ಜಾನುಜಂಘೆಯ ।
ಪಡೆ ಮಡಿದುದೇನಿಮಿಷದಲಿ ಬಲುಹೆನಿತೊ ದಶಮುಖನ ॥೨೫॥

ಬೆಂಬಿಡದೆ ಸಂಯೋಗಕಂಟಕ ।
ನೆಂಬ ಹೆಸರಿನ ಯಕ್ಷಪತಿ ಮನ ।
ಸಂಬುಗೆಯ ಭಟನಾಥನಾಧೀಶ್ವರನ ಭಟರೊಳಗೆ ॥
ಅಂಬುಗಳ ಮಱಿಗಱೆಯುತ್ತೈದಿದ ।
ನಂಬರದೊಳಂದತಿ ಚಮತ್ಕೃತಿ ।
ಯೆಂಬ ಬಗೆ ಬಗೆಗೊದವೆ ದಶಮುಖದೈತ್ಯನಭಿಮುಖಕೆ ॥೨೬॥

ಕಂಡನಾಮಾರೀಚನಾತನ ।
ದಂಡಿಯನು ತಱುಬಿದನು ಬಲ್ಗಜೆ ।
ಗೊಂಡು ಮೇಲ್ವಾಯ್ದೆಱಗಿದನು ಸಂಯೋಗಕಂಟಕನ ॥
ದಂಡೆಯೊಳು ಕಳೆದಾತನಸುರನ ।
ಮಂಡೆಯೊಡೆವಂತೆಱಗಿದನು ಭೂ ।
ಮಂಡಲದೊಳೆಡೆಗೆಡೆದನವನರೆಗಱಿಗೆ ಪರಿಯಂತ ॥೨೭॥

ತಿಳಿದುದಾತನ ಮೂರ್ಚ್ಛೆಯಾತನೊ।
ಳಳವಿಗೊಟ್ಟನು ಶೌರ್ಯವತಿವೆ।
ಗ್ಗಳಿಸಿದುದು ಮಾಯೆಯೊಳು ಗೆಲಿದನು ಯಕ್ಷವಲ್ಲಭನ॥
ಬಳಿಕ ದಶಶಿರನಾಧನೇಶನ।
ಹೊಬಲ ಬಾಗಿಲನೊಳವುಗಲು ಕಂ।
ಡಳುಕದಾಂತನು ಸೂರ್ಯಭಾನುವೆನಿಪ್ಪ ಕಿನ್ನರನು ॥೨೮॥

ಮುಱಿದು ಮಣಿತೋರಣವನಸುರನ।
ನೆಱಗಿದನು ವಿಧಿ ಕೊಟ್ಟ ವರದಿಂ।
ದರಿದಪನೆ ಖಳನುಱುದವರನಾಸ್ತಂಭದಿಂದವನ॥
ಒಱಸಿಡಿಲು ಹೊಯ್ವಂತೆ ಹೊಡೆದೊಡೆ।
ಬಱತುದಾತನ ಮಾತು ದಶಶಿರ।
ನುಱುಬೆಗಾನುವರಿಲ್ಲ ಸರಿದರು ಯಕ್ಷರೆಣ್ದೆಸೆಗೆ ॥೨೯॥

ನವನಿಧಿಗಳೊಡನೈತರಲು ವೈ।
ಶ್ರವಣನಾಜಿಗೆ ತಾನೆ ನಡೆತಂ।
ದವಗಡಿಸುತಿರೆ ಮಾಣಿಭದ್ರನೆ ನಿಪ್ಪನಡಹಾಯ್ದು॥
ಬವರಕಾಂತನು ನಾಲ್ಕುಸಾಸಿರ।
ಕವಿದುದಾತನ ಸೇನೆ ದಿತಿಸಂ।
ಭವರೊಳಪ್ಪುದೆ ಸಮತೆ ಸವಱಿದನವರ ಸೈನಿಕವ ॥೩೦॥

ಕೊಂದನಾಮಾರೀಚನಾಜಿಗೆ।
ಬಂದ ಯಕ್ಷರೊಳೆರಡು ಸಾಸಿರ।
ಮುಂದಿಯುನು ಬಜ್ರಕಾಪ್ರಹಸ್ತಮಹೋದರಾಸುರರು॥
ಕೊಂದರಿಚ್ಛಾರ್ಸಿರವ ಮುಸಲದೊ।
ಳಂದು ಧೂಮ್ರಾಕ್ಷಾಸುರನು ಬಲು।
ಹಿಂದ ಹೊಯ್ದನು ಮಾಣಿಭದ್ರನನಧಿಕರೋಷದಲಿ ॥೩೧॥

ಅವನ ಗಾಯುವನಣೆದು ದನುಸಂ।
ಭವನ ಶಿರವನು ಮಾಣಿಭದ್ರನು।
ಸವಡಿಗೆಯ್ಯಿಂದೆಱಗಿದನು ಗದೆಗೊಂಡು ಖಾತಿಯಲಿ॥
ಕವಿದುದಾತನ ಕಣ್ಗೆ ಕತ್ತಲೆ।
ಬವಣಿಗವನೊಳಗಾಗೆ ಲಂಕಾ।
ಯುವತಿಗಧಿಪತಿ ಯಕ್ಷಪತಿಯುನು ತಡೆದನಾಹವಕೆ ॥೩೨॥

ಮುಟ್ಟೆ ಬರೆಬರೆ ದಶಶಿರನನವ ।
ನಿಟ್ಟನ್ನೆ ಶಕ್ತಿತ್ರಯದೊಳದು ।
ಥಟ್ಟುಗಿದೊಡೇನಳುಕುವನೆ ವರದಾನಗರ್ವದಲಿ ॥
ಮುಟ್ಟವಿಸಿ ಬರಲವನ ಗದೆಗೊಂ ।
ಡಟ್ಟಿ ಹೊಯೊಡೆ ಮಕುಟ ಮುಱಿದಳ ।
ವಟ್ಟುದವನಿಗೆ ಪಾರ್ಶ್ವಮೌಳಿಯೆನಿಪ್ಪ ಪೆಸರಂದು ॥೩೩॥

ನೊಂದು ಮಾಣೀಚರನು ಸಮರಕೆ ।
ಹಿಂದಿದೆಗೆದನು ಯಕ್ಷಕಿನ್ನರ ।
ವೃಂದವಡಗಿದುದಾಶೀಲೋಚ್ಚಯ ಗಹನಗುಹೆಗಳಲಿ ॥
ನಿಂದಸೊರ್ವನೆ ಧನಪನಸುರಂ ।
ಗೆಂದನೆಲೆ ಪಾಪಾತ್ಮ ಕೆಡದಿರು ।
ಮಂದಮತಿ ನೀನಱಿಯೆ ದುಷ್ಕೃತ ಸುಕೃತ ಭೇದಗಳ ॥೩೪॥

ಗುರುಹಿರಿಯರೆಂದೆನದೆ ವಿಪ್ರರ ।
ಸರಕುಮಾಡದೆ ತಂದೆತಾಯಿಗ ।
ಳಿರವನಱಿಯದೆ ದೈವಪೌರುಷಕರ್ಮಗಳ ಮಱೆದು ॥
ಇರುತಿಹನೆ ಪುರುಷಾಧಮನು ವಿ ।
ಸ್ತರಿಸಲೇನದಕಕಟ! ಪೌರುಷ ।
ದುರಿಯೊಳದ್ದುವ ತನ್ನ ಗಾದೆ (?) ದುರಾತ್ಮ ಕೇಳೆಂದ ॥೩೫॥

ಎಲವೊ ಖಳ ಸಿರಿ ರೂಪು ಬಾಹಾ ।
ಬಲ ಚಿರಾಯು ಮಹತ್ವ ನೀತಿಯು ।
ಬಲುಹು ಸತಿಸುತಲಾಭವೆಂಬಿವು ಪೂರ್ವಕರ್ಮಗಳ ॥
ಫಲದ ಪಾಕದೊಳಿರುತಿಹುದು ಕ ।
ಟ್ಟಳೆ ಕಣಾ! ಜೀವರಿಗೆ ನೀನಿದ ।
ತಿಳಿಯೆ ಕಂಡಪೆ ಕಡೆಗೆ ದೇಹಾಂತರದೊಳೆನ್ನೆಂದ ॥೩೬॥

ಎನುತ ಗದೆಗೊಂಡಾರ್ದ ರಾಕ್ಷಸ ।
ಜನಪನಿದಿರಿಗೆ ನಡೆಯೆ ಸಚಿವರು ।
ತನತನಗೆ ಸಾಗಿದರು ನೀಗಿದರಧಿಕಪೌರುಷವ ॥
ಮುನಿದು ಮೇಲ್ವಾಯ್ದೆಱಗಿದನು ಸುರ ।
ಜನವಿರೋಧಿಯ ವಕ್ಷವನು ಖಳಗಿ ।
ನ್ನೆನಿತು ಸತ್ವವೊ ಗದೆಯ ಗಾಯವನಱಿದನಿಲ್ಲೆಂದ ॥೩೭॥

ಜಾಱಿದುದು ಗದೆಯೆನುತ ಚಾಪದೊ।
ಳೇಱಿಸಿದನಂಬುಗಳ ಬೆಂಬಳಿ।
ಹಾಱಿಸಿದನಸುರೇಂದ್ರನಿದಿರಿನೊಳಾಧನೇಶ್ವರನು ॥
ತೋಱಿದನಲಾ ಪೌರುಷವನಿ।
ನ್ನಾಱೆವಗ್ರಜಗೆನುತ ರಣದಲಿ।
ವಿಾಱಿದುದ್ರೇಕದಲಿ ನುಡಿಸಿದನಾಧನೇಶ್ವರನ ॥ ೩೮ ॥

ಅಂಜುವೆವು ನಿಮಗಾವಕಟ! ಮೃ।
ತ್ಯುಂಜಯನ ಸಖರೆಂದು ನೀತಿಯು।
ರಂಜಕರು ಗಡ! ನೀವು ದುರ್ಮಾರ್ಗಿಗಳು ನಾವು ಗಡ ॥
ಭಂಜಿಪರು ಸುರರೆನುತೆವಗೆ ಮನ।
ವಂಜುವುದು ನೀವವರ ದೆಸೆ ದಿಟ।
ವಂಜಿರೆವಗಿನ್ನೆಂದೆನುತ ಖಳನುಬ್ಬಿ ಬೊಬ್ಬಿಱಿದ ॥ ೩೯ ॥

ಬಿಗಿದು ಚಾಪದ ತಿರುವನಿಷುಗಳ।
ನುಗುಳಿಸಿದನಸುರೇಂದ್ರನಾಕಣೆ।
ಬಗಿದು ಹೊಕ್ಕವು ಮುಕ್ಕರಿಕೆ ಧನಪತಿಯು ಸಮ್ಮುಖಕೆ ॥
ಬಗೆಯದದನನುಕರಿಸಿ ಧನಪತಿ।
ಯುಗಣಿತಾಸ್ತ್ರವ ಸುರಿಯೆ ಖಂಡಿಸಿ।
ವಿಗಡರಕ್ಕಸನೆಚ್ಚು ಮುಂಗಿಡಿಸಿದನು ಧನಪತಿಯ ॥ ೪೦ ॥

ಆತನಾಗ್ನೇಯಾಸ್ತ್ರದಿಂದಿವ।
ನೀತನೆಚ್ಚನು ವಾರುಣವ ಬಳಿ।
ಕಾತನೆಚ್ಚನು ತಿಮಿರಫಣಿಪರ್ವತ ಘನಾಸ್ತ್ರದಲಿ ॥
ಈತನೆಚ್ಚನು ಸೌರಗಾರುಡ।
ಶಾತಮನ್ಯು ಸಮಾರ ಶರಸಂ।
ಘಾತದಲಿ ಸರಿಮಿಗಿಲೊಳೆಚ್ಚಾಡಿದರು ಸಮರದಲಿ ॥ ೪೧ ॥

ಬಳಿಕ ರಾಕ್ಷಸ ಮಾಯೆಯಲಿ ಮೆ।
ಗ್ಗಳಿಸುತಭಿಮುಖನಾದ ಧನದನ।
ನಳುಕಿಸಿದನೊಳಹೊಕ್ಕು ಹೊಯ್ದನು ಘೋರಪರಿಘದಲಿ ॥
ಕಳವಳಿಸಿದುವು ಕರಣತತಿಯು।
ಚ್ಛಳಿಪ ನೆತ್ತರ ಧಾರೆಯಲಿ ನನೆ।
ದಿಳೆಯೊಳೊಱಗಿದನಾಧನೇಶ್ವರನಧಿಕಮೂರ್ಛೆಯಲಿ ॥ ೪೨ ॥

ನೊಂದನೈ ವೈಶ್ರವಣನೆನುತ್ತೆ ।
ತಂದು ಪದ್ಮಪ್ರಭೃತಿನಿಧಿಗಳು ।
ನಂದನಕೆ ಕೊಂಡುಯ್ಯಲಾಕ್ಷಣ ಚೈತ್ರರಥವೆನಿಪ ॥
ಮಂದಮತಿ ದಶವದನನಾತನ ।
ಮುಂದೆಸೆವ ಪುಷ್ಪಕವ ಬೇಱ್ಕೊಂ ।
ಡಂದದಲಿ ಬೊಬ್ಬಿಱಿದು ಪೂರ್ವಾಶಾಭಿಮುಖನಾದ ॥ ೪೩ ॥

ಆವಿಮಾನದ ನೀಲಶೋಣ ।
ಗ್ರಾವಭೂರಿಸ್ತಂಭ ಶೋಭೆಯು ।
ನಾವಿಮಲವೈಡೂರ್ಯವಜ್ರವಿಮಾನ ಕುಟ್ಟಿಮವ ॥
ತೀವಿದುತ್ತಮ ಕನಕಭಿತ್ತಿಯು ।
ಲೋವೆಗಳ ಮುಕ್ತಾವಿತಾನವ ।
ಭಾವಿಸುತ ತಲೆದೂಗುತ್ತೈದಿದನಭ್ರಮಾರ್ಗದಲಿ ॥೪೪॥

ಕಂಡನೈ ಕಾಂಚನಸರೋರುಹ ।
ಷಂಡಮಯ ಶರವಣನಿಕಟದು ।
ದ್ದಂಡಕಾಂಡದ್ರುಮನಿಕುಂಜಲತಾನಿಕೇತನವ ॥
ತಂಡತಂಡದ ಯಕ್ಷಜನದೆಳ ।
ವೆಂಡಿರಕ್ಷಿವಳರ್ಕ್ಷಶೋಭಾ ।
ಮಂಡಲವ ಕೈಲಾಸಶೈಲವನಾದಶಗ್ರೀವ ॥ ೪೫ ॥

ಪೇಟಲೇನಾರಜತಶೈಲದ ।
ಮೇಲೆ ನಡೆಯದೆ ವರವಿಮಾನದ ।
ಲೀಲೆ ನಿಂದುದು ದಶಶಿರನ ಭುಜಶೌರ್ಯ ನಿಲುವಂತೆ ॥
ಕಾಲಗತಿಯೋ ಗತಿಯುಡುಗಿತೀ ।
ಶೈಲದಗ್ರದೊಳೀವಿಮಾನಕೆ ।
ಲೋಲಮತಿ ಮಾರೀಚ ಹೇೞೆನಲಾತನಿಂತೆಂದ ॥ ೪೬ ॥

ಆದೊಡಿದು ವೈಶ್ರವಣಗಲ್ಲದೆ ।
ಮೇದಿನಿಯೊಳನ್ಯರಿಗೆ ನಡೆಯದು ।
ಕಾದಿ ಗೆಲಿದೀಱ್ಕೊಂಡೆನೈ ಸಲೆ ತಥ್ಯವಿದನೆನಲು ॥
ಆದರಿಸು ದಶವದನ ಹಿಮ್ಮೆ ।
ಟ್ಟೇಘರಾಧರದೊಳು ಕಪರ್ದಿ ವಿ ।
ನೋದಿಸುತ್ತಿಹನೆಂದು ನಂದೀಶ್ವರ ನಿರೂಪಿಸಿದ ॥ ೪೭ ॥

ಈ ಮಹೀಧರದಗ್ರದೊಳು ಸು।
ತ್ರಾಮಪರಮೇಷ್ಠಿಪ್ರಭೃತಿ ಸುರ।
ತಾಮಸೀಚರಯಕ್ಷಕಿನ್ನರಕಿಂಪುರುಷರೆನಿಪ॥
ಕಾಮಗಾಮಿಗಳೈದಲಸದಳ।
ವೈ ಮಹಾದೇವಪ್ರಭಾವದ।
ಸೀಮೆಯಲಿ ಹಿಮ್ಮೆಟ್ಟು ಕೆಡಬೇಡಖಿಯೆ ನೀನೆಂದ ॥ ೪೮ ॥

ಎಂದ ಶಂಕರನಪರರೂಪಿನ।
ನಂದಿಕೇಶನ ಮೊಗವನೀಕ್ಷಿಸಿ।
ಮಂದಹಾಸವ ಸೂಸಿದನು ವಾನರಮುಖಾಕೃತಿಗೆ॥
ಮಂದಮತಿ ದಶಮುಖನದಕೆ ಕಡು।
ನೊಂದು ನಂದೀಶ್ವರನು ಬಱಿಕಿಂ।
ತೆಂದು ನುಡಿದನು ಕುಟಿಲಮತಿಗತಿರೋಷಮುಖನಾಗಿ ॥ ೪೯ ॥

ಏನು ದಶಮುಖ ನಿನ್ನ ಶೌರ್ಯವ।
ದೇನು ಕೊಲಲೆನಗರಿದೆ ದುಷ್ಕೃತ।
ತಾನೆ ಮಾಱ್ಪುದು ಕುಲವಿನಾಶವ ನಿನಗೆ ಸತ್ಯವಿದು॥
ವಾನರರು ಸದ್ವೀರ್ಯಸಂಭವ।
ರೇ ನಿಶಾಚರ ನಿನ್ನ ಕೊಂದಪ।
ರೇನು ಕೊಱತೆ ಮದಾಸ್ಯದೊಳು ದುಷ್ಟಾತ್ಮ ಹೋಗೆಂದ ॥ ೫೦ ॥

ಬಗೆವನೇ ಖಳನಾನುಡಿಯನೀ।
ನಗವನುನ್ಮೂಲಿಪೆನು ಶಿವಗಡ।
ತಗಹಹುದು ತನಗೆನುತ ಶೈಲನಿತಂಬಕೈತಂದು॥
ವಿಗಡರಕ್ಕಸನಾಹರಾದ್ರಿಯ।
ಬಿಗಿದನೈ ಭುಜಗಳಲಿ ಫಣಿಪತಿ।
ಬಿಗಿದವೊಲು ಮಂದರವನಂದಂಭೋಧಿಮಥನದಲಿ ॥ ೫೧ ॥

ಘೀಳಿಡಲು ದಿಗ್ಗಜಗಳಹಿಪನ।
ಮೌಳಿ ಕುಸಿಯಲು ಕುಲಶಿಲೋಚ್ಚಯ।
ದೋಳಿಗಳ ಬೆಸುಗೆಗಳು ಬಿಡಲೊಡಗಲಸಲಬ್ಧಿಚಯ॥
ಮೇಲು ಜಗವಲ್ಲಾಡೆ ಭೂತಳ।
ವಾಟಲತಳಕೆ ಬಿರಿಯೆ ದಿಕ್ಕಿನ।
ಮೂಲೆಗಳು ಕಿತ್ತೆತ್ತಿದನು ಕೈಲಾಸಪರ್ವತವ ॥ ೫೨ ॥

ತೋಳ ಬಲುಹಿನ್ನೆಂತೊ ಖಳನು ।
ನ್ಮೀಲಿಸಲು ಫುಟನೆಗೆದುದಾನಗ ।
ವಾಳುತನದಾಳಾಪದಧಟಿಗೆ ನಡುಗಿತಖಿಳ ಜನ ॥
ಶೈಲಸುತೆ ಬಿಗಿಯಪ್ಪಿದಳು ಶಶಿ ।
ಮೌಳಿಯನು ಶಿವನಱಿದು ಮೆಲ್ಲನೆ ।
ಲೀಲೆಯಿಂದೊತ್ತಿದನು ಚರಣಾಂಗುಷ್ಠದಲಿ ನಗವ ॥೫೩॥

ಎತ್ತುವನು ದಶಮೌಳಿ ಮಗುಳದ ।
ನೊತ್ತುವನು ಶಶಿಮೌಳಿ ಬಿಡದೊಲಿ ।
ದೆತ್ತುವನು ದಶಕಂಠನೊಡನೊತ್ತುವನು ಶಿತಿಕಂಠ ॥
ಎತ್ತುವನು ದನುಜೇಶನೊಡನದ ।
ನೊತ್ತುವನು ಪರಮೇಶ ನಗವೆಸೆ ।
ದತ್ತು ಧರಣೀದೇವಿ ತಿಱುಕಲ್ಲಾಡುವಂದದಲಿ ॥೫೪॥

ಸಿಕ್ಕಿದುವು ಗಿರಿಮೂಲದಿಱುಬೊಳು ।
ರಕ್ಕಸನ ನಿಡುದೋಳ್ಗಳಾದೊರ್ಗಳ ।
ಹೊಕ್ಕು ಬಲಿದೆತ್ತಿದೊಡೆ ಪುರಹರನೊತ್ತೆ ಖಾತಿಯಲಿ ॥
ಕೆಕ್ಕಳಿಸಿದುದು ಧೃತಿ ಮನೋವ್ಯಥೆ ।
ಗಿಕ್ಕೆಯಾದುದು ಮತಿಯೊರಲ್ದನು ।
ಬಿಕ್ಕನಿಳೆ ಬಿರಿವಂತೆ ದಶಮುಖನಧಿಕರಾವದಲಿ ॥೫೫॥

ಏನಿದದ್ಭುತರಭಸ ಜಗದವ ।
ಸಾನಸಮಯವಿದೆಂದು ನಡುಗಿತು ।
ಮಾನವಾಮರನಾಗಲೋಕಗಳಸುರನಬ್ಬರಕೆ ॥
ಆನಿರೋಧವ ಕಂಡು ಸಚಿವರು ।
ದಾನವಂಗಱುಹಿದರು ಭಜಿಸು ಭ ।
ವಾನಿಯರಸನನಖಿಲನಿಯಮಂಗಳಲಿ ನೀನೆನುತ ॥೫೬॥

ಅಹುದು ಮತ್ತೇನೆನುತ ದೇವ ।
ದ್ರುಹನಧಿಕ ಸಾಮಸ್ವರಂಗಳ ।
ಬಹುವಿಧದ ಗಾನಂಗಳಲಿ ಮೆಚ್ಚಿಸಿದನೀಶ್ವರನ ॥
ಬಹುದಿವಸ ಪರಿಯಂತ, ಪಾರ್ವತಿ ।
ಸಹಿತ ಬಂದನು ಶಂಭು ಶೈಲೋ ।
ದ್ವಹನಸಹನಶಾಂತನನು ಕೃಪೆಯಿಂದ ಮನ್ನಿಸಿಗ ॥೫೭॥

ಮೆಚ್ಚಿದೆನು ದಶವದನ ನಿನ್ನಯ ।
ನಿಚ್ಚಟದ ಭುಜಬಲಕೆ ರವದಲಿ ।
ಬೆಚ್ಚಿಸಿದೆ ಮೂಲೋಕವನು ನಿನಗದಱ ದೆಸೆಯಿಂದ ॥
ನಿಚ್ಚದೊಳು ರಾವಣನೆನಿಪ ಪೆಸ ।
ರಚ್ಚರಿಯೊಳಿದು ಮೊದಲು ನಿನಗಿಂ ।
ನಿಚ್ಚೆಯಾವುದು ಮಾರ್ಗ ಹೋಗೆಂದನು ಪುರಧ್ವಂಸಿ ॥೫೮॥

ಎನೆ ನಿಶಾಚರನೀಶ್ವರನ ಮನ ।
ದನುವನಱಿದೆಲೆ ದೇವ ಮೆಚ್ಚಿದೊ ।
ಡೆನಗೆ ಕೊಡು ಕಾಮಿತವನೀಹೆಸರಿಂದಲೇನಹುದು ॥
ವನಜಭವನಿತ್ತಾಯುಷದ ಬಗೆ ।
ಯೆನಿತನಿತು ಬಲುಹಾಗಿ ನೆರೆದಿರ ।
ಲೆನಗೆ ಕೊಡು ಖಡ್ಗವನಪೂರ್ವವನೆನುತ ಕೈಮುಗಿದ ॥೫೯॥

ಆದೊಡೊಳ್ಳಿತ್ತೆನುತ ಖಡ್ಗವ ।
ನಾದಯಾಂಬುಧಿ ಚಂದ್ರಹಾಸವ ।
ನಾದರದೊಳಿತ್ತದಱ ಮಹಿಮೆಯನೊರೆದೊಡಿರನೆನುತ ॥ ?
ಆದನುಜಗೊರೆದಾಯುಷದ ಮರಿ ।
ಯಾದೆ ಸುಕೃತದ ಮೈವಳಿಯೆನು ।
ತ್ತೈದಿದನು ಪರಮೇಶನಂತರ್ಧಾನರೂಪದಲಿ ॥೬೦॥

ಅಕ್ಷಯಾತ್ಮ ವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಃ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷ ಸುರಮುನಿರಕ್ಷ ಸುಜನಾ ।
ಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥೬೧॥

ಇಂತು ಐದನೆಯ ಸಂಧಿ ಸಂಪೂರ್ಣಂ.

---

## ಆಱನೆಯ ಸಂಧಿ.

---

ಸೂಚನೆ :— ಮೇದಿನಿಯೊಳತಿಬಲ ಸನಾಥರ ।
ಮೇದಿನೀಶರ [ಮುರಿದು] ತಳೆದನು ।
ವೇದವತಿ ಮುಳಿದಿತ್ತ ಶಾಪವನಾದಶಗ್ರೀವ ॥

ಕೇಳು ರಘುರಾಜೇಂದ್ರ ಲಂಕಾ ।
ಪಾಳನಾಕೈಲಾಸವಾಸಿಯು ।
ಬೀಳುಕೊಂಡಱಿಸಿದನು ಭುಜಬಲಯುತ ಮಹೀಶ್ವರರ ।
ಪೇಳಲೇನಱಿಯಟ್ಟಿ ಸದೆದನು ।
ತೋಳಬಲರನು ಕುಱಿಯ ಹಿಂಡಿನ ।
ತೋಳನೋ ದಶಮೌಳಿಯೋ ನಾನಱಿಯೆನಗನೆಂದ ॥೧॥

ಇಂತು ರಾವಣನಖಿಳ ಪೃಥ್ವೀ ।
ಕಾಂತ ವಿಜಯೋತ್ಸಾಹ ಶೌರ್ಯಕೃ ।
ತಾಂತನೈದಿದನೈ ಹಿಮಾದ್ರಿನಿತಂಬ ಕಾನನವ ॥
ಕಂತು ಕಾಂತಾರೂಪನಾಂತೆಸೆ ।
ವಂತೆ ಕೃಷ್ಣಾಜಿನ ಜಟಾಧರೆ ।
ಕಾಂತೆಯೊರ್ವಳು ತಪವಿರಲು ಕಂಡನು ದಶಗ್ರೀವ ॥೨॥

ಏನಿದಚ್ಚರಿಯೆನುತ ನಿರ್ಜನ ।
ಕಾನನದೊಳಿಹ ವಧುವನೀಕ್ಷಿಸಿ ।
ದಾನವೇಶ್ವರನುಚಿತದಲಿ ನುಡಿಸಿದನು ಮನವಳುಪಿ ॥
ಏನಿದದ್ಭುತವಬಲೆ ನೀನೀ ।
ಕಾನನದ ಮಧ್ಯದಲಿ ತಪವಿರ ।
ಲೇನು ನೀನಾರೆಂಬುದನು ತನಗಱುಹಬೇಕೆಂದ ॥೩॥

ಆದೊಡಾಲಿಸೆನುತ್ತ ಮಾಡಿದ ।
ಳಾದನುಜಗಾತಿಥ್ಯಪೂಜೆಯ ।
ನಾದರದೊಳೆಂದಳು ಬೃಹಸ್ಪತಿಯಾತ್ಮಭವನೆನಿಪ ।
ಮೇದಿನೀಸುರನಹ ಕುಶಧ್ವಜ ।
ನೋಡೆ ವೇದದೊಳುದ್ಭವಿಸಿದೆನು ।
ವೇದವತಿ [illegible] ॥೪॥

ಈಪರಿಯ ಹೆಸರಿಟ್ಟು ಸಲಹಿದ ।
ನೈ ಪಿತನು ಮಜ್ಜನಕನಲ್ಲಿಗೆ ।
ತಾಪಸಾಮರಯಕ್ಷಕಿನ್ನರಕಿಂಪುರುಷರೆಸಿಪ ॥
ರೂಪಯುತರೈತಂದು ಬೇಡಲು ।
ಕೋಪಿಸುವನೆನ್ನನು ಕೊಡದೆ ಬೞಿ ।
ಕಾಪರಮಮುನಿ ತನಗೆ ಹರಿ ಜಾಮಾತನೆಂದೆನುತ ॥೫॥

ಈಮಗಳಿಗಧಿನಾಥನಚ್ಯುತ ।
ನಾಮುಕುಂದಂಗಲ್ಲದುೞಿದೀ ।
ಭೂಮಿಯೊಳಗಿಹ ಪುರುಷರಿಗೆ ಕೊಡೆನೀವಧುವನೆನುತ ॥
ನೇಮದಿಂದಿರೆ ಶಂಭುವೆಂಬ ಸ ।
ನಾಮ ರಾಕ್ಷಸರಾಜನೈತಂ ।
ದಾಮಹೀಸುರವರನ ವಧಿಸಿದನೆನ್ನ ಕೊಡದಿರಲು ॥೬॥

ತಾತನೞಿದನು ಮಡಿದಳೆನ್ನಯ ।
ಮಾತೆ ಸಹಗಮನದಲಿ ಪತಿಯೊಡ ।
ನೇತೆಱದೊಳಿರ್ದಪೆನು ನಿಜಪಿತೃಮಾತೃಗಳನುೞಿದು ॥
ಪ್ರೇತಕರ್ಮವನೆಸಗಿದೆನು ವಿ ।
ಖ್ಯಾತಸೂಕ್ತೋಕ್ತಿಯಲಿ ತಂದೆಯ ।
ಮಾತ ಸಲಿಸುವೆನೆಂದು ತಪವಿಹೆನೆಂದಳಿಂದುಮುಖಿ ॥೭॥

ಪತಿ ಕಣಾ! ಶ್ರೀಪತಿಯನೇ ವಿ ।
ಶ್ರುತದ ತಪದಲಿ ಮೆಚ್ಚಿಪೆನು ಶಾ ।
ಶ್ವತಸನೆಲೆ ಪೌಲಸ್ತ್ಯನಂದನ ಪೋಗು ನೀನೆನಲು ॥
ಅತಿವಿರುದ್ಧವಿದಬಲೆ ಯೌವನ ।
ಯುತೆಗೆ ರೂಪಾನ್ವಿತೆಗೆ ಗುಣಸಂ ।
ಯುತೆಗೆ ತಪದಾಯಾಸವಿಂತಿದು ಕಷ್ಟವಲೆಯೆಂದ ॥೮॥

ಎತ್ತಣಚ್ಯುತನಕಟ! ವಿಪಿನವಿ ।
ದೆತ್ತಣದು! ನಿನಗೇಕೆ ತಪವಿದು ।
ಹೊತ್ತುಗಳೆಯದೆ ಸೂಸು ತರುಣಿ ಕಟಾಕ್ಷಚಂದ್ರಿಕೆಯ ॥
ಬಿತ್ತರಿಪೊಡಾನಬಲೆ ಲಂಕಾ ।
ಪತ್ತನ ಪ್ರಭುವೆನಲು ಸತಿ ಮುಳಿ ।
ಸೊತ್ತರಿಸೆ ಪೋಗದಿರುತಿರೆ ಮುಂದಲೆವಿಡಿಗನಮರಾರಿ ॥೯॥

ಮುಂಡೆವಿಡಿದನೆನುತ್ತೆ ಕೇಶವ ।
ಖಂಡಿಸಿದಳ್ಳೆ ರಭಸದೊಳು ಕೈ ।
ಖಂಡೆಯುದೊಳಾದುದು ಕಣಾ! ತಪವೆಂತೊ ಭಾವಿನಿಯು ॥
ಚಂಡಕೋಪಜ್ವಾಲೆಯುರಿದುದು ।
ಮಂಡಲಾಕೃತಿಯಿಂದ ಖಳನದ ।
ಕಂಡು ಪಿಮ್ಮೆಟ್ಟಿದನು ಮುನಿದಿಂತೆಂದಳಾವನಿತೆ ॥೧೦॥

ಎಲವೊ ಖಳ ಪಾಪಾತ್ಮ ನಿನ್ನನು ।
ಕೊಲುವುದೇನರಿದಲ್ಲ ತಪ ನಿ ।
ಷ್ಫಲ ಕಣಾ! ಸ್ತ್ರೀ ಪುರುಷನನು ಮುಟ್ಟಲು ನಿಷೇಧವಿದು ॥
ಕೊಲಿಸುವೆನು ಜನನಾಂತರದೊಳೆಲೆ ।
ಹೊಲೆಯ ನಿನ್ನನು ಹರಿಯು ದೆಸೆಯಿಂ ।
ದ್ಬಲಿಪೆನೇ ನೀಂ ಮುಟ್ಟಲೆಂದಡಗಿದಳು ಶಿಖಿಯೊಳಗೆ ॥೧೧॥

ಉರಿಯೊಳಡಗಿದಳಬಲೆ ಹೂವಿನ ।
ಸರಿಯು ಸುರಿದರು ಸುರರು ದಶಕಂ ।
ಧರವಿನಾಶೋದ್ಯೋಗದಲಿ ಹೆಚ್ಚಿದುದು ನಿಖಿಳಜನ ॥
ಅರಸ ಕೇಳಾಲಲನೆಯೇ ನಿ ।
ನ್ನರಸಿ ಜಾನಕಿ ನೀನೆ ಹರಿ ವಿ ।
ಸ್ತರಿಸಲಳವೇ ಕಾರ್ಯಸೂಚಕವೆಂದನಾ ಮುನಿಪ ॥೧೨॥

ಆದಿಯಲಿ ದಶಮುಖವಿರೋಧದೊ ।
ಳಾದಹಸಮುಖದಲಿ ಶರೀರವ ।
ನೈದಿಸಿದ ದೂಸಱೊಳಯೋನಿಜೆಯಾಗಿ ವೇದವತಿ ॥
ಮೇದಿನಿಯೊಳುದ್ಭವಿಸಿ ಜಾನಕಿ ।
ಯಾದಳ್ಳೆ ನಿನ್ನಿಂದ ಕೊಲಿಸಿದ ।
ಳಾ ದಶಾಸ್ಯನನಾದಿನಾರಾಯಣನು ನೀನೆಂದ ॥೧೩॥

ಆ ನಿಶಾಚರನೆಣಿಸುವನೆ ವರ ।
ದಾನಬಲದೊಳಗಾಕೆ ನುಡಿದುದ ।
ನೇನನೆಂದಪೆನಱಿಸಿ ಕೊಂದನು ಸಕಲ ಭೂಮಿಪರ ॥
ಆನಲಮ್ಮದೆ ಸೋತೆನೆಂದೆನೆ ।
ದಾನವೇಶ್ವರನಿಳೆಗೆ ತನ್ನಭಿ ।
ಧಾನವನು ಕೇಳಿದನು ಜಯುದುಬ್ಬರನ ಜೊಬ್ಬಿಯಲಿ ॥೧೪॥

ರಾಮ ಕೇಳು ಮರುತ್ತನೆನಿಪ ಮ ।
ಹಾಮಹೀಪತಿ ಮಾಡುತಿರ್ದನ ।
ಲೈ ಮಹಾ ಮಾಹೇಶ್ವರ ಕ್ರತುವನು ವಿಧಾನದಲಿ ॥
ಆ ಮಖಕೆ ಸಂವರ್ತನಧ್ವರಿ ।
ಯಾಮರೀಜ್ಯಾದಿಗಳು ಋತ್ವಿಜ ।
ರೈ ಮರುದ್ಗಣವಿರ್ದುದಿಂದ್ರಾದಿಗಳ ಗಡಣದಲಿ ॥೧೫॥

ಆಗ ಸದ್ಗತಿಯಲಿ ಮರುತ್ತನ ।
ಯಾಗಭೂಮಿಯನೈದಿದನು, ಶತ ।
ಯಾಗಮುಖ್ಯಾಮರರು ಕಂಡರು ರಾವಣಾಸುರನ ॥
ಮೈಗರೆದು ನವಿಲಾದನಿಂದ್ರನು ।
ಕಾಗೆಯಾದನು ಯಮನು ಉದಧಿಪ ।
ನಾಗೆ ಹಂಸೆ ಧನಾಧಿಪತಿ ಕೃಕಲಾಸರೂಪಾದ ॥೧೬॥

ಈತೆಱದೊಳಪ್ಸರರು ತಿರ್ಯ ।
ಗ್ಜಾತಿಯಲಿ ಮೆಯ್ಗರೆಯೆ ಹೊಕ್ಕನು ।
ಯಾತುಧಾನಶ್ವಾಸನಾನೃಪವರಮಖಾಲಯವ ॥
ಭೀತಿಯಿಂದೋಡಿದುದು ಮುನಿಸಂ ।
ಘಾತವಱಿಯಟ್ಟಿದನು ತಿಂದನು ।
ಪಾತಕನು ಭೂಸುರಸಮಾಜವನೊಂದೆ ನಿಮಿಷದಲಿ ॥೧೭॥

ಓಡಿದರು ದೆಸೆದೆಸೆಗೆ ಮುನಿಗಳು ।
ಪಾಡೞಿದುದಾಸಭೆ ನಿಶಾಚರ ।
ನಾಡಿದನು ನಿಜನಾಮಧೇಯವನಾಮರುತ್ತನೊಳು ॥
ಮಾಡು ಸಮರವನೆನ್ನೊಳಲ್ಲದೊ ।
ಡೋಡು ಸೋತೆನೆನುತ್ತ ಕೊಲೆನೆಂ ।
ದಾಡೆ ಮುಳಿಸೊತ್ತರಿಸಿ ಬೞಿಕ ಮರುತ್ತನಿಂತೆಂದ ॥೧೮॥

ಎಲವೊ ನೀನಾರೆಂದೆನುತ ಬೆಸ ।
ಗೊಳೆ ಧನೇಶನ ಸೋದರನು ದಶ ।
ಗಳನು ಧನಪನ ಗೆಲಿದೆನೀಱಿಕೊಂಡೆನು ವಿಮಾನವನು ॥
ಇಳೆಯೊಳೆನ್ನಯ ಹೆಸರನಱಿಯದ ।
ರೊಳರೆ ಕಂಡೆನಪೂರ್ವವನು ನಿ ।
ನ್ನೊಳಗೆನುತ ಕೈವೊಯ್ದು ನಕ್ಕನು ದನುಜನಾನೃಪನ ॥೧೯॥

ಆದೊಡೊಳ್ಳಿದನಹುದು ಜಯಿಸಿದೆ ।
ಸೋದರನ ಮತ್ತೇನು ಧರ್ಮದ ।
ಹಾದಿದಪ್ಪದೆ ನಡೆವೆ ಕಂಡೆವು ಕೌತುಕವನಿದನು ॥
ವೇದಶಾಸ್ತ್ರಾಗಮಗತಿಗೆ ದು ।
ರ್ಭೇದ ನಿನ್ನ ಚರಿತ್ರವಾದೊಡೆ ।
ಕಾದಿದಪೆನೇಱೆಂದು ಸಮರೋದ್ಯೋಗಮನನಾದ ॥ ೨೦ ॥

ಎಲವೊ ರಕ್ಕಸ ನಿನಗೆ ಸಮರದೊ ।
ಳಳುಕಿದೊಡೆ ನಗದಿಹುದೆ ಜಗವೆ ।
ನ್ನಳವ ನೋಡೆನುತೆದ್ದು ಚಾಪವ ಜಿಗಿದು ಜೇವೊಡೆದು ॥
ಕಲಿತನದೊಳಿದಿರಾಗೆ ಕಂಡಾ ।
ಗಳೆ ಬೃಹಸ್ಪತಿಯನುಜನಾದ ।
ಗ್ಗಳದ ಸಂವರ್ತಕನು ತಡೆದಿಂತೆಂದನಾನೃಪಗೆ ॥ ೨೧ ॥

ಈ ನಿಶಾಚರನೞಿವನೇ ವರ ।
ದಾನಬಲದಲಿ ನಿನಗೆ ರಣದಲಿ ।
ಹಾನಿ ತಪ್ಪದು ಬಿಸುಡು ಚಾಪವ ಸೋತೆನೆಂದುಸಿರು ॥
ನೀನಱಿಯೆ ಮಾಹೇಶ್ವರ ಕ್ರತು ।
ಹೀನವಾದೊಡೆ ಕುಲಕೆ ತಾನೆ ಕೃ ।
ಶಾನುವಹುದಱಿಯದಿರು ಸುಕೃತವನರಸ ಕೇಳೆಂದ ॥ ೨೨ ॥

ಎನಲು ಚಾಪವ ಬಿಸುಟು ಸೋತೆನು ।
ನಿನಗೆ ಸಮರದೊಳೆನಲು ನೃಪನಾ ।
ದನುಜಪತಿ ನಿಜನಾಮವನು ಕೇಳಿಸಿದನೀಜಗಕೆ ॥
ಎನಿತು ಸಾಹಸಿಯೋ ನಿಶಾಚರ ।
ಜನಪನತಿಹಾಸೋಕ್ತಿಯಲಿ ತ ।
ಜ್ಜನಪತಿಯನುೞಿದಱಸುತ್ತೈದಿದನಿಳೆಯೊಳತಿಬಲರ ॥ ೨೩ ॥

ಹೋದನತ್ತಲು ದನುಜನಾನೃಪ ।
ನಾದರಿಸೆ ಮಗುಳ್ದೈದಿದುದು ಸುರ ।
ಮೇದಿನೀಸುರಜಾಲವಾನೃಪಯಾಗಮಂಟಪಕೆ ॥
ಹೋದುದೊಂದಪಮೃತ್ಯುವೆಮಗೆಂ ।
ದಾದಿನಿಜರತಿಮುದದೊಳಿರೆ ಬಲ !
ಸೂದನಾದಿ ದಿಗೀಶರೆಸೆದರು ಮುನ್ನಿನಂದದಲಿ ॥ ೨೪ ॥

ಎಲೆ ಮಯೂರ ತವಾಕೃತಿಯೊಳಾ ।
ನುಱಿದೆನದಱಿಂದೆನ್ನ ದಶಶತ ।
ವಿಲಸದಕ್ಷಿಗಳಿರಲಿ ನಿನ್ನ ಪತತ್ರದಗ್ರದಲಿ ॥
ಬಲುಹು ನಿನಗಭ್ರಾಗಮದೊಳಾ ।
ಗಲಿ ಮದೀಯಶರಾಸನಾಕೃತಿ ।
ನೆಲಸಿರಲಿ ನಿನ್ನವಯವದೊಳೆಂದನು ಬಲಧ್ವಂಸಿ ॥೨೫॥

ಅಂದು ವಾಯಸದೊಡನೆ ಯಮನಿಂ ।
ತೆಂದನೆಲೆ ಬಲಿಭುಜ ತವಾಕೃತಿ ।
ಯಿಂದ ಕಳೆದೆನವಾಯುವನು ನಿನಗದಱ ದೆಸೆಯಿಂದ ॥
ಇಂದು ಮೊದಲಾಗಖಿಳರೋಗಗ ।
ಳಿಂದ ಮೃತ್ಯುವಿನಿಂದ ಮರಣದ ।
ದಂದುಗದ ಭಯವಿಲ್ಲೆನುತ ಮತ್ತಾಗಳೆಂತೆಂದ ॥೨೬॥

ಮರಣವಾದೊಡೆ ಜನನವಾಗಳೆ ।
ದೊರೆಕೊಳಲಿ ತನ್ನಾಜ್ಞೆಯಿದು ಬಲಿ ।
ಹರಣವನು ನಿನಗಾವವನು ಕೊಡಲವನ ಪಿತೃಗಳಿಗೆ ॥
ಹಿರಿದು ತೃಪ್ತಿಯದಾಗಿರಲಿ ಸೀ ।
ನಿರು ಚಿರಾಯುವ ಪಡೆದೆನುತ ಮನ ।
ಹರುಷದಲಿ ವರವಿತ್ತನೈ ಸುರನಿಕರ ಬೆಱಗಾಗೆ ॥೨೭॥

ವರುಣನೆಂದನು ಹಂಸೆಗೆಲೆ ಖಗ ।
ವರನೆ ನಿನ್ನಿಂದಾದುದೆನಗತಿ ।
ಹರುಷವದಱಿಂದಿನ್ನು ನಿನ್ನೀ ಮಲಿನಪಕ್ಷಗಳು ॥
ಧರಿಸಿರಲಿ ವಿಮಲತೆಯನಬ್ಧಿಯ ।
ನೊರೆಯವೊಲು ಧವಳಾಂಗನಾಗೆಂ ।
ದುರುತರಪ್ರೇಮದಲಿ ಕೊಟ್ಟನು ವರವನುಚಿತದಲಿ ॥೨೮॥

ಧನಪನೆಂದನು ಮೆಚ್ಚಿ ಕೃಕಲಾ ।
ಸನಿಗೆ ಮತ್ಕಾಂಚನಮಯೋಜ್ಜ್ವಲ ।
ತನು ನಿನಗೆ ಸಮನಿಸಲಿ ಹಿತವೆನಗಾಯ್ತು ನಿನ್ನಿಂದ ॥
ಕನಕಲೇಖಾರಾಜಿ ಶಿರದೊಳ ।
ಗನವರತ ನಿನಗಿರಲಿ ಹೋಗೆಂ ।
ದನುನಯದೊಳಾಡಿದನು ನಡೆದುದು ಯಾಗವಾನೃಪನ ॥೨೯॥

ಬಳಿಕ ರಾವಣನಖಿಳ ಪೃಥ್ವೀ ।
ವಳಯದೊಳು ತಿರುಗಿದನು ಬಲ್ಲಿದ ।
ರೊಳಗೆ ಕದನವನೆಸಗಿದನು ಮಾರ್ಕೊಂಡೊಡೊಱಸುವನು ॥
ಅಳುಕಿದೆನು ನಿನಗೆಂದೆನಲು ದೋ ।
ರ್ಬಲಯುತರು ರಾವಣನೆನಿಪ್ಪ ।
ಗ್ಗಳದ ಹೆಸರನು ಕೇಳಿದನು ಮೂಜಗಕೆ ಬೊಬ್ಬೆಯಲಿ ॥೨೦॥

ಸೋತೆನೆಂದೊಡೆ ಬಿಡುವನಲ್ಲದೆ ।
ಘಾತಿಸುವನಿಂತಱಿದುದಗಣಿತ ।
ಭೂತಳಾಧಿಪರಕಟ ಪೇಱುವೆನೇನನದ್ಭುತವ ॥
ಸೋತರೈ ದುಷ್ಯಂತ ನೃಗನು ಯ ।
ಯಾತಿ ಸುರಥ ಪುರೂರವಾದಿ ಮ ।
ಹೀತಳಾಧೀಶ್ವರರು ರಾವಣನತುಳಭುಜಬಲಕೆ ॥೨೧॥

ಆದಶಾನನನವನಿಪರನೀ ।
ಮೇದಿನಿಯೊಳಱಸುತ್ತಯೋಧ್ಯೆಯ ।
ನೈದಿದನಲ್ಲೈ ನಿಮ್ಮ ಪೂರ್ವನೃಪಾಲಪಾಲಿತದ ॥
ಆದಿಯಲಿ ನಿಮ್ಮನ್ವಯಕೆ ಹೆಸ ।
ರಾದ ನೃಪನನರಣ್ಯನಿರುತಿರ ।
ಲಾದಿವಿಜರಿಪುವೀಪುರಪ್ರಾಂತದೊಳು ಗರ್ಜಿಸಿದ ॥೨೨॥

ಸಂಗರಕೆ ನಡೆತಂದ ದಾನವ ।
ನಂಗವಣೆಯನು ಕೇಳ್ದು ನಿಜಚತು ।
ರಂಗವನು ನೆರಹಿದನು ನೃಪನಾಪುರದ ಬಾಹೆಯಲಿ ॥
ತುಂಗಭುಜಬಲ ದಿತಿಸುತನ ರಣ ।
ರಂಗದೊಳು ಜೀವಿಪರೊಳರೆ ನೃಪ ।
ಸಂಗದಲಿ ನಡೆತಂದನಾದನುಜೇಂದ್ರನಭಿಮುಖಕೆ ॥೨೩॥

ಏನು ನೃಪ ಸಂಗರವನೆನ್ನೊಳ ।
ಗಾನಲಾಪೆಯೊ ಸೋತೆನೆಂದನು ।
ಮಾನವಿಲ್ಲದೆ ಪೇೞ್ವೆಯೊ ಬಿಡೆನಲ್ಲದೊಡೆ ಒಱುವೆ ॥
ಏನು ನಿನ್ನಾಯವನು ಹೇಱೆನೆ ।
ಮಾನವೇಶ್ವರನಧಿಕಕೋಪದೊ ।
ಳಾನಿಶಾಟಂಗೆಂದನತಿಗಂಭೀರನಾದದಲಿ ॥೨೪॥

ಕೇಳು ಖಳ ನಿನ್ನೊಡನೆ ಸಂಗರ ।
ಕೇಳಿಗಾನಲಸಲು ಯಶಶ್ರೀ ।
ತಾಳದಿಹಳೇ ಮಲಿನತೆಯುನಿನಕುಲಜನೆಂದೆನುತ ॥
ಏಟು ಕಾಳೆಗಕೆನುತ ಸೇನಾ ।
ಜಾಳಸಹಿತಿದಿರಾಗೆ ಭೂವರ ।
ನಾಳು ಕವಿದುದು ಗಜರಥಾಶ್ವಪದಾತಿ ಸಂದಣಿಸಿ ॥೩೫॥

ಮುತ್ತಿದುದು ವಡಬಾನಲನ ಮೇ ।
ಲೊತ್ತುವಬ್ಧಿಯ ತೆರೆಯುವೊಲು ಮುಳಿ ।
ದೊತ್ತರಿಸಿದುದು ದಾನವೇಂದ್ರನ ಮೇಲೆ ಬಲಜಲಧಿ ॥
ಮತ್ತಗಜವಳುಕುವುದೆ ನೊರಜಿನ ।
ಮುತ್ತಿಗೆಗೆ ಚತುರಂಗಬಲವನು ।
ಕತ್ತರಿಸಿ ಬಿಸುಕೈದನರೆನಿಮಿಷದಲಿ ದನುಜೇಂದ್ರ ॥೩೬॥

ಪಡೆ ಮಡಿಯಲನರಣ್ಯಭೂಪತಿ ।
ಪಿಡಿದು ಚಾಪವ ತಿರುವೊಳಂಬಿನ ।
ಗಡಣಗಳ ಸುಟಿಸಿದನೆಲ್ಲೆ ದಶಶತಸಹಸ್ರಗಳ ॥
ದಡಿಗರಕ್ಕಸನೆಣಿಸುವನೆ ಕೈ ।
ಯೊಡನೆ ಮುರಿದನು ಕವಿವ ಕಣೆಗಳ ।
ಪೊಡಸಿಪನೊಳಿಂತೆಂದು ನುಡಿದನು ಕಟಕಿಯೊಳು ನಗುತ ॥೩೭॥

ಸಾಯುದಿಹರೇ ಸುರನರೋರಗ ।
ರಾಯುಗದೊಳಾಯುಗದೊಳಿವರೊಳು ।
ರಾಯ ನಿನ್ನವೊಲೆನ್ನ ರಣಕಿದಿರಾದರಿಲ್ಲ ಕಣ! ॥
ಸಾಯಲೆಳಸಿದೆಯುಕಟೆನುತ ದೈ ।
ತೇಯನನರಣ್ಯಕ್ಷಿತೀಶನ ।
ಕಾಯ ಕಂಪಿಸೆ ಕರತಳದೊಳಿಟಗಿದನು ಮಸ್ತಕವ ॥೩೮॥

ಅರಿಭಟನ ಕರಹತಿಗೆ ರಣದಲಿ ।
ತರಹರಿಸಲಱಿಯದೆ ಮಹೀಪತಿ ।
ಧರಣಿಗೊರಗಿದನಧಿಕತರ ತೇಜೋವಿಕಾರದಲಿ ॥
ಮರಳಿದುವು ಕಣ್ಣಾಲಿ ನೆತ್ತರು ।
ಸೆರೆಯೊಡೆದು ಚಿಮ್ಮಿದುದು ಧೈರ್ಯೋರ್ವಿ ।
ಸ್ಪುರುಷವೆಂತುಟೊ ! ಮರಳಿ ಮತ್ತಿಂತೆಂದನರಿಭಟನ ॥೩೯॥

ಕೇಳು ರಾವಣ ದೈವಕರ್ಮವ ।
ಕಾಲಮರಣವಿದೆನಗೆ ನಿನ್ನಯ ।
ತೋಳ ಬಲುಹೆಂದೆಂಬ ನೆವದಲಿ ತಾನೆ ಸವೆಸಿಸಿತು ॥
ಕಾಲಗತಿ ವಿಪರೀತವೃತ್ತಿಯು ।
ತಾಳಲದು ಕಡುಸಹಜವೆನ್ನೊಳು ।
ಕಾಳೆಗಕೆ ನಿನಗೇನು ಕಾರಣವಿರ್ದುದಸುರೇಂದ್ರ ॥೪೦॥

ಆದೊಡಾನೆಸಗಿದ ಸುಕರ್ಮಗ ।
ಳೈದುವೊಡೆ ಸೂರ್ಯಾನ್ವಯಾಗತ ।
ಮೇದಿನೀಶ್ವರರೊಳಗೆ ದಶರಥರಾಮನೆಂದುದಿಸಿ ॥
ಕಾದಿ ನಿನ್ನಯ ಪುತ್ರಪೌತ್ರಸ ।
ಹೋದರಾದ್ಯರು ಸಹಿತ ಕೊಲಲೆಂ ।
ದೈದಿದನು ಸುರಲೋಕವನು ನೃಪನಧಿಕತೇಜದಲಿ ॥೪೧॥

ತುಳುಕಿದರು ಸುಮನಸರು ಹೂವಿನ ।
ಮಳೆಯಾನಾಕ್ಷಣ ದೇವದುಂದುಭಿ ।
ಮೊಳಗಿದುದು ರಾವಣವಿನಾಶೋದ್ಯೋಗ ಲೇಸೆನುತ ॥
ಅಳುಕುವನೆ ಖಳನದಕೆ ನೃಪವರ ।
ನಳಿಯುಲಲ್ಲಿಂದೈದಿದನು ದೋ ।
ರ್ವಲರಸಲಸುತ ಕದನಕೇಳಿಗೆ ಮತ್ತೆ ಧರಣಿಪರ ॥೪೨॥

ಅಕ್ಷಯಾತ್ಮ ವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷ ಸುರಮುನಿರಕ್ಷ ಸುಜನಾ ।
ಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥೪೩॥

ಇಂತು ಆಜನೆಯು ಸಂಧಿ ಸಂಪೂರ್ಣಂ.



## ಎಂಟನೆಯ ಸಂಧಿ.

---

ಸೂಚನೆ-- ಕಾದಿ ಪಿತೃಪತಿಯೊಳು ರಸಾತಳ ।
ಕೈದಿ ದನುಜರ ಮುರಿದು ವರುಣಸು ।
ತಾದಿಗಳ ಗೆಲಿದಾತ್ಮಪುರಿಗೈದಿದನು ದಶಕಂಠ ॥

ಕೇಳಿದೈ ರಘುವಂಶಲಕ್ಷ್ಮೀ ।
ಲೋಲ ನಿಮ್ಮನರಣ್ಯಭೂಪತಿ ।
ಕಾಲಧರ್ಮವನೈದಿದನು ಬಳಿಕಿತ್ತಲಸುರೇಂದ್ರ ॥
ತೋಳ ತೀಟೆಯನಡಗಿಪೊಡೆ ಮನು ।
ಜಾಳಿ ನೆರೆಯದೆನುತ್ತ ದುಗುಡವ ।
ತಾಳಿ ನಡೆಯುತ ನಾರದನ ಕಂಡನು ನಭೋಗ್ರದಲಿ ॥೧॥

ವಂದಿಸಲು ಹರಸಿದನು ಮುನಿವರ ।
ನಂದು ಲಂಕಾಧಿಪ ಸುಖವೆ ನಿನ ।
ಗೆಂದು ಯೋಗಕ್ಷೇಮವನು ಕೇಳಿದನು ವಿನಯದಲಿ ॥
ಇಂದು ನಿನ್ನಯ ಶೌರ್ಯದುರಿಯೊಳು ।
ಬೆಂದುದೈ ಭೂಲೋಕವಿದಕಿ ।
ನ್ನೊಂದನುಸಿರುವೆನಾಲಿಪೊಡೆ ಪರಮಾರ್ಥಪದ್ಧತಿಯ ॥ ॥೨॥

ಎಲೆ ನಿಶಾಚರರಾಜ ಮರ್ತ್ಯರ ।
ಕೊಲೆ ನಿನಗೆ ಪಿರಿದಲ್ಲ ನಿನ್ನಯ ।
ಕಲಹವನು ಕೈಗಟ್ಟಿ ಕಾದುವರುಂಟೆ ಮನುಜರಲಿ ॥
ಬಲುಹು ಮೆಱೆವುದೆ ನಿನಗೆ ಕೇಳ್ವೊಡೆ ।
ತಿಳುಹಿದಪೆನೆನೆ ದನುಜನೆಲೆ ಮುನಿ ।
ತಿಲಕ ಹೇಳೆಂದೆನಲು ನಾರದನಾಗಳಿಂತೆಂದ ॥೩॥

ಆದೊಡೆಲೆ ದನುಜೇಂದ್ರ ಮನುಜರ ।
ಕಾದಿ ಕೊಲುವೊಡಿದೇನು! ಮರಣವ ।
ನೈದುವರು ಬಳಿಕಲ್ಪಕಾಲಕೆ ಮೃತ್ಯುವಶರಾಗಿ ॥
ಹೋದ ಹೊಲಬಿನಿತಿರಲು ಸುರಧನು ।
ವೈದೆಗೆದ ಮರಿಯಾದೆ ಹರುಷವಿ ।
ಸಾಗದೊಳು ಮುಳುಗಿಹರು ಕರ್ಮದ ಬಗೆಯ ಭಾವಿಸದೆ ॥೪॥

ಕೆಲರು ತೂರ್ಯತ್ರಯಸಭಾರ್ಣವ।
ದೊಳಗೆ ಮುಳುಗಿಹರರೆಬರಡೆಗೆಡೆ।
ದಳುತಿಹರು ಪಿತೃಮಾತೃಪತಿಸತಿಸುತವಿಯೋಗದಲಿ॥
ಕೆಲಕೆಲರು ತೃಷೆಹಸಿವುರುಜೆಗಳೊ।
ಳಱಿಯುತಿಹರೈ ನಿನ್ನ ದೆಸೆಯಿಂ।
ದಱವುದೇನುಱಿದಿರ್ಪುದಾವುದು ಹೇಳು ನೀನೆಂದ ॥೫॥

ಎಲೆ ಮುನಿಪ ನೀವೆಂದವೊಲು ನರ।
ರಳವದೇನತ್ಯಲ್ಪವೆನ್ನಯ।
ಕಲಹವನು ತಡೆದಪುದೆ ಪೋದಪೆನಾರಸಾತಲಕೆ॥
ಕಲಕುವೆನು ಫಣಿಲೋಕವನು ಭುಜ।
ಬಲದೊಳಾವರುಣಾಲಯುವನೊಡೆ।
ದಱವೆಸಳುಕಿಸೆನಧಟರನು ತನಗಿದಿರದಾರೆಂದ ॥೬॥

ಆದೊಡೆಲೆ ದನುಜೇಂದ್ರ ಹೋಗುವೊ।
ಡೈದು ಪತಿ ಮುಮಾರ್ಗದೊಳು ದು।
ರ್ಭೇದ ದಕ್ಷಿಣಮಾರ್ಗವದು ವರುಣನ ಮಹಾಪುರಿಗೆ॥
ಆದೆಸೆಯೊಳಂತಕನ ಪುರವಿಹು।
ದೈದಲಸದಳವಖಿಳಜೀವರ।
ಜಾಧಿಪನು ಸಮವರ್ತಿ ಪೇಱ್ವೊಡೆ ಘೋರತರನೆಂದ ॥೭॥

ಎನಲು ನಕ್ಕನು ದನುಜನೆಲೆ ಮುನಿ।
ಜನಪ ಯಮನತಿರೌದ್ರತರನೆಂ।
ದೆನುತ ಹಿಂಗುವ ಭಟನೆ ತಾನಿಕ್ಕುವೆನು ರವಿಸುತನ॥
ದನುಜದಿವಿಜಭುಜಂಗಲೋಕದ।
ಜನದಸುವ ಹಿಂಡುವೆನು ನಿಮ್ಮಯ।
ಮನಕೆ ಬೆಱಗನು ಬಿತ್ತದಿರೆನೆಂದೆನುತ ಗರ್ಜಿಸಿದ ॥೮॥

ಒಱಸುವೆನು ಪಿತೃಪತಿಯ ನೊಸಲ।
ಕ್ಕರವನಲ್ಲಿಂ ಮೇಲೆ ವರುಣನ।
ಪರಿಭವಿಸಿ ಸುರಲೋಕಕೈದುವೆನಾಸುರಾಧಿಪನ॥
ಹುರುಳುಗಿಡಿಸುವೆನುಱಿದ ಸುರಕಿ।
ನ್ನರನರೋರಗದೈತ್ಯದಾನವ।
ರುರವಣೆಯ ನೆಗ್ಗೊತ್ತುವೆನೆನುತ ಮುನಿಗೆಱಗಿ ಬೀಱ್ಕೊಂಡ ॥೯॥

ಬಳುಕ ಮುನಿ ಚಿಂತಿಸುತಲೊಂದರೆ ।
ಗಳಿಗೆ ಶಮನನನೆಂತು ಗೆಲ್ದಪ ।
ನಳವಿಯೊಳು ದಶವದನನೆನಗಿದು ಚಿತ್ರವೆಂದೆನುತ ॥
ತಿಳುಹಬೇಕಿದನಾಕೃತಾಂತಗೆ ।
ತಳುವದೇತಕೆನುತ್ತ ಭರದಲಿ ।
ನಳಿನಸುತಸುತನೊಡನೆ ನಡೆದನು ಶಮನನಿದ್ದೆಡೆಗೆ ॥೧೦॥

ಕಂಡನಾಮುನಿವರನ ಬರವನು ।
ದಂಡಧರನಿದಿರೆದ್ದು ಮುನಿಪದ ।
ಪುಂಡರೀಕಕೆ ಮಣಿದು ವಿನುತಾರ್ಘ್ಯಾಸನವನಿತ್ತು ॥
ಕಂಡನೈ ಮುನಿಜನಕಮುಲವಾ ।
ರ್ತಂಡ ನಿಮ್ಮಡಿಗಳನಪೂರ್ವವ ।
ಕಂಡಿರೇನನದಾವುದದನೆನಗರುಹಬೇಕೆಂದ ॥೧೧॥

ಆದೊಡಾಲಿಸು ದಶವದನನೆಂ ।
ಬಾದಿತೇಯವಿರೋಧಿ ನಿನ್ನೊಳು ।
ಕಾದಲೆಂದುದ್ಯುಕ್ತನಾಗಿಹನೆಂದು ಸೂಚಿಸಲು ॥
ಆದನುಜನಿಂ ಮುನ್ನವೈದಿದೆ ।
ನೈ ದಶಾಸ್ಯಾಸುರನನಂತಕ ।
ಮೋದಿ ಕಳೆ ದಂಡಾಯುಧದೊಳೆಂದೆನುತ ಮುನಿ ನುಡಿದ ॥೧೨॥

ಮಾತು ಹಿಂಚಿತು ಮುಂಚೆ ಹೊಳೆದುದು ।
ಯಾತುಧಾನವಿಮಾನವಾಳಿ ।
ದ್ಯೋತಕಿರಣವನಣೆವ ಮಣಿಗಣಬಹಳಲಹರಿಯಲಿ ॥
ಶಾತಕುಂಭಸ್ತಂಭಮಯ ಸಂ ।
ವೀತಶೋಭಾಘಾತದಲಿ ಯಮ ।
ದೂತರಳುಕಿದರಲ್ಲಿಗಲ್ಲಿಗೆ ಬಿಗಿದ ಬೆಗಡಿನಲಿ ॥೧೩॥

ಹೊಕ್ಕುದಸುರವಿಮಾನಯಾನವ ।
ದೆಕ್ಕುತುಳದಲಿ ಕಂಡನಾಕ್ಷಣ ।
ರಕ್ಕಸನು ವೈತರಣಿಮುಖ್ಯಾನೇಕ ರೌರವವ ॥
ಮಿಕ್ಕ ನರಕಂಗಳಲಿ ಜೀವವ ।
ನಿಕ್ಕಿ ಬಾಧಿಪ ನರಕಪಾಲರ ।
ಕಕ್ಕಸದ ವೃತ್ತಿಗಳನೀಕ್ಷಿಸುತೊಡನೆ ನಡೆತಂದ ॥೧೪॥

ಕಾದ ಮಟಿಲೊಳಗುರುಳಿಪರು ಬಲು ।
ಕೈದುಗಳ ವನದೊಳಗೆ ಸುೞಿಯಿಪ ।
ರೈದಿಪರು ನೆತ್ತರಿನ ಕೀವಿನ ಕೆಸಱ ನದಿಗಳಲಿ ॥
ಮೋದುವರು ಮುಸಲದಲಿ ಸಿಡಿಲಿನ ।
ನಾದದಲಿ ಕಿವಿಯೊಳಗೆ ಕೂಗುವ ।
ರಾದುರಂತದ ವೈತರಣಿಯೊಳಗಾೞಿಸುವರೆಂದ ॥೧೫॥

ಕಚ್ಚಿಪರು ಫಣಿಗಳಲಿ ಕ್ರಿಮಿಗಳೊ ।
ಳುಚ್ಚಿಪರು ಸರ್ವಾಂಗವನು ಮನ ।
ದಿಚ್ಚೆ ಬಂದಂತೋಡಿಪರು ನಗ್ನದೊಳು ಕೈವೊಯ್ದು ॥
ಹೆಚ್ಚಿ ತೃಷೆ ಹಸಿವಡಸಿ ಬಾಯ್ಬಿಡೆ ।
ಮುಚ್ಚಿವೊಗೆವರು ಗೋಣ ಮುರಿವರು ।
ಕಿಚಿನೊಳು ಪಾಪಿಗಳನೆೞೆವುದನಸುರನೀಕ್ಷಿಸಿದ ॥೧೬॥

ಬಂದು ದೆಸೆಯೊಳು ಸುಕೃತಿಗಳು ನಲ ।
ವಿಂದ ಸುಕೃತದ ಫಲವ ಭುಜಿಸುತ ।
ಮಂದಿರಂಗಳೊಳಿಹರು ನರ್ತನಗೀತಗೋಷ್ಠಿಯಲಿ ॥
ಚಂದನಾದ್ಯನುಲೇಪಸುಮನೋ ।
ವೃಂದ ವಸ್ತ್ರಾಭರಣ ಭೋಜನ ।
ದಿಂದ ತಣ್ಣನೆ ತಣಿದು ಸುಖಮಿರೆ ಕಂಡನಸುರೇಂದ್ರ ॥೧೭॥

ಜಡಿದು ತತ್ಪ್ರೇತಗಳ ಬಾಧಿಪ ।
ದಡಿಗ ಯಮದೂತರನು ಝುಂಕಿಸಿ ।
ಬಿಡಿಸಿದನು ಪಾತಕರ ಬಾಧಿಸದಂತೆ ದನುಜೇಂದ್ರ ॥
ತಡೆದು ನಿಂದುದು ನರಕಪಾಲರ ।
ಗಡಣವಸುರನ ದೆಸೆಗೆ ನರಕಿಗ ।
ಳೊಡಲು ನಿರ್ಜರಭಾವದೊಳಗಿರ್ದುದದೊಂದು ನಿಮಿಷದಲಿ ॥೧೮॥

ಓಡಿತಖಿಳಪ್ರೇತಗೋಪರು ।
ಕೂಡಿದರು ದಶಶತಸಹಸ್ರದೊ ।
ಳಾಡಿದರು ತಮತಮಗೆ ನಿಜನಿಜಬಾಹುಸಾಹಸವ ॥
ನೋಡಿವಗೆ ಜಯದೊದವು ಗಡ! ।
ಖೋಡಿ ಗಡ! ಯಮದೂತರೊಳು ಕವಿ ।
ಕೂಡೆ ಕಡಿ ಕೊಲ್ಲಿಸುತ ಮುಸುಕಿದರಧಿಕಕೋಪದಲಿ ॥೧೯॥

ಮತ್ತೆ ವಿಬುಧದ್ವಿಷವಿಮಾನವ ।
ನೊತ್ತಿದರು ಸಬಳದಲಿ ಪರಿಘದೊ ।
ಳೆತ್ತಿ ಹೊಯ್ದರು ಕಣೆಗಳಲಿ ಕವಿಸಿದರು ಸುರಗಿಯಲಿ ॥
ಸುತ್ತಲಿರಿದರು ಖಂಡಿಸಿದರೆ ।
ತ್ತೆತ್ತನೋಡಿದರತ್ತ ಕವಿದರು ।
ನೆತ್ತರಿನ ಊಟೆಳವನೆತ್ತಿದರಸುರನೊಡಲಿನಲಿ ॥೨೦॥

ಆದಿತೇಯದ್ವಿಷನ ಸಚಿವರು ।
ಕಾದಿದರು ಯಮದೂತರೊಳು ಬಲು ।
ಗೈದುಗಳೊಳವಯವದೊಳೊಜ್ಜೆವರುಣಾಂಬುಪೂರದಲಿ ॥
ಮೈದೆಗೆಯದೊದವಿದರು ನೊಂದರು ।
ಸೇದೆಗೊಂಡರು ಗಾಯ ಘಾತಿಗೆ ।
ಮೇದಿನಿಯೊಳೊದಗಿದರು ಮೂರ್ಛಾಮದಮದೋದ್ಧತರು ॥೨೧॥

ಮತ್ತೆ ಕವಿದರು ದಶಮುಖನ ಮೇ ।
ಲೊತ್ತಬರಿಸಿದರಾವಿಮಾನವ ।
ಕತ್ತರಿಸಿದರು ಖಂಡಿಸಿದರೊಳಹೊಕ್ಕರುರವಣಿಸಿ ॥
ಹೊತ್ತುಹೊತ್ತಿಗೆ ಮುರಿದೊಡೇನದು ।
ಹತ್ತುತಿರ್ದುದು ಕಮಲಸಂಭವ ।
ನಿತ್ತ ವರವಕ್ಷಯವಲಾ! ಪುಷ್ಪಕದ ಸಿರಿಗೆಂದ ॥ ॥೨೨॥

ನನೆದ ಜಾಜಿನ ಗಿರಿಯೊ ದಶಕಂ ।
ಠನೊ ಲತಾಂತಪಲಾಶವೋ ದನು ।
ತನುಜನೋ ತಳಿರೇಱಿದಸುಗೆಯೊ ರಾವಣಾಸುರನೋ ॥
ಕನುಬಿರಿದು ಸರ್ವಾಂಗದೊಱತೆಯ ।
ತನಿರಕುತದಲಿ ಮುೞುಗಿ ರಾಕ್ಷಸ ।
ಜನಪನಿದ್ದನು ಸಚಿವರಳುಕಿದರಾಯದೇಱಿನಲಿ ॥೨೩॥

ನೊಂದು ಜೋಲ್ದನು ಧರೆಗೆ ಪುಷ್ಪಕ ।
ದಿಂದ ಸುರರಿಪು ಚೇತರಿಸಿಕೊಂ ।
ಡೆಂದ ಯಮದೂತರೊಳು ಸೈರಿಸಿ ನೋಟ್ಯೆನೆಂದೆನುತ ॥
ಸಂಧಿಸಿದನೈ ಚಾಪದಲಿ ಮುಳಿ ।
ಸಿಂದ ಪಾಶುಪತಾಸ್ತ್ರವನು ಬಲು ।
ಹಿಂದಲೇೞ್ಗ ಹಿಂದಲೇೞ್ಗ ದೈತ್ಯಕಮಲಭವಾಂಡಮಂಡಲವ ॥೨೪॥

ಅರಸ ಕೇಳೈ ಪ್ರಳಯಕಾಲದ ।
ಹರನ ನಯನಜ್ವಾಲೆವೋಲಾ ।
ವರಿಸಿದುದು ಶರಮುಖಶಿಖಾಸಂದೋಹಪರಿತಾಪ ॥
ಬೆರಸಿ ತದ್ರಿಪುಸೈನಿಕವ ಸು ।
ಟ್ಟುರುಹಿದುದು ನಿಶ್ಶೇಷವೆನೆ ದ ।
ಳ್ಳುರಿಯ ಡಗೆಯಲಿ ಧಾತುಗೆಡಿಸಿತು ಪಿತೃಪತಿಯ ಪುರವ ॥೧೫॥

ಬೊಬ್ಬಿಱಿದನನಿಮೇಷರಿಪು ಜಯ ।
ದುಬ್ಬಿನಲಿ ಖೋಯೆಂದು ದೆಸೆಗಳು ।
ಗಬ್ಬರಿಸೆ ಬೆಬ್ಬಳಿಸೆ ಮೇಲೆ ವಿಮಾನವಪ್ಸರರ ॥
ಅಬ್ಬರದ ಪಟುರಭಸಮಾರುತ ।
ನೆಬ್ಬಿಸಿದುದಂತಕನ ಮನದೊಳು ।
ಸಿಬ್ಬರದ ಕೋಪಾನಲನ ಧೂಮಾವೃತಾನಲನ ॥೧೬॥

ಸೇನೆ ಮಡಿದುದ ಕಂಡು ಕೋಪಕೃ ।
ಶಾನುವಡರಿದುದವಯವವನಿನ ।
ಸೂನುವೋ ಲಯಭಾನುವೋ ಸಿಡಿದೆದ್ದನಾಹವಕೆ ॥
ಆನಿಮಿಷದಲಿ ಜೋಡಿಸಿತು ರಥ ।
ವೇನನೆಂಬೆನು ಮೃತ್ಯು ಮುಳಿದನಿ ।
ದೇನೆನುತ ಬಂದಡರಿದನು ಪಿತೃಪತಿ ಮಹಾರಥವ ॥೧೭॥

ಪಾಶಮುದ್ಗರಕಾಲದಂಡ ।
ಪ್ರಾಸಪರಿಘಶರಾಸಿಶೂಲಶ ।
ರಾಸನಾದಿ ನಿಶಾತಹೇತಿಗಳಿರೆ ರಥಾಗ್ರದಲಿ ॥
ಸೂಸೆ ಕಟೋರ್ಗೆ ಕವಿದು ನಾಸಾ ।
ಶ್ವಾಸದಲಿ ನಿಬ್ಬರದೊಳೈತಂ ।
ದಾಸುರಾರಿಯಸೈನ್ಯಸಂತಕನಗಣಿತಾಸ್ತ್ರದಲಿ ॥೧೮॥

ಏನನೆಂಬೆನು ಸುರಿದುದಸ್ತ್ರದ ।
ಸೋನೆ ಶರಜೀಮೂತದಿಂದಸಿ ।
ಧೇನು ಪರಿಘಪ್ರಾಸ ಶೂಲ ಮುಸುಂಡಿ ಮುದ್ಗರದ ॥
ಆಸಲಳವೇ ಮುಳಿದ ಭಾಸ್ಕರ ।
ಸೂನುವಿನ ಸಮರದಲಿ ದನುಜನ ।
ಸೇನೆ ಬಿಟ್ಟ[illegible] ಬಗೆಯ[illegible] ಕಾವೆ ದನುಸುತನ ॥೧೯॥

ಎಚ್ಚ ಕಣೆಗಳನಣೆದು ಪಿತೃಪತಿ |
ಕೊಚ್ಚಿ ಕಣೆಗಳೊಳಸುರರೆಱೆಯನ |
ನೆಚ್ಚೊಡವನಾಕಣೆಗಳನು ಕಡಿದೆಚ್ಚನಿನಸುತನ ||
ಮುಚ್ಚಿ ಮುಸುಕಿದ ಕಣೆಯುನೆಡೆಯಲಿ |
ನುಚ್ಚುನೂಱಾಗರಿದು ದನುಜನ |
ನೆಚ್ಚನಂತಕನಗಣಿತಾಸ್ತ್ರದೊಳಧಿಕಕೋಪದಲಿ ||೨೦||

ಜೋಡು ಮುರಿದುದು ಜಿರಿದುದವಯವ |
ವೀಡಿರಿದ ಕಣೆಗಳಲಿ ಮೆಯ್ಯ ಕಡೆ |
ಗೋಡಿಗೊಂಡುದು ಜಿಡದೆ ಬಸಿವರುಣಾಂಬುಪೂರದಲಿ ||
ಓಡಿದರು ದೆಸೆದೆಸೆಗೆ ಸಚಿವರು |
ಪಾಡಱದು ಜಗೆದಪನೆ ಖಳನದ |
ಕೂಡೆ ಕೈದೋಱದನು ನಡೆದುದು ಕದನ ಕಲಿಗಳಿಗೆ ||೨೧||

ಇಂತು ಕಾದಿದರೇೞುದಿನ ಪರಿ |
ಯಂತವಂತಕಸುಮನಸಾಂತಕ |
ರಂತರಿಸದನ್ಯೋನ್ಯವಿಜಯೋತ್ಸಾಹತತ್ಪರರು ||
ಅಂತಕಾಮರು ಮತ್ತೆ ರಾಕ್ಷಸ |
ಕಾಂತನತಿಮುಳಿಸಿಂದಲೆಚ್ಚು ಕೃ |
ತಾಂತನನು ಮುಂಗಿಡಿಸಿದನು ಬಲುಹಾಯ್ತು ಸಂಗ್ರಾಮ ||೨೨||

ಬೞಕ ನಾಲ್ಕಂಬಿನಲಿ ಮೃತ್ಯುವಿ |
ಗಳುಕಲೆಚ್ಚನು ಸಾರಥಿಯ ಮೆಯ್ಯ |
ಒಟಲಲೆಚ್ಚನು ಬಾಣವೇೞಱೊಳಾಪರೇತಪನ ||
ಮುಳಿದು ದಶಶತನಿಶಿತವಿಶಿಖಂ |
ಗಳಲಿ ಬೊಬ್ಬಿಱದೆಚ್ಚು ಜಾಹಾ |
ಬಳವ ಮೆಱೆದನು ದನುಜನೇನೆಂಬೆನು ಮಹಾದು ತವ ||೨೩||

ಎಲೆಲೆ! ಕೋಪಕೃಶಾನು ಭುಗಿಲೆಂ|
ದಿೞದುದಂತಕವದನದಿಂದ |
ವ್ವಳಿಸಿ ನಾಸಾಶ್ವಾಸಧೂಮಾವಿಲಶಿಖಾವೃತದ ||
ನಳಿನಭವಮುಖ್ಯಾಮರಾವಳಿ |
ಸುೞದುದಭ್ರದೊಳದ್ಭುತಾಹವ |
ದಳವನೀಕ್ಷಿಸಲೆಂದು ನಿಜನಿಜವಾಹನಂಗಳಲಿ ||೨೪||

ದೇವ ವೈವಸ್ವತ ನಿಶಾಚರ ।
ನಾವ ಘನ ಕಳುಹೆನ್ನನೊರಸುವೆ ।
ನೈ ವಿರೋಚನ ಜಂಭ ಬಲ ಮಧುಕೈಟಭಾಸುರರ ॥
ಜೀವವನು ಜಕ್ಕುಲಿಸಿದೆನಗೀ ।
ದೇವರಿಪುವೇಸರವನೆನೆ ರಾ ।
ಜೀವಸಖಸಂಜಾತನಾಮೃತ್ಯುವಿನೊಳಿಂತೆಂದ ॥೨೫॥

ಈವಿಕಾರಿಯುನಿಕ್ಕುವೆನು ಸಮ ।
ರಾವನಿಯೊಳೊಂದಿನಿತು ಸೈರಿಸು ।
ದೇವರಿಪುವಿನ ಬಿಗುಹ ಬಿಡಿಸುವೆನೆನುತ ಖಾತಿಯುಲಿ ॥
ಆವಿವಸ್ವತಸೂನು ಕೊಂಡನ ।
ಲೈ ವಿರೋಧಿಗೆ ಕಾಲದಂಡವ ।
ನಾವಿಲಯಕಾಂಡಪ್ರಚಂಡಕೃಶಾನುಮಂಡಲವ ॥೨೬॥

ಕೂಗಿದೊಡೆ ಭುಗಿಲೆಂದು ದಳ್ಳುರಿ ।
ಯಾಗಗನತಲಕಡರಿದುದು ಶತ ।
ಯಾಗಮುಖ್ಯಾಮರರು ಸರಿದರು ಬೆದಱಿ ದೆಸೆದೆಸೆಗೆ ॥
ಬೇಗ ನಡೆತಂದಜನಸಂಭವ ।
ವಾಗಗಲೆ ಸಮವರ್ತಿ ದಂಡೆೞೀ ।
ದ್ಯೋಗಕವಸರವಿಲ್ಲ ಕಾರಣವಿಹುದು ಕೇಳೆಂದ ॥೨೭॥

ಎಲೆ ಕೃತಾಂತ ನಿಶಾಚರೇಂದ್ರನ ।
ಗೆಲುವೊಡರಿದು ಸುರಾಸುರಾದ್ಯರಿ ।
ಗಱಿಯುದಿಹ ವರವವನಿಗಸ್ಮದನುಜ್ಞೆ ತಥ್ಯವಿದು ॥
ಕೊಲುವೆಡೆಯೊಳೀಕಾಲದಂಡದ ।
ಬಲವಮೋಘವಿದೆಮ್ಮ ವರವೆಂ ।
ತಱಿವನಸುರನದೆಂತು ಕೊಲದಿಹುದೆನ್ನೊಳುಸಿರೆಂದ ॥೨೮॥

ವರಗಳಿವು ಮದ್ವಾಕ್ಯಸಂಭವ ।
ವೆರಡಱೊಳಗೊಂದನೃತವಾದೊಡೆ ।
ಜರಿವುದೀಬ್ರಹ್ಮಾಂಡಘಟವೀಸಕಲಜಗದೊಡನೆ ॥
ನಿರುತವೆಮ್ಮಯ ನುಡಿಯೆನಲು ದಶ ।
ಶಿರನಗೆಲುವುದದೆಂತು ತಾನೆನೆ ।
ನರಶಿರಃಸ್ಥಭವಸಂತತನೆನಿಳಿಂತೆಂದನಾ[illegible]ತಗಳಿ ॥೨೯॥

ಆದೊಡಂತಕ ನೀನದೃಶ್ಯವ ।
ಸೈದಿ ನಮ್ಮಭಿಮತವ ಸಲಿಸೆನ ।
ಲಾದಿವಾಕರಸೂನುವಂತರ್ಧಾನರೂಪಾದ ॥
ಆದಿತೇಯಸಮಾಜವೈತರ ।
ಲೈದಿದನು ಪರಮೇಷ್ಠಿ ಗಗನವ ।
ಸಾದಿವೌಕಸವೈರಿ ಘೋರಾಸುರಂಗಳಿಗೆ ಜೊಪ್ಪಿಸದ ॥೪೦॥

ಕೇಳಿಸಿದನೀಜಗಕೆ ಜಯದು ।
ಬ್ಬಾಳುತನವನು ದೈತ್ಯಪತಿ ಪಾ ।
ತಾಳಕಿಳಿದನು [ಕಾದ್ರವೇಯಾಧೀಶಪಾಲಿತದ] ॥
ಪೇಟಲೇನಜಿಯುಟ್ಟಿದನು ನಾ ।
ಗಾಳಿಯನು ವಾಸುಕಿಸಹಿತ ದಶ ।
ಮೌಳಿ ಭೋಗವತೀಪುರವನೊಡೆದುಬ್ಬಿದು ಸೈವರಿದ ॥೪೧॥

ನಡೆದನಲ್ಲಿಂ ಮೇಲೆ ಖಳನಡಿ ।
ಗಡಿಗೆ ನೋಡುತ ದೆಸೆದೆಸೆಯನಂ ।
ದೊಡನೆ ಕಂಡು ನಿವಾತಕವಚಾಸುರರ ಮಣಿಪುರವ ॥
ತೊಡಗಿದನು ಸಂಗ್ರಾಮವನು ಬಲು ।
ದಡಿಗರಕ್ಕಸರವರೊಡನೆ ರಣ ।
ನಡೆದುದೈ ಬಹು ದಿವಸವದ್ಭುತವಾಗಿ ಕೇಳೆಂದ ॥೪೨॥

ಮಾಯೆಯಲಿ ಸಹಜದಲಿ ನಿಶಿತಮ ।
ಹಾಯುಧದೊಳಂಬಿನಲಿ ನಿಖಿಳೋ ।
ಪಾಯದಲಿ ಮಂತ್ರಾಸ್ತ್ರದಲಿ ಧೈರ್ಯದಲಿ ಶೌರ್ಯದಲಿ ॥
ಆಯತದೊಳತಿಸತ್ವದಲಿ ದೈ ।
ತೇಯಪತಿಗಳು ಕಾದಿದರು ಸಮ ।
ವಾಯದಲಿ ರಣಕರ್ಮ ನಡೆದುದು ವರುಷಪರಿಯಂತ ॥೪೩॥

ಬಂದನಾರಣಭೂಮಿಗಂದರ ।
ವಿಂದಸಂಭವನಸುರರೊಡನಿಂ ।
ತೆಂದನೆಲೆ ದೈತೇಯರಿರ ನೀವಿವನೊಡನೆ ಬಱಿದೆ ॥
ನೊಂದು ಕಾಡಿದೊಡೇನಹುದು ದಶ ।
ಕಂಧರನ ಗೆಲಲರಿದು ಸಖ್ಯದೊ ।
ಳಿಂದಿವನ ಮನ್ನಿಸಲು ಮುಂದಭಿವೃದ್ಧಿ ನಿಮಗೆಂದ ॥೪೪॥

ಎನಲಿದೊಳ್ಳಿತೆನುತ್ತ ಚತುರಾ ।
ನನವಚಸ್ಸಂಧಾನದಲಿ ದನು ।
ತನುಜರಗ್ನಿಸಮಕ್ಷದಲಿ ಕೈನೀಡಿ ನಂಬುಗೆಯ ॥
ವಿನಯದಿಂದಾಚರಿಸಿ ರಾಕ್ಷಸ ।
ಜನಪತಿಯನುಪಚರಿಸಿದರು ತನ ।
ತನಗೆ ಸಮುಸಖ್ಯದೊಳು ಬಳಿಕೊಂದಬ್ದಪರ್ಯಂತ ॥೪೫॥

ಬೀಳುಕೊಂಡು ನಿವಾತಕವಚಖ ।
ಳಾಳಿಯನು ದಶಮೌಳಿ ನಡೆದನು ।
ಕಾಳಕೇಯನಿವಾಸವೆಂದೆನಿಪಶ್ಮಪುರವರಕೆ ॥
ಕಾಳೆಗವ ತೊಡಗಿದನು ಕೊಂದನು ।
ಕಾಳದನುಜಚತುಶ್ಶತವನು ।
ಬ್ಬಾಳುತನವಿನ್ನೆಂತೊ! ರಾಕ್ಷಸರಾಜಕುಂಜರನ ॥೪೬॥

ಘಾತಿಸಿದನೈ ಶೂರ್ಪನಖಿಯಧಿ ।
ನಾಥನೆನಿಸುವ ಕಾಳಕೇಯು ।
ಖ್ಯಾತವಿದ್ಯುಜ್ಜಿಹ್ವನೆನಿಪ ನಿಶಾಚರೇಶ್ವರನ ॥
ಪಾತಕನಲಾ! ಮೈದುನನ ಸಮು ।
ರಾತಿರೇಕದೊಳಿಕ್ಕಿದನು ದನು ।
ಜಾತರೊಳು ನಿಷ್ಕರುಣನೆಂತೊ! ಸುಹೃಜ್ಜನಂಗಳಲಿ ॥೪೭॥

ಮತ್ತೆ ನಡೆದನು ವರುಣನಗರಿಯ ।
ದೆತ್ತನುತಲಯಿಸಿದನು ಸಮರೋ ।
ನ್ಮತ್ತನಾದಶಮೌಳಿ ಕಂಡನುದಾರಗೋಪುರದ ॥
ಅತ್ತ ಸುರಭೀವತಿ ಪುರವನೆಂ ।
ತೆತ್ತ ನೋಡಿದಡತ್ತ ಸೊಗಯಿಪ ।
ಮುತ್ತುಗಳ ಮಣಿಮಯದ ವರುಣಾಲಯವನಿದಿರಿನಲಿ ॥೪೮॥

ಆಪುರಪ್ರಾಂತದಲಿ ಕಂಡನ ।
ಲ್ಲೈ ಪರಮಸುರಧೇನುವನು ಬಳಿ ।
ಕಾಪುಲಸ್ತ್ಯಜಸಾತ್ಮದುಗ್ಧೋದಿತಸುಧಾಂಬುಧಿಯ ॥
ತಾಪಸಾಂಚಿತನಿಧಿಯನರ್ಚಿಸಿ ।
ಯಾಪವಿತ್ರತರಾಂಗಸುರಭಿಯ ।
ನಾಸನಿತು ಒಲವಿಂದು ಮುಂದೈದಿದನು ತತ್ಪುರಿಗೆ ॥೪೯॥

ಅಪ್ರಚೇತೋಮಾತ್ಯನಿರುತಿರ ।
ಲಾಪ್ರಭಾಸಾಹ್ವಯದ ವಾರುಣ ।
ನಾಪ್ರದೇಶದೊಳವರ ಕರೆದಿಂತೆಂದನಮರಾರಿ ॥
ದೀಪ್ರತರರಣಕೇಳಿಗೆಯ್ದಿಡೆ ।
ವೈ ಪ್ರಚೇತಸನೊಡನೆ ತನಗೆ ಭು ।
ಜಪ್ರತಾಪವದುಳ್ಳೊಡೆನಗಿದಿರಾಗ ಹೇಳೆಂದ ॥೫೦॥

ಎಂದು ಬೊಬ್ಬಿಱಿವಸುರನಬ್ಬರ ।
ಕಂದು ವರುಣನ ಪುತ್ರಪೌತ್ರರು ।
ಬಂದರೈ ಮುಳಿದಾಹವಕೆ ಗೋಪುಷ್ಕರಾಪ್ಸುಯುರು ॥
ಸಂದಣಿಪ ಚತುರಂಗಸೇನಾ ।
ವೃಂದಸಹಿತ ಮಹೀಗತರು ದಶ ।
ಕಂಧರನ ಕಂಡರು ವಿಮಾನದೊಳಭ್ರಮಾರ್ಗದಲಿ ॥೫೧॥

ರಥಗಳನು ಮೇಳೈಸಿ ನಿಜಸಾ ।
ರಥಿಗಳನು ಸತ್ಕರಿಸಿಯುಂಬರ ।
ಪಥವನಡರಿದರಭ್ರಗತಿಲಕ್ಷಣವಿಚಕ್ಷಣರು ॥
ಪೃಥುಭುಜರು ಪರಿಪಂಥಿಸೇನಾ ।
ವ್ಯಥಿತಶೌರ್ಯರು ದಾನವರೊಳತಿ ।
ಮಥನದಲಿ ತೊಡಗಿದರು ಸಮರವನರಸ ಕೇಳೆಂದ ॥೫೨॥

ಬೆರಸಿದರು ರಾವಣನ ಮಂತ್ರಿಗ ।
ಳರಸ ವರುಣನ ಸೇನೆಯೊಳು ನಿ ।
ಷ್ಠುರದ ಬಲುಗಾಳೆಗವ ತೊಡಗಿದರೈ ಮಹಾಸುರರ ॥
ಪರಿಘದಲಿ ಪಾಶದಲಿ ಶೂಲದೊ ।
ಳುರವಣಿಸಿ ಮುಸಲದಲಿ ಹೊಯ್ದು ।
ಬ್ಬರಿಸಿ ಕೊಂದರು ಬಂದ ಸೇನೆಯನೊಂದು ನಿಮಿಷದಲಿ ॥೫೩॥

ಪಡೆ ಮಡಿಯೆ ವರುಣಾತ್ಮಜರು ಕಿಡಿ ।
ಯಿಡುವ ಕೋಪದೊಳೊಡನೆ ಚಾಪವ ।
ಪಿಡಿದು ನಿಶಿತಾಸ್ತ್ರಂಗಳಲಿ ಮುಸುಕಿದರು ರಕ್ಕಸನ ॥
ಹೊಡಕರಿಸಿ ಹೊಗರಂಬು ಹೊಕ್ಕುಪು ।
ಕೊಡಪಿದರು ಕೊಬ್ಬಿದ ವಿರೋಧಿಗ ।
ಳೊಡಲ ಬಗೆದುವು ಚಿಗಿಯೆ ನೆತ್ತರ ಧಾರೆ ದೆಸೆದೆಸೆಗೆ ॥೫೪॥

ಗಾಯವಡೆದರು ರಿಪುಭಟರು ಪೂ।
ರಾಯದಲಿ ಬಲಿಲಿದರು ರಕ್ಕಸ।
ರಾಯನನು ತಾಗಿದರು ಚಾಪಾಗಮವಿಶಾರದರು ॥
ಸಾಯಕವನೊಟ್ಟಿದರು ದೈತ್ಯನ।
ಕಾಯದಲಿ ಮುಂತಾಸ್ತ್ರದಲಿ।
ದ್ವೈತೇಯನನು ಮುಂಗಿಡಿಸಿದರು ವರುಣಾತ್ಮಸಂಭವರು ॥೫೫॥

ಕಂಡನಾಗ ಮಹೋದರನು ಕೈ।
ಕೊಂಡನೈ ಪರಿಘವನು ಬಲ್ಗಜೆ।
ಗೊಂಡು ಹೊಯ್ದನು ವರುಣಸುತರ ರಥಾಶ್ವಸಾರಥಿಯ ॥
ಖಂಡಿಸಿದೊಡೇನಳುಕುವರೆ ಮನ।
ಗಂಡ ವೈಹಾಯಸಗತಿಯೊಳು।
ದ್ವಂಡಬಲರಂಬರಕಡರಿ ಮತ್ತೆತ್ತರಾಹವವ ॥ ॥೫೬॥

ಬಲಿಕ ಮೂರ್ಛೆಯೊಳಾಮಹೋದರ।
ಖಳನನೊರಗಿಸಿ ರಾವಣಾಸುರ।
ನೊಳಗೆ ಬಲುಗಾಳೆಗವ ತೊಡಗಿದರೇನನುಸಿರುವೆನು ॥
ನಿಳಿ ನಿಟಿಲು ನಿಟಿಲೆಂಬ ಕಣೆಗಳು।
ಸುಳಿದುವನ್ಯೋನ್ಯಪ್ರಮತ್ತಗ।
ಳಳವಿಗೊಟ್ಟರು ಮತ್ತೆ ನಡೆದುದು ಕದನ ಕಲಿಗಳಿಗೆ ॥೫೭॥

ಒಡನೆ ರಾಕ್ಷಸಮಾಯೆಯಲಿ ಮುಂ।
ಗಿಡಿಸಿದನು ವರುಣಾತ್ಮಜರನವ।
ಗಡಿಸಿ ಕಜಿದನು ಚಾಪಯಂತ್ರದೊಳಖಿಳ ಕೈದುಗಳ ॥
ನಿಡುಸರಳ ಕಕ್ಕಡೆಯ ಶೂಲದ।
ಕಡಿತಲೆಯ ಶಕ್ತಿಗಳ ಸಬಳದ।
ಗಡಣ ಸುಜಿದುವದೆಂತೊ! ದಶಕಂಧರನ ಬಲುಹೆಂದ ॥೫೮॥

ಏನನೆಂದಪೆನರಸ ವರುಣನ।
ಸೂನುಗಳ ಸರ್ವಾಂಗದಲಿ ದಿತಿ।
ಸೂನುವಿಟ್ಟ ಮುಸುಂಡಿ ಮುದ್ಗರ ಶಕ್ತಿ ಶಲ್ಯಗಳ ॥
ಸೋನೆ ಸುರಿದುದು ನನೆದುದವಯವ।
ವಾನಿರಂತರ ಸುರಿವ ರುಧಿರದೊ।
ಕಾಸಲಿಳಿವೇ ಮುಳಿಗ ದಶಕಂಧರನ ಘುರಕೆಂಗ ॥೫೯॥

ರಥ ಮುರಿದು ಬಿಲ್ಲುಡಿದು ಹಯಸಾ।
ರಥಿಗಳಳಿದು ಮಹಾಸ್ತ್ರಘಾತ।
ವ್ಯಥೆಗೆ ಸೈರಿಸಲಾಱದವನಿಗೆ ಬಿದ್ದು ಮೂರ್ಛೆಯಲಿ॥
ಶಿಥಿಲಪೌರುಷರಾಗಿ ನಿಜನಿಜ।
ರಥಗಳೊಳು ಬಱಿಕಾತ್ಮಸದನದ।
ಪಥಗಳನು ಬಿಡಲೈದಿದರು ರಣರಂಗಭೀತಿಯಲಿ ॥೬೦॥

ಕೇಳಿಸಿದನೈ ಮೂಜಗಕೆ ದಶ।
ಮೌಳಿ ತನ್ನಯ ಜಯದ ಬೊಬ್ಬೆಯ।
ನಾಳುತನಕಳುಕಿದರು ವರುಣಾತ್ಮಜರು ರಾವಣನ॥
ಕಾಳೆಗಕೆ ಬರಹೇೞು ವರುಣನ।
ತೋಳ ಬಲ ತನಗುಳ್ಳೊಡೆನೆ ದಶ।
ಮೌಳಿಯೊಡನಂದಾಪ್ರಭಾಸಾಮಾತ್ಯನಿಂತೆಂದ ॥೬೧॥

ಎಲೆ ನಿಶಾಚರರಾಜ ವರುಣನ।
ಗೆಲುವುದೇನವನಾತ್ಮಜರ ನೀ।
ಗೆಲಿದುದೇನಿದು ಸದರವೇ ಕಮಲಜನ ಪುರವರಕೆ॥
ಜಲಧಿಪತಿ ಹೋಗಿಹನು ನಮ್ಮನು।
ಗೆಲಿದೆ ಮತ್ತೇನೆನಲು ಮೆಲ್ಲಗೆ।
ತುಱುಕೆ ವದನದೊಳಸುರಸತಿ ಬೋ! ಎಂದು ಬೊಬ್ಬಿಱಿದ ॥೬೨॥

ತಿರಿಗಿದನು ನಿಜಪುರಕೆ ದಶಕಂ।
ಧರನು ಜಯದುಬ್ಬಿನಲಿ ಮಾರ್ಗಾಂ।
ತರದೊಳಿಹ ಕಿನ್ನರರ ಯಕ್ಷರ ದೈತ್ಯಗಂಧರ್ವ॥
ಸುರನರೋರುಗ ಯಕ್ಷ ಭೂಸುರ।
ಗರುಡ ದಾನವ ಸಿದ್ಧಸಾಧ್ಯರ।
ತರುಣಿಯರ ಪಿಡಿಪಿಡಿದು ಪುಷ್ಪಕಕಡರಿ ನಡೆತಂದ ॥೬೩॥

ನಿಡುಗುರುಳ ನಿಟ್ಟೆಸಱುಗಣ್ಗಳ।
ಬಡನಡುವಿನತಿಗುರುನಿತಂಬದ।
ಜಡಿವ ಕರ್ಕಶಕುಚಯುಗದ ಸರ್ವಾಂಗಸುಂದರದ॥
ಮಡದಿಯರ ಪಿಡಿದಡಕಿ ಪುಷ್ಪಕ।
ಜಡಿಯಲವರವರಾಪ್ತವರ್ಗವ।
ಪಡಲಡಿಸಿ ನಡೆದನು ದಶಾನನನಭ್ರಮಾರ್ಗದಲಿ ॥೬೪॥

ಏನ ಮಾಳ್ಪನೊ ಮಗನಕಟ! ತಾ ।
ನೀನಿಶಾಟನ ಕೆಯ್ಗೆ ಸಿಲುಕಿದೊ ।
ದೇನ ಮಾಳ್ಪರೊ ತಂದೆತಾಯಿಗಳೆನುತ ಕೆಲಕೆಲರು ॥
ಏನು ಸಾಕ್ಷಾದ್ದೈವವಹ ಪತಿ ।
ಹೀನೆಗೆನಗೆಂದೆನುತ ಸತಿಯರು ।
ದಾನವೇಂದ್ರನ ಬಯ್ಯುತಿರ್ದರು ಸುಯ್ದು ಶೋಕದಲಿ ॥೬೫॥

ಆವ ಜನ್ಮದ ಕರ್ಮಫಲವೆಮ ।
ಗೀವಿಧಿಯನೊಡರಿಚಿತೊ ತನಗಿ ।
ನ್ನಾವ ಪಾಪಮಹಾಮಹೀರುಹವಿಂದು ಫಲಿಸಿದುದೊ ॥
ಹಾ! ವಿಧಾತ್ರ ಕೃತಾಪರಾಧವ ।
ದಾವುದೆಮ್ಮೊಳಗಕಟಕಟ! ನಿ ।
ರ್ದೈವರಾದೆವೆನುತ್ತ ಸುಯ್ದರು ಸುಯ್ದು ಕಂಬನಿಯ ॥೬೬॥

ಹಾನಿ ಪತಿಗಳಿಗಾದುದೆಮ್ಮನ ।
ದೇನು ಮಾಳ್ಪನೊ ಮುಳಿದು ದಶಶಿರ ।
ಭಾನುವಿರೆ ಮದ್ಬಂಧುಜನತಾರಾಳಿ ನೆಱೆದಪುದೆ ॥
ಸ್ತ್ರೀನಿಮಿತ್ತದೊಳಳಿಯದಿರನೀ ।
ದಾನವೇಶ್ವರನೆನುತ ಶಪಿಸಲು ।
ಮಾನಿನಿಯರಸುರೇಂದ್ರನೈದಿದನಾತ್ಮಪುರವರನ ॥೬೭॥

ಇದಿರುಗೊಂಡುದು ಸಕಲಜನತತಿ :
ಸುದತಿಯರು ಸೂಸಿದರು ಸೇಸೆಯ ।
ನದಿರಲೆಳೆ ಮೊಳಗಿದುವು ನಾನಾವಾದ್ಯವಗಲದಲಿ ॥
ಅದುಬುತವ ಕೇಳರಸ ಜನತತಿ ।
ಬೆದಱಿ ಬಂದಳು ಸಾಶ್ರುಜಲಗ ।
ದ್ಗದರವಾಕುಲಮುಖಿಯೆನಿಪ ಶೂರ್ಪನಖಿ ಶೋಕದಲಿ ॥೬೮॥

ಬಂದು ಬಿದ್ದಳು ಚರಣದಲಿ ಬಳಿ ।
ಕೆಂದಳೆಲೆ ದನುಜೇಂದ್ರ ರಣದಲಿ ।
ಕೊಂದೆ ಗಡ! ಮತ್ಪತಿಯು ವಿದ್ಯುಜ್ಜಿಹ್ವರಾಕ್ಷಸನ ॥
ಇಂದು ವೈಧವ್ಯದಲಿ ಬಾಳ್ವುದ ।
ಱಿಂದ ಮರಣವೆ ಲೇಸು ತನ್ನನು ।
ಕೊಂದು ಕಳೆಯೆಂದೆನುತ ಸೈಗೆಡೆದಿರ್ದಳಗಲಗಲಿ ॥೬೯॥

ಏಱೆನುತ ಪಿಡಿದೆತ್ತಿ ರಣದಲಿ ।
ಕಾಲಕೇಯರ ಕೊಲುವೆಡೆಯೊಳು ।
ಬ್ಬಾಳುತನದಲಿ ಕೊಂದೆನಱಿಯದೆ ನಿನ್ನ ವಲ್ಲಭನ ॥
ತಾಳದಿರು ಶೋಕವನು ಮಾನಿನಿ ।
ಕೇಳು ನಿನ್ನಿಂದಖಿಳರಾಜ್ಯವ ।
ನಾಳಿಸುವೆನಂಜದಿರೆನುತ ಮನ್ನಿಸಿದನುಚಿತದಲಿ ॥೨೦॥

ಕರೆಸಿದನು ಖರದೂಷಣಾದ್ಯಾ ।
ಸುರರ ಸುರರಿಪು ಶೂರ್ಪನಖಿ ಸಹಿ ।
ತಿರಿ ಜನಾರಣ್ಯದಲಿ ದಂಡಕವಿಪಿನವೆಂದೆನಿಪ ॥
ಸುರರಿಪುಗಳಧಿವಾಸವದು ಮು ।
ನ್ನರಜಗೋಸುಗ ಶಪಿಸೆ ದೈತ್ಯರ ।
ಗುರುವಿನಿಂ ನಿರ್ಜನವಿಪಿನವಾಗಿಹುದು ಕೇಳೆಂದ ॥೨೧॥

ಆದೊಡಲ್ಲಿಗೆ ಶೂರ್ಪನಖಿ ಸಹಿ ।
ತೈದುವುದು ನೀವೆಂದು ಕಳುಹಿದ ।
ನಾದನುಜಪತಿ ಸೋದರರನೀರೇೞುಸಾಸಿರವ ॥
ಆದಿತೇಯವಿರೋಧಿಸೈನಿಕ ।
ವೈದಿತಗಣಿತವವರೊಡನೆ ಬೞಿ ।
ಕಾದಶಾನನನೈದಿದನು ನಿಜಪುರಬಹಿರ್ವನವ ॥೨೨॥

ಅನಿಶಾಚರರಾಜನೈದಿದ ।
ಸ್ಥೆ ನಿಕುಂಭಿಳೆಯೆಂಬ ಕಾಳಿಯು ।
ಕಾನನವನಮರಾರಿಕುಲವಾಯಾವಿದೇವತೆಯು ॥
ತಾನೆಸೆದುದದು ಯೂಪಶತಕೋ ।
ದ್ಯಾನದಿಂದಾಸುರದ ಮಂತ್ರ ।
ಧ್ಯಾನದಿಂದತಿಚಿತ್ರವೆನೆ ಕಣ್ಗಳಿಗೆ ರಾವಣನ ॥೨೩॥

ಆಗ ಕೃಷ್ಣಾಜಿನ ಜಟಾಧರ ।
ನಾಗಿ ಮೆಱೆದಿಹ ಮೇಘನಾದನ ।
ನಾ ಗಭೀರಪರಾಕ್ರಮನು ಕಂಡನು ಸುರಧ್ವಂಸಿ ॥
ಬೇಗ ಬಿಗಿಯಪ್ಪಿದನು ನಿನ್ನು ।
ದ್ಯೋಗವೇನೆನಗುಸಿರೆನಲು ಬೞಿ ।
ಕಾಗ ಭಾರ್ಗವನಱುಹಿದನು ಘನನಾದನನುಜ್ಜುಗವ ॥೨೪॥

ಆದೊಡೆಲೆ ದೈತೇಯಪತಿ ಹಯ ।
ಮೇಧವಗ್ನಿಷ್ಟೋಮ ವರಗೋ ।
ಮೇಧ ವೈಷ್ಣವ ಬಹುಸುವರ್ಣಕ ರಾಜಸೂಯಮಖ ॥
ವೈದಿಕೋಕ್ತದ ವಾಜಪೇಯಗ ।
ಳಾದಿಯಾದಧ್ವರಗಳೇಬಿನು ।
ಸಾಧಿಸಿದನೈ ನಿನ್ನ ಮಗನತಿಸಹಸಿ ಕೇಳೆಂದ ॥೨೫॥

ಬೆರಸಿದನು ಮಾಹೇಶ್ವರಕ್ರತು ।
ವರದೊಳಗೆ, ತತ್ಕ್ರತುಸಮಾಪ್ತಿಯೊ ।
ಳಿರದೆ ಬಂದನು ಶಂಭು ಕೊಟ್ಟನಭೀಷ ಸಿದ್ಧಿಗಳ ॥
ಶರ ಶರಾಸನ ಶಕ್ತಿ ಗದೆಯಸಿ ।
ಪರಶು ಮುಖ್ಯಾಯುಧಗಳನು ಧುರ ।
ಧರಣಿಯೊಳು ರಿಪುದುರ್ಜಯದ ರಥಸಹಿತ ಕೇಳೆಂದ ॥೨೬॥

ಮತ್ತೆ ತಾಮಸಿಯೆಂಬ ಮಾಯೆಯ ।
ನಿತ್ತನೈ ದೇವಾಸುರಾದ್ಯರು ।
ನಿತ್ತರಿಸಲಳವಡದದೃಶ್ಯಾಕರಣಸಿದ್ಧಿಯದು ॥
ಎತ್ತ ನೋಡಿದಡತ್ತ ಕತ್ತಲೆ ।
ಸುತ್ತಿಸುೞಿವುದು ನಿನ್ನ ಮಗನಿಂ ।
ದುತ್ತರೋತ್ತರಕಾರ್ಯಸಿದ್ಧಿಯದಾಯ್ತು ಕೇಳೆಂದ ॥೨೭॥

ಎಂದ ಭಾರ್ಗವವಚನಕಾದಶ ।
ಕಂಧರನು ನಸುನಗುತ ಮಗನೆ ಪು ।
ರಂದರಾದಿ ದಿವೌಕಸರ ಭಜಿಸಿದೆ ವಿರೋಧಿಗಳ ॥
ಮಂದಮತಿ ನೀನೆಂದೆನುತ ನಿಜ ।
ನಂದನನ ಕೈವಿಡಿದುಕೊಂಡೈ ।
ತಂದನೊಡನೆ ವಿಭೀಷಣಾದಿಗಳೈದೆ ನಿಜಪುರವ ॥೨೮॥

ಅಕ್ಷಯಾತ್ಮ ವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ್ಮಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷಸುರಮುನಿರಕ್ಷ ಸುಜನಾ ।
ಪೇಕ್ಷ ಸರಸುಖ್ಯ ಪಾಲಿಸು ಲೋಕಪದದಕ್ಷ ॥೨೯॥

ಇಂತು ಏಳನೆಯ ಸಂಧಿ.

## ಎಂಟನೆಯ ಸಂಧಿ

---

ಸೂಚನೆ—ನಡೆದು ಮಣಿಪುರದಿಂದ ರಂಭೆಯು ।
ತುಡುಕಿ ನಳಕೂಬರನ ಶಾಪಕೆ ।
ಸೆಡೆದು ರಾವಣನಾಜಿಯೊಳು ಗೆಲಿದನು ಸುರೇಶ್ವರನ ॥

ಕೇಳು ರಾಘವ ಹೊಕ್ಕನಾದಶ ।
ಮೌಳಿ ತತ್ಪುರಮಧ್ಯಗತ ರಾ ।
ಜಾಳಯುವನಬಲಾಳಿ ಸೂಸುವ ಸೇಸೆಗಳನಾಂತು ॥
ಬೀಳುಕೊಟ್ಟನು ಸಚಿವರನು ತಾಂ ।
ಬೂಳವಸ್ತ್ರಾಭರಣ ಮಣಿಮು ।
ಕ್ತಾಳಿಗಳ ಸನ್ಮಾನದಾನಂಗಳಲಿ ಸತ್ಕರಿಸಿ ॥೧॥

ಕಂದುಮೊಗದುಗುವಶ್ರುವಾರಿಯು ।
ಕುಂದಿದಂಗದ ಕುಸಿದ ಗೋಣಿನ ।
ಮಂದಮತಿ ರೋದನದಲುಱೆ ಕಂಪಿಪ ಕಳೇವರದ ॥
ವೃಂದದಬಲಾಜನವ ಪುಷ್ಪಕ ।
ದಿಂದ ರಾವಣನಿಳಿಗಿಳುಹೆ ಬಱೆ ।
ಕಂದು ಕಂಡನು ವರವಿಭೀಷಣನಾವಧೂಜನವ ॥೨॥

ಎಲೆ ನಿಶಾಚರರಾಜ ದುಷ್ಕೃತ ।
ಕೆಳಸಿದೆಯಲಾ! ನಿನ್ನ ಶೌರ್ಯದ ।
ಬಲುಹು ಮುರಿವುದು ಪರವಧೂವ್ಯಸನಪ್ರಸಂಗದಲಿ ॥
ಕಲುಷವಲೆ ನೀನಿಂದು ಲೋಗರ ।
ಲಲನೆಯರ ತರೆ ಪಾಪವಿಷಲತೆ ।
ಫಲಿತವಾದುದು ನಿನಗೆ ನಿನ್ನಯ ವಿಧಿಯು ಕೇಳೆಂದ ॥೩॥

ಆದೊಡುಸಿರುವೆನೆಮ್ಮ ಜನನಿಯು ।
ಸೋದರಿಯು ಕುಂಭೀನಸೆಯುನೆಱೆ ।
ದುಯ್ದುಸೈ ಮಧುದನುಜನಂತಃಪುರವನೊಳಹೊಕ್ಕು ॥
ಕಾದಿ ಕೊಂದನು ನಿನ್ನ ಸೈನಿಕ ।
ವೈದೆ ರಣದಲಿ ಜಯಮುಖದೊಳವ ।
ನೈದಿದನು ತಾನೆಸಗಿದುದು ತನಗಾಗದಿರದೆಂದ ॥೪॥

ಏನಿದಚ್ಚರಿ ಮೇಘನಾದನೊ ।
ನೀನೊ ಕುಂಭಶ್ರವಣನೋ ನೀ ।
ವೇನ ಮಾಡಿದಿರೆಂದು ಬೆಸಗೊಳಲಾವಿಭೀಷಣನ ॥
ತಾನಱಿಯೆನಿದನಘಮರುಷಣ ।
ಧ್ಯಾನಮತಿ ನಿನ್ನನುಜತನುಜರ ।
ದೇನನಱಿವರು ಶಯನ ಯೋಗೋದ್ಯೋಗದವರೆಂದ ॥೫॥

ಎನಲು ಕಿಡಿಕಿಡಿವೋಗಿ ರಾಕ್ಷಸ ।
ಜನಪನಿರಿಸಿದನಾತ್ಮಪುರವರ ।
ಕನುಜನನು ಪುರರಕ್ಷೆಗಂದೊಡನಾವಿಭೀಷಣನ ॥
ತನತನಗೆ ಬರೆ ಕುಂಭಕರ್ಣಾ ।
ದ್ಯನಿಮಿಷಾರಾತಿಗಳು ತನ್ನೊಡ ।
ನನುವರಕೆ ನಿಜರಥದೊಳೈದಿದನಧಿಕ ಕೋಪದಲಿ ॥೬॥

ಕರೆಸಿ ಮಧುವೆಂಬಸುರನನು ಸುರ ।
ಪುರಕೆ ನಡೆವೆನು ಬಱಿಕ ಹರಿಹಯ ।
ಸುರಪಸೆಯು ನೆಗ್ಗುವೆನು ಮುಗ್ಗುವೆನು ಸುರಸುಮನಸರ ॥
ಧುರದೊಳೆನಗಿದಿರಾರು ಫಡ! ಸುರ ।
ನರಭುಜಂಗಮಲೋಕಗಳಿವೆ ।
ಸ್ವರಸುತನವೇಕಾಧಿಪತ್ಯವೆನುತ್ತ ಗರ್ಜಿಸಿದ ॥೭॥

ನೆರೆದುದಮರರ ಪೂರ್ವವೈರದ ।
ಸುರವಿರೋಧಿಗಳಸುರಪತಿಯೊಡ ।
ನಿರದೆ ಶತಸಾಸಿರದೊಳೇಸೆಂಬೆನು ಮಹಾದ್ಭುತವ ॥
ಕರಿ ರಥಾಶ್ವಮಹೋಗ್ರಸೈರಿಭ ।
ಶರಭ ಸಿಂಹ ವ್ಯಾಘ್ರ ವೃಕ ಸೂ ।
ಕರ ಮಹೋರಗವೆನಿಪ ನಾನಾವಾಹನಂಗಳಲಿ ॥೮॥

ಮುಂದೆ ನಡೆದನು ಮೇಘನಾದನ ।
ದೊಂದು ರಣದುಬ್ಬಿನಲಿ ಸೈನ್ಯದ ।
ಹಿಂದೆ ಬಂದನು ಕುಂಭಕರ್ಣನುದಾರಗರ್ವದಲಿ ॥
ಅಂದು ಮಧ್ಯದೊಳೈದಿದನು ದಶ ।
ಕಂಧರನು ಬಹುವಿಧದ ವಾಹನ ।
ದಿಂದ ನಡೆದುದು ಸೇನೆ ನಾನಾವಾದ್ಯರಭಸದಲಿ ॥೯॥

ಮಿಕ್ಕು ನಡೆದುದು ನಾಲ್ಕುಸಾಸಿರ ।
ಲೆಕ್ಕದಕ್ಷೋಹಿಣಿಯ ಬಲವೆ ।
ಕ್ಕೈಕ್ಕೆಯುಲಿ ನಭವೆನಿತಱಗಲವದನಿತಱಳತೆಯುಲಿ ॥
ಮುಕ್ಕುರಿಕಿ ಮಧುಪುರವ ಮುತ್ತಿತು ।
ರಕ್ಕಸನ ಬಲಜಲಧಿ ವಿಲಯದೊ ।
ಳುಕ್ಕಿ ಜಲನಿಧಿ ಕವಿವವೊಲು ಬ್ರಹ್ಮಾಂಡಮಂಡಲವ ॥೧೦॥

ಕೇಳು ನೃಪ ಮಧುದೈತ್ಯನರ್ಚಿಸಿ ।
ನೀಳಕಂಧರನಿಂದ ಪಡೆದನು ।
ಶೂಲವನು ಬಱಿಕಾಮಹಾಯುಧವಿರೆ ಕರಾಗ್ರದಲಿ ॥
ಕಾಳೆಗದೊಳಸುರಾಮರೋರಗ ।
ಜಾಳವನು ದಳ್ಳುರಿಯ ದಾಳಿಗೆ ।
ಬೀಳುವೆನು ಗೆಲಲರಿದು ಪುರಹರನುೞಿಯುಲಿತರರಿಗೆ ॥೧೧॥

ಅಸುರಬಲಕೋಲಾಹಲವನೀ ।
ಕ್ಷಿಸಿದಳೈ ಕುಂಭೀನಸೀವಧು ।
ದಶಶಿರನ ಬಲವೆಂದು ನಿಶ್ಚೈಸಿದಳು ಮನದೊಳಗೆ ॥
ಆಸವಸದೊಳೈತಂದೊಡನೆ ಸುಮ ।
ನಸವಿರೋಧಿಯು ಕಂಡಳಾಬಲ ।
ವಿಸರಮಧ್ಯದೊಳುಚಿತದಲಿ ನುಡಿಸಿದಳು ರಾವಣನ ॥೧೨॥

ಎಲೆ ಮಗನೆ ದಶವದನ ಕೇಳೆ ।
ನ್ನೊಳು ಕೃಪಾಲೋಕನವನೊಡರಿಚು ।
ಕುಲವಧುಗಳಿಗೆ ಭೀತಿ ವೈಧವ್ಯದ ವಿಷಾದವಲ ॥
ಸಲಹು ಕರುಣಿ ಮದೀಯಕಾಂತನ ।
ನೊಲಿದು ತನ್ನಯ ಮಾತ ಮೀಱದೆ ।
ಸಲಿಸೆನಲು ನಿಜಪತಿಯು ಕರೆ ಭಯಬೇಡ ಹೋಗೆಂದ ॥೧೩॥

ಆದೊಡೆ ಸುಲೇಸೆನುತ ಹರುಷದೊ ।
ಳೈದಿದಳು ಪತಿಯೆಡೆಗೆ ನಿದ್ರೆಯೊ ।
ಳಾದನುಜನಿರಲೆಬ್ಬಿಸಿದಳವಳುಚಿತವಚನದಲಿ ॥
ಕಾದುವೊಡೆ ಸುರರೊಳು ದಶಾನನ ।
ನೈದುವನು ತವಭುಜಸಹಾಯುವ ।
ನೈದಿಸಾತನನಾದರಿಸು ಹೋಗೆಂದಳುಚಿತದಲಿ ॥೧೪॥

ಎಂದ ನುಡಿಗಮರಾರಿ ಕಡುಲೇ ।
ಸೆಂದು ದಶಶಿರನಿದ್ದೆಡೆಗೆ ನಡೆ ।
ತಂದು ಮನ್ನಿಸಿದನು ಯಥಾನ್ಯಾಯದಲಿ ರಾವಣನ ॥
ಅಂದಿನಿರುಳಲ್ಲಿರ್ದು ಮಱುದಿನ ।
ಮಂದಿ ಸಹಿತೈದಿದನು ಬಱಿಕ ಪು ।
ರಂದರನ ಪುರವರವನಱಸುತ ಕೂಡೆ ಸಂಗರಕೆ ॥೧೫॥

ಆಸುಪರ್ವಾರಾತಿ ವರಕೈ ।
ಲಾಸದೇಶವನೈದಿದನು ಯ ।
ಕ್ಷೇಶನಗರೋಪಾಂತ ಹಿಮಕರಕಾಂತವೆಂದೆನಿಪ ॥
ಸೂಸೆ ಮಂದಾಕಿನಿಯ ಜಲವಂ ।
ದಾಸವಿಹಾರಸ್ಯಂದಿ ಘನಶೋ ।
ಭಾತಿಲೋಚ್ಚಯವೆಸೆದುದತಿರಮಣೀಯವೆಂದೆನಿಸಿ ॥೧೬॥

ಅಲ್ಲಿ ಬಿಟ್ಟುದು ಬೀಡು ಸುರಕುಲ ।
ದಲ್ಲಣನ ರಮ್ಯಪ್ರದೇಶದೊ ।
ಳಲ್ಲಿಗಲ್ಲಿಗೆ ತಳಿತ ಗುಡಿ ಗೂಡಾರ ರಚನೆಯಲಿ ॥
ನಿಲ್ಲದೈದಿದನಸ್ತಶೈಲಕೆ ।
ಮೆಲ್ಲಮೆಲ್ಲನೆ ರವಿ ದಶಾಸ್ಯನ ।
ಪಲ್ಲಗೆಗೆ ಸೆಡೆದೋಡಿ ಮುಳುಗಿರುವಂತೆ ಶರಧಿಯಲಿ ॥೧೭॥

ಗಾಲಿಯೊಂದೇ ರಥಕೆ ಕುದುರೆಗ ।
ಳೇೞು ಸಾರಥಿ ಹೆಳವನಿದಿರೊಳು ।
ಕಾಲಿಡುವೆನೀಲೋಕಯಾತ್ರೆಗದೆಂತು ಪೋದಪೆನು ॥
ಮೇಲೆ ವಿಷ್ಣುಪದಾಶ್ರಯವೆ ಗತಿ ।
ಕೇಳಿಪುದು ವಾರುಣಿಗೆ ಕೈಗುಡ ।
ಲಾಪುದಧೋಗತಿಗೆನಲು ರವಿ ಕೆಡೆದನಬ್ಧಿಯಲಿ ॥೧೮॥

ಅತ್ತ ದಿನಮಣಿದೀಪವಡಗಿರ ।
ಲಿತ್ತ ಕತ್ತಲೆಯೆಂಬ ರಕ್ಕಸಿ ।
ತುತ್ತಿದಳು ಬಾಯ್ದೆರೆದು ಲೋಕಾಲೋಕಚೇತನವ ॥
ಸುತ್ತ ಮಱೆದೊರಗಿದುದು ದೈತೇ ।
ಯೋತ್ತಮನ ಬಲಜಲಧಿ ನಸುಮಸೆ ।
ಪೆತ್ತ ಶಸ್ತ್ರಗ್ರಾಹಮಕರಾದಿಗಳ ಸುಱಿವಿನಲಿ ॥೧೯॥

ಮತ್ತೆ ಕತ್ತಲೆಯೆಂಬ ದಂತಿಯು ।
ನೆತ್ತಿಯೊಡನೊಡೆದುಚ್ಚಳಿಪ ಪೆ ।
ರ್ಮುತ್ತೊ ತಾರಾಮೌಕ್ತಿಕವ್ರಜಜನ್ಮಶುಕ್ತಿಕೆಯೊ॥
ಬಿತ್ತರದ ಕೌಮುದಿಯ ಬೆಳಗಿನ ।
ಬಿತ್ತೊ ತಾನೆನೆ ಪೂರ್ವಪರ್ವತ ।
ದುತ್ತಮಾಂಗವನಡರಿದನು ವಿಧುವಧಿಕತೇಜದಲಿ ॥೨೦॥

ಆವಿಮಲಕೌಮುದಿಯೊಳಡರಿದ ।
ನೈ ವಿಬುಧವಿದ್ವಿಷ್ಟ ರಜತ ।
ಗ್ರಾವದಗ್ರದ ಚಂದ್ರಕಾಂತಾಮಲಶಿಲಾತಲವ ॥
ದೇವದಂಪತಿಶತರತಿಕ್ರೀ ।
ಡಾವಿಮುಕ್ತಕಚಪ್ರಸೂನರ ।
ಜೋವಿಹಾರಸವಿಾರನೊಯ್ಯನೆ ಸುಳಿದುದಚಲದಲಿ ॥೨೧॥

ಸಾಲ ತಾಲ ತಮಾಲ ಮಧುರರ ।
ಸಾಲ ಜಂಬು ಕದಂಬ ತುಂಬುರ ।
ಬೇಲ ತಿಲ್ವಕ ಬಿಲ್ವ ತಿಲಕಾಮಲಕ ಪುನ್ನಾಗ ॥
ಜಾಲ ಗಾಲವ ಮಧುಕ ಧವ ಹಿಂ ।
ತಾಲ ಕಾಲಾಗರು ವಕುಲ ಕು ।
ದ್ದಾಲ ಕೃತಮಾಲಾದಿಭೂಜಗಳಿರ್ದುವದ್ರಿಯಲಿ ॥೨೨॥

ಪೊಸವಸಂತ ವಸಂತದೊಳಗಿನಿ ।
ಸೆಸೆವ ತೆಂಬೆರಲರಲ ಬಳಿಯಲಿ ।
ಪಸರಿಸುವ ಪೂಗಂಪು ಕಂಪಿನ ಸುಖಕೆ ಬೆಂಬಿಡದೆ ॥
ಮುಸುಱುವಳಿಯುಳಿರವದ ಮೆಯ್ಸಿರಿ ।
ಗೆಸೆವ ಕಿನ್ನರಗೇಯ ಗೇಯ ।
ಪ್ರಸರದನು ದನುಜೇಂದ್ರಗಿತ್ತುದನಂಗದೀಪನವ ॥೨೩॥

ಅಸುರನಿರ್ದಸನಂಗತಾಪ ।
ಶ್ವಸಿತಚೇತನನನಿತಱೊಳಗಾ ।
ಗಸದ ಗತಿಯಲಿ ರಂಭೆ ಬರುತಿರ್ದಳು ವಿಲಾಸದಲಿ ॥
ದೆಸೆದೆಸೆಗೆ ಕಂಪಿಡುವ ಕಾಯದ ।
ಮಿಸುಪ ಕಾಂತಿರಸಾಬ್ಧಿಯೊಳು ನಿ ।
ಪ್ಪಸರದಲಿ ಮುಳುಗಿದುದು ಮನವನಿಮೇಷವಿದ್ವಿಷನ ॥೨೪॥

ಹೋಗಲೀಯದೆ ತಡೆದನೈ ಖಳ ।
ನಾಗಸದ ಬಟ್ಟೆಯೊಳು ರಂಭೆಯು ।
ನಾಗ ನುಡಿಸಿದನುಚಿತದಲಿ ಕೈವಿಡಿದು ಕಾತರಿಸಿ ॥
ಹೋಗದಿರು ತರಳಾಕ್ಷಿ ಮನದನು ।
ರಾಗವನು ಸಲಿಸೆನ್ನ ಪುಣ್ಯದೊ ।
ಳೀಗ ನೀನ್ನೈತಂದೆ ತನ್ನೆಡೆಗೆನುತಲಿಂತೆಂದ ॥೨೫॥

ನಿನ್ನ ಮುಖಶೀತಾಂಶುಶೋಭೆಗೆ ।
ನಿನ್ನಧರಪಲ್ಲವದ ಶೋಭೆಗೆ ।
ನಿನ್ನ ಕೋಮಲತನುವಿಮಲಮಲಯಜಮಹೀರುಹಕೆ ॥
ಎನ್ನ ನೇತ್ರಚಕೋರಯುಗಳವ ।
ದೆನ್ನ ಮಾನಸಯೂನಪರಭೃತ ।
ವೆನ್ನ ಭುಜಭುಜಗಂಗಳೆಳಸುವುವಬಲೆ ಕೇಳೆಂದ ॥೨೬॥

ನಾಕಸಂಪದದತಿಶಯವೆ ಜಘ ।
ನಾಕೃತಿಯುಸಾಂತುದೊ ಸುಧಾರಸ ।
ವೇ ಕಿಸಲಯಾಧರವ ಧರಿಸಿದುದೋ ನಿಧಾನಿಸಲು ॥
ಜೋಕೆ ಮಿಗೆ ರಾಕೇಂದು ವದನ ।
ಪ್ರಾಕೃತಿಯುನೈದಿದುದೊ ನೂತನ ।
ಕೋಕನದ ಸಂಭವನ ಸೃಷ್ಟಿಯುದಾಗದಿರದೆಂದ ॥೨೭॥

ಈವಸಂತಶ್ರೀಸುಧಾಶೋ ।
ಭಾವಿಮಲಚಂದ್ರಾಂಶು ತಣ್ಣೆಲೆ ।
ಈವಸಂತಾನಿಲಸ ಸುಜಾವೀನಿರ್ಜನಸ್ಥಾನ ॥
ಈವಿಷಯು ವಿಧುಕಾಂತವಿಪುಲ ।
ಗ್ರಾವದೇಶವನಂಗರಾಜ್ಯ ।
ಶ್ರೀವಿಲಾಸವನಿತು ದೆಮುಗುಪಭೋಗಿಸೇೞಿಂದ ॥೨೮॥

ಎಸಲು ನಡನಡುಗಿದಳು ರಾಕ್ಷಸ ।
ಜನಸನೊಡನಿಂತೆಂದಳೆಲೆ ದನು ।
ತನುಜ ಕುಲಕುವಲಯಸುಧಾಕರ ಕೇಳು ನೀನೆನುತ ॥
ನಿನಗೆ ಸೊಸೆಯಲ್ಲಾ ಕುಬೇರನ ।
ತನಯ ನಳಕೂಬರನ ವಧುವಾ ।
ನಿನಿತು ಪೇರೆಯುಸುೞಿಯೆ ಕಷ್ಟವಿದಂದಳಾರಂಭೆ ॥೨೯॥

ಎಲೆ ನಿಶಾಚರರಾಜ ಪರವಧು ।
ಗಳುಪಲಾಗದದಂತಿರಲಿ ಸೊಸೆ।
ಗೆಳಸಿದಪೆ ಮಗನಲ್ಲವೇ ನಳಕೂಬರನು ನಿಸಗೆ ॥
ಬಳೆಸದಿರು ಪಾತಕವ ಲೋಕದ ।
ಬಳಕೆಯುಲ್ಲಿದಕಾರ್ಯವೆನೆ ಖಳ ।
ತಿಲಕನತಿಚಾಟೂಕ್ತಿಗಳನೆಸಗಿದನು ಸುರಸತಿಗೆ ॥೨೦॥

ದೇವಲೋಕಸ್ಥಿತಿಗಳಿವ ಮು ।
ನ್ನಾವಱಿಯುದವರಲ್ಲ ಮೈದುನ ।
ಭಾವ ಮಾವ ಸುತಾಗ್ರಜಾನುಜಜನಕರೆಂದೆನಿಪ ॥
ಕೋವಿದರಿಗೊರ್ವಳೆ ಕಣಾ ! ರಾ ।
ಜೀವಮುಖಿ ನೀನೆಂದೆನುತ ರಂ ।
ಭಾವಘುವನೊಡಗೂಡಿದನು ಸುರರಿಪು ಬಲೋತ್ಕರದಿ ॥೨೧॥

ಹಾರ ಹರಿದುದು ನಿಱಿಯುಱಿದುದೊ ।
ಯ್ಯಾರ ಕೆಟ್ಟುದು ನೂಪುರವನದ ।
ನಾರು ಕಂಡರು ಮುಡಿಯುಱಿದು ಕೆದಱಿದುವು ಜಿರುಮುಗುಳು ॥
ಊರುಗಳು ನಡನಡುಗಿದುವು ನಿ ।
ಟ್ಟಾರಿಗೊಂಡೋಡಿದುವು ಸುಯ್ ಸುರ ।
ನಾರಿ ರಾಹುವುಗುಟ್ಟ ಶಶಿಯಂತಿರ್ದಳಳವಱಿದು ॥೨೨॥

ಬಿಟ್ಟನಮರವಿರೋಧಿ ಮುಡಿದು ಬಿ ।
ಸುಟ್ಟ ಪೂಮಾಲೆಯುವೊಲಾವಧು ।
ಕೆಟ್ಟೆನೆಂಪೈದಿವಳು ನಳಕೂಬರನ ಹೊರಗಾಗಿ ॥
ತೊಟ್ಟಡುವ ಕಂಬನಿಯು ಕಳವಳ ।
ದಿಟ್ಟಡೆಯು ಕರಣೇಂದ್ರಿಯಂಗಳ !
ನಿಟ್ಟುಸಿರ ಸುರಸತಿಯು ಭಾವವನಾತನೀಕ್ಷಿಸಿದ ॥೨೩॥

ಏನಿದೇನುಸಿರಬಲೆ ನಿನ್ನ ಮ ।
ನೋನುಗತವಾಗಿಹ ವಿಷಾದವಿ ।
ದೇನೆನಲು ಕೈಮುಗಿದು ನುಡಿದಳು ಬೆದಱಿ ಭೀತಿಯುಲಿ ॥
ನೀನೆ ಕರುಣಿ ಶತಾಪರಾಧೆಯು ।
ದೀನೆಯನು ಸಲಹೆನುತ ಹೊರಳಿದ ।
ಳಾನಿತಂಬಿನಿ ಬಿದ್ದು ನಳಕೂಬರನ ಚರಣದಲಿ ॥೨೪॥

ಏಱಿನುತ ಪಿಡಿದೆತ್ತಿಯಂಜಬೆ।
ಪೇಱಿನಲು ತವಪದಪಯೋಜವ।
ನೋಲಗಿಸಲಾಸೈತರಲು ಕೈಲಾಸಶೈಲದಲಿ॥
ತೋಳ ಬಲುಹಿಂ ಪಿಡಿದು ಸೊಸೆಯೆನ।
ಲಾಲಿಸದೆ ಮದ್ವಾಕ್ಯವನು ದಶ।
ಮೌಳಿ ಮದೋನ್ನತಿಯನಿಕ್ಕಿದನೆಂದಳಿಂದುಮುಖಿ ॥೨೫॥

ಕೇಳಿದಾಕ್ಷಣವಾನುಡಿಯ ಕ।
ಣ್ಣಾಲಿ ಕೆಂಡವನುಗುಱಿದುವು ಧೂ।
ಮಾಳಿ ನಾಸಾಶ್ವಾಸದಲಿ ಸೂಸಿದುವು ಸುಱಿಸುಱಿದು॥
ಕೇಳು ಶಾಪವನೊಲಿಯದಬಲಾ।
ಜಾಲವನು ದಶಮೌಳಿ ನೆರೆದಂ।
ದೇೞು ಸೀೞುಹುದವನ ತಲೆ ಹುಸಿಯಲ್ಲ ಹೋಗೆಂದ ॥೨೬॥

ಎಂದೆನುತ ಶಾಪೋದಕವನವ।
ನಂದು ಬಿಸುಟನು ಧರೆಗೆ ಸಾಧ್ವಿಯ।
ರಂದು ಕೊಂಡಾಡಿದರು ನಳಕೂಬರನ ತಮತಮಗೆ॥
ಅಂದಿನಿಂದೊಡಬಡದ ಸತಿಯರೊ।
ಳೊಂದಿದಾಕ್ಷಣ ಮರಣ ತನಗಹು।
ದೆಂದು ರಾವಣನಳುಕಿದನು ಮನುಜೇಂದ್ರ ಕೇಳೆಂದ ॥೨೭॥

ಕೇಳಿ ನಳಕೂಬರನ ಶಾಪವ।
ತಾಳಿದನು ಬೇವಸವನಾ ದಶ।
ಮೌಳಿ ಮತ್ತದನೆಣಿಸುವನೆ ವರದಾನಗರ್ವದಲಿ॥
ಸೂಳಯಿಸೆ ನಿಸ್ಸಾಳತತಿಯು।
ಬಾಪ್ಪಳುತನದದಟನಲಿ ಭುಜಬಲ।
ದೇಱಿಗೆಯ್ದಿದನು ಸುರಪುರಕಖಿಳಬಲಸಹಿತ ॥೨೮॥

ಬಹಳ ಬಲಕೋಲಾಹಲವಿದೇ।
ನಹಹ! ರಾವಣನಾಗದಿರನೆಮ।
ಗೆ ಹಿತರಾರೀಸಮಯದೊಳಗೆಂದೆನುತ ಸುಮನಸರು॥
ವಹಿಸಿ ಕೊಂಬವರಾರು ರಣನಿ।
ರ್ವಹಿಸಲರಿಯದು ಸುರರಿಗಿದು ದು।
ಸ್ಸಹವೆನುತ ಸುರಪತಿಯು ಬಾ[illegible]ಯೋಡಿದರು ಭೀ[illegible] ॥೨೯॥

ದೇವ ಬಂದುದು ದಾಟಿ ನವಿಸ್ಮಾ।
ದೇವಲೋಕಕೆ ದನುಜರಿಂದಿದ।
ನಾವಸ್ಥೆ ಪರಿಹರಿಸುವನು ಮುರಹರನೊ ಪುರಹರನೋ॥
ತಾವರೆಯ ನಂದನನೊ ಮಿಕ್ಕಿನ।
ದೇವರಿಂದಿದು ತೀರಲರಿಯದು।
ರಾವಣನ ರಣವೆಂದು ಬಿನ್ನೈಸಿದರು ಸುರಪತಿಗೆ ॥೪೦॥

ಕೂಡೆ ರುದ್ರಾದಿತ್ಯವಸುಗಳು।
ಕೂಡಿದರು ವರಸಿದ್ಧಸಾಧ್ಯರು।
ಜೋಡಿಸಿತು ವಿದ್ಯಾಧರಾಪ್ಸರಗುಹ್ಯಕರು ಸಹಿತ॥
ಪಾಡುಪಂತದೊಳಿವನ ಗೆಲಿದೊಡ।
ಗೂಡದೊಡೆ ಜಯಸಿರಿಯೊಳಿಪ್ಪೊಳು।
ಕೂಡರಮರಿಯರೆಂದೆನುತ ಬೊಬ್ಬಿರಿದರುಬ್ಬಿನಲಿ ॥೪೧॥

ಸಾಕು ಸೈರಿಪುದಮರರಿವನೊಳು।
ಸೂಕದಾಹವವೆನುತ ನಿಶಿಯೊಳು।
ಪಾಕಶಾಸನನೈದಿದನು ಫಣಿಶಯನನಿರ್ದೆಡೆಗೆ॥
ಆಕುಶೇಶಯದಳನಯನ ಪದ।
ಕೋಕನದಕಭಿನಮಿಸಿ ಕೈಮುಗಿ।
ದಾಕುಲಾಂತಃಕರಣಮತಿ ಮಾಡಿದನು ಬಿನ್ನಹವ ॥೪೨॥

ದೇವ ಬಿನ್ನಹ ರಕ್ಷಿಸೈ ರಾ।
ಜೀವಲೋಚನ ದೈತ್ಯಕುಲದವ।
ದಾವಶಿಖಿ ಸುರಕುಲಮಹೋತ್ಪಲಷಂಡಮಾರ್ತಂಡ॥
ರಾವಣನೆನಿಪ್ಪಮರರಿಪು ರಾ।
ಜೀವಸಂಭವನಿತ್ತ ವರದಿಂ।
ದೇವಲೋಕವನುರುಹುದಿರನೆಲೆ ದೇವ ಕೇಳೆಂದ ॥೪೩॥

ಆನಿಶಾಚರನೈದಿದನು ವರ।
ದಾನಬಲದಲಿ ದೇವಲೋಕವ।
ನಾನಲಳವಲ್ಲಮರಕುಲಕಾತನ ಪರಾಕ್ರಮವ॥
ನೀನೆ ಬಂದಸುರಾರಿ ಚಕ್ರದೊ।
ಳಾನಿಶಾಟನ ತಲೆಯನರಿಯದೊ।
ಡೀನಿಮಿಷವನಿಮಿಷನಗರಿಯಮರಾರಿಗಹುದೆಂದ ॥೪೪॥

ಆದೊಡೆಲೆ ಬಲವೈರಿ ದನುಜನ ।
ಕಾದಿ ಗೆಲುವೊಡೆ ಕಾಲಗತಿ ಮುಂ ।
ದೈದುವುದು ಪೇಳಿತೊಂದುಪಾಯದೊಳೈದಿ ಕೊಂದಪೆನು ॥
ಆದನುಜಗಬ್ಜಾಸನನ ವರ ।
ವಾದುದವನಿಂದಾನು ಮನ್ನಿಸ ।
ಪಾದವುದೆ ಪೇಳೆಂದು ಮತ್ತಿಂತೆಂದನುಚಿತದಲಿ ॥೪೫॥

ಆವನನೊಮ್ಮೆಗೆ ಮರ್ತ್ಯವೇಷದೊ ।
ಳವತರಿಸಿ ಕೊಂದಪೆನು ನಾನದ ।
ಕವಧಿಯನು ಹಾರೈಸುತಿರ್ದಪುದೆನುತ ಸುರಪತಿಯು ॥
ಆವಿಕಥವಿದೆಂದೆನಲು ಸರಿದನು ।
ದಿವಿಜಪತಿ ದುಗುಡದಲಿ ನಗರಿಗೆ ।
ರವಿಯು ರಥವಡರಿದುದು ಮಸ್ತಕಕುದಯಪರ್ವತದ ॥೪೬॥

ಉದಯವಾಗದ ಮುನ್ನ ವಾದ್ಯಗ ।
ಳೊದರಿದುವು ದೆಸೆ ಬಿರಿಯಲೆದ್ದರು ।
ಕದನಗಲಿಗಳು ದಾನವರು ಸಂಗರಕೆ ಬೊಬ್ಬಿರಿದು ॥
ಮದಮುಖರ ದಳದುಳಕೆ ಮುಂಕೊಂ ।
ಡೊದರಿದರು ಸುರಪುರವ ಮುಸುಕಿತು ।
ಬಿದಿರಿಕೆಯ ಬೇಟ್ಕೊಟ್ಟ ಬಿರುವೊನಲಿದ್ದು ಬೀದಿಯಲ ॥೪೭॥

ಸಾಕು ಗಜಬಜವೇಕೆ ದನುಜರಿ ।
ಗೇಕಿನಿತು ಸಂಗರಕೆ ನಡೆಯಲಿ ।
ನಾಕಿಗಳ ಬರಹೇಳೆನುತ ಜಂಭಾರಿ ಕೈವೀಸೆ ॥
ಆಕೆವಾಳರು ನಡೆದರಮರರ ।
ನೇಕಸನ್ನಾಹದಲಿ ಬಲದಲಿ ।
ಸೂಕುತಾಕಾಡುದು ಮಹಾಸಂಗ್ರಾಮಸಂಕುಲದ ॥೪೮॥

ಮೋಹರಿಸಿದುದು ಕೂಡೆ ರಣಸ ।
ನ್ನಾಹದಲಿ ಬಲವೆರಡು ಮುಸಗಿದು ।
ದಾಹವಕೆ ಜಲನಿಧಿಗೆ ಜಲನಿಧಿ ಮುಳಿತು ಸಿಲುವಂತೆ ॥
ಬೇಹ ಭಟಕೋಟಿಗಳ ನೋಟದ ।
ಕಾಹಿನಲಿ ತಾಗಿದುದು ಕವಿದವ ।
ದಾಹಿಸಂತೆ ದವಾಗ್ನಿ ದಾನವಾನೀಕಕಾಳಿಯಲಿ ॥೪೯॥

ತೋಟ ಮಸಗಿತು ಕೈದುಗಳ ಹೋ।
ರಾಟ ಹೆಚ್ಚಿತು ಮುಸಲ ಮುದ್ಗರ।
ಖೇಟ ಖಡ್ಗ ಮುಸುಂಡಿ ಪರಿಘ ಪ್ರಾಸವೆಂದೆನಿಪ॥
ಕೋಟಿ ಸಂಖ್ಯೆಯ ಶಕ್ತಿಶರಗಳು।
ನಾಟದೇಱಿನೊಳುಗುವ ನೆತ್ತರ।
ನೋಟದಲಿ ನಭವೆಸೆದುದುಪವನದಂತೆ ತಳಿರಿಡಿದ ॥೫೦॥

ಕಾದಿತುಭಯದ ಸೇನೆ ಮಾತಿನ।
ಮೂದಲೆಯ ಮುಂಬರಿವ ತವಕದ।
ಕೈದುಗಳ ಖಣಿಕಟಿಲ ರಭಸದ ಮನದ ಮುಳಿಸುಗಳ॥
ತೋದ ರಕುತದ ಜಿಗಿಯ ಮೆಯ್ಗಳ।
ಬಾದಣದ ನಿಡುಗರುಳ ನಿಕ್ಕಡಿ।
ಯಾದ ತೊಡೆತೋಳುಗಳ ರಣರಸವಿತ್ತುದದ್ಭುತವ ॥೫೧॥

ಜರಿದುದಸುರಬಲಾಂಬುನಿಧಿ ನಿ।
ರ್ಜರಮಹಾಬಲಮಂದರದ ನಿ।
ಷ್ಠುರಮಥನಕದ ಕಂಡನಮರಾರಾತಿ ದೂರದಲಿ॥
ಕರೆದು ಶುಕ ಸಾರಣ ಮಹೋದರ।
ಘುರವಿಜಯ ಧೂಮ್ರಾಕ್ಷ ದುರ್ಮುಖ।
ಖರ ಮಹಾಪಾರ್ಶ್ವಾದಿಗಳ ಕಳುಹಿದನು ಕಾಳೆಗಕೆ ॥೫೨॥

ಕರೆಸಿ ಮಾರೀಚ ಪ್ರಹಸ್ತಾ।
ಸುರ ನಿಕುಂಭ ತ್ರಿಶಿರ ದೂಷಣ।
ದುರುಳಯಜ್ಞಾಂತಕ ಸುರಾಂತಕ ಸೂರ್ಯರಿಪುವೆನಿಪ॥
ಹರವಿಕಟ ಸುಪ್ತಘ್ನ ಶುಕ ದು।
ರ್ಧರ ಮಹಾಮಾಲಿಪ್ರಮುಖ ನಿ।
ರ್ಜರವಿರೋಧಿಗಳನು ಮಹಾಸಂಗರಕೆ ನಿಯಮಿಸಿದ ॥೫೩॥

ಕಾಳೆಗಕೆ ಮುಂಕೊಂಡು ಕೂಡೆ ಸು।
ಮಾಲಿ ನಡೆದನು ದೈತ್ಯಸೇನಾ।
ಜಾಲ ನಡೆದುದು ಕೂಡಿದುದು ನಾಕಿಗಳನೊಡೆದುಲಿದು॥
ಮೇಲೆ ಬೀಱುವ ಕೈದುಗಳ ಬಲು।
ದಾಳಿಯಲಿ ಸುಮನಸರ ಮೋಹರ।
ದಾಳು ಮುಱಿದೋಡಿದುದು ಭೀತಿಯೊಳಂದು ದೆಸೆದೆಸೆಗೆ ॥೫೪॥

ಅನಿತಱೊಳು ಸಾವಿತ್ರನೆಂಬೆಂ।
ಟನೆಯು ವಸು ನಡೆತಂದು ತೊಡಗಿದ।
ನನುವರವನಸುರರೊಳು ಮರಳಿತು ಮತ್ತೆ ಸುರಸೇನೆ॥
ಕನಲಿ ನಿಂದರು ತ್ವಷ್ಟೃಪೂಷಾ।
ದ್ಯನುಪಮಾದಿತ್ಯರು ಮಹಾಜಿಗೆ।
ತನತನಗೆ ಮುಂಕೊಂಡುದೇನೆಂಬೆನು ಮಹಾದ್ಭುತವ ॥೫೫॥

ಮಿಕ್ಕ ದನುಜರು ಸುಮನಸರನೊಳ।
ಹೊಕ್ಕು ಹೊಯ್ದರು ಪರಿಘದಲಿ ಬಲು।
ಕಕ್ಕಡೆಯೊಳಸಿಮುಸಲಮುಖ್ಯಮಹಾಯುಧಂಗಳಲಿ॥
ರಕ್ಕಸರ ರಣರೌದ್ರಕರ್ಮದ।
ಕಕ್ಕಸಕೆ ಮೊಗದಿರುಹೆ ದಿವಿಜರು।
ಹೊಕ್ಕನಸುರರ ರಣಕೆ ಸಾವಿತ್ರಾಖ್ಯವಸುವೆಂದ ॥೫೬॥

ಕೋಲ ಮಱಗಱೆದನು ಸುಮಾಲಿಯು।
ಮೇಲೆ ವಸುವಾಸರಳನರಿದು ಸು।
ಮಾಲಿ ಮಗುಳೆಚ್ಚನು ಸುರಾರಿಯು ಸರಳ ಬಱಕೆಯ್ದು॥
ಬೀಟಲೆಚ್ಚನು ವಸುವರಾತಿ।
ವ್ಯಾಳರಥವನು ವಿರಥನಾಗಿ ಸು।
ಮಾಲಿ ನಿಲೆ ಗದೆಗೊಂಡು ಮತ್ತೆಱಗಿದನು ರಕ್ಕಸನ ॥೫೭॥

ಏನನೆಂಬೆನು ವಸುಗದಾಹತ।
ದಾನವಾಂತಸ್ಸ್ಥಿತಮಹಾಸ್ಥಿವಿ।
ತಾನದೊಳಗಿನಿಸುಳಿಯದಾದುದು ಮಿಕ್ಕ ಮಾತೇನು॥
ಆನಿಶಾಚರನಳಿಯಲಸುರರ।
ಸೇನೆ ಮುರಿದೋಡಿದುದು ದೆಸೆದೆಸೆ।
ಗಾನಲಮ್ಮದೆ ಸಮ್ಮುಖಕೆ ಸಾವಿತ್ರವಸುವರನ ॥೫೮॥

ಕೂಡೆ ರಾವಣ ಕಂಡನಾಜಿಯೊ।
ಳೋಡುತಿಹ ನಿಜಬಲವನಾಗಳೆ।
ಜೋಡಿಸಿದನಸುಪಮವರೂಥವನಗ್ನಿಮಯವೆನಿಪ॥
ಈಡಿರಿವ ಕೋಪಾನಲಾರ್ಚಿಯು।
ಕೂಡೆನಲು ಕೆಂಪಡರ್ದ ಕಣ್ಗಳು।
ನೋಡೆ ಭಯವನು ಬೀಱೆ ನಡೆತಂದನು ರಣಾಂಗಣಕೆ ॥೫೯॥

ಕಂಡರಮರರು ಮೇಘನಾದನ ।
ಚಂಡಭುಜಬಲದನುವನಾಗಳೆ ।
ಕಂಡ ಕಡೆಗೋಡಿದರು ಜವರಕೆ ಬೆದಱಿ ಭೀತಿಯಲಿ ॥
ಕಂಡರೊಳಸರಿವನಿಮಿಷರನಾ ।
ಖಂಡಲನು ರಣಕೈದಲಮರರ ।
ತಂಡವಿದೆ ಬಂದನು ಜಯಂತನದೇಕೆ ಭಯವೆಂದ ॥೬೦॥

ಎಂದು ನುಡಿವನಿತಱೊಳು ನಿರ್ಜರ ।
ವೃಂದಸಹಿತೈದಿದನು ವಿಪುಲ ।
ಸ್ಯಂದನದೊಳಮರೇಂದ್ರಸುತನಂದಧಿಕರಭಸದಲಿ ॥
ಸಿಂದರಮರರು ನಿರ್ಭಯದೊಳೊಡ ।
ನಂದು ಸಮರಕೆ ದಶವದನಸಂ ।
ಕ್ರಂದನನ ನಂದನರೊಳಾಹವವಾದುದದ್ಭುತದ ॥೬೧॥

ಮುಳಿದು ರಾವಣಿ ಕಱೆದನಂಬಿನ ।
ಮಱೆಯನಿಂದ್ರಾತ್ಮಜನ ಮೇಲು ।
ಚ್ಚಳಿಸಿ ಹಾಯ್ದುವು ನಿಡುಸರಳು ಸಂದಣಿಸಿ ಗಱಿಸಹಿತ ॥
ಬಱಿಕವನ ಸಾರಥಿಯೆನಿಪ ಮಾ ।
ತಳಿಸುತನ ಗೋಮುಖದ ಮೇಲ ।
ಪ್ಪಳಿಸಿ ಕವಿದುವು ಹೊಗರಲಗು ಹೊದರೆದ್ದು ಹೊಡಕರಿಸಿ ॥೬೨॥

ಆತನಾರಾವಣನ ಸುತ ವಿ ।
ಖ್ಯಾತ ಸೂತರಥಾಶ್ವನಿಚಯವ ।
ಘಾತಿಸಿದನೊಟ್ಟೆದನು ಬಾಣವನಸುರನೊಡಲಿನಲಿ ॥
ಈತನೆಚ್ಚನು ಕಯ್ಯೊಡನೆ ಪುರು ।
ಹೂತಸುತನ ರಥಾಶ್ವಸಾರಥಿ ।
ಕೇತುಚಾಪನಿಷಂಗವಿಕ್ಕಡಿಯಾಗೆ ನಿಮಿಷದಲಿ ॥೬೩॥

ಎಡದೊಳೈತಹ ನಿರ್ಜರರ ವಂ ।
ಗಡವನೆಚ್ಚನು ಬಲದೊಳೊದಗುವ ।
ಕಡುಹುಕಾಱರನಿಕ್ಕಿದನು ಸೆಕ್ಕಿದನು ಸರಳುಗಳ ॥
ಒಡನೆ ರಕ್ಕಸ ಮಾಯೆಯಲಿ ಮುಂ ।
ಗೆಡಿಸಿದನು ಸುರಸೈನಿಕವನೊಡ ।
ನೊಡನೆ ಸದೆದನು ಮತ್ತೆ ಸಂಕ್ರಂದನನ ನಂದನನ ॥೬೪॥

ಜೋಕೆ ಜರಿದುದು ರಥದ ಸಾರಥಿ ।
ಯೋಕರಿಸಿದನು ಶೋಣಿತವನಾ ।
ನಾಕಶಾಸನತನಯನಳವಳಿದೊಱಗಿದನು ನೆಲಕೆ ॥
ನಾಕಿಗಳು ದೆಸೆದೆಸೆಗೆ ಪರಿದರು ।
ಸಾಕು ಸಂಗರವೆಮಗೆನುತ ಲೋ ।
ಕೈಕವೀರನ ರಣಕೆ ನಿಲುವರದಾರು ರಾವಣಿಯ ॥೬೫॥

ಬೇಗ ಬಂದು ಪುಲೋಮನಾಶಕ ।
ನಾಗತನಯನ ಕೊಂಡು ಹೊಕ್ಕನು ।
ಸಾಗರವನೊಡೆಬಗೆದು ಪೌಹಿತ್ರಾನುರಾಗದಲಿ ॥
ಆಗ ಕಂಡನು ವಜ್ರಿ ಸಮರೋ ।
ದ್ಯೋಗದೊಳು ಮಗನಿಲ್ಲದುದನಱ ।
ವಾಗದಿರದಾತ್ಮಜಗೆನುತ ನಡೆತಂದನಾಹವಕೆ ॥೬೬॥

ಸಿಡಿಲ ಮಿಂಚಿನ ಗಡಣದಲಿ ಘುಡು ।
ಘುಡಿಸಿದುದು ಶುಭ್ರಾಭ್ರರಥವೆಡೆ ।
ಬಿಡದೆ ವಾತೋದ್ಧೂತನಿರ್ಭರಗತಿಚಮತ್ಕೃತಿಯ ॥
ಒಡನೆ ಮಾತಲಿ ಸಜ್ಜಿಸೆ ತಿರುಗಿದು ।
ದೆಡಬಲಕೆ ಬರ್ಹಿರ್ಮುಖಾಧಿಪ ।
ನಡರಿದನು ನಿಸ್ಸಾಳತತಿಯಬ್ಬರಿಸೆ ನಿಜರಥವ ॥೬೭॥

ಬಿಡದೆ ರುದ್ರಾದಿತ್ಯವಸುಗಳು ।
ಗಡಣಿಸಿತು ಕಿನ್ನರವಿಯಚ್ಚರ ।
ಗಡಣ ನೆರೆದುದು ಸಿದ್ಧವಿದ್ಯಾಧರರು ಜೋಡಿಸಿತು ॥
ನಡೆದುದಸುರರ ಬಲದ ಸುಭಟರ ।
ನೊಡೆದುಱಿದು ಹೇರಾಳದಲಿ ಮುಂ ।
ಗಡೆಯಲೊದರುವ ಬಹಳ ವಾದ್ಯಂಗಳ ಪಿಡುಗಾಯಲು ॥೬೮॥

ಕಂಡನಾದಶಮೌಳಿ ರಣಕಾ ।
ಖಂಡಲನು ಬರೆ ತಾನೆ ನಡೆಗು ।
ದ್ದಂಡಭುಜಬಲ ರಾವಣಿಯ ತೆಗೆಸಿದನು ಹಿನ್ನೆಲೆಗೆ ॥
ಗಂಡುಗಲಿಗಳ ದೈತ್ಯದನುಜರ ।
ತಂಡ ನೆರೆದುದು ಸಮರವನು ಕೈ ।
ಕೊಂಡುದುಭಯದ ಸೇನೆ ತಡಪಡ ಕಡಲ ರಭಸಗಳು ॥೬೯॥

ಏಸನೆಂಬೆನು ನೃಪ, ಸುರಾಸುರ ।
ಸೇನೆ ಮುಕ್ಕುರಿಕಿದುದು ರಣಕಸಿ ।
ಧೇನು ಮುಸಲ ಮುಸುಂಡಿ ಮುದ್ಗರ ಶಕ್ತಿ ಗದೆಯೆನಿಪ ॥
ಆ ನಿರಂತರ ಕವಿವ ಶಸ್ತ್ರಾಂ ।
ಭೋನಿಧಿಯೊಳಡಗಿದರು ಭಟಸಂ ।
ತಾನವಱಿದುದನುಭಯಬಲದೊಳಗಾವನಾರೆಂದ ॥೨೦॥

ಅಕ್ಷಯುವಲಾ! ದೇವಬಲವದು ।
ರಾಕ್ಷಸರ ಪಡೆ ಮಡಿದುದಗಣಿತ ।
ವಾಕ್ಷಣಾರ್ಧದೊಳುಱಿದುದಂದು ದಶಾಂಶಶೇಷವೆನೆ ॥
ರಾಕ್ಷಸೇಶ್ವರನಾತ್ಮಸೈನ್ಯವ ।
ನೀಕ್ಷಿಸಿದನತಿರೂಕ್ಷತರರ ।
ಕ್ತಾಕ್ಷನಾದನು ಹೊಕ್ಕನನಿಮಿಷಸೈನ್ಯಸಾಗರವ ॥೨೧॥

ಒಂದು ದೆಸೆಯುಲಿ ಕುಂಭಕರ್ಣನ ।
ದೊಂದು ದೆಸೆಯುಲಿ ಮೇಘನಾದನ ।
ದೊಂದು ದೆಸೆ ಮಾರೀಚವಿಕಟಮಹೋದರಾಸುರರು ॥
ಒಂದು ದೆಸೆ ಧೂಮ್ರಾಕ್ಷ ದುರ್ಮುಖ ।
ರೊಂದು ದೆಸೆ ಖರದೂಷಣಾಸುರ ।
ರಂದು ಬೆರಸಿದರಮರರೊಳು ಸಂಗರಕೆ ಸಡಗರಿಸಿ ॥೨೨॥

ಒದೆದು ಕೊಂದನು ಕೆಲರ ಕೆಲರನು ।
ಸದೆದು ಕೊಂದನು ಕೈಗಳಲಿ ಮೋ ।
ದಿದನು ಗದೆಯುಲಿ ಕೆಲರನಣಲೊಳಗಡಸಿದನು ಕೆಲರ ॥
ಸದೆದನೀಪರಿ ಕುಂಭಕರ್ಣ ।
ತ್ರಿದಶರಿಪುವನಿಮಿಷರ ಮಿಕ್ಕಿನ ।
ಮದಮುಖರು ಲಕ್ಕಸರು ಹೊಯ್ದರು ಮಿಕ್ಕ ಸುಮನಸರ ॥೨೩॥

ಮುಱಿದರನಿಮಿಷರನಿಮಿಷಾರಿಗ ।
ಳುಱುಬೆಗಾಱದೆ, ತಾನೆ ಸುರಪತಿ ।
ಯೆಱಬಿದನು ದಶಮುಖನಿಗಭಿಮುಖನಾಗಿ ಸಮರದಲಿ ॥
ಕಱಿದಸಂಬಿನ ಮಱೆಯನಾಗಸ ।
ನೆಱೆಯುದೆನೆ ಹೊಗರಲಗುಗಳ ಕೆಂ ।
ಗಱಿಯ ತೆಗೆಗಳು ಸುಸುಳಿದುವು ಬರ್ಹಿಮುಖವಿದ್ವಿಷರ ॥೨೪॥

ಎಚ್ಚ ಬಾಣವನಸುರನೆಡೆಯಲಿ ।
ಕೊಚ್ಚಿದನು ಕೈಚಳಕದಲಿ ತೆಗೆ ।
ದೆಚ್ಚನಿಂದ್ರನ ಮೇಲೆ ಮುಕ್ಕುರುಕಿದುವು ನಿಡುಸರಳು ॥
ಮುಚ್ಚಿದುವು ಮುಸುಕಿದುವು ಹರಿದುವು ।
ಕೆಚ್ಚಿದುವು ಹೇರಾಳಗದಲಿ ಥ ।
ಟ್ಟುಚ್ಚಿದುವು ದಿಗ್ಭಿತ್ತಿಗಳನಡರಿದುವು ಸುರಪಥದ ॥೭೫॥

ಅಸುರಪತಿಸುರಪತಿಗಳಿತ್ತತಿ ।
ವಿಷಮಸಂಗರದೊಳಿರಲಾಸುಮ ।
ನಸನಿಶಾಚರಭಟರಿಗತ್ತಾದುದು ಮಹಾಸಮರ ॥
ಅಸಿ ಪರಶು ಶರ ಶಕ್ತಿ ಶಲ್ಲೆಹ ।
ಮುಸಲ ಮುದ್ಗರ ಸುರಗಿ ಗದೆ ಪ ।
ಟ್ಟಸಗಳಲಿ ಹೊಯ್ದಾಡಿದರು ಖಣಿಖಟಿಲರಭಸದಲಿ ॥೭೬॥

ಬೀಳುತಿರ್ದುದು ದೈತ್ಯಸೇನಾ ।
ಜಾಳವಾಜಿಯೊಳರೆಗಡಿದ ಗೋ ।
ನಾಳಿಗಳ ಜೇಡಾದ ನಡು ತೊಡೆ ತೋಳ ತುಂಡುಗಳ ॥
ಸೀಳುದೊಡಲಿನ ಸಿಡಿದುಗುವ ಕ ।
ಣ್ಣಾಲಿಗಳ ನಿಡುಗರುಳ ಕಂಡದ ।
ಕಾಳಿಜದ ನೆತ್ತರಿನ ನಿಡುಗಡಲಾಯ್ತು ರಣಭೂಮಿ ॥೭೭॥

ನೋಡಿದನು ದಶವದನ ರಕ್ಕಸ ।
ರೋಡುವುದನತಿ ಮುಳಿದು ಸೂತನೊ ।
ಳಾಡಿದನು ಸುರಸೈನ್ಯದಂತವನೆಯ್ದಿಸೀರಥವ ॥
ಓಡಿಸುವೆನನಿಮಿಷರನೀಗಳೆ ।
ನೋಡೆನುತ ಶತಯೋಜನಾಂತವ ।
ನಾಡಳೇಸ್ಯೆದಿದನು ಸೇನಾಂಬುಧಿಯನೊಡೆಬಗೆದು ॥೭೮॥

ಸುರಪನಱಿದನು ರಾವಣನ ನಿ ।
ಬ್ಬರದ ಗತಿಯನು ನುಡಿದನಮರರೊ ।
ಳರಿಭಟನ ಗೆಲಲರಿದು ಕಮಲಜನಿತ್ತ ವರವಿವಗೆ ॥
ಘುರದೊಳೀತನನಖಿಲಸುಮನಸ ।
ರರವರಿಸದೊಳಹೊಕ್ಕು ಹಿಡಿದರೆ ।
ಸುದಿನಾದುದು ಜಯವೆನಲು ಮುಸುಕಿದರು ರಾವಣನ ॥೭೯॥

ಹಿಂದೆ ಮುಂದೆಡಬಲದೊಳಮರರ ।
ಮಂದಿ ಕವಿದುದು ದಿವಿಜಸೇನಾ ।
ಸಿಂಧುಮಧ್ಯದ ಸುಳಿಯೊಳಗೆ ಸಿಲುಕಿದನು ದಶಮೌಳಿ ॥
ಅಂದು ಕಂಡರು ರಕ್ಕಸರು ದಶ ।
ಕಂಧರನು ಸಿಕ್ಕಿದನಕಟ! ಭೋ!
ಯೆಂದು ಕೂಗಿದರಸುರಭಟರಲ್ಲಲ್ಲಿ ದೆಸೆದೆಸೆಗೆ ॥೮೦॥

ಕೇಳಿದನು ಬಲದಬ್ಬರವ ಕ ।
ಟ್ಟಾಳು ರಾವಣಿ ಹೊಕ್ಕನಮರರ ।
ಪಾಳೆಯವನೀಶಾನದತ್ತ ಮಹಾವರೂಥದಲಿ ॥
ಮೇಲೆ ತಾಮಸಿಯೆಂಬ ಮಾಯೆಯು ।
ಬೀಳುವೆಯು ಬೆಳಸಿದನದೃಶ್ಯವ ।
ತಾಳಿದನು ಮಳೆಗಱೆದನಾಸುರನಿಶಿತಮಾರ್ಗಣವ ॥೮೧॥

ಸುರಿದನಂಬಿನ ಮಳೆಯನಿಂದ್ರನ ।
ಸರಿಸದಲಿ ಕೆಲಬಲದ ಸುಭಟರ ।
ಹೊರಳಿಯಲಿ ಹರಹಿದನು ಶಸ್ತ್ರಾವಳಿಯ ಬಲ್ಸರಿಯ ॥
ಮುರಳಿ ಸುರಪನ ತೇರು ಸಾರಥಿ ।
ತುರಗ ಕಾರ್ಮುಕ ಕೇತು ಸೀಸಕ ।
ವರನಿಷಂಗ ತನುತ್ರಗಳೊಳೊಟ್ಟಿದನು ಸರಳುಗಳ ॥೮೨॥

ಕುಱುಹುಗಾಣದೆ ರಾವಣಿಯನೊಡ ।
ನಱಸಿದನು ಸುರನಾಥನಾರಥ ।
ಮುಱಿದುದೈರಾವತಕಡರಿ ಮತ್ತಱಸಿದನು ಹಗೆಯ ॥
ತೆಱಹುಗುಡದೊಡನೊಡನೆ ಮಾರ್ಗಣೆ ।
ಗಱೆದನಿಂದ್ರನ ಮೇಲೆ ನೆತ್ತ್ರರಿ ।
ನೊಱತೆ ಮಸಗಿತು ಬಱಲಿದನು ಪೂರಾಯಗಾಯದಲಿ ॥೮೩॥

ಸಿಕ್ಕಿದನು ಹಗೆಯೆನುತ ರಾವಣಿ ।
ಹೊಕ್ಕು ಶಕ್ರನ ಹಿಡಿದು ಬೊಬ್ಬಿರಿಯು ।
ನಿಕ್ಕಿದನು ಮಾಮಾ! ನಿಕುಂಭಿಳೆ ಮಾಯಿ! ಮಝುಯೆನುತ ॥
ಮಿಕ್ಕು ನಡೆದನು ದಶಮುಖನ ಬಲು ।
ಕಕ್ಕಸದ ರಣದೆಡೆಗೆ ನುಡಿದನು ।
ರಕ್ಕಸನೊಳೆಲೆ ತಾತ ಬಿಡು ಸಂಗರವದೇಕೆನುತ ॥೮೪॥

ತಾತ ಸಿಲುಕಿದನಿಂದ್ರನೆನ್ನಯ ।
ಖಾತಿಯುಲಿ ಬಿಡು ಸಂಗರವನಿ ।
ನ್ನೇತಕೀಸುಮನಸರ ಕೂಡೆ ವೃಥಾ ರಣಾಟೋಪ ॥
ಈತಗಳು ಬದುಕಿರಲಿ ಬಿಡು ಪುರು ।
ಹೂತನನು ಕೊಂಡುಯ್ವೆವೇಟೆನೆ ।
ಯಾತುಧಾನಾಧೀಶ್ವರನು ತಿರುಗಿದನು ಮಗನೊಡನೆ ॥೮೫॥

ಹೊಗಳಿದನು ದಶಮೌಳಿ ತನ್ನಯ ।
ಮಗನ ಶೌರ್ಯವನಿಂದ್ರನನು ಪಿಡಿ ।
ವಗಡುತನವೇಂ ಸದರವೇ ಎಸುತಪ್ಪಿ ಮುಂಡಾಡಿ ॥
ನಗರಿಗೆಯ್ದಿದನಿಂದ್ರನನು ಕೊಂ ।
ಡೊಗುವಿಜಯ ಹರುಷದಲಿ ದಿವಿಜರು ।
ದುಗುಡದಲಿ ನಡೆದಜುಹಿದರು ಪರಮೇಷ್ಠಿಗೀಹದನ ॥೮೬॥

ಬಂದನಬ್ಜಜ ಸಕಲ ದಿವಿಜರ ।
ವೃಂದದೊಡನಸುರೇಂದ್ರನಿದ್ದೆಡೆ ।
ಗಂದು ನುಡಿಸಿದನೆಲೆ ಮಗನೆ ಗೆಲಿದೈ ಜಗತ್ರಯವ ॥
ಕಂದ ನಿನ್ನಿಂದಧಿಕನೈ ತವ ।
ನಂದನನು ಶೌರ್ಯದಲಿ ಮೆಚ್ಚಿದೆ ।
ನಿಂದು ಮೊದಲಿಂದಿಂದ್ರಜಿತುವೆನೆ ಹೆಸರವಂಗೆಂದ ॥೮೭॥

ಕೇಳು ಮಗನೆ ದಶಾಸ್ಯ ಸುಮನಸ
ಪಾಲನೆಮ್ಮಾಧೀನದಲಿ ನಾ ।
ಕಾಲಯುವ ಸಲಹುವನು ಜಯವಿದು ಸಾಕು ಬಿಡು ವ್ಯಸನ ॥
ಪಾಲಿಸೆಮ್ಮಯ ಮಾತನೆನೆ ದಶ ।
ಮೌಳಿ ಮಗನನು ನೋಡೆ ನಿರ್ಜರ ।
ಪಾಲಜಿತುವಿಂತೆಂದನಬ್ಜಾಸನಗೆ ವಿನಯದಲಿ ॥೮೮॥

ಎಲೆ ಪಿತಾಮಹ ನಿಮ್ಮ ವಚನವ ।
ಸಲಿಸುವೆನು ಬಿಡುವೆನು ಸುರೇಂದ್ರನ ।
ಗೆಲಿದ ದೆಸೆಯಿಂದಿಂದ್ರಜಿತುವೆಂದಾಯ್ತು ಹೆಸರೆನಗೆ ॥
ಒಲಿದೊಡೆನಗಮರತ್ವವನು ಕುಡು ।
ಬಲವಿರೋಧಿಯ ಬಿಡುವೆನೆಂದೆನೆ ।
ನಳಿನಜನವಿಂತೆಂದನಾಶರಾಣಿಗೆ ವಿನಯದಲಿ ॥೮೯॥

ಎಲೆ ಮಗನೆ ಸರ್ವಾಧಿಪತ್ಯದ ।
ಬಳಕೆಯಲ್ಲಿ ಚರಾಚರಂಗಳಿ ।
ಗಳಿವು ತಪ್ಪದು ಸುರನರೋರಗದೈತ್ಯರಿಂದೆನಗೆ ॥
ಸುಲಭವಪ್ಪುದು ಬೇಡು ವರಗಳ ।
ನಲಸದಿತ್ತಪೆನೆನಲು ರಾವಣಿ ।
ಒಲಿಕ ನುಡಿದನು ಮನದಭೀಷ್ಟವನಬ್ಜಭವನೊಳಗೆ ॥೯೦॥

ಅರ್ಚಿಪೆನು ರಣಸಮಯದಲಿ ಸ ।
ಪ್ತಾರ್ಚಿಯನು ತದ್ವಹ್ನಿಮಧ್ಯಗ ।
ತಾರ್ಚಿಯೊಳಗುದ್ಭವಿಸಲೊಂದು ವರೂಥವದರೊಳಗೆ ॥
ಸಾರ್ಚಲೆನಗಮರತ್ವವೆನ್ನೊಳಿರೊ ।
ಡರ್ಚಲೆನಲಂತಾಗಲೆಂದತಿ ।
ಪೆರ್ಚಿದೌತ್ಸುಕ್ಯದಲಿ ಬಿಡಿಸಿದನಮರವಲ್ಲಭನ ॥೯೧॥

ಬೀಳುಕೊಂಡನು ಸುರರೊಡನೆ ದಶ ।
ಮೌಳಿಯನು ಪರಮೇಷ್ಠಿ ದುಗುಡವ ।
ತಾಳಿ ಸುರಜನಪಾಲನಿರೆ ನುಡಿಸಿದನದೇಕೆನುತ ॥
ಕೇಳು ಸುರಪತಿ ದೈವಪೌರುಷ ।
ಕಾಲಕರ್ಮಗಳೈದುವೃವು ಜನ ।
ಜಾಲದೊಳು ನಿನಗಾಯ್ತು ಪೌರುಷಕರ್ಮಫಲವೆಂದ ॥೯೨॥

ತ್ರಿದಶಪತಿ ಕೇಳಖಿಳಸೌಂದರ ।
ಸದನವೆನೆ ಮಾಡಿದೆನಹಲ್ಯಾ ।
ಸುದತಿಯನು ಪೈಚಿಟ್ಟೆನ್ನೆ ಗೌತಮನ ಸದನದಲಿ ॥
ಸುದತಿಯಿರೆ ದೇವಾಸುರೋರಗ ।
ರೆದೆಗೆಡುವರೀಕ್ಷಿಸಿ ಮುನೀಶನ ।
ಹೃದಯ ಚಂಚಲವಿಲ್ಲದಿರಲವಗಿತ್ತೆ ನಾಸತಿಯ ॥೯೩॥

ಆಮುನಿಪನವಳೊಡನಿರಲು ಸು ।
ತ್ರಾಮ ನೀನಾಸತಿಯನೆಯ್ದಿದೆ ।
ಕಾಮಕೇಳಿಗೆ ಬಯಸಿ [ಮುನಿ] ತೊಲಗಿರ್ದ ಸಮಯದಲಿ ॥
ಆಮಹಾಸತಿಯೊಲ್ಲದಿರೆ ನಿ ।
ಷ್ಕಾಮಿಯನು ಬಲುಹಿಂದೆ ನೀ ಪಿಡಿ ।
ದ್ದೆ ಮುನೀಂದ್ರ ನು ಮುನಿದು ಶಾಪವನಿತ್ತ ನಿನಗೆನುತ ॥೯೪॥

ಒಲಿಯದಬಲೆಯನೆಂತು ನೀನತಿ ।
ಬಲುಹಿನಲಿ ಪಿಡಿದಂತೆ ನಿನ್ನನು ।
ಕಲಹದಲಿ ಪಿಡಿಯಲಿ ವಿರೋಧಿಗಳೆಂದು ಮುನಿ ನುಡಿದ ॥
ಫಲಿಸಿದುದು ಮುನಿವಚನ ನಿನಗಿ ।
ನ್ನಬಲದೇತಕೆನುತ್ತ ಸುರಪನ ।
ತಿಳುಹಿ ಕಳುಹಿದ ಕಮಲಭವನಮರಾವತೀಪುರಿಗೆ ॥೯೫॥

ಮಾಡು ವೈಷ್ಣವಮಾರ್ಗವನು ಮುನಿ ।
ಯಾಡಿದಪಕೃತಿ ಮಾಣ್ದು ನಿನ್ನೊಳು ।
ಕೂಡುವುದು ಸುಕುಮಾರತನು ಹೀನಾಂಗಕಲೆಯುಳ್ಳುದು ॥
ಕೋಡಿ ಹುಗದಾಜಿಯಲಿ ಶೌರ್ಯದ ।
ಕೋಡಿ ಮುಱಿದುದು ನಿನಗೆ ಹೋಗೆಂ ।
ದಾಡಿ ನೀರಜಗರ್ಭನಂತರ್ಧಾನಸತನುವಾದ ॥೯೬॥

ಈಪರಿಯೊಳಮರಾರಿವಿಜಯ ।
ವ್ಯಾಪಿತಾಖಿಲಲೋಕನಿರ್ದನ ।
ಶ್ರೀ ಪುರುಷಮನಸೆಂದು ಪೇಳಲಗಸ್ತ್ಯಮುನಿವರನ ॥
ಆಪುರಾತನಭೂಪರೊಳು ಗೆಲ ।
ಲಾಪ ಬಲ್ಲಿದರಿರ್ದದಿಲ್ಲವ ।
ಲಾ ಪುಲಸ್ತ್ಯಾನ್ವಯದೊಳೆಂದು ಖರಾರಿ ಬೆಸಗೊಂಡ ॥೯೭॥

ಅಕ್ಷಯಾತ್ಮ ವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷ ಸುರಮುನಿರಕ್ಷ ಸುಜನಾ ।
ಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥೯೮॥

ಇಂತು ಎಂಟನೆಯ ಸಂಧಿ.



## ಒಂಬತ್ತನೆಯ ಸಂಧಿ

ಸೂಚನೆ ॥ ಕೆಣಕಿ ಮದದಲಿ ಕಾರ್ತವೀರ್ಯಾರ್ಜುನನ ।
ರಣದೊಳಗೆ ಪಿಡಿವಡೆದಿರಲು ರಾ ।
ವಣನ ಬಿಡಿಸಿದನಂದು ಬಂದು ಪುಲಸ್ತ್ಯಮುನಿನಾಥ ॥

ಕೇಳು ರಾಘವ ತಿರುಗಿದನು ದಶ ।
ಮೌಳಿ ಲೋಕಂಗಳನು ಜಯಿಸು ।
ಬ್ಬಾಳುತನದಲಿ ಬಂದನೈ ಮಾಹಿಷ್ಮತೀಪುರಿಗೆ ॥
ಪೇಟಲೇನಾಪುರವರವನುಜ್ಜಿ ।
ಪಾಲಿಪನಲೈ ಕಾರ್ತವೀರ್ಯಾರ್ಜುನನೃ ।
ಪಾಲನೆನಿಸುವ ಹೇಹಯಾಧಿಪನಧಿಕತೇಜದಲಿ ॥೧॥

ನಿಂದು ತತ್ಪುರಬಾಹೆಯುಲಿ ಖಳ ।
ನಂದು ತನ್ನಯ ಸಚಿವರನು ಕರೆ ।
ದೆಂದನಾಜಿಗೆ ಒರಲಿ ಕರೆ ಮಾಹಿಷ್ಮತೀಶ್ವರನ ॥
ಬಂದನೈ ದಶಮೌಳಿ ತಾನೆನ ।
ಲಿಂದು ನಮ್ಮ ನೃಪಾಲನಿಲ್ಲಿ ।
ನ್ನೊಂದು ಗಳಿಗೆಗೆ ಬಾರದಿರನೀಪುರದೊಳಿಲ್ಲೆಂದ ॥೨॥

ಆದೊಡಲ್ಲಿಗೆ ಪೋಪೆನೆನುತೊಡ ।
ನೈದಿದನು ನರ್ಮದೆಯನಸುತ ।
ಹಾದಿದೆಗೆದನು ವಿಂಧ್ಯಭೂಧರಗಹನಗಹ್ವರವ ॥
ಭೇದಿಸುವ ದಿನಕರನ ಕರದು ।
ರ್ಭೇದವೆನಿಸಿಹುದಂದು ತಮುಸಾ ।
ತ್ಕಾದಿ ನಾನಾದ್ರುಮನಿಕುಂಜಲತಾವಿತಾನದಲಿ ॥೩॥

ಹರಿ ಕರಡಿ ಶಾರ್ದೂಲ ಸೈರಿಭ ।
ಮರೆ ಕಡವೆ ಭಲ್ಲೂಕ ಸೂಕರ ।
ಹರಿಣವಾಗೋಮಾಯು ಶಶ ಮೊದಲಾದ ಮೃಗಕುಲವ ॥
ಬರುಹಿ ಕಂಕ ಶಶಾದ ತಿತ್ತಿರಿ ।
ವರಗಿಡಗ ಕಾರಂಕ ಟಿಟ್ಟಿಭ ।
ಭರದ್ವಾಜಾದಿ ಖಗವಿರೆ ಕಂಡನಸುರೇಂದ್ರ ॥೪॥

ಬಬಲಿದನು ಬೇಸಗೆಯು ಬಿಸಿಲಿನ ।
ಝಳದ ಹೊಯ್ಲೊಳು ಷಟ್ಪ್ರಧಾನರು ।
ಘಳಿಲನಿಳಿತರಲಿಳಿದನಾಪುಷ್ಪಕವನಸುರೇಂದ್ರ ॥
ಸುಳಿವ ಹಂಸಕ್ರೌಂಚ ಸಾರಸ ।
ಕುಳವ ನೋಡುತ ನರ್ಮದೆಯು ತ ।
ಣ್ಪುಳಿನದೊಳು ವಿಶ್ರಮಿಸಿದನು ತಣ್ಣೆಲರ ತಂಪಿನಲಿ ॥೫॥

ಕರೆದು ಮಾರೀಚ ಪ್ರಹಸ್ತಾ ।
ಸುರ ಸುಪಾರ್ಶ್ವಕ ಧೂಮ್ರಲೋಚನ ।
ದುರುಳಶುಕಸಾರಣರೊಳಿಂತೆಂದನು ಸುರಧ್ವಂಸಿ ॥
ಪುರಹರಾರ್ಚನೆಗೆಸಗೆ ಪುಷ್ಪೋ ।
ತ್ಕರವನೊದವಿಪುದೆಂದು ಸಚಿವರು ।
ಜರಿಸಿ ನಿಂದನು ಶರ್ಮದೆಯು ನರ್ಮದೆಯು ಸಲಿಲದಲಿ ॥೬॥

ತರಿಸಿ ಚಾಮೀಕರದ ಲಿಂಗವ ।
ನಿರಿಸಿ ವಾಲುಕವೇದಿಯೊಳು ಶಂ ।
ಕರನ ಪೂಜೆಯನೆಸಗಿದನು ಪರಮಾಗಮೋಕ್ತದಲಿ ॥
ಬಿರಿಮುಗುಳ ಪರಿಮಳದ ಸಾರದ ।
ನಿರಿಯನೊಟ್ಟಿದನೀಶನಂಘ್ರಿಗೆ ।
ಪರಮಭಕ್ತಿರಸಾತಿರೇಕದೊಳಿರ್ದನಸುರೇಂದ್ರ ॥೭॥

ಅರ್ಘವಾದುದು ಪೂಜೆ ರಾವಣ ।
ನಿರ್ದೆಡೆಗೆ ಪಶ್ಚಿಮದ ದೆಸೆಯೊಳ ।
ಗರ್ಧಯೋಜನದಳತೆಯಲಿ ಹೇಹಯಧರಾಧಿಪತಿ ॥
ಇರ್ದನೈ ಫಣಿರಾಜಭೋಗ ।
ಸ್ಪರ್ಧಿದಶಶತಭುಜಪರಿಘನ ।
ಮ್ಮರ್ದಿತಾಹಿತರಾಜಲೋಕನುದಾರತೇಜದಲಿ ॥೮॥

ತಡೆದನಾನರ್ಮದೆಯು ಸಲಿಲದ ।
ಕಡುಭರವನುರುಭುಜಸಹಸ್ರದೊ ।
ಳಿಡೆಬಿಡದೆ ಭುಜಸೇತುವಿಂದೇನೆಂಬೆನದ್ಭುತವ ॥
ಪಡುವಲೈದುವ ತಟಿನಿ ಮೂಡಣ ।
ಕಡೆಗೆ ತಿರುಗಿತು ರಾವಣನ ಮುಂ ।
ಗಡೆಯ ಪೂಜಾಸ್ಥಳದೊಳುಬ್ಬಿತು ತಡಿಯನೊಡೆಬಡಿದು ॥೯॥

ಏನಿದದ್ಭುತವೆನುತಲಿದ್ದಾ ।
ದಾನವೇಶ್ವರನೀಶಪೂಜಾ ।
ಧ್ಯಾನಮತಿ ಪೂಜಾರ್ಥದಲಿ ಬಿಟ್ಟಡರಿದನು ತಡಿಯ ॥
ಏನನೆಂಬೆನು ಹೆಚ್ಚಿ ಹರಿದುದು ।
ಮೀನಕರ್ಕಟಮಕರಮಿಥುನ ।
ಸ್ಥಾನದಲಿ ಸಭೆದಂತೆ ನರ್ಮದೆ ಬಹಳಲಹರಿಯಲಿ ॥೧೦॥

ಅಱಿದಿದಱ ವಿಪರೀತವೃತ್ತಿಯು ।
ನಱುಹಬೇಕೆನಗೆಂದು ರಕ್ಕಸ ।
ರೆಱೆಯನೆನೆ ಶುಕಸಾರಣಾಸುರರಡರಿದರು ಸಭೆಯ ॥
ಕಿಱಿದು ದೂರದೊಳೈದಿ ಕಂಡುದ ।
ನಱಿದು ರಾಕ್ಷಸರಾಜಗೈತಂ ।
ದಱುಹಿದರು ನಿಮಿಷದಲಿ ಹೈಹಯರಾಯಸಿರ್ದಿರವ ॥೧೧॥

ಕೇಳು ರಕ್ಕಸರಾಯ ಸಾಸಿರ ।
ತೋಳುಗಳ ಧರಿಸಿದನು ಮಂದರ ।
ಶೈಲಸನ್ನಿಭನೊರ್ವ ಪುರುಷನದೇನನುಸಿರುವೆವು ॥
ತೋಳಿನಲಿ ತಡೆದೀನದಿಯ ಜಲ ।
ಕೇಳಿಯೊಳು ಲಲನಾಸಹಸ್ರದ ।
ಮೇಳದಿಂದಿಹನೆಂದೊಡರ್ಜುನನೆನುತ ನಡೆತಂದ ॥೧೨॥

ಕಂಡನಾಗಳೆ ಕಾರ್ತವೀರ್ಯಾರ್ಜುನ ।
ಗಂಡಗರ್ವವನಸುರಪತಿ ಕೈ ।
ಕೊಂಡು ಬಲುಗೋಪವನು ಹುಗುಲಿರೆ ಕೂಡೆ ನರ್ಮದೆಯ ॥
ಕಂಡನಾನೃಪಸಚಿವನಸುರನ ।
ಚಂಡವೃತ್ತಿಯನೆಲವೊ ರಕ್ಕಸ ।
ಭಂಡಣವನೆನಗಿತ್ತು ಮತ್ತರ್ಜುನನನೈದೆಂದ ॥೧೩॥

ಆದೊಡೊಳ್ಳಿತೆನುತ್ತ ತಿರುಗಿದ ।
ನಾದನುಜಪತಿ ಸಮರಕನಿತಱೊ ।
ಳೈದಿದರು ಮಾರೀಚಶುಕಸಾರಣಮಹೋದರರು ॥
ಕಾದಿದರು ನಾನಾವಿಧದ ಬಲು ।
ಗೈದುಗಳೊಳಿದಿರಾದ ಸುಭಟರ ।
ಮೋದಿದರು ಸಂಗರದ ರವಮ್ರೈರಿದುದರ್ಜುನನ ॥೧೪॥

ಬೆದಱದಿರಿ ನೀವೆನುತ ತನ್ನಯ ।
ಸುದತಿಯುರನಲ್ಲಿರಿಸಿ ಜಾಂಬೂ ।
ನದಗದಾದಂಡವನು ಕೊಂಡಾನದಿಯನುತ್ತರಿಸಿ ॥
ಮದಮುಖನಿಗಿದಿರಾಗಿ ನಡೆದನು ।
ಮದಗಜಕೆ ಮದದಾನೆ ನಿಲುವಂ ।
ತದಿರಲಿಳೆ ಭುಜಪರಿಘಪಂಚಶತೋನ್ನತಂಗಳಲ ॥೧೫॥

ಬಱಿಕ ರಾವಣನಾನೃಪನ ಕೊಳು ।
ಗುಳಕೆ ನಡೆತರಲನಿತಱೊಳುದಶ ।
ಗಳನ ಸಚಿವರು ತಾಗಿದರು ತಮತಮಗೆ ತವಕದಲ ॥
ಬಱಲಿದರು ನೃಪನುರವಣೆಗೆ ವೆ ।
ಗ್ಗಳೆಯನವರೊಳಗಾಪ್ರಹಸ್ತನು ।
ಮುಳಿದು ಮುಸಲದೊಳಱಗಿದನು ಹೇಹಯಮಹೀಶ್ವರನ ॥೧೬॥

ಗಾಯವನು ವಂಚಿಸುತ ಹೈಹಯ ।
ರಾಯನುರುಪರಿಘದಲಿ ರಿಪುದೈ ।
ತೇಯಸಚಿವನನೆಱಗಿದನು ಬಲಿದೆತ್ತಿಬಾತಿಯಲಿ ॥
ಕಾಯ ಕಂಪಿಸೆ ಕಳವಳಿಸಿ ಪೂ ।
ರಾಯದಲಿ ಖಳನಳವಱಿಯೆ ಬಲು ।
ಗಾಯದಲಿ ಕಂಡೋಡಿದರು ಶುಕಸಾರಣಾದಿಗಳು ॥೧೭॥

ಬಱಿಕ ರಾಕ್ಷಸಭೂಮಿಪರು ಕ ।
ಟ್ಟಳವಿಗಾಂತರು ಕರಿಗೆ ಕರಿ ಮಾ ।
ರ್ಮಲೆವವೊಲು ಕೇಸರಿಗೆ ಕೇಸರಿಯೊಡ್ಡಿನಿಲುವಂತೆ ॥
ಮಲೆತರೊರ್ವರಿಗೊರ್ವರೆತ್ತಿದ ।
ಬಲುಗದೆಯ ಹೊಳಹುಗಳ ಮೋಡಿಯ ।
ಕಲಿತನದ ಲೋಕೈಕವೀರರು ಹೊಕ್ಕು ಹೆಣಗಿದರು ॥೧೮॥

ತೋಳುಗಳ ಹೊದಱಿದ್ದೊಡಿಕ್ಷಿಪ ।
ರಾಲಿ ಝೂಮ್ಮಿಡೆ ತಳಿತ ಜಂಗಮ ।
ತಾಳತರುವನವೊ ಮಹಾದ್ಭುತವೇನನುಸಿರುವೆನು ॥
ತೋಳುಗಳು ಸಾವಿರದ ಲೆಕ್ಕದ ।
ಮೇಲೆ ಬಱಿಕಿಪ್ಪತ್ತು ಮುಱಿದುವು ।
[illegible]ಗಕೆ ಕ್ರ[illegible]ಕ್ಕೆ ಮಾಸವನಾನಸೇಕ್ಷ್ವರದ ॥೧೯॥

ಹೊಯ್ದರೊರ್ವರನೊರ್ವರದಿರದೆ ।
ಮೆಯ್ದೆಗೆಯುದುಬ್ಬೆದ್ದು ಕಡುಮುಳಿ ।
ಸೆಯ್ದೆ ನಡು ತೊಡೆ ಕಕ್ಷ ಕುಕ್ಷಿ ಲಲಾಟ ವಕ್ಷಗಳ ॥
ಹೊಯ್ದು ಗಾಯವನಣೆವ ಕುತ್ತುವ ।
ಮೆಯ್ದೆಗೆಯುದೊಳಹುಗುವ ಹಿಂಗುವ ।
ಕಯ್ದುಕಾಱುಲು ಹೆಣಗಿದರು ಬಹುವಿಷಮುಸಮರದಲಿ ॥೨೦॥

ಎಱಗಿದನು ನೃಪನಸುರನೆದೆಯನು ।
ಬಱಸಿಡಿಲವೊಲು ಪರಿಘದಲಿ ಮೆ ।
ಯ್ಮಱೆದು ನಿಮಿಷಕೆ ಚೇತರಿಸಿಕೊಂಡಸುರನಾನೃಪನ ॥
ಉಱುವ ಸತ್ವದೊಳೆಱಗೆ ಮೂರ್ಛೆಗೆ ।
ತೆಱಹುಗೊಟ್ಟರೆನಿಮಿಷದೊಳಗೆ ।
ಚ್ಚಱುತ ಹೊಯ್ದನು ರಾವಣನ ಪೇರುರವನೊಡೆ ಮುಳಿದು ॥೨೧॥

ಒತ್ತಿ ಸಾವಿರ ಭುಜಗಳಲಿ ನೃಪ ।
ನೆತ್ತಿಹೊಯ್ದನು ಖಳನನಬ ಜ ।
ನಿತ್ತ ವರದಿಂದಱಿಯದುಱಿದಸದೇಸಸುಸಿರುವೆಸು ॥
ಸುತ್ತ ಕವಿದುದು ಕಂಗಳಿಗೆ ಕ ।
ಗ್ಗತ್ತಲೆಯು ಬಲುಡಾಳಿ ಖಳನಸು ।
ನೆತ್ತಿಗಡರಿತು ನಡುಗಿತವಯವವಧಿಕಮೂರ್ಛೆಯಲಿ ॥೨೨॥

ಚೇತರಿಸಿಕೊಂಬನಿತಱೊಳು ದಿತಿ ।
ಜಾತನನು ಮೇಲ್ವಾಯ್ದು ಪಿಡಿದನು ।
ಭೂತಳಾಧಿಪನಹಿಪತಿಯನಹಿವೈರಿ ಪಿಡಿವಂತೆ ॥
ಸೋತು ಹಿಂಗಿದ ದೈತ್ಯಸಚಿವ ।
ವ್ರಾತ ಮುಸುಕಿದುದವನಿಪನ ನಾ ।
ನಾತಿನಿಶಿತಮಹಾಸ್ತ್ರಗಳೊಳುಬ್ಬೆದ್ದು ಭೋರೆನುತ ॥೨೩॥

ಎನಿತು ಶಸ್ತ್ರಾಸ್ತ್ರಗಳು ಕವಿತರ ।
ಲನಿತುವನು ಕೈಗಳಲಿ ಪಿಡಿದಾ ।
ದನುಜಜನು ಮುಗುಳಿಟ್ಟನವನಿಪನಧಿಕರೋಷದಲಿ ॥
ಜನಪತಿಯ ಸಮ್ಮುಖಕೆ ನಿಲಲರಿ ।
ದೆನುತ ಮೇಲ್ವಾಯ್ದ ಪ್ರಹಸ್ತನು ।
ಮುನಿದು ಮುಸಲದೊಳೆಱಗಿದನು ಹೇಹಯನೃಪಾಲಕನ ॥೨೪॥

ಮುಸಲವನು ಬರಸೆಳೆದು ಕೊಂಡಂ ।
ದಸವಸದಲಾದೈತ್ಯಸಚಿವನ ।
ಮಸಕವನು ಮಾಣಿಸುತ ಭುಜಪಾಶದಲಿ ದಶಮುಖನ ॥
ಉಸಿರು ತೆಗೆಬಗೆಯಾಗೆ ಬಿಗಿಬಿಗಿ ।
ದಸಮುಸಮರಾವನಿಯನುಳಿದಾ ।
ವಸುಮತೀಶ್ವರನೈದಿದನು ಮಾಹಿಷ್ಮತೀಪುರಿಗೆ ॥೨೫॥

ಇದಿರುಗೊಂಡುದು ಜನವಿತತಿ ಸೂ ।
ಸಿದುದು ಸೇಸೆಯನಂಗನಾತತಿ ।
ಮುದವನೆಯ್ದಿತು ಸುರನರೋರಗಲೋಕದಖಿಳಜನ ॥
ತ್ರಿದಶರಿಪುಸಹಿತೈದಿದನು ನೃಪ ।
ಸದನವನು ಮಾಹಿಷ್ಮತೀಪತಿ ।
ಸದನಸದನದೊಳೊದವಿದುದು ಜಯವಾರ್ತೆ ಭೂಪತಿಯ ॥೨೬॥

ಸೋಲದಲಿ ಪಿಡಿವಡೆದನಾದಶ ।
ಮೌಳಿ ರಣದಲಿ ಕಾರ್ತವೀರ್ಯನೃ ।
ಪಾಲನಿಂದೆಂಬೊಂದು ವಾರ್ತೆಯನಾಪುಲಸ್ತ್ಯಮುನಿ ॥
ಕೇಳಿ ಸುಮನಸರಿಂದ ದುಗುಡವ ।
ತಾಳಿ ಮಾಹಿಷ್ಮತಿಗೆ ಬಂದನು ।
ಪೇಳುವೊಡೆ ಪೌತ್ರಾನುರಾಗವದೆಂತೊ ! ಮುನಿವರನ ॥೨೭॥

ಮುನಿಪನೈತರೆ ಕಾರ್ತವೀರ್ಯಾ ।
ರ್ಜುನನಿದಿರ್ವಂದಾ ಮುನಿಯು ಪದ ।
ವನಜಕಾನತನಾಗಿ ಬಿಜಯಂಗೆಯ್ಸಿ ನಿಜಪುರಕೆ ॥
ವಿನುತಮಧುಪರ್ಕಾಸನಾದಿಗ ।
ಳೆನಿಪ ವಿಧಿಗಳ ರಚಿಸಿ ಭೂಪತಿ ।
ವಿನಯದಲಿ ಕೈಮುಗಿದು ಬಿನ್ನಹಮಾಡಿದನು ಮುನಿಗೆ ॥೨೮॥

ಎಲೆ ಪುಲಸ್ತ್ಯಬ್ರಹ್ಮಋಷಿ ಮಂ ।
ಗಲವಲಾ ನಿಮ್ಮಂಘ್ರಿದರ್ಶನ ।
ಇಳೆಯೊಳೆನ್ನವೊಲಾರು ಧನ್ಯರು ಭೂಮಿಪಾಲರಲಿ ॥
ಹಲವು ಮಾತೇನೀಮಹೀಮಂ ।
ಡಲ ವರೂಥಗಜಾಶ್ವಕೋಶಂ ।
ಗಳನು ನಿಮ್ಮಡಿಗಿತ್ತೆಸೆದ ಕೈಕೊಳ್ಳಬೇಕೆಂದ ॥೨೯॥

ಇದೆ ಕಣಾ ! ರಾಜೇಂದ್ರ ನಿನ್ನಾ ।
ಸ್ಪದದೊಳಿರುತಿಹ ದೇಶಕೋಶಾ ।
ಭ್ಯುದಯುವೆಮ್ಮದು ತಥ್ಯವಿದಕುಪಚಾರವೇಕೆಮಗೆ ॥
ಕದನದಲಿ ದಶಮುಖಯುಶಃಕಾ ।
ಮುದಿಯುನೀಂಟಿತು ನಿನ್ನ ಭುಜಶೌ ।
ರ್ಯದ ವಿಘುಂತುದನೆಂದು ಮುನಿ ಹೊಗಜ಼ಿದನು ಭೂಪತಿಯು ॥೨೦॥

ಜನಪ ರಾವಣನೆನ್ನ ತನುಜನ ।
ತನುಜನಾತನ ಸೆಜ಼ೆಯು ಬಿಡು ಸುರ ।
ಜನವಿರೋಧಿಯು ಗೆಲಿದೆ ಮೂಜಗವಜ಼ುಂಜೆ ಸೀಸೆಸುತ ॥
ನಿನಗೆ ಸರಿಯುಹ ಭಟನದಾವನು ।
ದನುಜದಿವಿಜಭುಜಂಗಮಾನವ ।
ಜನದೊಳೆಂದು ಪುಲಸ್ತ್ಯಮುನಿ ಕೊಂಡಾಡಿದನು ನೃಪನ ॥೨೧॥

ಎನೆ ಹಸಾದವೆನುತ್ತ ಕೈಮುಗಿ ।
ದೆನಿತು ಧನ್ಯನೊ ತಾನು ನಿಮ್ಮಡಿ ।
ಗಿನಿತು ಹರ್ಷವನೊದವಿಸುವ ಸೈಪಾದುವೆನಗೆನುತ ॥
ದನುತನೂಜನ ಕರೆಸಿ ವಸ್ತ್ರಾ ।
ದ್ಯನುಪಮಾಭರಣಗಳನಿತ್ತು ತಿ ।
ವಿನಯುದಿಂದುಪಚರಿಸಿದನು ಮುನಿಪನ ಸಮಕ್ಷದಲ ॥೨೨॥

ಜ್ವಲನ ಸಾನ್ನಿಧ್ಯದಲಿ ನಂಬುಗೆ ।
ಗೊಳಿಸಿದನು ಕೈನೀಡಿ ಸಖ್ಯದ ।
ಬಳಕೆ ನಿಮ್ಮಿರ್ವರಿಗೆ ಬಲಿದಿರಲಿಂದು ಮೊದಲೆನುತ ॥
ಕಳುಹಿ ದಶಕಂಧರನ ಮುನಿಪದ ।
ನಳಿನಕೆಜ಼ಗಲು ಬೀಜ಼ುಕೊಂಡನು ।
ನಳಿನಜಜನಾಕಾರ್ತವೀರ್ಯಾರ್ಜುನಮಹೀಪತಿಯು ॥೨೩॥

ಬಳಿಕ ಕಳುಹಿಸಿಕೊಂಡು ಖಳ ದಶ ।
ಗಳನು ತನ್ನ ಪಿತಾಮಹನ ಮಂ ।
ಗಳಪದಂಗಳಿಗೆಜ಼ಗಿ ಪರಕೆಯುನಾಂತು ಮುನಿವರನ ॥
ಬಲಯುತರನಲ್ಲಲ್ಲಿ ಲೋಕಂ ।
ಗಳಲಿ ನೋಡುತ ಸುರನರೋರಗ ।
ಕುಲವನಜ಼ಸುತ ತಿರುಗಿದನು ರಾಜೇಂದ್ರ ಕೇಳೆಂದ ॥೨೪॥

ಅಕ್ಷಯಾತ್ಮ ವಿಪಕ್ಷದಾನವ।
ಶಿಕ್ಷ ದುಷ್ಕೃತರೂಕ್ಷ ಸುಮನಸ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಘನಲಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ।
ಯಕ್ಷ ಸುರಮುನಿರಕ್ಷ ಸುಜನಾ।
ಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥೩೫॥

ಇಂತು ಒಂಬತ್ತನೆಯ ಸಂಧಿ



## ಹತ್ತನೆಯ ಸಂಧಿ

ಸೂಚನೆ ॥ ಬಲುಹವಳಿಯದೆ ಕೆಣಕಿ ವಾಲಿಯ।
ಕೊಳುಗುಳಕೆ ಮೇಲ್ವಾಯ್ದು ಪಿಡಿವಡೆ।
ದಳವಳಿದು ಸಾಮದಲಿ ಕೆಳೆಗೊಂಡನು ದಶಗ್ರೀವ ॥

ಕೇಳಿದೈ ಕಾಕುತ್ಸ್ಥವಂಶಸ್ಯ।
ಪಾಲ ಬಲ್ಲಿದರಿಂದ ಬಲ್ಲಿದ।
ರಾಳುತನದಟುಳ್ಳವರು ಹಲರುಂಟು ಲೋಕದಲಿ ॥
ಬೀಳುಕೊಂಡು ಪುಲಸ್ತ್ಯನಸು ದಶ।
ಮೌಳಿ ಮನದುಬ್ಬಿನಲಿ ಧರಣೀ।
ಪಾಳರೊಳು ಜಲಯುತರ ಮುತ್ತಿಸಿದನು ಕಾಳೆಗಕೆ ॥೧॥
ದಿವಿಜರಿಪುಜಿತಸುರನರೋರಗ।
ಭುವನವನದೇನೆಂಬೆ ವಾಲಿಯ।
ಭವನವನು ವಿಖ್ಯಾತಕಿಷ್ಕಿಂಧಾಖ್ಯಪುರವರವ ॥
ಪ್ಲವಗಕುಲದುರ್ಜಯಭುಜಾರ್ಗಳ।
ನಿವಹರಕ್ಷಿತ ಶೌರ್ಯ ರತ್ನೋ।
ದ್ಭವಸಮುದ್ರವನಖಿಲಭದ್ರಮಹೀಧ್ರಶೋಭಿತವ ॥೨॥
ಅಲ್ಲಿ ತಾರಾಪಿತನೆನಿಪ ಕಪಿ।
ವಲ್ಲಭನು ತಾರಾಖ್ಯನಿರೆ ಸುರ।
ದಲ್ಲಣನು ನುಡಿಸಿದನು ವಾಲಿಯ ಸಚಿವನೆಂದರಿದು ॥
ಎಲ್ಲಿ ವಾಲಿಯು ಒರಸು ರಣದಲಿ।
ಬಲ್ಲಿದನು ಗಡ ನೋಳ್ಪೆನೆನೆ ಕಪಿ।
ಮೆಲ್ಲನಿಂತೆಂದನು ಮುಗುಳ್ನಗೆ ಸೂಸೆ ರಾವಣಗೆ ॥೩॥

ಎಲೆ ನಿಶಾಚರ ನಿನ್ನ ಭುಜಬಲ ।
ದಳವನಱಿಯದೆ ವಾಲಿಯೊಳು ಕೊಳು ।
ಗುಳವ ಬಯಸುವೆ ಬಯಸಿದಪೆ ನೀ ಸಾವನಕಟೆನುತ ॥
ಗೆಲವು ಘಟಿಸದು ನಿನಗೆ ದಕ್ಷಿಣ ।
ಜಲಧಿಗೈದಿದನಾಪ್ಲವಂಗಮ ।
ಕುಲಶಿರೋಮಣಿಯೊಂದು ಗಳಿಗೆಗೆ ಬಾರದಿರನೆಂದ ॥೪॥

ಸೈರಿಸಿನ್ನರೆಗಳಿಗೆ ನಿನ್ನನು ।
ಮಾರಿಗಡಬಳವಿಕ್ಕುವನು ಕಪಿ ।
ವೀರನೆನೆ ಕಪಿಸಚಿವನನು ಕಡುಮುಳಿದು ಝಂಕಿಸುತ ॥
ದಾರಿದೆಗೆದನು ದಕ್ಷಿಣಾರ್ಣವ ।
ತೀರಕತಿವೇಗದಲಿ ರಾಕ್ಷಸ ।
ವೀರನೆಯ್ದಿದನಭ್ರಗತಿಯೊಳಗಾಮಹಾರ್ಣವವ ॥೫॥

ಕಂಡನೈ ಕಪಿಕುಲಕಮಲಮಾ ।
ರ್ತಂಡನನು ಮಾರ್ತಂಡತೇಜೋ ।
ಮಂಡಲನನುರುಕುಂಡಲನನಾಖಂಡಲನ ಸುತನ ॥
ಚಂಡಬಲನಿವನೆಂದೆನುತ ಭೂ ।
ಮಂಡಲಕೆ ನಭದಿಂದಿೞಿದು ಕೈ ।
ಕೊಂಡನೈ ಪದಶಬ್ದವಾಗದ ಗತಿಚಮತ್ಕೃತಿಯ ॥೬॥

ಗನ್ನದಲಿ ನಡೆತಂದು ವಾಲಿಯ ।
ಬೆನ್ನದೆಸೆಯಲಿ ರೂಹುದೋಱದೆ ।
ತನ್ನ ಭುಜಬಲವೆನಿತನಿತಱೊಳು ಬಿಗಿದನು ಕಪೀಶ್ವರನ ॥
ಉನ್ನತೋನ್ನತಬಾಹುಬಲಸಂ ।
ಪನ್ನನಲ್ಲಾ ವಾಲಿ ಬಗೆಯದೆ ।
ತನ್ನ ಶೌಚವ್ರತದೊಳಿರ್ದನು ಮೌನಮುದ್ರೆಯಲಿ ॥೭॥

ತಿರುಗಿ ನೋಡಿದನೊಮ್ಮೆ ರಜನೀ ।
ಚರನನಾಶೌಚಾಂತದಲಿ ಕಂ ।
ಧರಿಭಯಂಕರನಿರುಕಿದನು ಬರಸೆಳದು ಕಕ್ಷದಲಿ ॥
ಕರಿ ನರಿಯ ಶಿಕ್ಷಿಸುವವೊಲು ಕೇ ।
ಸರಿ ಮೊಲನ ನಿಟ್ಟಿಸುವವೊಲು ದಶ ।
ಶಿರನನೆಣಿಸದೆ ಮಿಂದು ಸಂಧ್ಯಾವಿಧಿಯನೆಸಗಿದನು ॥೮॥

ಅಲ್ಲಿ ಜಪವನು ವಿಧಿವಿಧಾನಗ ।
ಳಲ್ಲಿ ವಿರಚಿಸಿ ಪಶ್ಚಿಮಾಬ್ಧಿಗೆ ।
ನಿಲ್ಲದೈದಿದನಸುರಪತಿಸಹಿತಭ್ರಮಾರ್ಗದಲಿ ॥
ಅಲ್ಲಿ ಸಂಧ್ಯಾಸ್ನಾನಜಪಗಳ ।
ನೆಲ್ಲವನು ವಿಧ್ಯುಕ್ತದಲಿ ಕಪಿ ।
ವಲ್ಲಭನು ಮಾಡಿದನು ಕೌಂಕುಳೊಳಾಕಿ ರಕ್ಕಸನ ॥೯॥

ನಡೆದನಲ್ಲಿಂ ಮೇಲೆ ಬಡಗಣ ।
ಕಡಲಿಗಸುರನ ಹೊತ್ತು ಫಣಿಪನ ।
ಪಿಡಿದು ನಡೆವ ಖಗೇಂದ್ರನಂತವನಭ್ರಮಾರ್ಗದಲಿ ॥
ಬಿಡುದಲೆಯು ನಿಡುದೋಳುಗಳ ಜೋ ।
ಲ್ದೊಡಲ ಸುರರಿಪು ಮದವಡಗಿ ಪಿಡಿ ।
ದುಡಿದ ಫಲಿತನವಾಮ್ರಕುಜದಂತಿರ್ದನಭ್ರದಲಿ ॥೧೦॥

ಆಸಮುದ್ರಸ್ನಾನಜಪಸಂ ।
ಧ್ಯಾಸುಕರ್ಮವನೆಸಗಿ ಕಪಿವರ ।
ನೋಸರಿಸದೈದಿದನು ಪೂರ್ವಾಂಬುಧಿಗೆ ರಿಪುಸಹಿತ ॥
ಆಸುಪಾರ್ಶ್ವ ಮಹೋದರಾದ್ಯರು ।
ಗಾಸಿಯಾದರು ಕಪಿಪದೋತ್ಥಮ ।
ಹಾಸಮಿಾರನ ಹೊಯ್ಲಿನಲಿ ರಣವವನೊಳಿಲ್ಲೆಂದ ॥೧೧॥

ಮಿಂದು ಪೂರ್ವಾಬ್ಧಿಯೊಳು ಸಂಧ್ಯಾ ।
ವಂದನಾದಿ ವಿಧಾನವನು ಮುದ ।
ದಿಂದೆಸಗಿ ಕಕ್ಷಾವಲಂಬಿ ಸುರಾರಿ ನೋಡುತಿರೆ ॥
ಬಂದನಗಣಿತಯೋಜನವ ಕಳೆ ।
ದಂದು ದೈತ್ಯನ ಹೊತ್ತು ಒಬಲಿಕೆ ।
ಯಿಂದ ಕಿಸ್ಕಿಂಧೋಪವನದೊಳು ಬಿದ್ದನಳವಳಿದು ॥೧೨॥

ಎಡದ ಕೌಂಕುಳಿ ಬಿಗುಹು ಮೆಲ್ಲನೆ ।
ಸಡಿಲವಾಗಿರೆ ನುಸುಳಿ ರಿಪು ಬೆಂ ।
ಗಡೆಗೆ ಸರಿದರೆ ಮುರಿದು ನೋಡಿದನಮರಪತಿಸೂನು ॥
ನುಡಿಸಿದನು ನೀನಾರೆಲವೊ ! ನಿ ।
ನ್ನೊಡೆಯರಾರೆಮ್ಮಲ್ಲಿ ನಿನಗು ।
ಗ್ಗಡದ ಕೆಲಸವಿದೇನೆನುತ ನಗೆಯುಗೆ ಮುಖಾಬ್ಜದಲಿ ॥೧೩॥

ಆದೊಡೆಲೆ ಕಪಿರೂಪನಾಂತಬು ।
ಜೋದರನೆ ತವಸಾಹಸಕೆ ಸರಿ।
ಯಾದ ಸುಭಟರು ಜಗದೊಳಿಲ್ಲ ವಿಚಿತ್ರಸತ್ವನಲ! ॥
ಕಾದಿ ಬದುಕುವರುಂಟೆ ನಿನ್ನೊಳ ।
ಗೈದಿಸೆನ್ನೊಳು ಮಿತ್ರಭಾವವ ।
ಭೇದವಿಲ್ಲದೆ ದೇಶಕೋಶವಿಶೇಷದೊಳಗೆಂದ ॥೧೪॥

ಆಗಲದಕೇನೆಂದೆನುತ ಶತ ।
ಯಾಗಸುತನರ್ಚಿಸಿ ಕೃಶಾನುವ ।
ನಾಗ ನಂಬುಗೆಗೊಳಿಸಿದನು ಕೈಮುಟ್ಟಿ ರಾವಣಗೆ ॥
ಹೋಗಿ ಕಿಷ್ಕಿಂಧಾನಗರಿಗನು ।
ರಾಗದಲಿ ರಾವಣನ ಮನ್ನಿಸಿ ।
ಯಾಗಭೀರಪರಾಕ್ರಮನು ಬೀಳ್ಕೊಟ್ಟನುಚಿತದಲಿ ॥೧೫॥

ಅಂದುಮೊದಲವರಿರ್ವರಿಗೆ ಕೆಳೆ ।
ಸಂದಿಹುದು ವಾಲಿಯ ಬಲಕೆ ಸರಿ ।
ವಂದ ಸುಭಟರು ಲೋಕದೊಳಗಿಲ್ಲಾ ಕಪೀಶ್ವರನ ॥
ಕೊಂದೆ ನೀನಂಬಿನಲಿ ಕೇಳ್ ನಿ।
ನ್ನಿಂದ ಬಲ್ಲಿದರಿಲ್ಲ ಜಗದೊಳ ।
ಗೆಂದು ಪೇಳಲಗಸ್ತ್ಯಮುನಿಗಿಂತೆಂದನಾರಾಮ ॥೧೬॥

ಎಲೆ ಮುನೀಶ್ವರ ! ವಾಲಿದಶಮುಖ ।
ರಳವಿನಿಂದೀಹನುಮನತಿಭುಜ ।
ಬಲನೆನಿಪ ಮತಿ ತೋಱುದಪುದೆನ್ನಂತರಂಗದಲಿ ॥
ಕಲಿತನದೊಳತಿಸತ್ವದಲಿ ನಿ ।
ಶ್ಚಲಿತಧೈರ್ಯದೊಳೂಹೆಯಲಿ ನಿ।
ರ್ಮಲಮೃದೂಕ್ತಿಯೊಳೆಂತೊ ! ನಿಮ್ಮಡಿಗಱಿಯೆ ನಾನೆಂದ ॥೧೭॥

ಅಹುದು ರಾಘವ ಹನುಮನಿವನತಿ ।
ಸಹಸಿ ನೀನೆಂದಂತೆ ತಪ್ಪದು ।
ಬಹಳವಿದ್ಯಾಪರಿಣತನು ಗುಣಗಣಸಮನ್ವಿತನು ॥
ಮಹಿಯೊಳೀಮಾರುತಸುತಗೆ ಸರಿ ।
ಬಹನದಾವನಶೇಷವಿದ್ಯಾ ।
ವಿಹರಣದೊಳೆಂದೆನುತ ಮೈತ್ರಾವರುಣಿ ಹೊಗಱಿದನು ॥೧೮॥

ಆದೊಡೆಲೆ ಮುನಿ ! ಮರುತತನಯನೊ ।
ಳೈದುವುವು ನೀವೆಂದ ಗುಣಗಳಿ ।
ವೈದಡೊಡೆ ಲಂಕಾದಹನವಾಸಾಗರೋತ್ತರಣ ॥
ಮೇದಿನೀತನುಜಾನಿರೀಕ್ಷಣ ।
ವಾದನುಜಕುಲಹನನವೆಂಬುವಿ ।
ವಾದವುದೆ ಸಂದೇಹವೊಂದಿಹುದಱುಹಬೇಕೆಂದ ॥೧೯॥

ಜೀವಸಖನೀಹನುಮನಿರೆ ಸು ।
ಗ್ರೀವನಿಗೆ ವಾಲಿಯು ಸಮರಭಯು ।
ವಾವರಿಸಿಕೊಂಡಿಹುದು ಬಿಡಿಸನದೇಕವನ ಭಯುವ ॥
ದೇವರಾಜನುಪೇಕ್ಷೆಯೋ ನಿ ।
ರ್ದೈವನೋ ಸುಗ್ರೀವನೆನೆ ವೈ ।
ತ್ರಾವರುಣಿ ಬಿಡಿಸಿದನು ಸಂದೇಹವನು ರಘುಪತಿಯ ॥೨೦॥

ಮಾನವಾಧಿಪ, ಕೇಳು ಮಾರುತ ।
ಸೂನು ಬಾಲ್ಯಾವಸ್ಥೆಯಲಿ ಮುನಿ ।
ಕಾನನದೊಳಿಹ ಚರುಸಮಿದ್ಧರ್ಭಾಜ್ಯಪಾತ್ರಗಳ ॥
ತಾನೊದೆದು ಮುಱಿದೆಬ್ಬಿದೊಡೆದು ಹೋ ।
ಮಾನಲನನೊಡಗಲಿಸಿ ಮುನಿಸಂ ।
ತಾನವನು ಬೆದಱಿಸನು ಮುಱಿವನು ಮುನಿತಪೋವನವ ॥೨೧॥

ಈತೆಱದೊಳಿವನೆಸಗೆ ಮುನಿಸಂ ।
ಘಾತದಲಿ ಕೆಲಕೆಲರು ಕಡುಮುಳಿ ।
ದಾತಗಳು ಶಪಿಸಿದರೀತನವಷ್ಯನೆಂದಱಿದು ॥
ಈತನೀಶವರಪ್ರಸಾದೋ ।
ದ್ಭೂತಗರ್ವಿತನಾತ್ಮಸತ್ವವ ।
ನೀತನಱಿಯದೆ ಮೂಢನಾಗಿರಲಿಂದು ಮೊದಲೆನುತ ॥೨೨॥

ಅಂದುಮೊದಲಾಗೀತನಿಗೆ ಮತಿ ।
ಕುಂದಿಹುದು ಬಟಿಕಾತ್ಮಸತ್ವವ ।
ನೊಂದಿನಿತು ತಿಳಿದಿರಲು ನಿನ್ನ ಕೃಪಾಪ್ರಸಾದದಲಿ ॥
ಹಿಂದುಡೆಗೆದುದು ಶಾಪ ಮುನಿಪತಿ ।
ಗಂದು ಪೋದಂದದಲಿ, ಹನುಮನ ।
ದೊಂದು ಮಹಿಮೆಯುಸಾದೊಡೆಯೊಡೆಸಿಸು ರಾಮ ಕೇಳೆಂದ ॥೨೩॥

ಅಕ್ಷಯಾತ್ಮ ವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ।
ಯಕ್ಷಸುರಮುನಿರಕ್ಷ ಸುಜನಾ।
ಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥೨೪॥

ಇಂತು ಹತ್ತನೆಯ ಸಂಧಿ ಸಂಪೂರ್ಣಂ

---

## ಹನ್ನೊಂದನೆಯ ಸಂಧಿ

---

ಸೂಚನೆ॥ ಪೇಳಿದನು ರಘುಪತಿಗೆ ಮುನಿಜನ ।
ಮೌಳಿ ಮೈತ್ರಾವರುಣಿ ಹನುಮನ।
ಬಾಳಭಾವದ ಸತ್ವವನು ಸುರರಿತ್ತ ವರಸಹಿತ ॥

ಕೇಳು ರಾಘವ, ಮರುತತನಯನ ।
ಬಾಳಭಾವದ ಬಾಹುಸಾಹಸ ।
ದೇಳಿಗೆಯನೇನೆಂಬೆನುಸಿರುವೊಡತಿವಿಚಿತ್ರವಲಾ ॥
ಬಾಲತನವೇ ಬಲುಹು ಯೌವನ ।
ಕಾಲಕೀತನ ಬಲಕೆ ಪಡಿಯಿಡ ।
ಲಾಳದಾವನೊ ಪೇಟಲರಿದದ್ಭುತವ ಕೇಳೆಂದ ॥೧॥

ಸೂರದತ್ತಪ್ರವರಹೇಮಸು ।
ಮೇರುವೆಂದೆನಿಪದ್ರಿರಾಜ್ಯದ ।
ಭಾರಗೊಳಗಿರುತಿಹನು ಕೇಸರಿಯೆಂಬ ಕಪಿವರನು ॥
ನಾರಿಯಾತಂಗಂಜನಾವಧು ।
ಸೇರಿಹಳು ಮುನಿಶಾಪದಲಿ ಕಪಿ ।
ವೀರನಾಕೆಯನಗಲಿ ತಪವಿರುತಿರ್ನಡವಿಯಲಿ ॥೨॥

ಪತಿ ತಪೋನಿಷ್ಠೆಯೊಳಗಿರಲಾ ।
ಸತಿ ತಪವನಾಚರಿಸಿದಳು ವಾ ।
ರುತವಶದೊಳೈತಹುದೆ ತನಗಾಹಾರವೆಂದೆನುತ ॥
ಕೃತಕದಲಿ ಮೆಯ್ಗರೆದು ತಪವಿಹ ।
ಸತಿಯೊಡನೆ ರಮಿಸಿದನು ತನ್ಮಾ ।
ರುತನು ಸಕಲಪ್ರಾಣರೂಪಂಗರಿಗನೇನೆಂದ ॥೩॥

ಈತನುದ್ಭವಿಸಿದನಲ್ಲೆ ವಿ।
ಖ್ಯಾತನಂಜನೆಗಾರ್ಯಕುಲಸಂ।
ಭೂತನುನ್ನತಕಾಂಚನಾಚಲಕಾಂತಿಸಂಯುತನು ॥
ಪೂತಚೂತನನೇಕಗುಣಸಂ।
ಘಾತನದ್ಭುತವೀರರಸಸಂ।
ವೀತನಿರ್ದನು ಶೈಶವಕ್ರೀಡಾವಿನೋದದಲಿ ॥೪॥

ಒಂದುದಿನವಿರುತಿರುತ ಮಾರುತ।
ನಂದನನು ನಿಜಜನನಿ ತೊಲಗಿರೆ।
ಹಿಂದೆ ಕಡುಹಸಿದಳುತ ದೆಸೆದೆಸೆಗಳನು ನೋಡುತಿರೆ ॥
ಅಂದಿನುದಯದೊಳುದಯವಾದರ।
ವಿಂದ ಸಖನರುಣತೆಗೆ ಕಳಿತಪ।
ಣ್ಣೆಂದು ಭಾವಿಸಿ ಲಂಘಿಸಿದನಾದಿತ್ಯಮಂಡಲಕೆ ॥೫॥

ನೊಂದಪನು ರವಿಕಿರಣತಾಪದೊ।
ಳೆಂದು ನಿಜನಂದನನೊಡನೆ ಬಳಿ।
ಸಂದು ನಡೆದನು ಪವನನತಿಶೀತಲತುಷಾರದಲಿ ॥
ಅಂದು ಬಹುಯೋಜನವ ಕಳೆದೈ।
ತಂದು ಪವನಸಹಾಯದಲಿ ಬಲು।
ಹಿಂದ ತುಡುಕಿದನೀಹನುಮನಾದಿತ್ಯಮಂಡಲವ ॥೬॥

ಈಹನುಮನೈದಿದ ಮುಹೂರ್ತವೆ।
ರಾಹುಪರ್ವಮುಹೂರ್ತವಾದುದು।
ರಾಹು ಸೂರ್ಯಗ್ರಹಣಮನನೈದಿದನು ತವಕದಲಿ ॥
ಆಹನುಮನಿರೆ ಕಂಡು ನೂತನ।
ರಾಹುವೆಂದೇ ತಿಳಿದು ಮನದೊಳ।
ಗೂಹಿಸುತ ಸುರಪತಿಯು ಬಳಿಗೋಡಿದನು ಭೀತಿಯಲಿ ॥೭॥

ಹಾ! ಸುರೇಶ್ವರ! ಶಶಿರವಿಗಳೇ।
ಗ್ರಾಸವೆನಗಿಂದನ್ಯರಾಹು।
ಗ್ರಾಸವಾದುದು ನಿನ್ನೊಳಾಜ್ಞಾಭಂಗವಾದುದೆನೆ ॥
ಆಸುಪರ್ವಪ್ರಭು ಕನಲ್ದು ವ।
ರಾಸನವನಿಳಿದಾಗಜಸ್ಥ।
ನಾಸನವನೇರಿದನು ವಜ್ರಾಯುಧವ ಕೈದುಡುಕಿ ॥೮॥

ತೋಱು ನೂತನರಾಹುವಾವೆಡೆ ।
ತೋಱೆನಲು ಜಂಭಾರಿಯಾದೊಡೆ ।
ತೋಱಿದಪೆನೆಂದನುವಱಿದನಾಸಿಂಹಿಕಾಸೂನು ॥
ತೋಱಲನಿತಕೆ ಕೊಂಡ ತರಣಿಯು ।
ಜಾಱೆ ನೂಂಕಿ ವಿಧುಂತುದನನು ।
ಬ್ಬೇಱಿ ಪಿಡಿದಪೆನೆನುತ ತಡೆದನು ಹನುಮ ಬಾತಿಯಲಿ ॥೯॥

ಅಹಹ! ಸುರಪತಿ ಬಂದನಿದೆ ಕೋ ।
ಮಿಹಿರರಿಪುವಸ್ಮದ್ವಧೆಗೆ ನಿ ।
ರ್ವಹಿಸಲಾವೊಡೆ ಪರಿಹರಿಸು ನೀ ಪಿಡಿ ಮಹಾಯುಧವ ॥
ಬಹಳಬಲನಿವನೆಂದೆನಲಿದೇಂ ।
ಗಹನವೆನುತ್ತೈರಾವತವನಾ ।
ಗ್ರಹದೊಳೀತನ ಮೇಲೆ ನೂಂಕಿದನಿಂದ್ರನಿಕ್ಕಿಮುಳಿದು ॥೧೦॥

ಕಂಡನೈರಾವತವೆನಿಪ ವೇ ।
ತಂಡವನು ಫಲವೆಂದು ಬಗೆದು ।
ದ್ದಂಡಬಲನದ ತುಡುಕೆ ಮುಳಿದನಿಮಿಷಕುಲೇಶ್ವರನು ॥
ಚಂಡಕುಲಿಶದೊಳಿವನನಿಟ್ಟೊಡೆ ।
ಖಂಡಿಸಿದುದೈ ವಾಮಗಂಡವ ।
ಕಾಂಡಮರಣವದೈದಿತೀತಂಗರಸ ಕೇಳೆಂದ ॥೧೧॥

ಮಡಿದ ಮಗನನು ವಾಯು ತನ್ನಯ ।
ತೊಡೆಯೊಳಿಟ್ಟೀಜಗದ ಜೀವಿಗ ।
ಳೊಡಲೊಳೆಡೆಗುಡದಿರ್ದನೇಕಸ್ಥಾನಗತವಾಗಿ ॥
ನುಡಿಯಲೇಕಿನ್ನೀಚರಾಚರ ।
ವಡಗಲಿರ್ದುದು ವಾಯುವಿನ ನಡೆ ।
ಯುಡುಗಿದುದು ಪರಮೇಷ್ಠಿಯಱಿದನು ಜಗದ ವೇದನೆಯ ॥೧೨॥

ಅಸಮುಸ್ತಾಮರರೊಡನೆ ಕಮ ।
ಲಾಸನನು ಬರೆ, ದೂರದಲಿ ಕಂ ।
ಡಾಸವಿರಾರಣನೆದ್ದು ಮೋನದೊಳಿರಲು ಕೈಮುಗಿದು ॥
ಈಸವಿರಾರಾತ್ಮಜನೆಡೆಗೆ ವಿಧಿ ।
ಯೋಸರಿಸದೈತಂದು ಮುಟ್ಟಿದ ।
ನೇಸು ಧನ್ಯನೊ ಪಸರಿಸಿದುದಸುವೀತನಂಗದಲಿ ॥೧೩॥

ಎತ್ತಿ ಹನುಮನ ಮೆಯ್ದಡವಿ ವಿಧಿ।
ಯಿತ್ತನಪರಬ್ರಹ್ಮಪದವನು।
ಉತ್ತಮ ಬ್ರಹ್ಮಾಸ್ತ್ರಬಾಧೆಗಳಿಲ್ಲದಿಹ ವರವ॥
ಮತ್ತೆ ದಿಕ್ಪಾಲಕರು ತಮತಮ।
ಗಿತ್ತರಿಂದ್ರಾದಿಗಳು ಮುದದಲಿ।
ಬಿತ್ತರಿಸಿ ವರಗಳನಪೂರ್ವವನನಿಲನಂದನಗೆ ॥೧೪॥

ಎನ್ನ ವಜ್ರದ ಭಾಧೆ ಹನುಮನ।
ನಿನ್ನು ಬಾಧಿಸಲಱಿಯದೀತಗೆ।
ಮುನ್ನ ಹನು ಖಂಡಿಸಿದ ದೆಸೆಯಿಂ ಹನುಮನೆಂದಿರಲಿ॥
ಉನ್ನತದ ಹೆಸರೆನುತ ಸುರಪತಿ।
ಸನ್ನಯಿಂದಿದನಾಡೆ ಜಗದೊಳು।
ಸನ್ನುತದ ಹೆಸರಾದುದೀತಗೆ ಹನುಮನೆಂದೆನುತ ॥೧೫॥

ವೀತಿಹೋತ್ರ ಪರೇತಪಾಲಕ।
ಯಾತುಧಾನಾಧಿಪ ಜಲೇಶ್ವರ।
ಮಾತರಿಶ್ವ ಧನೇಶ ಶಂಕರರಿತ್ತರೈ ವರವ॥
ಈತಗೆಮ್ಮಯ ದೆಸೆಯ ಮರಣದ।
ಭೀತಿಬಾಧೆಗಳಿಲ್ಲ ಜಗದೊಳ।
ಗೀತನಗ್ಗಳನೆನಿಸಲೆಂದರು ಸಕಲದಿಗಧಿಪರು ॥೧೬॥

ಕ್ರಮವಱಿದು ಮಯ ವಿಶ್ವಕರ್ಮ।
ಪ್ರಮುಖರಿತ್ತರು ವರವನೀತಗೆ।
ಸಮರದಲಿ ಮಿಕ್ಕೆಡೆಯೊಳೆನ್ನದೆ ಸರ್ವಶಕ್ತಿಗಳ॥
ಸಮುದಯಂಗಳ ಭೀತಿಬಾಧಾ।
ಕ್ರಮಗಳಸಮರ್ಥಂಗಳೆನುತಂ।
ದಮಿತವಚನಗಳಿಂದ ನುಡಿದರು ಸರ್ವತೋಮುಖರು ॥೧೭॥

ವರಗಳೀತಂಗಾದುದಿವನಿಗೆ।
ಹರುಷವಾದುದು ಲೋಕದಲಿ ಸಂ।
ಚರಿಸಿದನು ಪವಮಾನನಾಗಳೆ ಮುನ್ನಿಸಂದದಲಿ॥
ಪರಮಸುಖದೊಳಗೀಚರಾಚರ।
ವಿರದೆ ಹೆಚ್ಚಿತು, ಸುರರೊಡನೆ ವಿಧಿ।
ಸರಿದನಾಗಪರಿವನ ಕಾರ್ಯವನಿನ್ನು ಕೇಳೆಂದ ॥೧೮॥

ಈಕಪೀಂದ್ರಂಗಾದುದ್ಯೆಂದ್ರು ।
ವ್ಯಾಕರಣ ಮೊದಲಾದ ಶಾಸ್ತ್ರ ।
ನೀಕವಾದಿತ್ಯನೊಳು ನಾನಾಸೂತ್ರವೃತ್ತಿಗಳು ॥
ಆಕಮಲಸಖನಭಿಮುಖದೊಳಿವ ।
ನೇಕಮನನುದಯಾಸ್ತಗಿರಿಗ ।
ವ್ಯಾಕುಲನು ರವಿಯೊಡನೆ ನಡೆದನು ಪೇಳಲರಿದೆಂದ ॥೧೯॥

ಆದಿಯಲಿ ಮುನಿಶಾಪವೀತಂ ।
ಗಾದುದಲ್ಲದೊಡಿವನು ವಾಲಿಯು ।
ನೈದದಿಹನೇ ಸಮರದಲಿ ಜಯಸಿರಿಗೆ ಕೈದುಡುಕಿ ॥
ಹೋದುದದು ಮೆಯ್ದೆಗೆಡು ನಿನ್ನಿಂ ।
ದೈದಿತಮಲಜ್ಞಾನವಿವನಿಗೆ ।
ಮೇದಿನಿಯೊಳಗೆಣೆಯಿಲ್ಲ ರಘುಭೂಪಾಲ ಕೇಳೆಂದ ॥೨೦॥

ತರಣಿಸುತ ನಳ ನೀಲ ಜಾಂಬವ ।
ಶರಭ ಮೈಂದ ದ್ವಿವಿಧ ಶತಬಲಿ ।
ವರಸುಷೇಣಕ ಗಂಧಮಾಧವಂಗದರು ಮೊದಲಾದ ॥
ತರುಚರರು ತವ ಸೇವೆಗೋಸುಗ ।
ಸುರರ ದೆಸೆಯಿಂದಾದರೈ ಕ ।
ರ್ಬುರವಧಾಸಂಕಲ್ಪವಿದು ರಘುನಾಥ ಕೇಳೆಂದ ॥೨೧॥

ಪೇಳಿದೆವಲೈ ದಾಶರಥಿ ನೀಂ ।
ಕೇಳಿದತಿಸಂದೇಹಶಲ್ಯೋ ।
ನ್ಮೂಲನವನಿಂದೈದಿದಪೆವೆಮ್ಮಯ ತಪೋವನಕೆ ॥
ಪಾಲಿಪುದು ಭೂಮಂಡಲವನೀ ।
ಕಾಲಧರ್ಮವನರಿದೆನಲು ಮುನಿ ।
ಮೌಳಿಯೊಡನಿಂತೆಂದು ಬಿನ್ನಹಮಾಡಿದನು ರಾಮ ॥೨೨॥

ಎಲೆ ಮುನೀಶ್ವರ! ನೀವು ಪೇಳ್ದಂ ।
ತಿಳಿಯ ಸಲಹುವೆ ಸಕಲಧರ್ಮವ ।
ಬಳಸುವೆನು ನೀವೆಂದವೊಲು ನಿಮ್ಮಡಿಯ ಕೃಪೆಯಿಂದ ॥
ಹಲವು ಮಾತೇನಿನ್ನು ಯಾಗದ ।
ಹೊಲಬಿನಲಿ ಸಿಲುಕಿಹುದು ಮನವದು ।
ಸುಲಭವಪ್ಪವೊಲೆನಗನುಜ್ಞೆಯ ನೀಯಬೇಕೆಂದ ॥೨೩॥

ಲೇಸನಾಡಿದೆ ರಾಮ ಯಾಗವ ।
ದೇಸು ಘನವಾಗಿರ್ದಪುದು ನಿನ ।
ಗೀ ಸಮಸ್ತ ಮಹೀಶ್ವರರು ವಶವರ್ತಿಯಾಗಿಹರು ॥
ಭಾಸುರರು ನಿನ್ನಭ್ಯುದಯದೊಳು ।
ಬೇಸಜಿಸಗರೆನುತ್ತ ಕುಂಭಜ ।
ನಾಸಕಲಮುನಿಜನಸಹಿತ ಬೀಳ್ಕೊಂಡನವನಿಪನ ॥೨೪॥

ಚರಣಕಾನತನಾದ ರಾಮನ ।
ಹರಸಿ ಹೋದರು ಮುನಿಗಳತ್ತಲು ।
ಧರಣಿಪತಿ ಸೋದರರೊಡನೆ ಸುಖವಿರ್ದನೊಲವಿನಲಿ ॥
ತರಣಿಸುತ ನಳ ನೀಲ ಜಾಂಬವ ।
ಮರುತತನಯ ವಿಭೀಷಣಾದ್ಯರು ।
ಪರಮಭಕ್ತಿಯೊಳಿರ್ದರೋಲಗದೊಳು ಮಹೀಪತಿಯ ॥೨೫॥

ಓಲಗಕೆ ಬಂದಖಿಳಧರಣೀ ।
ಪಾಲರನು ಬೀಳ್ಕೊಳಿಸಿದನು ಭೂ ।
ಪಾಲನಾಕ್ಷಣ ಋಕ್ಷವಾನರರಾಕ್ಷಸರು ಸಹಿತ ॥
ದಾಟಿಯಿಡಲಿನನಸ್ತಶೈಲದ ।
ಮೇಲೆ ತದ್ರಥಪದೋತ್ಥಿತ ।
ಧೂಳಿಯೆನೆ ಕೆಂಪಡರ್ದುದಾಗಸವಪರದಿಕ್ತಟದೆ ॥೨೬॥

ತರಣಿ ಪಡುವಣ ಕಡಲ ಬಾಡಬ ।
ದುರಿಯೊಳದ್ದನು ಕುಮುದಿನಿಯುನುಱಿ ।
ಕೊರಗಿಸಿದ ಪರಪೀಡೆ ಬಿಡದುದನಿಳೆಗೆ ತೋರ್ಪಂತೆ ॥
ಉರಿಯುಡಗಿ ತಚ್ಛಿಖಿಯೆ ಹೊಯ್ದಾ ।
ವರಿಸಿತೆನೆ ದೆಸೆದೆಸೆಗಳಲಿ ಮೊ ।
ಬ್ಬಿರದೆ ಪಬ್ಬಿದುದುಬ್ಬಿಯುಬುಜಭವಾಂಡಮಂಡಲವ ॥೨೭॥

ತರಣಿವಂಶಜನಾಗ ನಿಜಸೋ ।
ದರರ ಮನ್ನಿಸಿ ಕಳುಹಿಯುಂತಃ ।
ಪುರದೊಳಿರ್ದನು ರಾತ್ರಿ ಭೋಜನಶಯನಸೌಖ್ಯದಲಿ ॥
ಅರರೆ! ರಾಮನ ಪಟ್ಟವಾದಪು ।
ದಿರುಳ ನೂಂಕುವೆನೆನುತ ಮೂಡಣ ।
ಗಿರಿಶಿರವನಡರಿದನು ದಿನಕರನಧಿಕತೇಜದಲಿ ॥೨೮॥

ಅಕ್ಷಯಾತ್ಮ ವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷ ಸುರಮುನಿರಕ್ಷ ಸುಜನಾ ।
ಪೇಕ್ಷ ನರಪುರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥೨೯॥

ಇಂತು ಹನ್ನೊಂದನೆಯ ಸಂಧಿ ಸಂಪೂರ್ಣಂ



## ಹನ್ನೆರಡನೆಯ ಸಂಧಿ

ಸೂಚನೆ॥ ಪ್ರಚುರತರಪಟ್ಟಾಭಿಷೇಕವ ।
ರಚಿಸಿ ರಾಘವನಖಿಳ ಭೂಮಿಪ ।
ರುಚಿತದಲಿ ಬೀಳ್ಕೊಂಡು ನಿಜನಿಜನಗರಿಗೈದಿದರು ॥

ಪೇಳಿದನು ವಾಲ್ಮೀಕಿ ಮನುಕುಲ ।
ಪಾಳಕನ ಚರಿತವನು ಮನಕೆ ವಿ ।
ಶಾಳವೆನೆ ಕೃತಿರೂಪದಲಿ ನಾರದನಿರೂಪದಲಿ ॥
ಕೇಳಲಘಕುಲಕುಲಶಿಖರಿದಂ ।
ಭೋಳಿಯುನು ಸುಶ್ರಾವ್ಯಘನಸುಖ ।
ಕೇಳಿಯುನು ವಿಸ್ತರಿತಪಾವನತರಕಥಾಳಿಯುನು ॥೧॥

ಶುಭಮುಹೂರ್ತದೊಳಖಿಳವಾದ್ಯದ ।
ರಭಸದಲಿ ಪಟ್ಟಾಭಿಷೇಕದ ।
ವಿಭವವಾದುದು ಸರ್ವತೀರ್ಥಂಗಳಲಿ ರಘುಪತಿಯು ॥
ತ್ರಿಭುವನಪ್ರಖ್ಯಾತವಪ್ಪಂ ।
ದಿಭರಥಾಶ್ವಾಂಬರದ ದಾನದೊ ।
ಳಭಿನವಾದ್ಭುತವಾಗಿ ತಣಿದುದು ಸಕಲಜನವಿತತಿ ॥೨॥

ವಾಚಿಸುವೊಡರಿದಮಮ! ಷೋಡಶ ।
ಯಾಚಕವ್ರಜದೊಡನೆ ರವುಚಕ ।
ವಾಚಕಾದಿ ಕವೀಶ್ವರರು ದಣಿದರು ಸದರ್ಥದಲಿ ॥
ನಾಚಿದುದು ಸುರಭೂಜವೆನಗಿ ।
ನ್ನೀಚಮತ್ಕೃತಿಯಿಲ್ಲೆನುತ ಖರ ।
ರೋಚಿಕುಲಜನಿಗಾರು ಸರಿ ಸುರನರಭುಜಂಗರಲಿ ॥೩॥

ಪಟ್ಟವಾದುದು ರಾಘವಗೆ ಗುಡಿ ।
ಗಟ್ಟಿದರು ಸಕಲಾವನೀಶರು ।
ಪಟ್ಟಣಂಗಳೊಳೊಸಗೆ ಮಸಗಿದುದಖಿಳದೆಸೆಗಳಲಿ ॥
ಮುಟ್ಟಿ ಭಜಿಸಿದರವನಿಪಾಲಕ।
ರಿಟ್ಟಣಿಸಿ ಸರ್ವಸ್ವವನು ಸಮ ।
ಕಟ್ಟಿ ನೃಪಗೊಪ್ಪಿಸಿದರತಿಭಯಭರಿತಭಕ್ತಿಯಲಿ ॥೪॥

ಹೊಂಗಿದರು ಸುಗ್ರೀವ ಜಾಂಬವ ।
ತುಂಗಬಲ ನಳ ನೀಲ ಕೇಸರಿ ।
ಯಂಗದಾದಿ ಕಪೀಶ್ವರರು ಸಂತೋಷದುಬ್ಬಿನಲಿ ॥
ಸಿಂಗರಿಸಿದುದು ವರವಿಭೀಷಣ ।
ನಂಗದಲಿ ರೋಮಾಂಚದೊಬ್ಬುಳಿ,।
ಹಿಂಗಿದುದು ಲಕ್ಷ್ಮಣನ ಚಿತ್ತಸ್ಫುರಿತಪರಿತಾಪ ॥ ॥೫॥

ಮಾಗಧರು ಕೊಂಡಾಡುತಿರ್ದರು ।
ಚಾಗವನು, ಸಂಗೀತಸುರಸದ ।
ಸಾಗರದೊಳದ್ದಿದರು ಗಾಯಕರಾಮಹಾಸಭೆಯ, ॥
ಸಾಗರಾಂತಧರಿತ್ರಿಯೊಳು ಗತ ।
ರಾಗದವನಿಪರಿಲ್ಲ, ಮನದನು ।
ರಾಗವಿಲ್ಲದರಿಲ್ಲ ಪರಿಜನಪುರಜನಂಗಳಲಿ ॥೬॥

ಇಂತು ರಾಘವನಖಿಳಲೋಕಕೆ ।
ಸಂತಸವನೆಸಗಿದನು ಧರಣೀ।
ಕಾಂತರಿರ್ದರು ನೋಡೆ ಜಯಜಯವೆನುತ ಕೈಮುಗಿದು ॥
ಎಂತು ರಾಮನ ಭುಜವಿಜಯವಮ ।
ರಾಂತಕನನತಿಬಲದಶಾಸ್ಯನ ।
ಸಂತರಿಸದೊರಸಿದನೆನುತ ಪೊಗಳಿದರು ತಮತಮಗೆ ॥೭॥

ಓಲಗದೊಳಿರ್ದುದು ಧರಿತ್ರೀ ।
ಪಾಲವಾನರಯಕ್ಷರಾಕ್ಷಸ ।
ಜಾಲವೇನೆಂದುಸಿರುವೆನು ವಾಸವವಿಲಾಸದಲಿ ॥
ಸಾಲಸಿಂಹಾಸನದ ಮಣಿಮಯ ।
ಮೌಲಿಗಳ ಭೂಪರೊಳು ಮಿಥಿಲಾ ।
ಪಾಲಕನ ಸುತೆ[illegible] ರಾಘವ[illegible] ॥೮॥

ಈವಿಭವವೀರಾಜ್ಯಭರವಖಿ ।
ಳಾವನೀಶಾಗಮನದುನ್ನತಿ ।
ರಾವಣಾಸುರಹನನವೆಂಬಿವು ನಿನ್ನ ಕೃಪೆಯಿಂದೆ ॥
ಭಾವಿಪುದು ಬೇಱೊಂದು ಬಗೆಯೆನ ।
ಗಾವುದೆನೆ ಸಂತೋಷದಲಿ ಮಿಥಿ ।
ಲಾವನೀಶ್ವರನೆನಿಪ ಜನಕನೃಪಾಲನಿಂತೆಂದ ॥೯॥

ಎಲೆ ಮಹೀಶ್ವರ! ನೀನೆ ಸಾಕ್ಷಾ ।
ಜ್ಜಲಧಿಶಯನನ ರೂಪು, ತವ ಭುಜ ।
ಬಲಕೆ ಸೋಲದರಾರು, ರಾಜ್ಯವಿದೇನು ಘನ ನಿನಗೆ ॥
ಸಲುಗೆ ಮೆಱೆವುದು ನಿನ್ನ ದೆಸೆಯಿಂ ।
ದಿಳೆಯೊಳೆನಗೆ ಮದೀಯಪುಣ್ಯದ ।
ಫಲದೊಳಾದುದು ಯುಷ್ಮದಾಲೋಕನದ ಸುಖವೆಂದ ॥೧೦॥

ಲೇಸು ನಮ್ಮಭ್ಯುದಯ ನಿಮ್ಮದ ।
ಪೈಸೆ ಬೇಱೆಮಗೇನು ಮಿಥಿಲಾ ।
ವಾಸಕೈದುವುದೆಂದೆನುತ ಕೈಮುಗಿದು ವಿನಯದಲಿ ॥
ದಾಶರಥಿ ಬೀೞ್ಕೊಳಿಸಿದನು ಮಿಥಿ ।
ಳೇಶನನು ಮಣಿಭೂಷಣಾದಿ ವಿ ।
ಶೇಷದಿಂದುಪಚರಿಸಿ ಭರತಾನ್ವಿತ ಸುರಕ್ಷೆಯಲಿ ॥೧೧॥

ಬೞಿಕ ರಾಘವನೊಮ್ಮೆ ನಿಜಮಾ ।
ತುಳಯುಧಾಜಿದ್ಭೂಮಿಪಾಲನ ।
ಬೞಿಗೆ ಬಂದೊಡನಂದು ಕೈಮುಗಿದೆಂದನುಚಿತದಲಿ ॥
ತಿಳಿಯೆ ನಮ್ಮೀರಾಜ್ಯಸಂಪದ ।
ದುೞಿವು ನಿಮ್ಮದು ನಿಮ್ಮ ಕರುಣದ ।
ಬಳದೊಳಾದುದು ರಾವಣಾದಿನಿಶಾಟಜಯವೆಂದ ॥೧೨॥

ಧಾರಿಣೀಪತಿ! ನಿಮ್ಮ ನುಡಿಯುಪ ।
ಚಾರವಲ್ಲೀನಮ್ಮ ರಾಜ್ಯದ ।
ಭಾರ ನಿಮ್ಮದು ತಥ್ಯವೈಸಲೆ ಮಱೆಯ ಮಾತೇನು ॥
ಊರಿಗೆಯ್ದುವುದಖಿಳರಾಜ್ಯವಿ ।
ಚಾರವನು ಮಾಡುವುದೆನುತ ರಘು ।
ವೀರನಾತನ ಕಳುಹಿದನು ಲಕ್ಷ್ಮಣಸಹಾಯದಲಿ ॥೧೩॥

ಜನಪನಾಕಾಶೀಪ್ರತರ್ದನ।
ಜನಪತಿಯು ಬೀಳ್ಕೊಳಿಸಿದನು ಮಿ।
ಕ್ಕಿನ ನೃಪಾಲರು ಬೀಳುಕೊಂಡರು ರಾಘವೇಶ್ವರನ ॥
ತನತನಗೆ ಕೈಮುಗಿದು ಮಿಕ್ಕಿನ।
ಜನಪದವನೆಯ್ದಿದರು ರಾಮನ।
ವಿನಯವಚನಕೆ ಮೆಚ್ಚಿ ಶತಸಾಸಿರ ಮಹಾಬಲರು ॥೧೪॥

ಧರಣಿಪಾಲಪ್ರತತಿ ನಿಜನಿಜ।
ಪುರವನೆಯ್ದಿದ ಬಳಿಕ ರಾಮನ।
ದರುಶನೋತ್ಸವಕೆಂದು ಬಂದುದು ಮತ್ತೆ ಹರ್ಷದಲಿ ॥
ಕರಿತುರಗಗೋಮಹಿಷರತ್ನಾ।
ಭರಣರಥಧನಧಾನ್ಯದಿವ್ಯಾಂ।
ಬರಸುಗಂಧವರಾಂಗನಾಸಂದೋಹದೊಡಗೂಡಿ ॥೧೫॥

ಬಂದು ರಾಮನ ಸಮಯವಱಿದೊಲ।
ವಿಂದ ಕಾಣಿಸಿಕೊಂಡು ಭೂಪರು।
ವಂದಿಸಿದರವನಿಪನ ಚರಣೋಪಾಂತಧರಣಿಯಲಿ ॥
ತಂದ ನಾನಾವಸ್ತುವಾಹನ।
ವೃಂದಗಳನೊಪ್ಪಿಸಿದರತಿಮುದ।
ದಿಂದಲಾತನ ಬೀಳುಕೊಂಡರು ತಮ್ಮ ಪುರಗಳಿಗೆ ॥೧೬॥

ಅಸಮಸಾತ್ತ್ವಭರಣಕಾಂಚನ।
ರಾಶಿಗಳನೊಲಿದಿತ್ತನರವಿಂ।
ದಾಸನಾತ್ಮಜ ರವಿಜ ನಳ ನೀಲಾಂಗದಾದ್ಯರಿಗೆ ॥
ಸೂಸಿದನು ರಘುಪತಿ ವಿಭೀಷಣ।
ಗಾಸಕಲವಸ್ತುಗಳನುಱಿದ ಕ।
ಪೀಶಕುಲವೆಯ್ದಿದುದು ತೃಪ್ತಿಯಸಾಸದರ್ಥದಲಿ ॥೧೭॥

ಇಂತು ರಾಘವನೊಪ್ಪಿದನು ಹೇ।
ಮಂತಶಿಶಿರಾಗಮಗಳಲಿ ಕಪಿ।
ಸಂತತಿಗಳೊಡಗೂಡಿ ನಾನಾಸುಖಸಮಗ್ರದಲಿ ॥
ಸಂತಸವನೊದವಿಸುತ ನಳ ಹನು।
ಮಂತ ರವಿಸುತ ಜಾಂಬವಾದ್ಯರಿ।
ಗಂತರಪನಸಸುದಾವಿಭೀಷಣಮುಖ್ಯಸುಭಟರಿಗೆ ॥೧೮॥

ಬಳಿಕ ರಾಘವನೊಮ್ಮೆ ಕಪಿಕುಲ ।
ತಿಳಕನಹ ಸುಗ್ರೀವನನು ಕರೆ ।
ದೆಲೆ ಕಪೀಶ್ವರ ! ಒಲಿದೆಯಲಾ ನಮ್ಮ ದೆಸೆಯಿಂದ ॥
ಸುಲಭವಾದುದು ರಾಜಕಾರ್ಯದ ।
ಬಲುಹು ನಿನ್ನಿಂದೆನಗೆ ಹೊಗಳುವೊ ।
ಡಳವಡದು ತವಗುಣವೆನುತ ಬಿಗಿದಪ್ಪಿದನು ಬರಸೆಳೆದು ॥೧೯॥

ಪೇಳಲೇನಂಗದನನಲಸದೆ ।
ಪಾಲಿಪುದು ಸುಪ್ರೇಮದಲಿ ನಳ ।
ನೀಲ ಜಾಂಬವ ಶರಭ ಶತಬಲಿ ಮುಖ್ಯ ಕಪಿಭಟರ ॥
ಕಾಲಕಾಲಕೆ ಸತ್ಕರಿಪುದತಿ ।
ಲಾಲಿಪುದು ಬಳಿಕುಳಿದ ವಾನರ ।
ಜಾಲವನು ಮತ್ಕಾರ್ಯಗತಜೀವಿತರ ನೀನೆಂದ ॥೨೦॥

ಕಾಣಬೇಕೀಹನುಮನನು ಮ ।
ತ್ಪ್ರಾಣವೆಂದೇ ತಿಳಿದು ಬಹಳ ।
ತ್ರಾಣನಿವನಿವನಿಂದ ಬದುಕಿದುದೆಮ್ಮ ಕಪಿಕಟಕ ॥
ಕೇಣವಱಿದಿವನೊಡನೆ ಸಖ್ಯವ ।
ಕಾಣಿಪುದು ತವಕಾರ್ಯದೊಳು ಹೊಗ ।
ದೂಣೆಯವು ನೀನಱಿಯದವನಲ್ಲೆಂದನಾರಾಮ ॥೨೧॥

ಬಳಿಕ ಕರೆದು ವಿಭೀಷಣನನಿನ ।
ಕುಲಜನಿಂತೆಂದನು ನಿಶಾಚರ ।
ಕುಲಶಿರೋಮಣಿ ಬಾರೆನುತ ಬಿಗಿಯಪ್ಪಿ ತವಕದಲಿ ॥
ಅಲಘುಭುಜ ಲಂಕಾನಗರಿಗೈ ।
ದಲಸಿದೆಯಲಾ ! ನನ್ನ ದಂದುಗ ।
ದೊಳಗೆ ಬಹುದಿನ ನೀನೆನುತ ಸದ್ವಿನಯವಚನದಲಿ ॥೨೨॥

ಬಾ ವಿಭೀಷಣ ಸಖ್ಯವನು ಸು ।
ಗ್ರೀವನೊಳು ಮಱೆಯದಿರು ಧರ್ಮದ ।
ಭಾವವೇ ಬಲುಹಾಗಿರಲಿ ನಿನ್ನಂತರಂಗದಲಿ ॥
ರಾವಣಾಸುರನಳಿದನೆಂಬೀ ।
ನೋವ ಮಱೆ ಮತ್ಕಥೆ ಧರಿತ್ರಿಯೊ ।
ಳಾವರಿಸಿಕೊಂಡಿರುವ ಪರ್ಯಂತರವು ನೀನೆಂದ ॥೨೩॥

ಲೇಸೆನುತ ಕೊಂಡಾಡಿದುದು ಬಳಿ ।
ಕಾಸಭಾಜನವಿತತಿಯನಿತಱೊ ।
ಳಾಸವಿಾರಜನೆದ್ದು ರಾಘವನಡಿಗೆ ತಲೆವಾಗಿ ॥
ದಾಶರಥಿ ರಾಮಾಯಣದ ಕಥೆ ।
ಯೇಸು ದಿನವಿಹುದೈಸು ದಿನವಾ ।
ನೀಶರೀರದೊಳಿಹ ವರವ ಕರುಣಿಪುದು ನೀನೆಂದ ॥೨೪॥

ಎಂದ ನುಡಿಗೆ ಖರಾರಿ ಗದ್ದುಗೆ ।
ಯಿಂದ ಹರ್ಷದೊಳೆದ್ದು ಮಾರುತ ।
ನಂದನನಮರ್ದಪ್ಪಿ ರಾಗರಸಾಬ್ಧಿಯೊಳು ಮುಳುಗಿ ॥
ತಂದೆ ನಿನ್ನಿಂದಖಿಳರಾಕ್ಷಸ ।
ವೃಂದವಿಜಯೋದ್ಯೋಗವೈದಿದು ।
ದಿಂದೆನಗೆ ಬಳಿಕೇನು ಪ್ರತ್ಯುಪಕಾರ ಹೇಳೆಂದ ॥೨೫॥

ಎನುತ ನಿಜಕಂಧರದ ಹಾರವ ।
ನನಿಲಜನ ಕಂಧರಕೆ ಸೇರಿಸಿ ।
ದನು ಕಕುತ್ಸ್ಥಜನಮಲತರವೈಡೂರ್ಯಶೋಭಿತದ ॥
ಹನುಮ ಕೇಳೀರಾಮಚರಿತವಿ ।
ದೆನಿತು ದಿನವಿಹುದೀಧರಿತ್ರಿಯೊ ।
ಳನಿತುದಿನ ನಿನಗಿರವು ತಪ್ಪದು ತಥ್ಯ ಹೋಗೆಂದ ॥೨೬॥

ಎನುತ ಕಳುಹಿದನಿನಕುಲೇಶ್ವರ ।
ಇನಜನನು ಮಗುಳಪ್ಪಿ ಜಾಂಬವ ।
ಹನುಮ ನೀಲಾಂಗದ ಸುಷೇಣ ಗವಾಕ್ಷ ದಧಿಮುಖರ ॥
ಪನಸ ಮೈಂಧ ದ್ವಿವಿಧ ಶತಬಲಿ ।
ವಿನುತನಳ ಗಜ ಗವಯರೆನಿಸುವ ।
ವನಚರೇಂದ್ರರನುಚಿತದಲಿ ಬೀಳ್ಕೊಳಿಸಿದನು ಪುರಕೆ ॥೨೭॥

ಮಾನವೇಶ್ವರನಾವಿಭೀಷಣ ।
ದಾನವೇಂದ್ರನನುಚಿತದಲಿ ಲಂ ।
ಕಾನಿಳಯಕೈದೆನುತ ಬೀಳ್ಕೊಳಿಸಿದನು ಹರ್ಷದಲಿ ॥
ಏನನೆಂಬೆನು ದೇಹಿ ದೇಹ ।
ಸ್ಥಾನವನು ಬಿಟ್ಟೈದುವಂತತಿ ।
ದೀನಮುಸರ್ಕೈದಿದರು ನಿಜನಿಜಪತ್ತನಂಗಳಿಗೆ ॥೨೮॥

ಅಕ್ಷಯಾತ್ಮ ವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷ ಸುರಮುನಿರಕ್ಷ ಸುಜನಾ ।
ಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥ ॥೨೯॥

ಇಂತು ಹನ್ನೆರಡನೆಯ ಸಂಧಿ ಸಂಪೂರ್ಣಂ

---

## ಹದಿಮೂಱನೆಯ ಸಂಧಿ

---

ಸೂಚನೆ॥ ಕಳುಹಿ ಧವಪ ವಿಮಾನವವನು ಮನ ।
ದೊಳು ವಿನೋದಿಸಿ ಮಡಿದ ನೆವದಿಂ ।
ದುೞಿದನವನಿಪನವನಿಜೆಯನಪವಾದಭೀತಿಯಲಿ ॥

ಪೇೞಿದನು ವಾಲ್ಮೀಕಿ ಮುನುಕುಲ ।
ಪಾಲಚರಿತವನಖಿಲದುರಿತ ।
ವ್ಯಾಳವಿಷಗಾರುಡವನಾನತಜನಸುಧಾರಸವ ॥
ಬೀಱುಕೊಟ್ಟನು ಸಕಲಗೋಲಾಂ ।
ಗೂಲಮರ್ಕಟಋಕ್ಷರಾಕ್ಷಸ ।
ಜಾಲವನು ಪರಿತೋಷದಲಿ ಬೞಿಕಿತ್ತನೋಲಗವ ॥೧॥

ಬಲದ ದೆಸೆಯಲಿ ಭರತನೆಡದಲಿ ।
ಕಲಿಸುಮಿತ್ರಾಸೂನು ಬೆಂಗಡೆ ।
ಯಲಘುಬಲಶತ್ರುಘ್ನನಿದಿರಲಿ ಸಚಿವಸುಭಟಚಯ ॥
ಕೆಲಬಲದೊಳಬಲೆಯರು ಚಿಮ್ಮುವ ।
ಲಲಿತಚಮರೀರುಹಸಮೀರನ ।
ಸುೞಿವಿನಲಿ ಚೆಲ್ವಾದುದೋಲಗಸಾಲೆ ರಘುಪತಿಯ ॥೨॥

ಉೞಿದ ವೈತಾಳಿಕರ ಕಳಕಳ ।
ದುಲುಹು ಕತೆಗಳ ಪೇೞ್ವ ಕಥಕರ ।
ಕಳವಳಿಕೆಯಿತಿಹಾಸಗಳನೋದುವ ಪುರಾಣಿಕರ ॥
ಬಲುರಭಸ ಗಾಯಕರ ಗಾನದ ।
ಮೆಲುಸರಗಳೊಂದಾಗಿ ಮೋಹನ ।
ಜಲನಿಧಿಯ ರವದಂತೆ ಭೋರ್ಗರೆದುದು ಸಭಾಜಲಧಿ ॥೩॥

ಆಸಭಾಮಧ್ಯದಲಿ ರಘುಭೂ।
ವಿಪಾಶನಿರೆ ಗಂಭೀರರವವಾ।
ಕಾಶದೊಳಗಾದುದು ಕುಬೇರವಿಮಾನಸಂಜಾತ॥
ದಾಶರಥಿ ನೀ ಕಳುಹಲಾನೆ ಧ।
ನೇಶನಲ್ಲಿಗೆ ಪೋಗಿ ಪೇಳ್ದೆ।
ನೀಸಕಲವೃತ್ತಾಂತವನು ರಾವಣವಧಾವಿಧದ ॥೪॥

ಕೇಳಿ ತವಚರಿತವನು ತನುರೋ।
ಮಾಳಿ ತಳಿತುವು ಮರಳಿ ರಘುಭೂ।
ಪಾಳನೆಡೆಗೈದೆಂದು ಕಳುಹಿದನೆನ್ನನುಚಿತದಲಿ॥
ಐಳಬಿಲನಡಱಿಂದ ನಿಮ್ಮಡಿ।
ಯೋಲಗದೊಳಿಹೆನೆನಲು ರಘುಭೂ।
ಪಾಲನತಿವಿನಯದಲಿ ಹೊಗಳ್ದನಮಲಪುಷ್ಪಕವ ॥೫॥

ತರಿಸಿ ದಿವ್ಯಸುಗಂಧಪುಷ್ಪೋ।
ತ್ಕರಗಳಿಂದರ್ಚಿಸಿ ಧನೇಶನ।
ಪರಮವಿನಯಕೆ ಮೆಚ್ಚಿ ನಗುವ ವಿಮಾನಭಾಷಿತಕೆ॥
ನರರ ಬಾಳಿಕೆಯಲ್ಪ ಕಿನ್ನರ।
ರಿರವನಲ್ಪವಲಾ ಕುಬೇರನ।
ಸಿರಿ ಸಮಗ್ರತೆಯಾಗಿರಲಿ ಹೋಗೆಂದು ಬೀಳ್ಕೊಟ್ಟ ॥೬॥

ಕರೆದ ಸಮಯಕದೊಮ್ಮೆ ನೀನೈ।
ತರೆ ಮದರ್ಥಕೆ ಲೇಸೆನುತ ಸ।
ತ್ಕರಿಸಿ ಕಳುಹೆ ವಿಮಾನವೈದಿದುದಧಿಕಹರ್ಷದಲಿ॥
ಭರತನೀಕ್ಷಿಸಿ ರಾಮ ನಿನ್ನಯ।
ಚರಿತವತ್ಯದ್ಭುತವಮಾನುಷ।
ಚರಿತವಿದು ಗೋಚರಿಸಲಱಿಯದೆನುತ್ತ ಹೊಗಳ್ದನು ॥೭॥

ಇಂತು ರಘುಕುಲಸಾರ್ವಭೌಮನ।
ಸಂತವಿಭವದೊಳಾಲಿಸುತ ಚತು।
ರಂತ ಧರಣಿಗೊಳುಳ್ಳ ಧರ್ಮಕಥಾಪ್ರಸಂಗಗಳ॥
ಸಂತಸದೊಳಿರೆ; ಮೆಲ್ಲನಿರಬೋ।
ರಂತೆ ಬಂದುದು ಶೈಶಿರಾಂತ ವ।
ಸಂತ ತಂತುಸ್ವಾಂತಸುಖಿಸಿಶ್ರಾಂತವಾಜಗಕೆ ॥೮॥

ಸುತ್ತಿ ಮಲಯಾಚಲನಿತಂಬದೊ ।
ಳುತ್ತಮದ ಚಂದನವನುಜಿ ನು ।
ಗ್ಗೊತ್ತಿ ಕಪ್ಪುರವಾಜಿಗಳ ಧೂಳಿಗಳ ತಸಿಗೆದಲು ॥
ಕತ್ತುರಿಯು ಕೆಸರಿಡಿದ ಚೋಳೀ ।
ವೃತ್ತಕುಚಗಳೊಳದ್ದು ಮನಸಿಜ ।
ಮತ್ತವಾರಣದಂತೆ ತೆಂಕಣ ಗಾಳಿ ತೀಡಿದುದು ॥೯॥

ತೆಂಕಣೆಲರಿನಿಸಿನಿಸೆಸಗೆ ಮಾ ।
ವಂಕುರಿಸಿತದಿರ್ಮುತ್ತೆ ಮುಕುಳಕೆ ।
ಮುಂಕೊಳಿಸಿದುದು ಪಾದರಿಗಳಾದರಿಸಿದುವು ನನೆಯು ॥
ಪಂಕಜದ ಬಿರಿವೊಗ್ಗೆಗಳ ಪ ।
ರ್ಯಂಕವನು ಸಿರಿ ಮೆಲ್ಲಮೆಲ್ಲನ ।
ಲಂಕರಿಸಿದಳು ಮಲ್ಲಿಗೆಗಳಾಂತುವು ಲತಾಂತಗಳ ॥೧೦॥

ಸತ್ತಸರಗಳು ಬದುಕಿದುವು ಕೊರ ।
ಲೆತ್ತಿ ಕೂಗಿದುವನ್ಯಭೃತವೇ ।
ನುತ್ತಮವೊ ಸಹಕಾರಕಳಿಕಾಸಾರಸೀಯೂಷ ॥
ಚಿತ್ತಜನ ರಾಗಾಂಕುರಂಗಳ ।
ಬಿತ್ತುಗಳೊ ಪೇಳೆನಲು ಪೂಗಳ ।
ಬೊತ್ತು ಸಂಪಗೆ ಸೂಸಿದುವು ಕಂಪುಗಳ ದೆಸೆದೆಸೆಗೆ ॥೧೧॥

ಜಾತಿಗಳು ಮಧುಪಪ್ರಸಂಗದ ।
ಭೀತಿಗೊಲ್ಲದೆ ಬೀತುವಂದು ಕು ।
ಜಾತಿಗಳು ಪಲ್ಲವಿಸಿದುವು ಮಧುಸಂಗಸೌಖ್ಯದಲಿ ॥
ಪೂತೊಱಗಿದುವು ವಕುಳವಬಲಾ ।
ಜಾತವೆಂಜಲಿಸಿದ ಮದದ್ರವ ।
ಘಾತದಲಿ ಮನಗುಡದ ಮಾನವರಾರು ಹೆಂಗಳಿಗೆ ॥೧೨॥

ಒಂದೆರಡು ಮೊಗ್ಗೆಗಳನಾಂತರ ।
ವಿಂದದೊಳಗಳಿ ಜಿನುಗಿದುವು ಮಾ ।
ಕಂದದೊಳು ಗಿಳಿ ತೊಂಡುಗೆಡೆದುವು ತಂಡತಂಡದಲಿ ॥
ಕೆಂದಳದ ಕುರಲಗುಗಳ ಪಡೆ ।
ದಂದು ಮದನಗೆ ವಿರಹಿಗಳ ಕೊಲ ।
ಲೆಂದು ಕಾಣಿಕೆಯಿತ್ತುವೆಂಬಂತೆಸೆದುವಸುಗೆಗಳು ॥೧೩॥

ಆವನಾಂತದೊಳೊಮ್ಮೆ ರಾಘವ ।
ದೇವನೆಯ್ದಿದನುಪವನಾಂತ ।
ಶ್ರೀವಿಲಾಸವನೀಕ್ಷಿಪೊಂದು ಮನೋನುರಾಗದೊಳು ॥
ದೇವನಂದನಚೈತ್ರರಥಗಳು ।
ಭಾವಿಸುವೊಡೀವನದೊಳಗೆ ಬರ ।
ಲಾವ ಘನವೆನಿಸಿದುದಶೋಕಾವನವದಿದಿರಿನಲಿ ॥೧೪॥

ಆವನದ ಮಧ್ಯದಲಿ ಪಾವನ ।
ಜೀವನವನಾಂತಮಲಕಮಲ ಸ ।
ರೋವರಗಳೆಸೆದುವು ಸುಧಾರಸಸರಸಿಗಳ ಜಱೆದು ॥
ತಾವರೆಗೆ ಬಂದೆಱಗುತಿಹ ಹಂ ।
ಸಾವಳಿಗಳೊಪ್ಪಿದುವು ಮದನವು ।
ಹೀವರನ ಕೀರ್ತಿಗಳೆ ಮೂರ್ತಿಯನಾಂತು ಸುೞಿವಂತೆ ॥೧೫॥

ಮಲ್ಲಿಗೆಗಳಿಲ್ಲದ ತಮಾಲಗ ।
ಳಿಲ್ಲದಿವ್ಯಾವಿಲ್ಲದಸುಗೆಗ ।
ಳಿಲ್ಲದರನೇಱಿಲ್ಗಳಿಲ್ಲದ ಪಂಚಮಸ್ವರದ ॥
ಮೆಲ್ಲುಲಿಯ ಪಿಕನಿಲ್ಲದರಗಿಳಿ ।
ಯಿಲ್ಲದಳಿಕುಳವಿಲ್ಲದಂಚೆಗ ।
ಳಿಲ್ಲದೆಡೆಗಳವಿಲ್ಲ ನೋಡುವೊಡಾವನಾಂತದಲಿ ॥೧೬॥

ನೋಡಿ ರಾಘವನಾವನವ ಕೊಂ ।
ಡಾಡಿ ತದ್ವನಲಕ್ಷ್ಮಿಯೊಡನೊಡ ।
ಗೂಡಲೆಂದು ವಸಂತಮಂದಾನಿಲರು ಕೈಗುಡಲು ॥
ಪಾಡುವಳಿಗಳ ಗಾನರವಕೊಲೆ ।
ದಾಡುವಂತೆಲರೊಲೆವ ಕೊಳದೊಳ ।
ಗಾಡುವೆಳಮಾಮರದ ಮಂಡಪದೊಳಗೆ ಮಂಡಿಸಿದ ॥೧೭॥

ತಳಿರ ಹಸೆಗಳೊಳೊಮ್ಮೆ ಮಲ್ಲಿಗೆ ।
ಯಲರ ಹಾಸಿನೊಳೊಮ್ಮೆ ಕದಳೀ ।
ದಳದ ಕಪ್ಪುರವಾೞಿಗಳ ಪೀಠಗಳೊಳೊಮ್ಮೊಮ್ಮೆ ॥
ಕುಳಿತೊಱಗುತಾಜಾನಕಿಯ ಮೊಗ ।
ದೊಳಗೆ ಸಿರಿಮೊಗವಿಡುತ ಚುಂಬಿಸು ।
ತೊಳಸುಡಿದೊಳುಪಚರಿಸುತಿರ್ದನು ರಾಗರಸ ಮಸಗೆ ॥೧೮॥

ವಾಸಿತದ ಮೃದ್ವೀಕ ಖಿರ್ಜೂರ।
ರಾಸವದ್ರವಪಾನವನು ಸೀ।
ತಾಸಮನ್ವಿತನೀಂಟೆ ಸವಿದತಿಮಧುರಫಲರಸವ॥
ಪೂಸಿ ಹಿಮಜಲಲುಲಿತಗಂಧವ।
ನಾಸಕಲವನಕುಸುಮಗಳನವ।
ನೀಸುತೆಗೆ ಮುಡಿಸುತ ವಿನೋದದೊಳಿದ್ದನಾ ರಾಮ ॥೧೯॥

ಆಗಳಾವನದೊಳಗೆ ನಾನಾ।
ಭೋಗದಿಂದಿರ್ದವನಿಪತಿಯನು।
ರಾಗದೊಳು ಪುರವರವನೆಯ್ದುವೆನೆಂಬ ಸಮಯದೊಳು॥
ಕೂಗಿದುವು ಕೋಗಿಲೆಗಳೆಲೆ ನೃಪ।
ಹೋಗು ಹೋಗವನಿಜೆಯೊಳಿನ್ನುಪ।
ಭೋಗ ನಿನಗಿಲ್ಲೆಂದೆನುತ ಡಂಗುರಿಪುವೆಂಬಂತೆ ॥೨೦॥

ಕೆಳದಿಯರ ನೆಲನುಗ್ಗಡಿಪ ಕಳ।
ಕಳದೊಳೈತರೆ ಸೀತೆ, ರಘುಕುಲ।
ತಿಳಕನೆಯ್ದಿದನುಪವನಾಂತವನುಳಿದು ನಿಜಪುರಿಗೆ॥
ಹೊಳೆವ ರತ್ನದ ಕಾಂತಿಗಳ ತಳ।
ತಳಿಪ ಕಾಂಚನರುಚಿರಚಿತ ನೃಪ।
ನಿಳಯಕೊಡನೈತಂದು ಹೊಕ್ಕನನೇಕವಿಭವದಲಿ ॥೨೧॥

ಸೇವಿಸುತ ಕೌಸಲೆ ಸುಮಿತ್ರಾ।
ದೇವಿ ಕೈಕೆಯರೆಂಬ ನಿಜಮಾ।
ತಾವಳಿಯ ಪದಕಮಲಗಳನವನಿಜೆಯ ಮನ್ನಿಸುತ॥
ಭಾವಜಾಗಮಕಲೆಗಳೊಳು ನಾ।
ನಾವಿಧದೊಳೊಡಗೂಡಿ ರಾಘವ।
ದೇವನಿರ್ದನು ಪಾಲಿಸುತ [ಚತುರುದಧಿವೃತಧರೆಯ] ॥೨೨॥

ಇರಲು ಶಯ್ಯಾನಿಳಯದೊಳು ಭೂ।
ವರನಿಳಾಸುತೆ ಬಂದಳಲ್ಲಿಗೆ।
ಚರಣಗತಿಸಂಜನಿತನೂಪುರರಾವವಾವರಿಸೆ॥
ಸಿರಿಮೊಗದ ನಗೆಯುಗುವ ಚಂದ್ರಿಕೆ।
ಧರಣಿಪನ ಲೋಚನಚಕೋರಿಗ।
ಳೆರೆಯಲೊಮ್ಮೆಗೆ ನೆರೆವುವೆನೆ ಬಹುವಿಧವಿಳಾಸದಲಿ॥ ॥೨೩॥

ಕರೆದು ಕುಳ್ಳಿರಿಸಿದನು ತನ್ನಯ ।
ಹೊರೆಯೊಳವನಿಪನವನಿಜೆಯ ಮುಖ ।
ಸರಸಿರುಹವನು ನೋಡಿದನು ನುಡಿಸಿದನು ವಿನಯದಲಿ ॥
ಅರಸಿ ಸಂತಾನಾಭಿವೃದ್ಧಿಯ ।
ಧರಿಸಿದೆಯಲಾ ಬಯಕೆ ನಿನಗೇ ।
ನೊರೆಯಭೀಷ್ಟವನಾಗುಮಾಡುವೆನೆಂದನೊಲವಿನಲಿ ॥೨೪॥

ಆದೊಡಾಲಿಸು ರಾಮ, ಮನವೆನ ।
ಗಾದಪುದು ಜಾಹ್ನವಿಯ ತೀರವ ।
ನೈದಿ ಮುನಿವನಿತೆಯರೊಳೊಂದಿರುಳಿರ್ದು ಬಹೆನೆನಲು ॥
ಆದರಿಸಿ ಲೇಸೆಂದೆನದು ಲೇ ।
ಸಾದೊಡೈಸೆ ನಿಜೇಷ್ಟಸಿದ್ಧಿಗ ।
ಳೈದದೊಡೆ ದೋಹಳವಿರುದ್ಧವಿದಬಲೆ ಕೇಳೆಂದ ॥೨೫॥

ಎಂದು ರಾಘವನವನಿಸುತೆಗಾ ।
ನಂದವನು ಪಡೆದಂತವ್ರರದಿಂ ।
ದಂದು ನಡೆತಂದನು ವಿಶೇಷವಿಲಾಸಗಮನದಲಿ ॥
ಮುಂದೆ ಮೆಱೆದಿಹ ಮಧ್ಯಕಕ್ಷದ ।
ಮಂದಿರದೊಳನುಜಪ್ರಧಾನರು ।
ಬಂದು ಮಂಡಿಸೆ ಮಂಡಿಸಿದನುತ್ತುಂಗಪೀಠದಲಿ ॥೨೬॥

ಬಱಿಕ ನೃಪನೇಕಾಂತದೋಲಗ ।
ದೊಳಗೆ ಪರಿಹಾಸಕರು ಕಥಕರು ।
ಪಲತೆಱದೊಳಿತಿಹಾಸಗಳನೋದುವ ಪುರಾಣಿಕರು ॥
ಬಳಸಿ ನೆರೆದರು ಧರ್ಮಪದ್ಧತಿ ।
ಗಳ ಕಥಾವೃತ್ತಾಂತಗಳ ಬಗೆ ।
ಗೊಳಿಸಿದರು ಮೃದುಮಧುರವಚನಾಮೃತದ ಸಾರದಲಿ ॥೨೭॥

ಇಂತು ವಿಜಯ ಸುರಾಜಕಾರಿಯ ।
ದಂತವಕ್ರಸುಮಾಗಧರು ನೆನೆ ।
ದಂತೆ ಪೇೞುವ ಭದ್ರ ಕಾಶ್ಯಪ ದುಸರ ಪಿಂಗಳರು ॥
ಚಿಂತೆಯನು ಪರಿಹರಿಪ ಬಹುವೃ ।
ತ್ತಾಂತಗಳ ನೆರೆ ಬಲ್ಲ ಕಥಿಕರ ।
ತಿಂತಿಣಿಯೊಳಿಹ ಭಗ್ರಸನು ಕೆಲೆದರಸನಿಂತೆಂದ ॥೨೮॥

ಏನು ಪುರದೊಳು ಭದ್ರ ನಮ್ಮನ ।
ದೇನನೆಂಬರು ; ಭರತವಚನವ ।
ನೇನನೆಂಬರು ; ಲಕ್ಷ್ಮಣನ ಶತ್ರುಘ್ನರಿರವುಗಳ ॥
ಏನನೊರೆವರು ; ಕೈಕೆ ನುಡಿದುದ ।
ಕೇನನುಸಿರುವರವನಿಜಾತೆಗ ।
ದೇನನಾಡುವರುಳ್ಳುದನು ನೀನೆನಗೆ ಹೇಳೆಂದ ॥೨೯॥

ಅರಸ! ನುಡಿವರದೇನ ನಿನ್ನಯ ।
ಚರಿತೆಯನು ಹೊಗಳುವರು ದಶಕಂ ।
ಧರವಿಜಯ ಮೊದಲಾದ ನಾನಾವಿಧದ ಕಥನಗಳ ॥
ಭರತನನು ಬಣ್ಣಿಪರು ಲಕ್ಷ್ಮಣ ।
ನಿರವನೊರೆವರು ಲಕ್ಷ್ಮಣಾನುಜ ।
ನೊರೆಗೆ ಸರಿಬಹರಿಲ್ಲೆನುತ ಒಪ್ಪಿಪುದು ಜನಸೆಂದ ॥೩೦॥

ಕೇಳುವೊಡೆ ತಥ್ಯವನು ಹೇಳುವೆ ।
ದಾಳಿಗೊಳ್ಳದ್ವಸುಜನರಲಿ ನೀ ।
ಕೇಳಿಸಿಟೆ ಶುಭವಾರ್ತೆಗಳನಶುಭೋಕ್ತಿಗಳನುಳಿದು ॥
ಪೇಳು ಭಯಬೇಡುಳ್ಳ ವಾರ್ತೆಯ ।
ನಾಲಿಸುವೆನೆನೆ; ಭದ್ರನಾಗಳೆ ।
ಪೇಳಿದನು ಕೈಕೆಯ ಮಹೀಸುತೆಯರ ಚರಿತ್ರಗಳ ॥೩೧॥

ಜೀಯ! ಚಿತ್ತೈಸಖಿಳಜನವ ।
ನ್ಯಾಯವೆಂಬುದು ಕೈಕೆ ನೆಗಳಿದ ।
ದಾಯವನು ಜಾನಕಿಯೊಳೆಲ್ಲನಿತುಂಟೆ ಕೊಱತೆಗಳು ॥
ವಾಯದಿಂದೆನೆ ದುರ್ಜನರು ಗರು ।
ವಾಯಿಗೆಡುವುದೆ ಸುಜನರಿಗೆ ರವಿ ।
ಯಾಯತವನಲ್ಲೆಂಬ ಮುದಿಗೂಗೆಗಳ ಪರಿಯೆಂದ ॥೩೨॥

ಅಸುರನೆಳೆದುಯ್ದಾತ್ಮಪುರವನ ।
ವಿಸರದೊಳು ಮನವೆಳಸಿ ಸೆಱೆಯಿಡ ।
ಲಸುವಿಡಿದ ಜಾನಕಿಯ ಹುದುವಾಳೆಂತು ರಾಘವನ ॥
ಜಸಕೆ ಜೀವನವೊಪ್ಪದೆಂದಿದ ।
ನುಸಿರುವರು ಕೆಲಕೆಲರು ನೀತಿ ।
ಪ್ರಸರವುಸಿರ್ವುದು ಪಂತಶುಭ ಪಂಚಾಶುಭಗಳೆನುತ ॥೩೩॥

ಅಱಿಯದವನೇ ದೇವರಡಿಗದು ।
ಕೊಱತೆಯೇ ತವಚರಿತವನು ಜಗ ।
ವಱಿಯದೇ ನೊರಜೂಱಿದೊಡೆ ನೋವಹುದೆ ಮದಗಜಕೆ ॥
ಉಱುವ ಜಯವಧು ಬಾಹುಪೀಠದೊ ।
ಳೊಱಗಿಹಳು ನಿನ್ನಂಘ್ರಿಸರಸಿಜ ।
ಕೆಱಗದಹಿತಮಹೀಶರಿಲ್ಲವನೀಶ ಕೇಳೆಂದ ॥೩೪॥

ಎಂದ ಭದ್ರನ ವಚನಶಿಶಿರಕೆ ।
ಕಂದಿದುದು ನೃಪನಾಸ್ಯಸರಸಿಜ ।
ವಂದು ಬೀಳ್ಕೊಟ್ಟನು ಸಹೋದರ ಸಚಿವಸೂರಿಗಳ ॥
ಬಂದಿವಿಡಿದುದು ಚಿಂತೆ ದಶರಥ ।
ನಂದನನ ಚಿತ್ತವನು ರವಿಕುಲ ।
ಕಿಂದು ಬಂದುದು ಕೊಱತೆ ತನ್ನಿಂದೆನುತ ಬಿಸುಸುಯ್ದ ॥೩೫॥

ನೂಕಿದನು ನಿರ್ದ್ದಯನು ನಾನಾ ।
ವ್ಯಾಕುಲಾಂತಃಕರಣನನಿತಕೆ ।
ಕೋಕನದಸಖನಡರಿದನು ಪೂರ್ವಾದ್ರಿಮಸ್ತಕವ ॥
ಜೋಕೆ ಮಿಗೆ ಸಂಧ್ಯಾದಿಕರ್ಮವ ।
ನಾಕಕುತ್ಸ್ಥಜನೆಸಗಿ ಬಂದೇ ।
ಕಾಕಿ ಹೊಕ್ಕನು ಮಂತ್ರಶಾಲೆಯನಧಿಕಚಿಂತೆಯಲಿ ॥೩೬॥

ಕರೆಸಿ ಲಕ್ಷ್ಮಣಭರತಶತ್ರು ।
ಘ್ನರನು ಕಟ್ಟೇಕಾಂತದಲಿ ರಘು ।
ವರನು ನುಡಿದನು ಜಾನಕಿಯು ಬಿಡದಿರಲು ನಿಮಿಷದಲಿ ॥
ಹರಣವನು ಬಿಡುವೆನು ದುರುಕ್ತಿಯು ।
ನಱಿಸಿ ಬಾಳ್ವುದಕಿಂತ ಮರಣವೆ ।
ಪರಮಸುಖವೈಸಲೆ ಸುಮಿತ್ರಾಸೂನು ಕೇಳೆಂದ ॥೩೭॥

ಧಾರಿಣೀಸುತೆ ಪೇಳ್ದಿಹಳು ಮುನಿ ।
ನಾರಿಯರೊಳೊಂದಿರುಳು ಗಂಗಾ ।
ತೀರದಲ್ಲಿ ವಿನೋದದಿಂದಿಹೆನೆನುತಲೆನ್ನೊಡನೆ ॥
ವೀರ ನೆವನದು ನಿನಗೆ ನಮ್ಮಯ ।
ತೇರನೆತ್ತಿಸಿ ಶೀಘ್ರದಲಿ ಭಾ ।
ಗೀರಥಿಯ ತೀರದಲಿ ಬಿಡುಹೋಗೆಂದು ಬೀಳ್ಕೊಟ್ಟ ॥೩೮॥

ಜನಕಸುತೆ ಪರಿಶುದ್ಧೆ ರಾವಣ ।
ಹನನಸಮನಂತರದೊಳನಿಮಿಷ ।
ಮುನಿಜನೇಶ್ವರರೀಕ್ಷಿಸಲು ಮಾಡಿದಳು ಸಂಬುಗೆಯು ॥
ಅನಲಮುಖದಲಿ ಪರಮಪಾವನೆ ।
ಯೆನಿಸಿದಳು ಅಪವಾದಕಳುಕದ ।
ಮನುಜನಿಹಪರಕಿಲ್ಲ ಕೀರ್ತಿಯೆ ಪರಮಗತಿಯೆಂದ ॥೩೯॥

ಏನನೆಂಬೆನು ಲಕ್ಷ್ಮಣನು ಚಿಂ ।
ತಾನುಗತನಾಗಿರ್ದು ಶೋಕಕ್ಕೆ ।
ಶಾನುವನು ಸಂತೈಸುತೆಂತಾದೊಡೆಯುಮಗ್ರಜನ ॥
ಮಾನಸವ್ಯಥೆಯಿಲ್ಲವ ಕಾರ್ಯವ ।
ನಾನುವುದೆ ಕರ್ತವ್ಯವೆನುತತಿ ।
ದೀನಮಾನಸನೈದಿದನು ಸೀತೆಯ ನಿಕೇತನವ ॥೪೦॥

ದೇವಿ! ಬಿನ್ನಹ, ನಿನ್ನೆ ರಾಘವ ।
ದೇವನೊಳಗಾಡಿದಿರಿ ಗಡ! ಮುನಿ ।
ಪಾವನಾಶ್ರಮಕೈದಿ ಗಂಗಾತಟದೊಳೊಂದಿರುಳು ॥
ಅವಿಮಳಮುನಿವನಿತೆಯರ ಪದ ।
ಸೇವೆಗೈದುವೆನೆನುತ ನಿಮ್ಮಡಿ ।
ದಾವರೆಗೆ ಸೊಗಸುವೊಡೆ ಬಿಜಯಂಗೈ ರಥಕ್ಕೆಂದ ॥೪೧॥

ಎನಲು ಪರಿತೋಷದಲಿ ಸೀತಾ ।
ವನಿತೆ ರತ್ನಾಭರಣಕಾಂಚನ ।
ಜನಿತಸೂತ್ರಸುಗಂಧದಿವ್ಯಾಂಬರಸಮಾಜಗಳ ॥
ಮನದಣಿಯಲಳವಡಿಸಿ ಶ್ವಶ್ರೂ ।
ಜನಕೆ ಸೂಚಿಸಿ ಮಣಿದು ವರಕಾಂ ।
ಚನವರೂಥವನಡರಿದಳು ಹೊಗಟುತ ಕಕುತ್ಸ್ಥಜನ ॥೪೨॥

ಒಡನೆ ಬಂದು ಸುಮಂತ್ರನೆಸಗಲು ।
ನಡೆದುದಾರಥವಾಗ ಲಕ್ಷ್ಮಣ ।
ನೊಡವರಲು ಜಂಘಾಲವಾಜಿತ್ರವುಗಳೈದಿದುವು ॥
ಮಿಡುಕಿದುವು ದಕ್ಷಿಣಭುಜಾಕ್ಷಿಗ ।
ಳೆಡೆವಿಡಿದ ಜನಕಾತ್ಮಜೆಗೆ ಬಲ ।
ಗಡೆಯೆ ನುಡಿದುವು ಗೌಳಿ ರಾಸಭವಶುಭಸೂಚಕವ ॥೪೩॥

ಏನು ಲಕ್ಷ್ಮಣ ದುಶ್ಶಕುನವೆಮ ।
ಗೇನನೆಂಬುವು ರಾಮನಂಘ್ರಿಗ ।
ದೇನು ಕೊಱತೆಯೊ ಭರತಶತ್ರುಘ್ನರಿಗದೇನಹುದೊ ॥
ಹಾನಿ ಕೈಕೆ ಸುಮಿತ್ರೆ ಕೌಸ ।
ಲ್ಯಾನಿಕಾಯದೊಳಿಲ್ಲಲೇ ತಾ ।
ನೇನಿದಱ ವಿಪರೀತವೃತ್ತಿಯಿದೆಂದಳಾಸೀತೆ ॥೪೪॥

ದೇವಿ ಸಂಶಯವಿಲ್ಲ ರಾಘವ ।
ದೇವನಂಘ್ರಿಗೆ ಭರತನೇಳ್ಗೆ ।
ನೋವಹುದೆ ಶತ್ರುಘ್ನನುನ್ನತಿಗೆತ್ತಣದು ಕೊಱತೆ ॥
ಆವ ಭಯ ಕೌಸಲೆ ಸುಮಿತ್ರಾ ।
ದೇವಿ ಕೈಕೆಯರಂಘ್ರಿಗಳಿಗಿದು ।
ರಾವಣಾರಿಯನೊಂದು ಗಳಿಗೆಯಗಲ್ದ ಫಲವೆಂದ ॥೪೫॥

ಎಂದು ಲಕ್ಷ್ಮಣನಾಸುಮಂತ್ರನೊ ।
ಳಂದು ಸೂಚಿಸಲಾತನಮಲ ।
ಸ್ಯಂದನವನತಿತೀವ್ರಗತಿಯಲಿ ನಡೆಸಿದನು ಮುಂದೆ ॥
ಬಂದು ನಿಂದರು ಗೋಮತೀವರ ।
ಸಿಂಧುತೀರದ ವಿಪಿನದೇಶದೊ ।
ಳೊಂದಿರುಳು ಮಱುದಿವಸವೈದಿದರಮಲಜಾಹ್ನವಿಯ ॥೪೬॥

ನೆನೆಯಲಾಲಿಸಲೀಕ್ಷಿಸಲು ಜೀ ।
ವನವನೀಂಟಲು ಮತ್ತೆ ಜನ್ಮವ ।
ನೆನೆಯರಾಲಿಸರೀಕ್ಷಿಸರು ನೊಳೆಯೂಣರು ಜನಸಿಯರ ॥
ಎನಿಪ ಮಹಿಮಾಸ್ಪದಜಗತ್ಪಾ ।
ವನೆಯನಘಕುಲಮಲಿನವಿಚ್ಛೇ ।
ದಿನಿಯನತಿನಿರ್ಝರಮಹಾನಿಸ್ಸ್ವನೆಯನೈದಿದರು ॥೪೭॥

ಆಡರಿದರು ನಾವೆಯನು ನಾವಿಕ ।
ರೊಡನೆ ರಥವನು ನಿಲಿಸಿ ಬಡಗಣ ।
ತಡಿಯೊಳತಿವೇಗದಲಿ ದಕ್ಷಿಣತಟವನೆಯ್ದಿದರು ॥
ಸಡಗರಿಪ ಜಾನಕಿಯನೀಕ್ಷಿಸಿ ।
ಯೊಡನೊಡನೆ ಶೋಕಾಗ್ನಿ ಲಕ್ಷ್ಮಣ ।
ನೊಡಲನಾವರಿಸಿದುದು ಕಂದಿದುಕ್ಕಿದುದು ನಯನಜಲ ॥೪೮॥

ಏನು! ಲಕ್ಷ್ಮಣ! ನಿನಗೆ ದುಃಖವಿ ।
ದೇನೆನುತ ಬೆಸಗೊಳೆ ಮಹೀಸುತೆ ।
ದೀನಮುನಸಾಡಿದನು ಗದ್ಗದರಾವವಚನದಲಿ ॥
ಭಾನುವಂಶಲಲಾಮ [ದಶರಥ ।
ಸೂನುವನು] ಕಾಣದೊಡೆನಗೆ ದು ।
ಮ್ಮಾನವಾದುದೆನಲ್ಕೆ ಲಕ್ಷ್ಮಣಗೆಂದಳಾ ಸೀತೆ ॥೪೯॥

ಅರೆನಿಮಿಷವಗಲಿದೊಡೆ ರಾಮನ ।
ನಿರದು ಜೀವನವೆನಗೆ ನಾನಿಹ ।
ಪರಿಯನೀಕ್ಷಿಸೆನುತ್ತೆ ಸಂತೈಸಿದಳು ಲಕ್ಷ್ಮಣನ ॥
ಧರಣಿಸುತೆ; ಬಳಿಕುತ್ತರಿಸಿ ವರ ।
ಸುರನದಿಯು ತೆಂಕಣ ತಡಿಯೊಳಿಹ ।
ಪರಮಮುನಿ ವಾಲ್ಮೀಕಿಯಾಶ್ರಮದೆಡೆಯನೈದಿದರು ॥೫೦॥

ಮತ್ತೆ ಲಕ್ಷ್ಮಣನಂತರಂಗದೊ ।
ಳೊತ್ತರಿಸಿದುದು ಶೋಕವದ ಕಾ ।
ಣುತ್ತ ಜಾನಕಿಯೆನಗಿದನು ಸೌಮಿತ್ರಿ ಹೇಳೆನಲು ॥
ಬಿತ್ತರಿಪೊಡಿದನೆನಗೆ ನಾಲಗೆ ।
ಬತ್ತಿದಪುದವನೀಶನಾಜ್ಞೆಯು ।
ಹೊತ್ತುಬಂದೆನು ತಾಯೆ ನುಡಿಯುಲಶಕ್ಯ ತನಗೆಂದ ॥೫೧॥

ಏನು! ಲಕ್ಷ್ಮಣ, ನಿನಗೆ ರಾಮನ ।
ದೇನನಾಡಿದನಂಜದೆನ್ನೊಳು ।
ನೀನುಸಿರು ತತ್ಕಾರ್ಯವೇನೆಂದೆಸಲು ತಲೆವಾಗಿ ॥
ಏನನೆಂಬೆ ಜನಾಪವಾದವ ।
ನಾನಲಾಲಿದೆ ನೃಪತಿ ನಿಮ್ಮನು ।
ಕಾನನಕೆ ಬಿಡಹೇಳಿ ಕಳುಹಿದನೆಂದು ಸೈಗೆಡೆದ ॥೫೨॥

ಎಂಬ ನುಡಿ ಕಿವಿವುಗಲು ಕಡುಗಾ ।
ಯ್ದಂಬು ನಟ್ಟಂತಾದುಪದ್ದಳು ।
ಕಂಬನಿಯು ಕಡಲೊಳಗೆ ಮೈಮುಳುಗಿದೊಱಗಿದಳು ನೆಲದೆ ।
ಎಂಬುದೇನೆಚಱಿಕೆಮಱವೆಗ ।
ಳೆಂಬ ಪರಿತಾಪದಲಿ ಕುದಿದಳು ।
ಹಂಬಲಿಸಿದಳು ಬೆದಱಿದಳು ಬೆಂಪಾದಳಳವಳಿದು ॥೫೩॥

ಜಾನಕಿಗೆ ಸಮನಿಸಿದ ದುಃಖವ ।
ನೇನನೆಂಬೆನು ಲಕ್ಷ್ಮಣನ ಚಿ ।
ತ್ತಾನುಗತಪರಿತಾಪವನು ಬಱಿಕೇನನುಸಿರುವೆನು ॥
ತಾನೆ ತನ್ನನು ಸಂತವಿಸಿ ಸೀ ।
ತಾನಿತಂಬಿನಿಗೆಂದನಕಟಕ ।
ಟೀನ ಮಾಳ್ಪೆನು ತಾಯೆ ಪಾತಕನೈಸೆ ವಿಧಿಯೆಂದ ॥೫೪॥

ಮಾತೆ, ಚಿಂತಿಸಬೇಡ ನಮ್ಮಯ ।
ತಾತನಿಂದಧಿಕನು ಮುನೀಂದ್ರ ।
ವ್ರಾತದಲಿ ವಾಲ್ಮೀಕಿ ದಶರಥನೃಪನ ಮಿತ್ರನಲ! ॥
ಪೂತಚರಿತನು ನಿಮ್ಮ ಮನ್ನಿಪ ।
ನಾತನವನಿಪನಂಘ್ರಿ ಸರಸೀ ।
ಜಾತವನು ಜಾನಿಪುದು ಮನದೊಳು ನಿಮಗೆ ಮತವೆಂದ ॥೫೫॥

ಎಂದೆನುತ ಜನಕಾತ್ಮಜೆಯು ಬಲ ।
ವಂದು ನಯನೋದಕದ ಹೊನಲೊಳು ।
ನಾಂದು ನೋಡುತ ತಿರುತಿರುಗಿ ಬಂದಡರಿ ನಾವೆಯನು ॥
ಕುಂದಿದುತ್ಸವದಿಂದ ದಾಂಟಿದ ।
ನಂದು ಗಂಗಾನದಿಯನೀಕ್ಷಿಸು ।
ತಿಂದುವದನೆಯು ಮನದಱಿಲೊಳ್ಳಿದಿದನು ತೀರವನು ॥೫೬॥

ಅನಿತಱೊಳು ವಾಲ್ಮೀಕಿಮುನಿಪನ ।
ವನದೊಳಱುತಿಹ ಸೀತೆಯನು ತ ।
ಸ್ಮುನಿಯ ಶಿಷ್ಯರು ಕಂಡಱುಹೆ ವಾಲ್ಮೀಕಿ ನಡೆತಂದು ॥
ವಿನಯನಿಧಿ ಕಂಡಱಿದು ರಾಮನ ।
ವನಿತೆಯನು ತತ್ಕಾರ್ಯವಿಧವನು ।
ಮನದೊಳಗೆ ತಿಳಿದುಯ್ದು ನಾಶ್ರಮಕಾಮುಹಾಸತಿಯ ॥೫೭॥

ನೋಡಿ ಲಕ್ಷ್ಮಣನಾಮುನಿಯ ಕೊಂ ।
ಡಾಡಿ ನಿಜರಥಕಡಱಿ ಸೂತನೊ ।
ಳಾಡಿದನು ಜಾನಕಿಯನಸ್ಥೆಯ ನೋಡಿದ್ದೈಯೆನುತ ॥
ಆಡಲೇನಡವಿಯುಲಿ ನವೆದಳು ।
ಕೂಡೆ ರಾವಣನಿಂದ ನೊಂದಳು ।
ಕೇಡು ಮೇಲಡಸಿರುದು ಕೇಡೆಂಬಂತೆ ಹಾಯೆಂದ ॥೫೮॥

ಆದೊಡೆಲೆ ಸೌಮಿತ್ರಿ! ದಶರಥ ।
ಮೇದಿನೀಶ್ವರನೆಯ್ದಿದನು ಹಿಂ ।
ದಾದಿಯಲಿ ಗುರುವಹ ವಸಿಷ್ಠಮುನೀಂದ್ರನಾಶ್ರಮವ ॥
ಆದರಿಸಿ ದುರ್ವಾಸಮುನಿ ಮೊದ ।
ಲಾದರಿರಲು ತದಾಶ್ರಮದೊಳಭಿ ।
ವಾದನಂಗೆಯ್ದನು ಮಹೀಪತಿ ಮುನಿಗಳಡಿಗಳಿಗೆ ॥೫೯॥

ಹರಸಿದರು ಮನ್ನಿಸಿದರಿತ್ತರು ।
ಧರಣಿಪಂಗಾತಿಥ್ಯಪೂಜೆಯು ।
ಸಿರದೆ ಯೋಗಕ್ಷೇಮವನು ಕೇಳಿದರು ವಿನಯದಲಿ ॥
ಪರಮಧರ್ಮ ಕಥಾಪ್ರಪಂಚವ ।
ನೊರೆಯಲವನಿಪನೊಡನೆ ತನ್ಮುನಿ ।
ವರರೊಳಿಹ ದುರ್ವಾಸಮುನಿಯೊಡನರಸನಿಂತೆಂದ ॥೬೦॥

ಎಲೆ ಮುನೀಶ್ವರ! ಪೇಳ್ವುದೆಮ್ಮಯ ।
ಕುಲವೆನಿತು ದಿನವಿಹುದು ಧರಣೀ ।
ವಲಯದೊಳು ಮತ್ಸುತರಿಗಾತ್ಮಜರೆನಿಬರುದಿಸುವರು ॥
ತಿಳುಹಬೇಕಿದನೆನಲು ಮುನಿಕುಲ ।
ತಿಲಕನೆಂದನು ರಾಮನಿಗೆ ಮ ।
ಕ್ಕಳುಗಳೆರ್ವರು ಮಿಕ್ಕವರಿಗೀಪರಿಯು ಸುತರೆಂದ ॥೬೧॥

ಧರಣಿಪತಿ ಹನ್ನೊಂದುಸಾಸಿರ ।
ವರುಷ ಪರಿಯಂತವನಿಯನು ಸೋ ।
ದರರೊಡನೆ ಪಾಲಿಪನು ರಾಘವನನಿತರಿಂ ಮೇಲೆ ॥
ಸುರರ ಸಿರಿಗರಸಹನೆನುತ ವಿ ।
ಸ್ತರಿಸಿ ಮೌನವ ಧರಿಸೆ ಮುನಿ ನೃಪ ।
ಪರನಯೋಧ್ಯೆಗೆ ಮುನಿಜನವ ಬೀಳ್ಕೊಂಡು ನಡೆತಂದ ॥೬೨॥

ಬಲ್ಲೆನಿದನೆಲೆ ಜೀಯ, ರಾಮನ ।
ವಲ್ಲಭೆಗೆ ಸುತರಹರು ಮುನಿಗಳ ।
ಸೊಲ್ಲು ತಪ್ಪದು ಬಂದುದೆಡರವರಿವರ ದೆಸೆಯಿಂದ ॥
ತ್ರಾಣವ ಕೊಳದಿರ್ಪುದೆನೆ ವಿಧಿ ।
ಬಲ್ಲಿದನಲಾಯೆನುತ ಭರದಲಿ ।
ನಿಲ್ಲದೈತಂದಿಳಿದನಾ ಗೋಮತಿಯ ತೀರದಲಿ ॥೬೩॥

ಕಳೆದನಂದಿನ ನಿಶಿಯನಾನಿ।
ರ್ಮಳನದಿಯ ತೀರದಲಿ ಮರುದಿನ।
ನಳಿನಸಖನುದಯದಲಿ ತೆರಳಿದನೇಱು ನಿಜರಥವ॥
ಕಳವಳಿಸೆ ಕರಣಾಳಿ ಚಿತ್ತದೊ।
ಳೆಳಸಲತಿವೇದನೆಯ ಕಂಬನಿ।
ತಳತಳನೆ ಸುಱುಯಲ್ಕೆ ಬಹಳವಿಷಾದದುಗುಡದಲಿ ॥೬೪॥

ವರರಘುಕ್ಷಿತಿನಾಥನಿಂಗಿತ।
ದಿರವ ಜನಕಾತ್ಮಜೆಯ ದುಃಖದ।
ಪರಿಯ ನೆನೆಯುತ ಸುಯ್ಯು ಬಯ್ಯುತ ತಮ್ಮ ದುಷ್ಕೃತವ॥
ಗಿರಿನದೀನದ ಖೇಡ ಖರ್ವಡ।
ಪುರ ಮಡಂಬ ಗ್ರಾಮ ನಿಗಮೋ।
ತ್ಕರವ [ನುತ್ತರಿಸುತ್ತ ಬಂದರು] ಪುರಿಗೆ ದುಗುಡದಲಿ ॥೬೫॥

ಬಂದು ರಾಮನ ಚರಣಕಮಲಕೆ।
ವಂದಿಸಿದನೂರ್ಮಿಳೆಯ ಪತಿ ಕಡು।
ಗಂದಿದಂಸನ ಮೊಗವನೀಕ್ಷಿಸಿ ಸುರಿದು ಕಂಬನಿಯ॥
ಎಂದನವನೀಸುತೆಯನಟವೀ।
ವೃಂದದಲಿ ಬಿಟ್ಟೆಂದವನು ಮನ।
ನೊಂದರೈ ಶತ್ರುಘ್ನಭರತರು ಒಯ್ದು ದುಷ್ಕೃತವ ॥೬೬॥

ಬಳಸಲಾಱದ ತೀವ್ರಸಂಗವ।
ನಿಳೆಯೊಳಗೆ ಸತಿಸುತರೊಳಗರಿ।
ದಬಿಲಂದೊಱಿಯೊಳಗದ್ದವರು ಸೈರಿಸುವರಾರದನು॥
ಕಳಿದೆವಖಿಳಜನಾಪವಾದಕೆ।
ಕುಳವಿವರ್ಧನೆಯಾದ ಸೀತೆಯ।
ನಬಲೆ ಮಾಡುವುದೇನೆನುತ ಸೌಮಿತ್ರಿ ಬಿಸುಸುಯ್ದ ॥೬೭॥

ಎಲೆ ಸುಮಿತ್ರಾಸೂನು! ಕೀರ್ತಿಯ।
ನಱುಹಬೇಕಿಹಪರವ ಮೆಚ್ಚಿಸಿ।
ಒಲ್ಕವರೊಳೊಂದಱಿಯಲೊಂದಱ ಬಳಕೆ ಸುಜನರಿಗೆ॥
ಸುಲಭವೆಂತಹುದೇಕಪಕ್ಷದೊ।
ಳುಱಿದ ಖಗದಂತಹುದು ಚಿಂತೆಯ।
ತಳೆಯಬಾರಗದೆನುತ್ತ ತಿಳುಹಿದನನುಜರನು ರಾಮ ॥೬೮॥

ಪೋದುದಿಂದಿಗೆ ದಿವಸ ನಾಲ್ಕು ವಿ ।
ಷಾದಚಿತ್ತದೊಳೆಮಗೆ ಪುರದೊಳ ।
ಗಾದ ಕಾರ್ಯವನಱಿದುದಿಲ್ಲದಱಿಂದ ಕೇಡಹುದು ॥
ಆದಿಯಲಿ ನೃಗನಿಂತು ಕಾರ್ಯವ ।
ನಾದರಿಸದುಱೆ ಕೆಟ್ಟನಾಮ ।
ರ್ಯಾದೆ ಪೌರವಿಧಾನವಱಿಯದೊಡೆಂದನಾರಾಮ ||೧೯||

ಅಕ್ಷಯಾತ್ಮ ವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷ ಸುರಮುನಿರಕ್ಷ ಸುಜನಾ ।
ಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ||೨೦||

— ಇಂತು ಹದಿಮೂಱನೆಯ ಸಂಧಿ —

## ಹದಿನಾಲ್ಕನೆಯ ಸಂಧಿ

ಸೂಚನೆ ॥ ಪೇೞಿದನು ನೃಗನಿಮಿ ವಸಿಷ್ಠ ವಿ ।
ಶಾಳಚರಿತಂಗಳ ಯಯಾತಿ ನೃ ।
ಪಾಳಕನ ಕಥೆಸಹಿತ ರಾಘವನೂರ್ಮಿಳಾಪತಿಗೆ ॥

ಕೇಳು ಲಕ್ಷ್ಮಣ ಪೂರ್ವದವನೀ ।
ಪಾಳರೊಳು ನೃಗನೆಂಬ ಧರಣೀ ।
ಪಾಲನಿರುತಿರಲೊರ್ಮೆ ಪುಷ್ಕರವೆಂಬ ತೀರ್ಥದಲಿ ॥
ಮೇಳವಿಸಿ ವತ್ಸಾನ್ವಿತದ ಪಶು ।
ಜಾಳವನು ಭೂಸುರರಿಗಿತ್ತನು ।
ಪೇೞಲಚ್ಚರಿ ಕೋಟಿಕಾನಕಶೃಂಗಖುರಯುತವ ||೧||

ಮರಳಿ ಬಂದೊಡಗಲಸಿದುದು ಭೂ ।
ಸುರರ ಹಿಂಡಿನೊಳೊರ್ವನೊರ್ವಂ ।
ಗರಸನಿತ್ತ ಘಟೋಧ್ನಿಯುದನೀಕ್ಷಿಸದೆ ಧರಣಿಪತಿ ॥
ಕರೆದು ಕೊಡೆ ಮತ್ತೊರ್ವ ಪಾರ್ವಂ ।
ಗಱಿಯುದವನದನುಯ್ಯೆ, ಕಾಣದೆ ।
ತಿರುಗಿದನು ದೆಸೆದೆಸೆಗೆ ಮುನ್ನಿನ ವಿಪ್ರನಾಪಶುವ ॥೨॥

ಹಂಬಲಿಸಿ ತೊಬಲಿದನು ಭೂಸುರ ।
ನೆಂಬುದೇನದನೊಂದು ವರ್ಷ ವಿ ।
ಳಂಬವಾದುದು ಕಾಲನಖಿಲನವೆಂಬ ಪುರದೊಳಗೆ ॥
ಇಂಬುಗೊಂಡಿರೆ ಕಂಡು ತನ್ನ ಕು ।
ಟುಂಬಪೋಷಣಮೌಲ್ಯವಿಲ್ಲಿಹು ।
ದೆಂಬವನೊಳಿದು ತನ್ನದೆಂದನು ತತ್ಪುರದ್ವಿಜನು ॥೩॥

ಆದುದಾದ್ವಿಜರಿರ್ವರಿಗೆ ಸಂ ।
ವಾದವೆನ್ನದು ತನ್ನದೆಂಬ ವಿ ।
ಭೇದದಂತವನೆಯ್ದಿದವನಿಪನೆಡೆಗೆ ನಡೆತಂದು ॥
ಮೇದಿನೀಶನ ಸಮಯವನು ನಾ ।
ಲ್ಕೈದುದಿನ ಪರ್ಯಂತ ಕಾಣದೆ ।
ಮೇದಿನೀಸುರರತಿಮುಳಿದು ಶಾಪಿಸಿದರಾನೃಪನ ॥೪॥

ಏನು ಸದರವೊ ನಾವಿವಗೆ ನಿ ।
ದ್ರಾಸಮಯ ಗಡ! ದಿಟಕೆ ಸಮಯಾ ।
ಸ್ನೇಹಿಗಳು ಗಡ! ನಾವು, ಸುಜನರಿಗಿವನದೃಶ್ಯನಲ ॥
ಐಸಲೇ! ಬೞಿಕೇನದೃಶ್ಯಾ ।
ಭಾಸವೀತನ ಬಗೆಗಹಡೆ ಕೃಕ ।
ಲಾಸನಾಗಿರಲೀನೃಪಾಲಕನೆಂದರಾರಾದ್ವಿಜರು ॥೫॥

ಕೇಳಿದನು ನೃಪನಾದ್ವಿಜನ್ಮ ।
ವ್ಯಾಳಮುಖನಿಷ್ಯಂದವಾಙ್ಮಯ ।
ಕಾಳಕೂಟವನಕಟನುತ ತದ್ದ್ವಿಜರ ಬೞಿಸಂದು ॥
ಕಾಲಿಗೆಱಗಿ ಮಹಾತ್ಮರೀಪರಿ ।
ತಾಳಲಾಗದು ಕೋಪವನು ಕಡು ।
ಖೂಳನನು ರಕ್ಷಿಪುದು ತನ್ನನೆನುತ್ತ ಕೈಮುಗಿದ ॥೬॥

ಆದೊಡಾದ್ವಾಪರದ ಕಡೆಯೊಳು ।
ಯಾದವರೊಳುದಿಸುವ ನಿಶಾಚರ ।
ಸೂದಕನ ದೆಸೆಯಿಂದ ನಿನಗೆ ವಿಶಾಪವಹುದೆನುತ ॥
ಹೋದರವರಾಪಶುವನಲ್ಲಿಹ ।
ಮೇದಿನೀಸುರರ್ಗಿತ್ತು ಬಳಿಕ ವಿ ।
ಷಾದಮನನಾನೃಪತಿ ತನ್ನೊಳಗಿಂಗೆ ಚಿಂತಿಸಿದ ॥೭॥

ಕರೆಸಿ ಮಂತ್ರಿಗಳೊಡನೆ ನುಡಿದನು ।
ಧರಣಿಯಮರರ ಶಾಪ ತಪ್ಪದು ।
ಪರಿಹರಿಸಲರಿಯದು ಮದಾತ್ಮಜನೆನ್ನ ರಾಜ್ಯವನು ॥
ಧರಿಸಿರಲಿ ವಸುವೆಂದೆನುತ ವಿ ।
ಸ್ತರಿಸಿದನು ಪಟ್ಟಾಭಿಷೇಕವ ।
ನುರುತರಪ್ರೇಮದಲಿ ಬಳಿಕಿಂತೆಂದನಾತ್ಮಜಗೆ ॥೮॥

ಎಲೆ ಮಗನೆ! ಭೂಸುರರ ಮನ್ನಣೆ ।
ಗಲಸದಿರು ಧರ್ಮದಲಿ ರಾಜ್ಯವ ।
ಸಲಹು ನೀನೆಂದೆನುತ ತನಗೆ ವಿಷಾದಪರ್ಯಂತ ॥
ಬಿಲಗಳನು ನೆರೆಸಾರ್ದು ಯೋಜನ ।
ದಳತೆಯಲಿ ಮಾಡಿಸಿದನೈ ಹಿಮ ।
ಜಲದ ಘಮಾರ್ಗಮಗಳಲಿ ಸೇವಾಸುಖಪ್ರದವ ॥೯॥

ಅನಿತಱೊಳಗೈದಿದುದು ವಿಪ್ರರು ।
ಮುನಿದು ವಚಿಸಿದ ಶಾಪ, ಭೂವರ ।
ನನುಭವಿಸಿದನು ಬಹುದಿವಸ ಕೃಕಲಾಸರೂಪಿನಲಿ ॥
ವಿನಯನಿಧಿ ಕೇಳೆನಲು ರಾಘವ ।
ಜನಪನಲಿ ಸೌಮಿತ್ರಿ ಪೇಳಿದ ।
ನಿನಿತು ಭಯವಲ್ಪಾಪರಾಧಕೆ ಬರಲದೇಕೆಂದ ॥೧೦॥

ಈತೆಱದೊಳಲ್ಪಾಪರಾಧೋ ।
ದ್ಭೂತಶಾಪಗಳುಂಟು ಕೇಳ್ವೊಡೆ ।
ಕೌತುಕವಲಾ! ಪೂರ್ವಪುರುಷ ಪುರಾಣಚರಿತಗಳು ॥
ಖ್ಯಾತವಾಗಿಹುದಾಲಿಸುವ ಸು ।
ಪ್ರೀತಿ ನಿನಗಿರಲುಸಿರಿದಪೆನು ಪು ।
ರಾತನದ ಕಥೆಯೆನುತ ರಾಘವನೊರೆದನನುಜಂಗೆ ॥೧೧॥

ಕೇಳು ಲಕ್ಷ್ಮಣ ಮುನ್ನಿನವನೀ ।
ಪಾಲರೊಳಗಿಕ್ಷ್ವಾಕುವೆಂಬ ನೃ ।
ಪಾಲಸುತ ನಿಮಿಭೂಪನೆನಿಸುವ ಮನುಕುಲೋದ್ಭವನು ॥
ಪಾಲಿಸುತ ಭೂಮಂಡಲವ ತ ।
ತ್ಕಾಲಕಾಲೋಚಿತವಖಿಳ ಧ ।
ರ್ಮಾಳಿಗಳನಾಚರಿಸುತಿರ್ದನು ಬಹುವಿಧಂಗಳಲಿ ॥೧೨॥

ಧರಣಿಪತಿ ಪಿತನಾಜ್ಞೆಯಲಿ ವಿ ।
ಸ್ತರಿಪೆನೆಂದು ಮಹಾಧ್ವರಕೆ ಕುಲ ।
ಗುರುವಸಿಷ್ಠನ ವರಿಸಲವನಿಂತೆಂದನವನಿಪಗೆ ॥
ಸುರಪನೆನ್ನನು ಮುನ್ನ ತನ್ನ ।
ಧ್ವರಕೆ ವರಿಸಿದನರಸ ತತ್ಕ್ರತು ।
ಪರಿಸಮಾಪ್ತಿಯೊಳೆಸಗು ಯಾಗವನೆನುತ ಬೀಳ್ಕೊಟ್ಟ ॥೧೩॥

ಆತನೈದಿದ ಬಳಿಕ ಭೂಪತಿ ।
ಗೌತಮನ ವರಿಸಿದನು ಯಾಗಕೆ ।
ಪೂತಚರಿತರು ಮುನಿಗಳೆಯ್ದಿದರತ್ರಿಮೊದಲಾದ ॥
ಸಾತಿಶಯಮೆನೆ ವೈಜಯಂತಾ ।
ಖ್ಯಾತನಗರೋಪಾಂತ ಹಿಮವ ।
ದ್ಭೂತಳದೊಳೆಸಗಿದನು ಮಖವನು ದೀರ್ಘಸೂತ್ರಕವ ॥೧೪॥

ಆವಸಿಷ್ಠಮುನೀಂದ್ರನತ್ತಲು ।
ದೇವರಾಜಾಧ್ವರದೊಳಿರ್ದನು ।
ಭೂವರಾಧ್ವರವೈದು ಸಾವಿರ ವರ್ಷದಂತದಲಿ ॥
ತೀವಿದುದು ಬಳಿಕಿತ್ತಲನಿತಱೊ ।
ಳಾವಿಬುಧಜನಪರಿವೃಢನ ಯಾ ।
ಗಾವಸಾನದೊಳೈದಿದನು ಧರೆಗಾವಸಿಷ್ಠಮುನಿ ॥೧೫॥

ಬೇಗ ಬಂದನು ನಿಮಿನೃಪಾಲನ ।
ಯಾಗಪೂರ್ಣಸ್ಥಳಕೆ ಕೇಳಿದ ।
ನಾಗ ಗೌತಮನಿಂದಲಾದುದು ಯಾಗವೆಂಬುದನು ॥
ತೂಗಿ ಶಿರವನು ನೃಪತಿ ನಿದ್ರಾ ।
ಯೋಗನಿರೆ ಮೈಮಱೆದಸೂಯೋ ।
ದ್ಯೋಗದಲಿ ಮುನಿ ಶಾಪಿಸಿದನು ಮಹಾಮಹೀಪತಿಯ ॥೧೬॥

ದೇಹವಸ್ಥಿರವೆನೆ ಯಾಗವ ।
ನೂಹಿಸಿದನಾನೃಪತಿಯಿನ್ನು ವಿ ।
ದೇಹನಾಗಿರಲೆಂದು ಶಪಿಸಿದನಾವಸಿಷ್ಠಮುನಿ ॥
ಆಹವಣಿಗೆಚ್ಚತ್ತು ನೃಪವರ ।
ಸಾಹವಿಧೂರ್ಣವಾರುಣಾಂಬಕ ।
ನೂಹಿಸದೆ ಶಪಿಸಿದನು ಮುನಿಯ ವಿದೇಹನಾಗೆನುತ ॥೧೭॥

ಕೆಡೆದುದಿರ್ವರ ದೇಹವಾಗಳೆ ।
ಪೊಡವಿಂದೊಳು ಚೇತನಗಳಡಗೆಡೆ ।
ಮಿಡುಕಿದುವು ದೆಸೆದೆಸೆಗೆ ಪರಿದುವು ವಾಯುರೂಪದಲಿ ॥
ದೃಢವಲಾ ಮುನಿಚಿತ್ತವಾಗಳೆ ।
ನಡೆದು ಚತುರಾನನಗೆ ವಂದಿಸಿ ।
ನುಡಿದುದಶರೀರತ್ವದಲಿ ನಿಜಪಿತನೊಳಿಂತೆಂದ ॥೧೮॥

ಆದರಿಸು ಮುನಿಶಾಪದಲಿ ತನ ।
ಗಾದುದಿಂದು ವಿದೇಹ ದೇಹವ ।
ನೈದಿಸೈ ಪರಮೇಷ್ಠಿ ಮರಳಿ ವಿನೋದಮಾತ್ರದಲಿ ॥
ಆದವುದು ನೀನೆಂದೊಡನೆ ತನು ।
ವಾದವುದು ಮೈತ್ರಾವರುಣರಿಂ ।
ದೈದು ನೀನೆನೆ ಪೋದನಾಮುನಿ ವರುಣನಿದ್ದೆಡೆಗೆ ॥೧೯॥

ಬಳಿಕ ವರುಣನು ಮಿತ್ರರೂಪವ ।
ತಳೆದು ಸಾಗರನಾಥನೆನಿಪ ।
ಗ್ಗಳದ ದಿಕ್ಪಾಲತ್ವವನು ತಳೆದಿರ್ಪ ಸಮಯದಲಿ ॥
ಸುಳಿದಳೂರ್ವಶಿ ವರುಣನಿಳಯದ ।
ಬಳಿಯೊಳೀಕ್ಷಿಸಿದಾಕ್ಷಣವೆ ಕಳ ।
ವಳಿಸಿದುದು ಜಳಧಿಪನ ಮನವಂಗಜವಿಕಾರದಲಿ ॥೨೦॥

ತರುಣಿ ಪಯಣವಿದೆತ್ತ ನಿನ್ನಯ ।
ಗುರುಪಯೋಧರಕೆನ್ನ ಲೋಚನ ।
ತರಳಜಾತಕವೆಳಸಿದವುದು ತವಾಧರಾಮೃತಕೆ ॥
ಸುರರ ಸರಿಯಹುದೆನ್ನ ನಾಲಗೆ ।
ತರುಣಿ ನಿನ್ನ ಮುಖಾಬ್ಜಕೆನ್ನಯ ।
ಸರಸಮಾನಸಹಂಸವಾವಗಮೆಳಗಿದವುದೆಂದ ॥೨೧॥

ಎಂದೊಡೂರ್ವಶಿ ವರುಣನೊಡನಿಂ ।
ತೆಂದಳೆಲೆ ದಿಗಧೀಶ ಮಿತ್ರನೊ ।
ಳಿಂದೆಲೇ ಸಂಕೇತ ಸುರತೋದ್ಯೋಗದಲಿ ತನಗೆ ॥
ಹಿಂದುಗಳೆವುದಸಾಧ್ಯವೆನಲಿಂ ।
ತೆಂದನಾಸುರಸತಿಗೆ ವರುಣನ ।
ದೊಂದು ದಾಯುವನೊಡನೆ ವಿಗತಾಪಾಯುಕೃತಮತವ ॥೨೨॥

ಅದೊಡೂರ್ವಶಿ ಕೇಳು ಮಿತ್ರನೊ ।
ಳೈದಿಸೀದೇಹವನು ಮೇಣೆನ ।
ಗಾದಪುದು ನಿನ್ನೊಡನೆ ಮಾನಸಯೋಗ ಭೋಗದೊಳು ॥
ಆದರಿಸು ಮದ್ವೀರ್ಯವನು ಕುಂ ।
ಭೋದಕದೊಳಿರಿಸುವೆನೆನಲು ಲೇ ।
ಸಾದುದೆನುತೊಡಗೂಡಿದಳು ಮಾನಸದ ವಿದ್ಯೆಯಲಿ ॥೨೩॥

ಇಳುಹಿದನು ವೀರ್ಯವನು ಕುಂಭದ ।
ಜಳದೊಳುದಧಿಪನಪ್ಸರಾಂಗನೆ ।
ಬಳಿಕ ಮಿತ್ರನ ಬಳಿಗೆ ಪೋದಳತೀವಭೀತಿಯಲಿ ॥
ತಿಳಿದನಾಗಲೆ ಮಿತ್ರನಾಸುರ ।
ಲಳನೆ ನೆಗಳ್ದ ಕಜ್ಜವನು ಕಡು ।
ಮುಳಿದು ಶಪಿಸಿದನಾಸ್ಯರುಚಿಜಿತಶಶಿಯನೂರ್ವಶಿಯ ॥೨೪॥

ಧಾರಿಣಿಯೊಳಿಹ ಕಾಶಿರಾಜಪು ।
ರೂರವನ ವಧುವಾಗು ಪೋಗಪ ।
ಕಾರಕಾರಿಣಿ ದುಷ್ಟಚಾರಿಣಿಯೆಂದು ಮುನಿ ನುಡಿಯೆ ॥
ಸಾರಿದಳು ಬುಧತನುಜನಾದ ಪು ।
ರೂರವಗೆ ಸತಿಯಾಗಿಯಪ್ಸರ ।
ನಾರಿ ಮಿತ್ರಾವರುಣವೀರ್ಯಸ್ಥಿತಿಯು ಕೇಳೆಂದ ॥೨೫॥

ಸುರಪತಿಯು ಮನದಿಚ್ಛೆ ಮಿತ್ರನ ।
ನೆರೆವ ನೆನಹಿನೊಳಿರ್ದ ಸಮಯಕೆ ।
ವರುಣಸಂಗಮವಾಗೆ ಮಿತ್ರಾವರುಣನಾಮದಲಿ ॥
ಪರಮತೇಜಃಪುಂಜವಿಳ್ದಂ ।
ಕುರಿಸಿದುದು ಕುಂಭದಲಿ ಮೈತ್ರಾ ।
ವರುಣಿಯೆನಿಸಿದಗಸ್ತ್ಯಮುನಿ ಮುನ್ನಾದನದಱೊಳಗೆ ॥೨೬॥

ಬಱಿಕ ಕುಂಭಾರಣಿಯೊಳಂದು ।
ಜ್ವಳಿಸಿದುದಲ್ಲೆ ಮುನಿವಸಿಷ್ಠ ।
ನಲನು ಕುಲಗುರುವಾದನೊಡಸಿಕ್ಷ್ವಾಕುಸಂತತಿಗೆ ॥
ಎಲೆ ಸುಮಿತ್ರಾಸೂನು ಕೇಳಿ ।
ನ್ನುಳಿದ ಕಾರ್ಯವ ನಿಮಿಯ ದೇಹವ ।
ನಱುಹಿದರು ಮಂತ್ರಿಗಳು ಪರಿಮಳ ತೈಲಭಾಂಡದಲಿ ॥೨೭॥

ಕ್ರತುಸಮಾಪ್ತಿಯೊಳಾನಿಮಿಕ್ಷಿತಿ ।
ಪತಿಯ ದೇಹಕೆ ಜೀವಭಾವ ।
ಸ್ಥಿತಿಯನಿತ್ತನು ಕರುಣದಲಿ ಭಾರ್ಗವಮುನೀಶ್ವರನು ॥
ನುತಿಸಿತಾಸಭೆ ಮೆಚ್ಚಿದರು ದೇ ।
ವತೆಗಳತಿವಿನಯದಲಿ ತದ್ಭೂ ।
ಪತಿಯೊಳೆಂದರು ಬೇಡು ವರಗಳನೀವೆವೆಂದೆನುತ ॥೨೮॥

ಆದೊಡೊಳ್ಳಿತೆನುತ್ತ ಕೈಮುಗಿ ।
ದಾದಿತೇಯರೊಳಾಡಿದನು ತಾ ।
ನಾದಪೆನು ಲೋಕದ ನಿಮೇಷಸ್ಥಾನರೂಪದಲಿ ॥
ಆದರಿಭೊಡೆನ್ನಭಿಮತವನೆನ ।
ಲಾದಿವಿಜರಂತಾಗಲೆನೆ ನೃಪ ।
ನಾದನಖಿಳಜನಾಕ್ಷಿಗಳಿಗೆ ನಿಮೇಷವಾಕ್ಷಣಕೆ ॥೨೯॥

ಶಿಥಿಲ ನಿಮಿಕುಲಕಾದುದೆಂಬೀ ।
ವ್ಯಥೆ ನೃಪಾಮಾತ್ಯರೊಳು ಸಮನಿಸೆ ।
ಮಥಿಸಿದರು ತನ್ನೃಪನ ದೇಹಾರಣಿಯನಂದವರು ॥
ಮಥನದೊಳು ಜನಿಯಿಸಿದ ಜನಪಗೆ ।
ಮಿಥೆಯೆನಿಪ ಹೆಸರಾಗೆ ಪುರವದು ।
ಮಿಥಿಳೆಯಾದುದು ಜನಕನಾದನು ಜನಕನಿಂದುದಿಸಿ ॥೩೦॥

ಎಲೆ ನೃಪಾಲಕ ಮನುಮಹೀಶ್ವರ ।
ನಿಳೆಗೆ ಧಾರ್ಮಿಕನನಿತು ಕೋಪವ ।
ಕುಲಗುರುವಿನೊಳು ಮಾಡಲೇಕೆನೆ ಮತ್ತೆ ಲಕ್ಷ್ಮಣಗೆ ॥
ತಿಳುಹಿದನು ರಘುನಾಥನಿಳೆಗ ।
ಗ್ಗಳವದೆಂತೋ ಕ್ಷಾತ್ರತಾಮಸ ।
ದಳವ ಕೇಳು ಯಯಾತಿಚರಿತವನಾದೊಡಿಂತೆಂದ ॥೩೧॥

ಕೇಳು ಲಕ್ಷ್ಮಣ ನಹುಷನೆಂಬ ನೃ।
ಪಾಲತನುಜ ಯಯಾತಿ ಧರಣಿಯು।
ನಾಳುತಿರ್ದನು ತನ್ನೃಪಾಲಂಗಿರ್ವರರಸಿಯರು ॥
ಕಾಲವಶದಲಿ ಶುಕ್ರಸುತೆ ವರ।
ಲೋಲಲೋಚನೆ ದೇವಯಾನೆ ನೃ।
ಪಾಲಕಗೆ ಪಿರಿಯರಸಿಯಾಗಿರುತಿಹಳು ವಿಭವದಲಿ ॥೩೨॥

ಅಸುರಪತಿ ವೃಷಪರ್ವತನುಭವೆ।
ಬಿಸಜಮುಖಿ ಶರ್ಮಿಷ್ಠೆ ವಧುವಾ।
ವಸುಮತೀಶಗೆ ನಹುಷಜಗೆ ಕಿರಿಯರಸಿಯಾಗಿಹಳು ॥
ಉಶನಸುತೆ ಯದುವೆಂಬ ತನುಜನ।
ನಸುರತನುಭವೆ ಪೂರುವೆಂಬೀ।
ಪೆಸರ ಮಗನನು ಪಡೆದು ಸುಖದಿಂದಿರ್ದರೊಲವಿನಲಿ ॥೩೩॥

ದಿನದಿನಕೆ ನಹುಷಾತ್ಮಜನಿಗಾ।
ವನಿತೆ ಶರ್ಮಿಷ್ಠೆಯೊಳು ಸಂದುದು।
ಮನದೊಲವು ಶುಕ್ರಾತ್ಮಜೆಯು ತನುಸಂಗಕಲಿಸಿದುದು ॥
ಜನಿಸಿದುದು ಸಾಪತ್ನ್ಯಮತ್ಸರ।
ಘನವಿಷಾಂಕುರವಾತ್ಮಗತದೊಳು।
ನೆನೆದು ಬರಿಸಿದಳಾವನಿತೆ ನಿಜಜನಕ ಭಾರ್ಗವನ ॥೩೪॥

ಏನು ಬರಿಸಿದೆ ಮಗಳೆ ತನ್ನನ।
ದೇನು ಮನದ ವಿಷಾದ ನಿನಗೆನ।
ಲಾನಿತಂಬಿನಿ ಗದ್ಗದಸ್ವನೆ ನುಡಿದಳಿಂತೆನುತ ॥
ಹೀನವೃತ್ತಿಯ ಧರಿಸಿ ಬಾಳ್ವೆನೆ।
ತಾನಕಟ! ಸವತಿಯೊಳು ನಹುಷನ।
ಸೂನು ಬಾಳ್ವಪನೆನಗಜೀವ ನಿಜವೆಂದಳಗ್ರಿಯಲಿ ॥೩೫॥

ಕೇಳಿದಾಕ್ಷಣ ಮಗಳ ನುಡಿಯನು।
ತಾಳಿದನು ಕೋಪವನು ಶಾಪವ।
ಕೇಳು ಮಗಳೆ ಯಯಾತಿ ಜರೆಯಲಿ ಜೀನನಾಗಿರಲಿ ॥
ಬಾಳುವೆಣನಿರಲೆನುತ ನುಡಿದು ನಿ।
ಜಾಳಯುವನೆಯ್ದಿದನು ಮುನಿದೊಡೆ।
ಕಾಲನ್ಯೆ ಸಲೆ ಶುಕ್ರನೆಲೆ ಸೌಮಿತ್ರಿ ಕೇಳೆಂದ ॥೩೬॥

ಬಱಿದೆ ಹೋಹುದೆ ಮುಳಿದ ಭೂಸುರ।
ನುಱುನುಡಿಗಳಾನೃಪನ ಮೈಯ್ಯೊಳು।
ಕಱುಹುಗೊಂಡುದು ಮುಪ್ಪು ಜವ್ವನದಿರವು ಜಾಱಿದುದು॥
ಅಱಿವು ಮಱವೆಗೆ ಚಿತ್ತವಾಗಳೆ।
ತೆಱಹುಗೊಟ್ಟುದು ಕಾಮದೇಱಿಗೆ।
ಬಱತುದಾಸಿಭು ಮುಳುಗಿದನು ಚಿಂತಾಸಮುದ್ರದಲಿ ॥೩೭॥

ನೊಂದು ಮನದಲಿ ನೃಪತಿ ಬಱಿಕಿಂ।
ತೆಂದನಾಪೂರುವಿನೊಳೀಸೈ।
ಕಂದ ಶುಕ್ರನ ಶಾಪದಲಿ ಮುಪ್ಪಡಿಸಿತೆಂದೆನಗೆ॥
ಹಿಂದುಗಳೆಯದೆ ತನ್ನ ಮಾತನು।
ತಂದೆ ನೀಸೀಜರೆಯ ಧರಿಸಲು।
ಬಂದಪುದು ನಿಸ್ಸೀಮಸೌಧಿಕಪಸನಗೆ ಕೇಳೆಂದ ॥೩೮॥

ಎನೆ ಹಸಾದವೆನುತ್ತ ತಳೆದನು।
ಜನಪತಿಯ ಜರೆಯನು ಮಹೀಶನ।
ತನು ಮರಳೆ ತಾರುಣ್ಯನಾಂತುದು ಮುನ್ನಿನಂದದಲಿ॥
ತನಯನನು ಕೊಂಡಾಡಿ ನಹುಷನ।
ತನುಜನತಿಮುದದಿಂದ ನೆಗಱಿದ।
ನನಿಮಿಷರು ಕೊಂಡಾಡೆ ಶತಸಾವಿರಮಹಾಕ್ರತುವ ॥೩೯॥

ಜನಪತಿಗೆ ಧರ್ಮಾರ್ಥಕಾಮಗ।
ಳೆನಿಪ ವರ್ಗತ್ರಯನಿಧಾನಾಂ।
ಜನದ ಸಿದ್ಧಿಯದಾಯ್ತು ರಾಜ್ಯಶ್ರೀಯ ಸೋಂಕಿನಲಿ॥
ತನುಜ ತಣಿದುದು ಚಿತ್ತವೆನಗಿ।
ನ್ನೆನಿತು ನವೆದಯೊ ನೀನೆನುತ ತ।
ತ್ತನಯಗಿತ್ತನು ಜವ್ವನವನಪ್ಪಿದುದು ಜರೆ ನೃಪನ ॥೪೦॥

ಪೂರುವಿಗೆ ನೃಪನಖಿಳರಾಜ್ಯದ।
ಭಾರವನು ಪರುಠವಿಸಿ ಕೊಟ್ಟನು।
ಭೇರಿಧವಳಚ್ಛತ್ರಚಾಮರಚಿಹ್ನೆಗಳು ಸಹಿತ॥
ಧಾರಿಣೀಪತಿ ಶಪಿಸೆ ಯದುವಿಗೆ।
ದೂರವಾದುದು ರಾಜ್ಯಲಕ್ಷ್ಮಿ ವಿ।
ಕಾರರಾಕ್ಷಸನಾಗಿ ಗಿರಿವನಗಳನು ಸಾರಿದನು ॥೪೧॥

ಈತೆಱದೊಳವನೀಶನಂದು ಪು।
ರಾತನಕಥನವೊರೆದು ತನ್ನನು।
ಜಾತನೊಡನಿರುತಿರ್ದ ಮುನ್ನೀಕ್ಷಿಸಿದ ಸಮಯದಲಿ॥
ಪೂತಚರಿತನು ಸುಪ್ರಭಾತಾ।
ಖ್ಯಾತವಹ ಕರ್ಮಗಳನೆಸಗಿ ವಿ।
ಧೂತರಿಪು ಬಂದಿತ್ತನೋಲಗವನು ಸರಾಗದಲಿ ॥೪೨॥

ಅಕ್ಷಯಾತ್ಮ ವಿಪಕ್ಷದಾನವ।
ಶಿಕ್ಷ ದುಷ್ಕೃತರೂಕ್ಷ ಸುಮನಸ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಘನವಕ್ಷ॥
ಪಕ್ಷಿರಥ ಕಮಲಾಕ್ಷ ಕಿನ್ನರ।
ಯಕ್ಷ ಸುರಮುನಿರಕ್ಷ ಸುಜನಾ॥
ಪೇಕ್ಷ ಸಹಸ್ರಾಕ್ಷ ಪಾಲಿಸು ಮೋಕ್ಷಪದದಕ್ಷ ॥೪೩॥

ಇಂತು ಹದಿನಾಲ್ಕನೆಯ ಸಂಧಿ.

———: :———

## ಹದಿನೈದನೆಯ ಸಂಧಿ.

———

ಸೂಚನೆ:—ಧೀರಭರತಾನುಜನು ಯಮುನಾ।
ತೀರವಾಸಿ ಮುನೀಂದ್ರರಹುದೆನೆ।
ವೀರಲವಣಾಸುರನನಿಕ್ಕಿದನಸಮಸಮರದಲಿ॥

ಪೇಳಿದನು ವಾಲ್ಮೀಕಿ ರಘುಭೂ।
ಪಾಲಕರ ಚರಿತವನು ನಡೆತಂ।
ದೋಲಗದ ಶಾಲೆಯೊಳು ಹರಿಪೀಠವನಲಂಕರಿಸಿ॥
ಮೇಲೆ ಮೇಲೈತಪ್ಪ ಪುರಜನ।
ಜಾಲವನು ಮನ್ನಿಸಿ ಯಶಶ್ರೀ।
[illegible] ॥೧॥

ನೆರೆದುದೋಲಗವಖಿಳಪೃಥ್ವೀ ।
ಶ್ವರರು ಸೇನಾನಾಯಕರು ಸಚಿ ।
ವರು ಪುರೋಹಿತ ಕಾವ್ಯಕಥಕ ಪುರಾಣಪಂಡಿತರು ॥
ಕರಿತುರಗಶಿಕ್ಷಕರು ಜೋದರು ।
ಭರತಸಂಗೀತ ಪ್ರವೀಣರು ।
ಕರಣಿಕರು ಭೂಸುರರು ಸಾಂವತ್ಸರಿಕರೊಗ್ಗಿನಲಿ ॥೨॥

ಇರೆ ಭರತಶತ್ರುಘ್ನ ಲಕ್ಷ್ಮಣ ।
ರರಸನೆಡಬಲವಂಕದಲಿ ಭಯ ।
ಭರಿತ ಭಕ್ತಿನಿಯುಕ್ತನಾದ ಸುಮಂತ್ರನೈತಂದು ॥
ಅರಸ ಭಾರ್ಗವ ಮುಖ್ಯಯಮುನಾ ।
ವರನದೀತಟವಾಸಿಗಳು ಮುನಿ ।
ವರರು ಬಾಗಿಲೊಳಿಹರೆನುತ ಪೇಳ್ದನು ಕೈಮುಗಿದು ॥೩॥

ಜನಪತಿಯು ನೇಮದಲಿ ಸಭೆಗಾ ।
ಮುನಿಜನವ ಹುಗಿಸಿದನು ಭೂಪತಿ ।
ವಿನಯವಿನಮಿತನರ್ಘ್ಯಪಾದ್ಯಾಸನಗಳನು ರಚಿಸಿ ॥
ವಿನುತ ಕಂದಫಲಾದಿತೀರ್ಥಗ ।
ಳೆನಿಪ ವಸ್ತುಗಳನು ನೃಪಾಲ ।
ವಿನಯದಲಿ ಕೈಗೊಳಿಸೆ ಹರಸಿದರಖಿಳ ಮುನಿವರರು ॥೪॥

ಬಳಿಕ ರಾಘವನೆಂದನೆಲೆ ಮುನಿ ।
ಗಳಿರ ನಿಮ್ಮಯ ಬರವಿದತಿಮಂ ।
ಗಳವಲಾ ನಿಮ್ಮಂಘ್ರಿದರ್ಶನವಿಂದಪೂರ್ವವಲಾ ॥
ತಿಳಿಯದೆವಿನ್ನಾ ದೇಶಕೋಶಂ ।
ಗಳು ಮದೀಯ ಪ್ರಾಣವೆಂಬಿವ ।
ಉಳಿವು ವಿಪ್ರಾರ್ಥಂಗಳವಿತಥವಹುವುದಿವನೆಂದ ॥೫॥

ಎನಲು ಪರಿತೋಷದಲಿ ಮುನಿಗಳು ।
ತನತನಗೆ ಹೊಗಳಿದರು ರಾಮನ ।
ವಿನಯವಚನಕೆ ಸುಪ್ರತಿಜ್ಞಾರೂಢನಹುದೆನುತ
ಜನಪ ಬಂದೆವು ಕೇಳು ದಶಶಿರ ।
ಹನನವಾದುದು ನಿನ್ನ ದೆಸೆಯಿಂ ।
ದೆನೆ ಮದೀಯೋಪದ್ರವವ ಪರಿಹರಿಸು ನೀನೆನಲು॥ ॥೬॥

ಉಸಿರಬೇಕೇ ರಾಮ ಕೃತಯುಗ ।
ದಸುರರೊಳು ಮಧುವೆಂಬ ರಾಕ್ಷಸ ।
ನಸಮನೇತ್ರನ ಭಜಿಸಿ ಪಡೆದನಲೈ ಮಹಾಯುಧವ ॥
ವೃಷವರಧ್ವಜನಿತ್ತನಾತಂ ।
ಗಸಮಶೂಲವನದಱ ದೆಸೆಯಿಂ ।
ಹೊಸಪರಿಯ ಶೂಲವನು ದೇವಾಸುರವಧೋದ್ಯಮದ ॥೭॥

ಸುರವಿರೋಧಿಯ ತನಯನೋರ್ವನೊ ।
ಳಿರಲೆನುತ ಕೊಟ್ಟನು ಮಹೇಶ್ವರ ।
ನರಸ ಶೂಲವನದಱ ಮಹಿಮೆಯನೇನನುಸಿರುವೆನು ॥
ಸುರನರೋರಗದೈತ್ಯರನು ದ ।
ಳ್ಳುರಿಯೊಳುರುಹುವುದಾದನುಜನಾ ।
ಚರಿಸೆ ತಪವನು ಶೂಲವಿರ್ದಪುದವನ ತನುಜನಲಿ ॥೮॥

ಆತನಿರುತಿರಲೆಮಗೆ ತಪವಿ ।
ನ್ನೇತರದು ನೃಪ ಲವಣನೆಂಬ ಸು ।
ರೇತರನ ನೀನೆಯ್ದಿ ಕೊಲ್ಲದೊಡಾಗದೆನೆ ಕೇಳ್ದು ॥
ಆತನೊಮ್ಮೆಗೆ ಶೂಲವಿಲ್ಲದೆ ।
ಭೂತಲದೊಳಡಿಯಿಡುವ ಸಮಯದ ।
ಮಾತನಱುಹುವುದೆನ್ನೊಳೆನೆ ಪೇೞ್ದರು ಮುನಿವರರು ॥೯॥

ಆದೊಡಾಲಿಸು ರಾಮ ದಿನಮುಖ ।
ದಾದಿಯಲಿ ತದ್ದನುಜನಡವಿಯ ।
ನೈದಿದಪನಾಹಾರಕೆಂದಿದು ನಿತ್ಯವಿಧಿಯವಗೆ ॥
ಹೊಯ್ದು ತಿಂಬನು ಸಿಂಹವಾರಣ ।
ವಾದಿಯಾಗಿಹ ಮೃಗಕುಲವನೀ ।
ರೈದು ಸಾಸಿರವನು ಸುರಾಸುರಮಾನವರು ಸಹಿತ ॥೧೦॥

ಆಸಮಯದೊಳು ಪಿಡಿಯನಾಲವ ।
ಣಾಸುರನು ಶೂಲವನು ಕೇಳೆನೆ ।
ಲೇಸೆನುತ ರಘುನಾಥನಾಲೋಕಿಸೆ ನಿಜಾನುಜರ ॥
ವಾಸಿ ಮಿಗೆ ಶತ್ರುಘ್ನನೈತಂ ।
ದಾಸುರಾರಿಯ ಪಥೆಗೆನಗೆ ವಸು ।
ಧೇಶ ನೇಮವನೀಯಬೇಕೆಂದೞಗಿದನು ಪದಕೆ ॥೧೧॥

ಒಳ್ಳಿತೆಂದನುಜಂಗೆ ದನುಜನ ।
ಕೊಲ್ಲೆನುತ ಮಧುಕೈಟಬರ ಕೊಲು ।
ವಲ್ಲಿ ಕೊಟ್ಟ ಮಹಾಸ್ತ್ರವನು ಕೈಕೊಳಿಸಿ ವಿಧಿಸಹಿತ ॥
ಸಲ್ಲಲಿತಮಧುದೈತ್ಯವಿಷಯಕೆ ।
ವಲ್ಲಭನು ನೀನಾಗೆನುತ ಭೂ ।
ವಲ್ಲಭನು ರಚಿಸಿದನು ಪಟ್ಟವನಧಿಕವಿಭವದಲಿ ॥೧೨॥

ಶೂಲವನು ಮನೆಯೊಳಗೆ ಪೂಜಿಸಿ ।
ಖೂಳರಕ್ಕಸನೈದುವನು ಗಡ! ।
ಹಾೞೊಡಲಿಗಾಹಾರಕೆಂದು ಮಹಾವನಾಂತರಕೆ ॥
ಕೇಳು ನಮ್ಮುಕ್ತಿಯನು ದೈತ್ಯನ ।
ವೇಳೆಯಱಿದಾಪುರವ ಹೊಗಗುಡ ।
ದೇೞಿಸಾತನ ಹರಣವನು ಜಯವಹುದು ಹೋಗೆಂದ ॥೧೩॥

ಧನ ಕನಕ ರಥ ತುರಗ ಕರಿ ಪರಿ ।
ಜನಗಳನು ವಿಂಗಡಿಸಿ ರಾಘವ ।
ನನುಜನನು ಬೀೞ್ಕೊಳಿಸಿದನು ಮುನಿಜನವನೊಡಗೂಡಿ ॥
ಜನನಿಯರಿಗಭಿನಮಿಸಿ ನೃಪಪದ ।
ವನಜಕಾನತನಾಗಿ ಭರತಗೆ ।
ವಿನಯದಲಿ ಮಣಿದೆಱಗಿ ಲಕ್ಷ್ಮಣಸತಿಗೆ ಬೀೞ್ಕೊಂಡ ॥೧೪॥

ನಡೆದನಾಪುರದಿಂದ ವಾದ್ಯದ ।
ಗಡಣದಲಿ ಮಧುಪುರಿಗೆ ಮುನಿಜನ ।
ದೊಡನೆ ಗಜರಥತುರಗಕಾಲಾಳಿರದೆ ಸಂದಣಿಸೆ ॥
ಪಡುವ ದೆಸೆಗಲ್ಲಲ್ಲಿ ನೋಡುತ ।
ಪೊಡವಿಯೊಳಗಿಹ ದೇಶ ಪುರ ಖ ।
ರ್ವಡ ಮಡಂಬ ಗ್ರಾಮನಿಗಮಂಗಳನು ಕಳೆಕಳೆದು ॥೧೫॥

ಬಂದನಾಗೋಮತಿಯ ತೀರದೊ ।
ಳೊಂದಿರುಳು ಕಳೆದಲ್ಲಿ ಮಱುದಿನ ।
ಮಂದಿಯೊಡವರಲೈದಿದನು ವಾಲ್ಮೀಕಿಯಾಶ್ರಮವ ॥
ವಂದಿಸಲು ಹರಸಿದನು ಮುನಿಪತಿ ।
ಯಿಂದು ಸುದಿನವಿದಾದುದೆಮಗೆನು ।
ತಂದು ಕಂದಫಲಾದಿ ಭೋಜನದಿಂದ ಮನ್ನಿಸಿದ ॥೧೬॥

ಒಱಿಕ ಮುನಿ ನಿವ್ಮಾಶ್ರಮದ ಹೊಱ।
ವಳಯದೊಳು ತೋಱುವುದು ಯಾಗ।
ಸ್ಥಲವಿದಾವುದು ಪೇಟಬೇಕೆನಗೆಂದು ಬಿಸ್ನೈಸೆ॥
ಎಲೆ ಕಕುತ್ಸ್ಥಜ ಕೇಳು ನಿಮ್ಮಯ।
ಕುಲದೊಳಗೆ ಸೌದಾಸನೆಂಬ।
ಗ್ಗಳೆಯ ಭೂಪತಿ ಮಿತ್ರಸಹನೆಂಬಾತ್ಮಭವನೊಡನೆ ॥೧೭॥

ಮಗನೊಡನೆ ಸೌದಾಸಭೂಪತಿ।
ನಗರವನು ಹೊಱವಂಟು ನಾನಾ।
ಮೃಗವನಱಸುತ ಬೇಂಟೆಗೆಯ್ದಿದನೊಮ್ಮೆ ವಿಪಿನದಲಿ॥
ಮೃಗಕುಲವನಾವನದೊಳಗೆ ನಿ।
ರ್ಮೃಗವೆನಿಸಿ ಶಾರ್ದೂಲರೂಪಿನ।
ವಿಗಡರಕ್ಕಸರಿಬ್ಬರಿರೆ ಮುರಿದೆಚ್ಚನಾನೃಪತಿ ॥೧೮॥

ಬಿರ್ದದದಱೊಳಗೊಂದು ಭೂವರ।
ನಾರ್ದಿಸಲು ದೈತ್ಯಸ್ವರೂಪಿನೊ।
ಳಿರ್ದ ಸುಱಿದಾವ್ಯಾಘ್ರರೂಪಿನೊಳೊರ್ವನಾಕ್ಷಣಕೆ॥
ನಿರ್ದಯನಲಾನೃಪತಿ ನಿನಗೇ।
ನಿರ್ದದೆನ್ನೊಳು ವೈರಮತಿ ನೀ।
ಮರ್ದಿಸಿದೆ ಮತ್ಸಖನನಾದೊಡೆ ಕೇಳು ನೀನೀಗ ॥೧೯॥

ಮಱೆಯದಿರು ನೃಪ ಮತ್ಸಖನ ನೀ।
ನಿಱಿದವೊಲು ನಿನಗೊಮ್ಮೆ ನಾನಾ।
ತ್ರೆಱಡಲಪಕೃತಿಯೆಸಗದೊಡೆ ರಕ್ಕಸನೆ ನಾನೆಸುತ॥
ಕುಱುಹುದೋಱದದೃಶ್ಯದಲಿ ಮೆ।
ಯ್ಮಱಸಿ ಕೊಂಡನು ದನುಜನಾನೃಪ।
ನುಱುವ ಚಿಂತೆಯೊಳೈದಿದನು ಮಗನೊಡನೆ ನಿಜಪುರಿಗೆ ॥೨೦॥

ಕೇಳು ನೃಪ ಸೌದಾಸಭೂಪತಿ।
ಕಾಲಧರ್ಮವನೈದಿದನು ಚಿರ।
ಕಾಲಕಾದುದು ಮಿತ್ರಸಹನಿಗೆ ರಾಜ್ಯದರಸುತನ॥
ಪೇಟಲೇನೀಯೆಡೆಯೊಳಾನರ।
ಪಾಳನತಿವಿಭವದಲಿ ಯಾಗವ।
ಬೇಳಿದನಲ್ಲೈ ಮುನಿವಸಿಷ್ಠನ ವರಿಸಿ ಬಹುದಿವಸ ॥೨೧॥

ಜನಪ ಯಜ್ಞಸಮಾಪ್ತಿಯಲಿ ಬಂ।
ದನು ವಸಿಷ್ಠನ ರೂಪಿನಲಿ ದನು।
ತನುಜನಂದಿನ ಪೂರ್ವವೈರವ ನೆನೆದು ನೃಪನೆಡೆಗೆ॥
ಎನಗೆ ಮನವಾದಪುದು ಮಾಂಸಾ।
ಶನವನವನಿಪ ಮಾಡಿಸೆನೆ ನಿಜ।
ವೆನುತ ಸೂದಾಧ್ಯಕ್ಷನೊಳು ನೃಪನಂದು ನೇಮಿಸಿದ ॥೨೨॥

ಏನನೆಂಬೆನು ರಾಘವಾನುಜ।
ದಾನವನ ಕಪಟವನು ತಂದನು।
ಮಾನುಷಾಮಿಷಗಳನು ಸೂದಾಧ್ಯಕ್ಷರೂಪಿನಲಿ॥
ತಾನೆ ಪಚಿಸಿದನಾಪ್ತನಂತೆ ಮ।
ಹಾನಸದೊಳಜ್ಞಾತನರಸನ।
ದೀನನರಿಯದೆ ಗುರುವಸಿಷ್ಠಂಗುಣಬಡಿಸಿದನದ ॥೨೩॥

ಸಂಶಯದೊಳುಣಲೊಲ್ಲದಾನರ।
ಮಾಂಸವನು ತನ್ನೃಪನನೆಲವೊ ನೃ।
ಶಂಸ ಕಪಟದೊಳೆನಗೆ ನೆಗಳ್ದ ಮಾನುಷಾಮಿಷವ॥
ಹಿಂಸಕನು ನೀನಡವಿಯೊಳು ನರ।
ಮಾಂಸಭೋಜನದಿಂದಿಹುದು ದು।
ರ್ವಂಶನಾಗೆಂದೆನುತ ಮುನಿ ಶಾಪಿಸಿದನಾನೃಪನ ॥೨೪॥

ಅಂದು ನರಪತಿಯಾ ವಸಿಷ್ಠನೊ।
ಳೆಂದನಾಮಿಷಭೋಜನವನೆನ।
ಗೆಂದು ಮೊದಲೊಳಗಾಡಿ ಶಪಿಸುವುದಾವ ಧರ್ಮವಿದು॥
ಇಂದು ಶಾಪವನಿತ್ತಪೆನು ನಿನ।
ಗೆಂದು ನೃಪನಂಜಳಿಯೊಳಾಂತುದ।
ಸಂದು ತನ್ನಡಿಗೊಗಿಸಿದನು ಶಮೆಯೆನಿತೊ ತಜ್ಜಲವ ॥೨೫॥

ಮತ್ತವಗೆ ಕಲ್ಮಾಷಪಾದನೆ।
ನುತ್ತ ಪೆಸರಾದುದು ಮುನೀಶ್ವರ।
ನೆತ್ತಣದ್ಭುತವೆನುತ ದಿವ್ಯಜ್ಞಾನದಿಂದರಿದು॥
ಉತ್ತಮನಲಾ ನೃಪತಿ ದಾನವ।
ಕೃತ್ರಿಮವಿದೆಂದೆನುತ ಭೂಪಾ।
ಲೋತ್ತಮನೊಳೆಂತೆಂದು ನುಡಿದನು ನೊಂದು ಮನದೊಳಗೆ ॥೨೬॥

ವಸುಮತೀಶ್ವರ ಮೋಸದಲಿ ಶಾ ।
ಪಿಸಿದೆನಱಿಯದೆ ಪುಲಿಯ ರೂಪಿನೊ ।
ಳಸುದೊಱೆದ ರಕ್ಕಸನ ಸಖನಿಂದಾದ ಕೃತಕವಿದು ॥
ಉಸಿರಲೇನೀರಾಱು ವರುಷವ ।
ನಸುರ ರೂಪಲಿ ಕಳೆದು ಮರಳಿದು ।
ವಸುಮತಿಯನಾಳೆನುತ ಮುನಿಯಿತ್ತನು ವಿಶಾಪವನು ॥೨೭॥

ದನುಜರೂಪಿನೊಳಾನೃಪಾಲಕ ।
ನನುಭವಿಸಿ ಹನ್ನೆರಡು ಬರಿಸವ ।
ನನಿತಱಿಂಮೇಲಾಳಿದನು ಸರ್ವೋರ್ವಿಯನು ಮರಳಿ ॥
ವಿನಯನಿಧಿ ಶತ್ರುಘ್ನ ಕೇಳಾ ।
ಜನಪತಿಯ ಮಖಭೂಮಿಯಿದು ಪಾ ।
ವನವೆನುತ ಮುನಿ ಪೇಳಲಾಗಳೆ ಸಂಜೆ ರಂಜಿಸಿತು ॥೨೮॥

ಬಿಸಜಸಖನಸ್ತಾಚಲಾಗ್ರದ ।
ವಸತಿಯನು ಸಾರಿದನು ರಾಘವ ।
ನೆಸಗಿದನು ಕರ್ಮಗಳ ಮಜ್ಜನ ಭೋಜನಾದಿಗಳ ॥
ಉಸಿರೆ ಮುನಿಗಳು ಧರ್ಮಗಳನಾ ।
ಲಿಸುವ ಸಮಯದೊಳಾಗ ಸೀತಾ ।
ಪ್ರಸವಸಂಭ್ರಮವಾರ್ತೆ ಪಸರಿಸಿತಾತಪೋವನವ ॥೨೯॥

ಕೇಳಿ ವಿಸ್ಮಯರಸಸಮುದ್ರದೊ ।
ಳಾಳಿದನು ಶತ್ರುಘ್ನನಾಮುನಿ ।
[ಮೌಳಿಮಣಿ ವಾಲ್ಮೀಕಿ] ಬಂದನು ಸೂತಿಕಾಗೃಹಕೆ ॥
ತಾಳಿ ಮುಷ್ಟಿಯೊಳಮಳಕುಶಲವ ।
ಜಾಲಗಳನಭಿಮಂತ್ರಿಸಿದನು ವಿ ।
ಶಾಲಮತಿ ರಕ್ಷೋಘ್ನಸೂಕ್ತವನಘನಿರುಕ್ತಕವ ॥೩೦॥

ನೋಡಿ ಮುನಿ ಶಿಶುಯುಗಳವನು ಕೊಂ ।
ಡಾಡಿ ಕುಶಲವರೆಂಬ ಹೆಸರನು ।
ಮಾಡಿದನು ಕುಶಲವಗಳಲಿ ರಕ್ಷಿಸಿದ ಬಗೆಯಿಂದ ॥
ಆಡಲೇನಾಪ್ರಸವಕಾಲಕೆ ।
ಬೇಡಿದುಚಿತದ್ರವ್ಯವನು ಮುನಿ ।
ನೀಡಿಸಿದನೈದಿದನು ಮುದದಲಿ ಪರ್ಣಮಂದಿರಕೆ ॥೩೧॥

ಆನಿತಱೊಳು ಪೂರ್ವಾದ್ರಿಮಸ್ತ್ಮಕ ।
ಕಿನನ ರಥವಡರಿದುದು ಸಂಧ್ಯಾ ।
ವಿನುತಕರ್ಮವನಾಚರಿಸಿ ಶತ್ರುಘ್ನನೈತಂದು ॥
ಮುನಿಚರಣಕಭಿನಮಿಸಿ ನೀಮುವ ।
ನೆಸಗೆ ಕುಡಿ ಪೋದಪೆನೆನಲು ಸ ।
ದ್ವಿನಯದಲಿ ಬೀೞ್ಕೊಳಿಸಿದನು ವಾಲ್ಮೀಕಿ ರಾಘವನ ॥೩೨॥

ಅಲ್ಲಿ ಸೇನಾಜಾಲವನು ಭೂ ।
ವಲ್ಲಭನು ನಿಲಿಸಿದನು ನಡೆದನು ।
ಮೆಲ್ಲಮೆಲ್ಲನೆ ಮುನಿಜನಂಗಳು ಸಹಿತ ಮಧುವನಕೆ ॥
ಒಲ್ಲಿದನೊ ರಕ್ಕಸನು ಗಡ ಮಱೆ ।
ಯಿಲ್ಲದೆನ್ನೊಡನಿಂದು ಮುನಿಜನ ।
ವಲ್ಲಭನಲೈ ಚ್ಯವನ ನೀನುಸಿರೆಂದು ಬೆಸಗೊಂಡ ॥೩೩॥

ಆದೊಡೆಲೆ ನೃಪ, ನಿಮ್ಮ ಪೂರ್ವದ ।
ಮೇದಿನೀಶ್ವರರೊಳಗೆ ಕೃತಯುಗ ।
ದಾದಿಯೊಳು ಮಾಂಧಾತನೆಂಬ ಮಹೀಶನಿರುತಿಹನು ॥
ಮೇದಿನಿಯನೆಲ್ಲವನು ಗೆಲಿದು ವಿ ।
ನೋದದಲಿ ಜಯಿಸುವೆನೆನುತ ನೃಪ ।
ನೈದಿದನು ಸುರಲೋಕವನು ಶೌರ್ಯಾಗ್ನಿ ಪೆಗ್ಗಳಿಸೆ ॥೩೪॥

ಆಶತಕ್ರತುವದನಱಿದು ಧರ ।
ಣೀಶನನು ವಿನಯದಲಿ ತನ್ನ ವ ।
ರಾಸನಾರ್ಧಕೆ ಕರೆದು ಕುಳ್ಳಿರಿಸಿದನು ಕೈಮುಗಿದು ॥
ಲೇಸು ನೃಪ ಸುರಲೋಕವನು ಗೆ ।
ಲ್ವಾಸೆ ನಿನಗಿರೆ ಧರಣಿಯನು ಗೆಲಿ ।
ದೈಸೆ ಬರಲೆನೆ ಕೋಪಶಿಖಿ ಹೊಡೆಕರಿಸಿತಾನೃಪಗೆ ॥೩೫॥

ಎಲೆ ಸುರೇಶ್ವರ ಧರಣಿಯೊಳು ಮಾ ।
ರ್ಮಲೆವರಾರೆನಗೆನಲು ನುಡಿದನು ।
ಬಲವಿರೋಧಿ ಮಹೀಪತಿಗೆ ಮಧುದನುಜಪತಿಸೂನು ॥
ಬಲಯುತನು ಲವಣಾಸುರನು ಭೂ ।
ವಲಯದೊಳು ಮಾರ್ಮಲೆದು ತನ್ನೊಳು ।
ತಲೆವೆರಸಿ ಮರಳಿದವರಿಲ್ಲೆನೆ ಕೇಳ್ದೆನಿದನೆಂದ ॥೩೬॥

ಎನಲು ಕೋಪಕೃಶಾನು ಭೂಪನ ।
ತನುವನಾವರಿಸಿದುದು ಕೊಂದಾ ।
ದನುಜನನು ಬಿಜೀಕೈದಿದಪೆನೀನಾಕಲೋಕವನು ॥
ತನಗೆ ಸರಿಯಾರೆನುತ ಸೇನಾ ।
ವನಧಿಸಹಿತೈದಿದನು ದನುಜನೊ ।
ಳನುವರವ ತೊಡಗಿದನು ತಿಳಿಯದೆ ಶೂಲದತಿಶಯವ ॥೩೭॥

ಶೂಲಹಸ್ತನಿಳೀಶನನು ಬಲ ।
ಜಾಲಸಹಿತ ಮಹಾಯುಧಾಗ್ನಿಗೆ ।
ಬೀಳೆ ಶೌರ್ಯಾಟೋಪನೈದಿದನಾತ್ಮಮಂದಿರವ ॥
ಕೇಳಿದೈ ಶತ್ರುಘ್ನ ರಿಪುವನು ।
ನಾಳೆ ಕೊಂದಪೆ ಸಂಶಯವನುಜೆ ।
ತಾಳದಿರು ಮನದೊಳಗೆ ನೀನೆಂದೆನುತ ಮುನಿ ನುಡಿದ ॥೩೮॥

ಅಂದಿನಿರುಳನು ಕಳೆದು ದಶರಥ ।
ನಂದನನು ಮಱುದಿವಸವೆಸೆವರ ।
ವಿಂದಸಖನುದಯದಲಿ ಸಂಧ್ಯಾವಿಧಿಯನಾಚರಿಸಿ ॥
ಎಂದಿನಂತಮರಾರಿ ಕಾನನ ।
ವೃಂದಕೈದಿದ ಸಮಯದೊಳಗೈ ।
ತಂದು ನಿಂದನು ದೈತ್ಯನಗರದ್ವಾರದೇಶದಲಿ ॥೩೯॥

ಇಂತು ರಾಮಾವರಜನಮರಕು ।
ಲಾಂತಕನನಾಪುರವನುಜೆ ಹುಗ ।
ದಂತೆ ಮಾರ್ಗನಿರೋಧನಿರಲಾಸಮಯಕಮರಾರಿ ॥
ಅಂತವಿಲ್ಲದ ಸಿಂಹ ಸೈರಿಭ ।
ದಂತಿ ಶರಭವ್ಯಾಘ್ರವೆನಿಪಿವ ।
ನಾಂತು ನಡೆಯುತ ಕಂಡನುರುಕೋದಂಡಪಂಡಿತನ ॥೪೦॥

ಈತನಾರಸುರಾಂತಕನೊ ಪುರು ।
ಹೂತನೋ ವಹ್ನಿಯೊ ಕೃತಾಂತನೊ ।
ಯಾತುಧಾನನೊ ವರುಣನೋ ಪವನನೊ ಧನೇಶ್ವರನೋ ॥
ಘಾತಿಸದೆ ಬಿಡನೆನುತ ದಿತಿಸಂ ।
ಜಾತನಿಳುಹಿದನಖಿಲಮೃಗಸಂ ।
ಘಾತವನು ನುಡಿಸಿದನು ನೀನಾರೆನುತ ರಾಘವನ ॥೪೧॥

ಆದೊಡೆಲವೊ ನಿಶಾಟ ದಶರಥ ।
ಮೇದಿನೀಶನ ಸೂನು ದಶಶಿರ ।
ಸೂದನನನಮರಾರಿಕುಲಕುಲಶೈಲಭೇದನನ ॥
ಸೋದರನು ಶತ್ರುಘ್ನನೆಂಬುದು ।
ಮೇದಿನೀಜನವೆನ್ನ ನಿನ್ನೊಳು ।
ಕಾದಲೈದಿದೆನಾಂಪೊಡೆನಗಿದಿರಾಗು ಬೇಗೆಂದ ॥೪೨॥

ಎನಲು ಗಹಗಹಿಸುತ್ತ ನಕ್ಕನು ।
ದನುಜನೆಂದನು ಕೇಳೆಲವೊ ಹುಲು ।
ಮನುಜ ನೀನೆನಗಿದಿರೆ ಬಗೆವೆನೆ ಧಿಟ ಸುರಾಸುರರ ॥
ಎನಗೆ ತಿನಿಸಿಂಗಾದೆ ನೀನೆಂ ।
ದೆನುತ ಸುರರಿಪು ಮುಟ್ಟೆ ಬರೆ ಬರೆ ।
ಮೊನೆಗಣೆಗಳಿಂದಿಸುತವನ ಮಸಕವನು ಮಾಣಿಸಿದ ॥೪೩॥

ಕೂಡೆ ಕಲ್ಮಳೆಗಱೆದನದು ಕೈ ।
ಗೂಡದಿರೆ ಮರಗಳಲಿ ಮುಸುಕಿದ ।
ನಾಡಲೇನದನೆಲ್ಲವನು ತರಿದೊಟ್ಟಿ ಖಾತಿಯಲಿ ॥
ಈಡಿರವ ಕಣೆಗಳಲಿ ವಕ್ಷವ ।
ತೋಡಿದನು ಬಿಸಿಬಿಸಿಯು ಕೆಂಬೊನ ।
ಲೋಡೆ ರಾಘವನೆಚ್ಚ ದೈತ್ಯಾಧಮನಸಾವಿಯಲಿ ॥೪೪॥

ಮುರಿದು ಹೆಮ್ಮರದಿಂದ ದಾನವ ।
ನೆಱಗೆ ದಶರಥನಂದನನು ಮೈ ।
ಮಱೆದು ನಿಮಿಷಕೆ ಚೇತರಿಸಿಕೊಂಡೆದ್ದು ಕೋಪದಲಿ ॥
“ ತೊಱೆದನಸುವನು ನೆತ್ತರನು ಚೆ ।
ಪ್ಪರಿದು ಸುರಿದಪೆನೆ”ನುತಲುಱೆ ಬಾ ।
ಯ್ದುಱೆದು ಬರ್ಪ ವಿಲಾಘವಮಗೆ ತೊಟ್ಟನು ಮಹಾಶರವ ॥೪೫॥

ಹಿಳುಕ ಮಂತ್ರಿಸಿ ಬಿಲ್ಲೆದೆಗೆ ಮೈ ।
ವಳಿಸಿದನಿತಕೆ ಶರಮುಖಾಗ್ನಿಯು ।
ಝಳದ ಸೆಗಳಿಕೆ ಧಾತುಗಿಡಿಸಿತು ಸಕಲಲೋಕಗಳ ॥
ನಳಿನಭವಮುಖ್ಯಾಮರಾವಳಿ ।
ಯುಳುಕಿ ದೆಸೆದೆಸೆಗೋಡಿದುದು ಕುಂ ।
ಡಳಿತಕಾರ್ಮುಕನೆಚ್ಚ ನಸುರಾಧಮನ ಬೀಱಿನುತ ॥೪೬॥

ಬಗಿದು ದೈತ್ಯನ ಪೇರುರವ ಥ ।
ಟ್ಟುಗಿದು ಧರಣಿಯುನೊದೆದು ಶಿಖಿ ಭುಗು ।
ಭುಗಿಸಿ ತಾಗಿ ರಸಾತಳವ ಮುಗುಳ್ಚಿದಿ ರಾಘವನ ॥
ಬಿಗಿದ ಮಣಿಬತ್ತಳಿಕೆಯೊಳು ಹು ।
ತ್ತೊಂಗುವ ಫಣಿಪತಿಯುಂತೆ ಹೊಕ್ಕುದು ।
ಹೊಗರಲಗು, ಗಿರಿಯುಂತೆ ಧರೆಗುರುಳಿದನು ಸುರವೈರಿ ॥೪೭॥

ಬಱಿಕ ನಿರ್ಜರನಾರಿಯುರು ಪರಿ ।
ಮಳಿಪ ಸುಮನೋವೃಷ್ಟಿಗಳ ರಘು ।
ಕುಲನ ಮೇಲೊಗಿಸಿದರು ಸುರದುಂಧುಭಿಗಳಭ್ರದಲಿ ॥
ಮೊಱಗಿದುದು ಮೆಚ್ಚಿದರು ಸುಮನಸ ।
ರೆಲೆ ಕಕುತ್ಸ್ಥಜ ಕೇಳು ವರಗಳ ।
ನೊಲಿದುದನು ಕೊಟ್ಟಪೆವೆನಲು ಶತ್ರುಘ್ನನಿಂತೆಂದ ॥೪೮॥

ಕರುಣಿಪುದು ನೀವೆನಗೆ ಮಧುಪುರ ।
ದರಸುತನವನು ತದ್ವಿಷಯ ಸೌಂ ।
ದರಿಯ ಸಸ್ಯೋರಾಶ್ಚಿವಿಕ್ಷೇಪಸಪ್ರಯುಕ್ತಕದ, ॥
ತರಣಿವಂಶಲಲಾಮರಾಮನ ।
ಚರಣಸೇವೆಗೆ ಚಿತ್ತವಲಸದ ।
ಪರಿಯುನಿದನೆನಲಸ್ತುವೆನುತ್ತೈದಿದರು ಸುಮನಸರು ॥೪೯॥

ಕರೆಸಿ ನಿಜಬಲದೊಡನೆ ಹೊಕ್ಕನು ।
ಹರುಷದಲಿ ತತ್ಪುರವರವನಾ ।
ಪುರದ ಪರಿಯುಹುದರ್ಧಚಂದ್ರಾಕೃತಿಯು ಸೊಗಸಿನಲಿ ॥
ಪರಮಪಾವನೆಯೆನಿಪ ಯಮುನಾ ।
ವರನದಿಯ ತೀರದಲಿ ಮಧುರಾ ।
ಪುರಿಯೆನಿಪ ಪೆಸರಾದುದತಿಮಾಧುರ್ಯಗುಣಗಳಲಿ ॥೫೦॥

ಆಪುರದ ಸಿರಿಗರಸನೆನಿಸಿ ಮ ।
ಹಾಪರಾಕ್ರಮಿ ರಾಘವಾನುಜ ।
ನಾಪುರದೊಳೀರಾಱು ವತ್ಸರವಿರ್ದು ರಾಘವನ ॥
ಶ್ರೀಪದಾಂಬುಜದರ್ಶನೋತ್ಸವ ।
ಕಾಪೊಱಲ ಪೊಱಮಟ್ಟು ಬಂದನು ।
ತಾಪಸಾಗ್ರಣಿಯೆನಿಪ ಮುನಿ ವಾಲ್ಮೀಕಿಯಾಶ್ರಮಕೆ ॥೫೧॥

ಚರಣಕೆಱಗಿದ ನೃಪನನಾಮುನಿ ।
ಹರಸಿದನು ಹೊಗಳಿದನು ಲವಣಾ ।
ಸುರನನೆಕ್ಕಟಿ ಗೆಲಿದೆ ದೈವಾಧೀನದಲಿ ನೃಪತಿ ॥
ಧುರದೊಳಳಿದರು ಸಕಲಪೃಥ್ವೀ ।
ಶ್ವರರು ದೈತ್ಯನ ಕೆಣಕಿ ಸಾಕ್ಷಾ ।
ತ್ಪರಮಪುರುಷಾಂಶಸ್ವರೂಪರಿಗಾಪ್ಪುದರಿದೆಂದ ॥೫೨॥

ಎಂದು ಮುನಿ ಕೊಂಡಾಡಿ ದಶರಥ ।
ನಂದನನನಾರಾತ್ರಿ ಬಹುವಿಧ ।
ದಿಂದ ಕಂದಫಲಾದಿಭೋಜನದಿಂದ ಸತ್ಕರಿಸಿ ॥
ಅಂದು ರಾಮಾಯಣದ ಕೃತಿಯನು ।
ಚೆಂದದಿಂದೋದಿಸಿ ಮನೋಮುದ ।
ದಿಂದ ಕಳಿದನು ರಾತ್ರಿಯನು ಮುನಿಸಂಗಸೌಖ್ಯದಲಿ ॥೫೩॥

ದಿನಪನುದಯದೊಳೆದ್ದು ಸಂಧ್ಯಾ ।
ವಿನುತ ಕರ್ಮವನೆಸಗಿ ಮುನಿಪದ ।
ವನಜಕಾನತನಾಗಿ ಬೀಳ್ಕೊಂಡಡರಿದನು ರಥವ ॥
ಜನಸಮೃದ್ಧಿಯೊಳೆಸೆವ ನಾನಾ ।
ಜನಪದಂಗಳ ಕಳೆದು ಹೊಕ್ಕನು ।
ಜನಮಯಾಂಭೋಧಿಯನಯೋಧಿಯನಖಿಲಗುಣನಿಧಿಯು ॥೫೪॥

ಬಂದು ರಾಘವಗೆಱಗಿ ಭರತಗೆ ।
ವಂದಿಸಿ ಸುಮಿತ್ರಾಸುತಗೆ ಮುದ ।
ದಿಂದ ಮಣಿದುಱೆ ಮುಕುಳಿತಾಂಜಲಿಯಾಗಿ ರಘುಪತಿಯ ॥
ಮುಂದೆ ನಿಂದಿರೆ ನೋಡಿ ನೃಪನಾ ।
ನಂದದಲಿ ಕೊಂಡಾಡಿದನು ಬಲು ।
ಹಿಂದ ಲವಣಾಸುರನ ಜಯಿಸಿದೆ ತಂದೆ ನೀನೆಂದ ॥೫೫॥

ದೇವರಡಿಗಳ ಕರುಣೆಯಿರಲೆನ ।
ಗಾವ ಘನವಿನನುದಿಸಲರ್ಕ ।
ಗ್ರಾವದುನ್ನತಿ ಬೇಱದಾವುದು ಬಲುಹು ತನಗೆನಲು ॥
ರಾವಣಾಂತಕನನುಜನನು ನಾ ।
ನಾವಿಧದೊಳುಪಚರಿಸಿ ಕೆಲದೊಳು ।
ಕೈವಿಡಿದು ಕುಳ್ಳಿರಿಸಿ ಬಱಿಕಿಂತೆಂದನುಚಿತದಲಿ ॥೫೬॥

ಬಲುಹಿನೊಳಗಾರ್ಜಿಸಿದ ರಾಜ್ಯವ ।
ಸುಲಿದು ಬಂದವರುಂಟೆ ಪಾರ್ಥಿವ ।
ಕುಲಕೆ ಸಹಜವಿದನುಜ ವೀರಾಸನವ ಬಲಿದಿಹುದು ॥
ನಿಲುವುದೈ ದಿನವೇಳು ನಮ್ಮಾಯು ।
ಬಳಿಕಯೊಳಲ್ಲಿಂ ಮೇಲೆ ರಾಜ್ಯವ ।
ಸಲಹಬೇಹುದು ನೀನಮರೆಯೆ ಹೋಗೆಂದನುಚಿತದಲಿ ॥೫೭॥

ಆದೊಡೊಳ್ಳಿತೆನುತ್ತ ರಾಮನ ।
ಪಾದಸೇವೆಯೊಳೇಳು ದಿನಗಳ ।
ನಾದರಿಸಿ ತಲೆವಾಗಿ ರಾಘವನಡಿಗಳಿಗೆ ಮಣಿದು ॥
ಹೋದನೈ ಶತ್ರುಘ್ನನಾಪುಟ ।
ಭೇದನಕೆ ಬಳಿಕಿತ್ತ ರಘುಪತಿ ।
ಸೋದರದ್ವಯದೊಡನೆ ಸಭೆಯೊಳಗಿರ್ದನೊಲವಿನಲಿ ॥೫೮॥

ಅಕ್ಷಯಾತ್ಮ ವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಘನವಕ್ಷ ।
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷ ಸುರಮುನಿರಕ್ಷ ಸುಜನಾ ।
ಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥೫೯॥

ಇಂತು ಹದಿನೈದನೆಯ ಸಂಧಿ.

---

## ಹದಿನಾರನೆಯ ಸಂಧಿ.

---

ಸೂಚನೆ॥ ತೆಗೆದು ಶಂಬುಕನಸುವ ವಿಪ್ರನ ।
ಮಗನ ರಕ್ಷಿಸಿ ರಾವಣಾಂತಕ ।
ನೊಗುಮಿಗೆಯ ಹರ್ಷದಲಿ ಕುಂಭೋದ್ಭವನ ಬೀಳ್ಕೊಂಡ ॥

ಪೇಳಿದನು ವಾಲ್ಮೀಕಿ ದಶಶಿರ ।
ಶೈಲಕುಲಿಶಾಯುಧನ ದುರಿತ ।
ವ್ಯಾಳವಿಷಗಾರುಡನ ರಘುಕುಲವಾರ್ಧಿಚಂದ್ರಮನ ।
ಲೀಲೆಯನು ಸುಜನಾಳಿಗಂಬುಜ ।
ಮಾಲೆಯನು ಮುಕ್ತಾಂಗನೆಯ ಕಿವಿ ।
ಸೋಲಿಸನು ಸಂಸ್ಕೃತಬುಧಾಮೃತಪೂರ್ಣಶಾಲೆಯನು ॥೧॥

ಓಲಗದೊಳಿರೆ ಮನುಕುಲೋರ್ವೀ ।
ಪಾಲನಾಸಮಯದಲಿ ತದ್ಭೂ ।
ಪಾಲನಿಲಯದ್ವಾರದೇಶದೊಳಾದುದದ್ಭುತದ ॥
ಬಾಲಮರಣಾಕ್ರಂದನಧ್ವನಿಯು ।
ಕಾಲಮರಣವನೈದಲಹುದೇ ।
ಬಾಲಕನೆ ಹಾಯೆಂಬ ತಜ್ಜನಪದದ ಭೂಸುರನ ॥೨॥

ಐದುವರುಷಕೆ ಮಗನು ಮರಣವ ।
ನೈದಿದನು ತನಗಿನ್ನು ಗತಿಯೆಂ ।
ತೈದುವುದು ಸುತಹೀನರಿಗೆ ವಾರ್ಧಕದೊ (ಳಕಟಕಟ!)॥
ಆದೊಡಾಗಲಿ ದುರಿತವೆನ್ನೊಳ ।
ಗೈದಿತೆಂಬೊಡದಿಲ್ಲ ರಾಘವ ।
ಮೇದಿನೀಶನ ದೆಸೆಯು ಪಾಪವಿದಾಗದಿರದೆಂದ ॥೩॥

ಬಿಡುವೆನೆನ್ನಯ ಹರಣವನು ಮಗ ।
ನೊಡನೆ ರಾಮನ ಮುಂದೆ ಮುನ್ನಿನ ।
ಪೊಡವಿಯಾಣ್ಮರೊಳುಂಟೆ ರಾಘವನಂತೆ ನಿರ್ದಯರು ॥
ಮಡಿದ ಮಗನನು ಕಂಡು ಜೀವವ ।
ಹಿಡಿವೆನೆಂತೆಂದೆಂಬ ವಿಪ್ರನ ।
ನುಡಿಗೆ ವಿಸ್ಮಯಚಿತ್ತನೊಲೆದನು ರಾಘವನು ಶಿರವ ॥೪॥

ಪರಮಮುನಿನಾರದ ವಸಿಷ್ಠಾಂ ।
ಗಿರ ಪರಾಶರ ಭಾರ್ಗವಾದ್ಯರ ।
ಚರಣಕಾನತನಾಗಿ ಬಿನ್ನಹಮಾಡಿ ಕೈಮುಗಿದು ॥
ಕರುಣದಲಿ ನೀವೆನೆಗೆ ತಥ್ಯವ ।
ನೊರೆಯಬೇಹುದು ಧರ್ಮವಿದು ಭೂ ।
ಸುರನ ಹೊಲ್ಲೆಹವೆಮ್ಮ ನೆಮ್ಮದೆ ಹೋಹುದಲ್ಲೆಂದ ॥೫॥

ಎಂದೊಡಾಮುನಿಗಳೊಳು ನಾರದ ।
ನೆಂದನತಿತಥ್ಯವನು ಕೃತಯುಗ ।
ದಂದು ಭೂದೇವರೆ ತಪೋನಿಷ್ಠೆಯಲಿ ವರ್ತಿಪರು ॥
ಸಂದಿಹುದಲಾ ಪದಚತುಷ್ಟಯ ।
ದಿಂದ ತದ್ಯುಗಧರ್ಮವದು ಕಳೆ ।
ಗುಂದುವುದು ಪಾರ್ಥಿವರು ತಪವಿರಲರಸ ಕೇಳೆಂದ ॥೬॥

ತ್ರೇತೆಯುಲಿ ಭೂದೇವಪಾರ್ಥಿವ ।
ಜಾತಿಗಳು ಸಮವೀರ್ಯರೆನಿಸಿ ಮ ।
ಹಾತಪವನಾಚರಿಸೆ ಪಾದತ್ರಯದೊಳೊಪ್ಪುವುದು ॥
ಖ್ಯಾತವಹ ರಾಜಸಮುಲೀಮಸ ।
ಜಾತಿ ವೈದಿಕಧರ್ಮವದಱೊಳು ।
ನೀತಿ ಜನಿಸದು ವೈಶ್ಯಜಾತಿಯೊಳರಸ ಕೇಳೆಂದ ॥೭॥

ದ್ವಾಪರದೊಳಾವೈಶ್ಯರಿರ್ಪರು ।
ತಾಪಸವ್ರತದಿಂದ ಯುಗವದು ।
ವೈಪರೀತ್ಯದೊಳಾಪದದ್ವಯದಿಂದ ವರ್ತಿಪುದು ॥
ಪಾಪಸಂಕರವಾಗಿ ಧರ್ಮದ ।
ರೂಪು ಸಲ್ಲದು ಶೂದ್ರಜಾತಿಗೆ ।
ಭೂಪ ತಪವದು ನೋಡೆ ಧರ್ಮವಿನಾಶಕರವೆಂದ ॥೮॥

ಕೌತುಕವಲಾ ! ರಾಮ, ಶೂದ್ರ ।
ವ್ರಾತವಾಕಲಿಯೊಳು ತಪೋನಿ ।
ಷ್ಣಾತರಾಗಿರುತಿಹರು ಧರ್ಮವದೇಕಪಾದದಲಿ ॥
ನೀತಿ ನಿಪುಣಾಶ್ರಯದೊಳಿಹುದೀ ।
ತ್ರೇತೆಯೊಳಗಾವೈಶ್ಯಶೂದ್ರ ।
ವ್ರಾತವಿರೆ ತಪದೊಳಗಕಾಲದೆ ಮರಣವಹುದೆಂದ ॥೯॥

ಪಾರ್ಥಿವೋತ್ತಮ ಕೇಳ್ ಪ್ರಜಾರ ।
ಕ್ಷಾರ್ಥಕಾಪ್ರಜೆ ನಿನಗೆ ಕೊಟ್ಟಪು ।
ದರ್ಥವನು ಕರೆದಾಱುಭಾಗದೊಳೊಂದು ಭಾಗವನು ॥
ಸಾರ್ಥವವರನು ಸಲಹಲವರಿ ।
ತೃರ್ಥವಲ್ಲದೊಡರಸ ನಿನಗೆ ನಿ ।
ರರ್ಥವಪ್ಪುದು ಪಾಪವೇಱು ವಿಚಾರಿಸಿದನೆಂದ ॥೧೦॥

ಅನುಡಿಗೆ ರಘುಪತಿ ಸುಮಿತ್ರಾ ।
ಸೂನುವಿನೊಳೆಂದನು ಮಹೀಸುರ ।
ಸೂನುವಿನ ದೇಹವನು ಜೀರ್ಣಿಸದಂತೆ ರಕ್ಷಿಪುದು ॥
ನೀನೆನುತ ಮುನಿಜನಕೆ ಮಣಿದು ವಿ ।
ಮಾನವನು ಮನದೊಳಗೆ ನೆನೆಯುಲ ।
ದೇನು ಚಿತ್ರವೊ ಒಂದುದಾರಾಘವನ ಸಮ್ಮುಖಕೆ ॥೧೧॥

ಆವಿಮಾನವನಡರಿ ರಾಘವ ।
ದೇವನಾಗಳೆ ಪಶ್ಚಿಮಾಶಾ ।
ಭೂವಲಯಕೈದಿದನು ನೋಡಿದನಖಿಳದೆಸೆದೆಸೆಯ ॥
ಜೀವಿಪುದು ತದ್ವರ್ಣಧರ್ಮದೊ ।
ಳಾವಿವಿಧ ಜನಜಾಲ ದುರಿತದ ।
ಠಾವನರಿಯದೆ ಬಡಗದೆಸೆಗೆಯ್ದಿದನು ಬೇಗದಲಿ ॥೧೨॥

ಆದೆಸೆಯನೀಕ್ಷಿಸಲು ಧರ್ಮದ ।
ಹಾದಿದಪ್ಪದೆ ನೀತಿಪದ್ಧತಿ ।
ಪೈದೆಗೆಯದಿರೆ ಕಂಡು ಮೂಡಣ ಕಡೆಗೆ ನಡೆಗೊಂಡು ॥
ಭೇದಿಸಲು ಕಾಲೋಚಿತದ ಮ ।
ರ್ಯಾದೆ ಮೀರದೆ ಸಕಲಜನವಿರ ।
ಲೈದಿದನು ತೆಂಕಣ ದೆಸೆಯನೀಕ್ಷಿಸುವೆನೆಂದೆನುತ ॥೧೩॥

ಬಳಿಕ ತೆಂಕಣದೆಸೆಗೆ ಬರೆ ಶೈ ।
ವಲಮಹೀಧರಮೂಲದುತ್ತರ ।
ದಿಳೆಯೊಳಗೆ ತಲೆಯೂರಿ ತಪದೊಳಗೊರ್ವನಿರೆ ಕಂಡು ॥
ತಿಳಿವೆನೀವಿಪರೀತವೃತ್ತಿಯ ।
ನೆಲೆಯನೆನುತೈತಂದು ನುಡಿಸಿದ ।
ನೆಲೆ ತಪಸ್ವಿಯಿದಾವ ತಪವಿದನರುಹಬೇಕೆಂದ ॥೧೪॥

ಭೂಸುರನೊ ಪಾರ್ಥಿವನೊ ವೈಶ್ಯನೊ ।
ರಾಸಿಗೊಳದ ಜಘನ್ಯನೋ ನೀ ।
ನೀಸು ಸಾಯಸಗೊಳಲಿದೇತಕೆ ಹುಸಿಯದುಸಿರೆನಗೆ ॥
ದಾಶರಥಿಯಾನೆನಲು ತಥ್ಯವಿ ।
ದೈಸೆ ಶಂಬುಕನೆಂಬ ಶೂದ್ರಜ ।
ನೀಶರೀರದೊಳಾನು ಸುರಪದವೈದಲಿಹೆನೆಂದ ॥೧೫॥

ಎನಲು ಕೂರಸಿಗೊಂಡು ದಶರಥ ।
ತನಯನಾತನ ಶಿರವನೀಕ್ಷಿಸು ।
ವನಿಮಿಷರು ಕೊಂಡಾಡೆ ಕಡಿದಿಳುಹಿದನು ನಿಮಿಷದಲಿ ॥
ಜನಪ ಮೆಚ್ಚಿದೆವಮರಲೋಕದ ।
ನೆನಹಿನಾತನ ಬಗೆಗೆ ಹರಿವನು ।
ನೆನೆದ ವರವನು ಬೇಡು ಕೊಟ್ಟಪೆವೆಂದರಪ್ಸರರು ॥೧೬॥

ಈವುದೊಳ್ಳಿತು ವರವನಾದೊಡೆ ।
ಜೀವಿಸಲಿ ಭೂಸುರನ ಮಗನೆನೆ ।
ಲಾವಿಬುಧರಾಡಿದರು ಪರಹಿತವಿದು ವಿಶೇಷವಲ ॥
ಆವಸಮಯದೊಳರಿದೆ ರಾಘವ ।
ದೇವ ಶಂಬುಕಶಿರವನಾಗಳೆ ।
ಜೀವಿಸಿದನವನೀಸುರಾತ್ಮಜನೆಂದರುಚಿತದಲಿ ॥೧೭॥

ಎಲೆ ಕಕುತ್ಸ್ಥಜ ಕೇಳಗಸ್ತ್ಯನು ।
ಜಲದೊಳಿರ್ದಿರ್ಪರಾಱು ವರುಷವ ।
ಕಳೆದನಾಮುನಿವರನ ದಿವ್ಯವ್ರತಸಮಾಪ್ತಿಯನು ॥
ಅಲಸದೀಕ್ಷಿಸೆ ಜನ್ಮಜನ್ಮದ ।
ಕಲುಷವಡಗುವುದಲ್ಲಿಗಪ್ಪರ ।
ಕುಲದೊಡನೆ ನೀಸ್ಯೆದಬೇಕೆಂದುದು ಸುರವ್ರಾತ ॥೧೮॥

ಎಂದೊಡೊಳ್ಳಿತ್ತೆಸುತ ದಶರಥ ।
ನಂದನನು ಸುರಕುಲದೊಡನೆ ನಡೆ ।
ತಂದನಾನಂದದಲಿ ಮೈತ್ರಾವರುಣಿಯಿದ್ದೆಡೆಗೆ ॥
ಬಂದ ವಿಬುಧವ್ರಜವನಾಮುನಿ ।
ಯಂದು ಪೂಜಿಸಿ ಬೀಳುಕೊಡೆಯಾ ।
ನಂದದಿಂದೈದಿದರು ರಾಘವನೈದಿದನು ಮುನಿಯ ॥೧೯॥

ಚರಣಕೆಱಗಿದ ನೃಪನನಾಮುನಿ ।
ಬರಸೆಳೆದು ಬಿಗಿಯಪ್ಪಿ ರಘುಭೂ ।
ವರ ಶುಭೋದಯವಕ್ಕೆ ನಿನಗವನೀಸುರಾತ್ಮಜನ ॥
ಹರಣವನು ರಕ್ಷಿಸಿದೆ ನಿನ್ನಯ ।
ದರುಶನಾಮೃತಪಾನವಜರಾ ।
ಮರತೆಯ ಕೊಡದಿಹಡೆ ನೇತ್ರಚಕೋರಯುಗಕೆಂದ ॥೨೦॥

ಎಂದು ಮುನಿ ಕೊಂಡಾಡಿ ರಾಘವ ।
ನಂದನನನೆಲೆ ರಾಮ, ಸಂಧ್ಯಾ ।
ನಂದನೆಯನಾಚರಿಸು ಸೂರ್ಯಾಸ್ತಮಯ ಸಮಯದಲಿ ॥
ಇಂದು ನಮ್ಮಾಶ್ರಮದೊಳಿರಬೇ ।
ಕೆಂದು ಕೃತಕರ್ಮಂಗೆ ಬಹುವಿಧ ।
ಕಂದಮೂಲಫಲಾದಿಭೋಜನದಿಂದ ಮನ್ನಿಸಿದ ॥೨೧॥

ವರಮುನೀಂದ್ರನ ಸಂಗಸುಖದೊಳ ।
ಗಿರುಳ ನೂಕಿದನರಸನನಿತಕೆ ।
ತರಣಿ ತಲೆದೋಱಿದನು ಪೂರ್ವಾಚಲಶಿಖಾಗ್ರದಲಿ ॥
ಧರಣಿಪತಿ ಸಂಧ್ಯಾವಿಧಿಯನಾ ।
ಚರಿಸಿ ಮುನಿ ಪೋದಪೆನನುಜ್ಞೆಯ ।
ಕರುಣಿಸುವುದೆನಗೆನಲಗಸ್ತ್ಯಮುನೀಂದ್ರನಿಂತೆಂದ ॥೨೨॥

ಆದೊಡೆಲೆ ರಘುನಾಥ ನಿಜಪುರ ।
ಕೈದೆನುತ ಕರುಣದಲಿ ರಾಘವ ।
ಮೇದಿನೀಶಗೆ ಕೊಟ್ಟನನುಪಮದಿವ್ಯಭೂಷಣವ ॥
ಆದರದೊಳಾಮಣಿವಿಭೂಷವ ।
ನಾದಿವಾಕರಕುಲಜನೆಲೆ ಮುನಿ ।
ಮೇದಿನಿಗೆ ಪೊಸತಿದಱ ವಿವರವನಱುಹಬೇಕೆಂದ ॥೨೩॥

ನೃಪತಿ ಕೇಳಿದು ವಿಶ್ವಕರ್ಮ ।
ಸ್ಥಪತಿನಿರ್ಮಿತವಾದ ಭೂಷಣ ।
ವಪರಿಮಿತವಸ್ತುಗಳನೀವುದು ಬಯಸಿದಂದದಲಿ ॥
ಉಪಮಿಸುವರಾರಿದನು ನಾನಾ ।
ವಿಪುಲರತ್ನಸಮೃದ್ಧಿ ಸಾಕ್ಷಾ ।
ದ್ವಪುಸನಾಥವಿದೆನಗೆ ಬಂದುದನಱುಹಿದಪೆನೆಂದ ॥೨೪॥

ಭೂತಳಾಧಿಪ ಕೇಳು ಹಿಂದಾ ।
ತ್ರೇತೆಯಲಿ ತಪವಿರ್ಪೆನೆಂದು ಮ ।
ಹಾತಪೋವನದೆಡೆಯನಱಸುತ ಪೋಪ ಸಮಯದಲಿ ॥
ಖ್ಯಾತವೆನೆ ನಿರ್ಮೃಗವಮಾನುಷ ।
ಜಾತವದು ಶತಯೋಜನಾಂತರ ।
ವಾತಪೋವನಮಧ್ಯಶೂನ್ಯಾಶ್ರಮವದೊಪ್ಪಿದುದು ॥೨೫॥

ಬೞಿಕ ಶೂನ್ಯಾಶ್ರಮದೊಳಿರುಳನು ।
ಕಳೆದು ಮಱುದಿನದುದಯದೊಳು ನಿ ।
ರ್ಮಳಸರೋವರವದು ತದಾಶ್ರಮದಗ್ರಭಾಗದಲಿ ॥
ನಳಿನಕೈರವರಾಜಿ ಯೋಜನ ।
ದಳತೆಯೊಳಗಿರೆ ಕಂಡು ತಳೆವಿಡಿ ।
ದಿೞಿವೆನೆಂಬವಸರಕೆ ಕಂಡನು ಕೌತುಕವನೆಂದ ॥೨೬॥

ಒಡನೆ ಮಾನುಷಕುಣಪವೊಂದಾ ।
ತಡಿಯೊಳತಿಮಾಂಸಳದೊಳಿರೆ ಬೞ ।
ಗಡಸಿಯಾನೀಕ್ಷಿಸುವ ಸಮಯಕೆ ಬಂದುದಾಯೆಡೆಗೆ ॥
ಸಡಗರಿಪ ಗಾಯಕರ ಗೇಯದ ।
ಗಡಣದಲಿ ಪುಷ್ಪಕವದೊಂದು ।
ಗ್ಗಡಿಪ ನಿರ್ಜರಪಾತಕರ ಜಯಜಯನಿನಾದದಲಿ ॥೨೭॥

ಬಂದನದಱೊಳಗೊರ್ವ ದೇವನ ।
ದೊಂದು ಸಂಭ್ರಮಯುತನು ಪುಷ್ಪಕ ।
ದಿಂದಿೞಿದು ಸಂಪೂರ್ಣವೆನೆ ಭಕ್ಷಿಸಿದನಾಶಬವ ॥
ಕುಂದದಿದ್ದುದು ನೋಡಲಾಶಬ ।
ವೆಂದಿನಂತಾಸ್ವರ್ಗಿ ಕೈದೊಳೆ ।
ದಂದು ಪುಷ್ಪಕಕಡರಲಾನಿಂತೆಂದೆನವನೊಡನೆ ॥೨೮॥

ಏನಿದದ್ಭುತವೆಲೆ ದಿವೌಕಸ ।
ನೀನೆಸಗಿದೀಕಾರ್ಯಗತಿಯನು ।
ಮಾನವಾಗಿಹುದೆನಗೆ ನಿರ್ಜರನೆತ್ತ ಶವವೆತ್ತ ॥
ಏನಿದೞ ವಿಪರೀತವೃತ್ತಿಯ ।
ನೀನುಸಿರ ಬೇಕೆನಲು ಕೈಮುಗಿ ।
ದಾನತಾನನನೆನ್ನೊಳೆಂದನು ತನ್ನ ಸಂಗತಿಯ ॥೨೯॥

ಆದೊಡೆಲೆ ಮುನಿನಾಥ ಚಿತ್ತೈ ।
ಸಾದಿಯಲಿ ಕೃತಯುಗದ ಭೂಪರೊ ।
ಳಾದನೊಬ್ಬ ಸುದೇವನೆಂಬ ವಿದರ್ಭಭೂಭುಜನು ॥
ಮೇದಿನಿಯನಾಳಿದನು ಧರ್ಮದ ।
ಹಾದಿದಪ್ಪದೆ ಕಾಲಧರ್ಮವ ।
ನೈದಿದನು ಚಿರಕಾಲವಿರ್ದಾನೃಪತಿ ಬೞಿಕೆಂದ ॥೩೦॥

ಆತಗಿರ್ವರು ಮಕ್ಕಳಾಸೇ ।
ಶ್ವೇತನೆಂಬವನಾನೃಪನ ತನು ।
ಜಾತರಿರ್ವರೊಳಗ್ರಜನು ಸುರಥನೆ ಕನೀಯನಲ ॥
ಭೂತಳಾಧಿಪನೞಿಯೆ ಪುರಜನ ।
ಜಾತವೆನಗಭಿಷೇಕವನು ವಿ ।
ಖ್ಯಾತವೆನೆ ಮಾಡಿದುದು ರಾಜ್ಯವದಾದುದೆನಗೆಂದ ॥೩೧॥

ಸಲಹಿದೆನು ರಾಜ್ಯವನು ಧರ್ಮದ ।
ಹೊಲಬುದಪ್ಪದೆ ಕಾಲಧರ್ಮದ ।
ನೆಲೆಯಱಿದು ತದ್ರಾಜ್ಯಭಾರವ ನಿಲಿಸಿ ಸುರಥನಲಿ ॥
ಬಳಿಕ ತಪದೊಳು ನಿಂದೆನೀವನ ।
ವಳಯದೀಕಾಸಾರತಟದೊಳು ।
ಕಲುಷವುಱದಾಬ್ರಹ್ಮಲೋಕವದಾದುದೆನಗೆಂದ ॥೩೨॥

ಆದುದೆನಗಾಬ್ರಹ್ಮಲೋಕವ ।
ನೈದಿದೊಡವಾಕ್ಷುತ್ಪಿಪಾಸಾ ।
ಬಾಧೆ ವಿಸ್ಮಿತಚಿತ್ತನೈದಿದೆನಾಪಿತಾಮಹನ ॥
ಈದುರಿತವೀಬ್ರಹ್ಮಲೋಕದೊ ।
ಳಾದವುದು ಪರಿಹರಿಪುದಿದನೆನ ।
ಲಾದಯಾಂಬುಧಿ ವಿಧಿ ನುಡಿದನೆನಗೊಂದು ಕೌತುಕವ ॥೩೩॥

ಎಲೆ ನೃಪತಿ ನಿನ್ನಯ ಶರೀರವ ।
ಸಲಹುವುದೆ ತಪನೆಂದು ಮನದೊಳು ।
ತಿಳಿದೆ ನಿನಗಾಹಾರವಾಮಾನುಷಶರೀರವದು ॥
ಕಳೆವುದರಿದೈ ದೈವಕರ್ಮವ ।
ನಿಳೆಯೊಳೆನೆ ಕೈಮುಗಿದು ನುಡಿದೆನು ।
ನಳಿನಭವನೊಡನಿದಕೆ ಬಿಡುಗಡೆಯೆಂದು ತನಗೆನುತ ॥೩೪॥

ಆದೊಡಾಲಿಸು ಧರಣಿಪತಿ ನೀ ।
ನಾದಿಯಲಿ ತಪವಿದ್ದ ಕಾನನ ।
ಕೈದಿ ಮೈತ್ರಾವರುಣಿ ನಿನ್ನೊಳು ನುಡಿಯುವಾದಿನಕೆ ॥
ಪೋದವುದು ನಿನಗೀಕ್ಷುಧಾಸವಿ ।
ಪಾದವಾಮುನಿವರನ ದೆಸೆಯಿಂ ।
ದಾದರದೊಳಾಮುನಿಯನರ್ಚಿಸಲೈದು ನೀನೆಂದ ॥೩೫॥

ಆಪಿತಾಮಹನೆಂದವೊಲು ಮುನಿ ।
ರೂಪ ಶಂಕರ ನಿಮ್ಮ ಪುಣ್ಯ ।
ಶ್ರೀಪದಾಂಬುಜದರ್ಶನದ ಸೈಪಾದುದಿಂದೆನಗೆ ॥
ತಾಪಸಾಗ್ರಣಿ ಭೂಷಣವನಿದ ।
ನೀಪರಿಗ್ರಹಿಸಿದೊಡೆ ಪೋದಪು ।
ದೀಪುರಾಕೃತಪಾಪವೆನುತೆಱಗಿದನು ಚರಣದಲಿ ॥೩೬॥

ಆದಿವಾಕಸನೆಱಗಲೆನ್ನಡಿ ।
ಗಾದುದಿವನೊಳಗತಿಕರುಣವೆನ ।
ಗಾದೊಡೊಳ್ಳಿತೆನುತ್ತ ಕೈಕೊಂಡೆನು ವಿಭೂಷಣವ ॥
ಆದುದಾತಗೆ ತಣಿವದೃಶ್ಯವ ।
ನೈದಿದುದು ಶಬವೆನ್ನ ಬೀೞ್ಕೊಂ ।
ಡೈದಿದನು ಸುರಲೋಕಕವನವನೀಶ ಕೇಳೆಂದ ॥೩೭॥

ಇದು ಕಣಾ! ರಾಜೇಂದ್ರ, ನಾಕಾ ।
ಸ್ಪದವಿಭೂಷಣವೇನ ಬೇಡಲು ।
ಮೊದಲಿವುದು ಕೈಕೊಳ್ಳಬೇಕಿದನೆಂದು ಮುನಿ ನುಡಿಯೆ ॥
ಮುದವೊದವೆ ಕೈಕೊಂಡು ತೇಜಃ ।
ಪ್ರದವೆನಿಪ ಮಣಿಮಯವಿಭೂಷವ ।
ನದನಗಸ್ತ್ಯಮುನೀಂದ್ರನೊಡನಿಂತೆಂದನಾ ರಾಮ ॥೩೮॥

ಮುನಿಪ ಶೂನ್ಯಾರಣ್ಯವಾಶ್ವೇ ।
ತನ ತಪೋವನವಾದುದೇತಕೆ ।
ಮನವದೂರ್ಜಿತವಾಗಲದನೆನಗುಸಿರಬೇಕೆನಲು ॥
ಜನಪ ಕೇಳ್ಳೆ ಪೂರ್ವಯುಗದೊಳು ।
ಮನುತನುಜನಿಕ್ಷ್ವಾಕುನೃಪನಿ ।
ರ್ದನು ಯಥಾನ್ಯಾಯದಲಿ ದಂಡಿಸುತುರ್ವರೆಯ ಜನವ ॥೩೯॥

ಆತನೊಳಗುದಿಸಿದರು ಶತಸಂ ।
ಖ್ಯಾತತನುಭವರವರೊಳಗೆ ದು ।
ರ್ನೀತನಿದ್ದನು ದಂಡನೆಂಬವನಗ್ರತನುಭವನು ॥
ಭೂತಳಾಧಿಪನಱಿಯೆ ರಾಜ್ಯವಿ ।
ಭೂತಿ ದಂಡನ ಪೃಥುಭುಜಾಗ್ರನಿ ।
ಶಾತಖಡ್ಗವನೊಲಿದಲಂಕರಿಸಿದುದು ಬೞಕೆಂದ ॥೪೦॥

ಇಂತು ಶೈವಲ ವಿಂಧ್ಯಗಿರಿ ಪ ।
ರ್ಯಂತ ಶತಯೋಜನದಿಳೆಗೆ ಮಧು ।
ಮಂತಪುರವಾಧಾರವಾಪುರಕರಸನೆಂದೆನಿಸಿ ॥
ಸಂತತ ಪ್ರಜ್ಞಾನನಿಧಿ ಶ್ರೀ ।
ಕಾಂತನಹ ಭಾರ್ಗವಮುನೀಂದ್ರನಿ ।
ಶಾಂತಪೌರೋಹಿತ್ಯದಲಿ ಪಾಲಿಪನು ಜನಪದವ ॥೪೧॥

ಜನಪನೆಲ್ದಿದನೊಮ್ಮೆ ಭಾರ್ಗವ ।
ಮುನಿಪನಿಲ್ಲದ ವೇಳೆಯುಲಿ ತ ।
ನ್ನನಿಪನಾಶ್ರಮಭೂಮಿಯನು ಮೃಗಯಾಪಿನೋದದಲಿ ॥
ಅನಿತರೊಳು ತಪವಿರ್ದ ಭಾರ್ಗವ ।
ತನುಭವೆಯುಳನು ಜನಪ ಕಂಡನು ।
ಮನವನೆಡೆಗೊಟ್ಟನು ಮನೋಜನ ನನೆಯ ಮೊನೆಗಣೆಗೆ ॥೪೨॥

ಬಿಸಜಮುಖಿ ನೀನಾರು ನಿನ್ನಯ ।
ಪೆಸರದಾವುದದಾರ ಮಗಳೆನ ।
ಗುಸಿರು ದರ್ಪವನೊದವಿಸದೆ ದರ್ಪಕಮಹಾಭುಜಕೆ ॥
ಕುಸುಮಶರಹತಿಯೆನಗೆ ಪೋದಪು ।
ದಸು ಲತಾಂಗಿ ತವಾಧರಾಮೃತ ।
ರಸವನಿತ್ತುಳುಹೆನ್ನನೆನಲಿಂತೆಂದಳವಸೊಡಸೆ ॥೪೩॥

ಅರಸ ಬಯಸದಿರಾನು ಭಾರ್ಗವ ।
ವರಮುನೀಂದ್ರನ ಕನುಜೆ ಪೆಸರೆನ ।
ಗರಜೆ ಗುರುಸುತೆಗಳುಪುವುದು ದ.ರ್ಜನರ ಮಾರ್ಗವಿದು ।
ವರಿಸು ಭಾರ್ಗವಮುನಿಯೊಳೆನ್ನನು ।
ಪರಿಣಯೋದ್ಯಮಬುದ್ಧಿ ಮನಕಿರೆ ।
ಪರಮಸುಖ ನಿನಗಪ್ಪುದೆಂದಳು ವಿನಯವಚನದಲಿ ॥೪೪॥

ನೀತಿಗೀತಿಯ ಮಾತು ಚೇತೋ ।
ಜಾತಮತದೊಳಗಾದಪುದೆ ದು ।
ರ್ನೀತನವನಾದಿಯಲಿ ಕಾಮೋನ್ಮಾದಿ ಬಳಿಕೆನಲು ॥
ಪಾತಕವನೆಣಿಸುವನೆ, ಬಲುಹಿಂ ।
ದಾತರುಣಿಯನು ಕೂಡಿದನು ಕಾ ।
ಮಾತುರರಿಗಿಹಪರವದೆತ್ತಣದರಸ ಕೇಳೆಂದ ॥೪೫॥

ತಿರುಗಿದನು ಮಧುಮಂತಪುರವರ ।
ಕರಸ ದುರ್ಮತಿ ದಂಡನೃಪನಿ ।
ತ್ತರಜೆ ಪೂರ್ಣರಜೋಮಯಾಂಗದೊಳಿರ್ಪ ಸಮಯದಲಿ ॥
ಪರಿವೃತಾಂತೇವಾಸಿಗನು ನಡೆ ।
ತರಲು ತನ್ನೊಡನಾಗ ದೈತ್ಯರ ।
ಗುರು ಬರುತ ಕಂಡನು ರಜಃಪ್ಲುತಯುತೆಯನಾತ್ಮಜೆಯ ॥೪೬॥

ಕಂಡು ತನುಜೆಯು ಮೊಗದ ದುಗುಡವ ।
ದಂಡನೆಸಗಿದ ಕಾರ್ಯವಿದು ಕಡೆ ।
ಗಂಡುದಕಟಕಟಾತ್ಮಜೆಯು ಪಾವನತಪೋಮಹಿಮೆ ॥
ಗಂಡಗರ್ವದಿನೀತನೆನ್ನೊಳು ।
ಚಂಡವರ್ತನದಿಂದ ಮೆಱೆದಪ ।
ನುಂಡೊಡಲ್ಲದೆ ಒಱದೆ ಹೋಹುದೆ ಕರ್ಮಫಲವೆಂದ ॥೪೭॥

ಏೞುದಿನದಿಂದೊಳಗೆ ನೆರೆಯುಲಿ ।
ದೂಳಿ ಮಳೆಯುಲಿ ದಂಡನರಪತಿ ।
ಯಾಳುತಿಹ ಶತಯೋಜನಾಂತರ್ದೇಶವವನೊಡನೆ ॥
ಕೇಳು ಶಾಪವಸರಜೆ ತಪದೊಳು ।
ಕಾಲವನು ಕಳೆಯೆನುತ ತನುಜೆಗೆ ।
ಪೇೞುವನಿತಕೆ ಪಾಂಸುವರ್ಷದೊಳದ್ದುದಾವಿಷಯು ॥೪೮॥

ಆದು ಮೊದಲಿನಿಂ ದಂಡಕಾರ ।
ಣ್ಯದಲಿ ನಿರ್ಮಾನುಷ್ಯವಾಗಿಹು ।
ದದು ಜನಾರಣ್ಯಾಭಿಧಾನದೊಳೊಮ್ಮೆ ವರ್ತಿಪುದು ॥
ಆದಱೊಳಗೆ ತಪವಿರಲು ಮಹಿಮಾ ।
ಸ್ಪದಮುನೀಂದ್ರರು ರಾಮ ನಿನಗ ।
ಭ್ಯುದಯವಾಗಲಿ ಹೋಗೆನುತ ಬೀೞ್ಕೊಟ್ಟನಾಮುನಿಪ ॥೪೯॥

ಬೀೞುಕೊಂಡು ಮುನೀಂದ್ರನನು ಭೂ ।
ಪಾಳನೈದಿದನಂದಯೋಧ್ಯೆಗೆ ।
ಪೇೞಲೇನಾಪುರದ ಪರಿಜನದೊಂದು ಸಂಭ್ರಮವ ॥
ಲೀಲೆ ಮಿಗೆ ಪುಷ್ಪಕವನಿೞಿದು ನೃ ।
ಪಾಲನಿಳಯದೊಳಾವಿಮಾನವ ।
ಪೇೞುಕೊಟ್ಟೋಲಗದೊಳಗೆ ಮಂಡಿಸಿದನಾರಾಮ ॥೫೦॥

ಚರಣಕೆಱಗಿದ ಸೋದರರನಾ ।
ದರಿಸಿ ವಂದಿಸಿ ಮುನಿಜನಕೆ ದು ।
ಶ್ಚರಿತ ಶಂಬುಕನಿದ್ದಿರವನವನಸುವನಿಕ್ಕಿದುದ ॥
ಸುರರೊಡನೆ ನಡೆಗೊಂಡಗಸ್ತ್ಯರ ।
ದರುಶನವ ಮಾಡಿದುದನಾಮುನಿ ।
ವರನ ಬೀೞ್ಕೊಂಡಂದವನು ಪೇೞಿದನು ರಘುನಾಥ ॥೫೧॥

ಅಕ್ಷಯಾತ್ಮ ವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷಸುರಮುನಿರಕ್ಷ ಸುಜನಾ ।
ಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥೫೨॥

ಇಂತು ಹದಿನಾಱನೆಯ ಸಂಧಿ.

---

## ಹದಿನೇೞನೆಯ ಸಂಧಿ.

ಸೂಚನೆ ॥ ಇರದೆ ಲಕ್ಷ್ಮಣನಿಂದ ವೃತ್ರಾ ।
ಸುರನ ಕದನವನಱಿದು ರಾಘವ ।
ನೊರೆದನಿಳನ ಮಹಾಶ್ವಮೇಧವಿಧಾನಕೌತುಕವ ॥

ಪೇೞಿದನು ವಾಲ್ಮೀಕಿ ನೃಪಶಾ ।
ರ್ದೂಲರಾಘವ ಚರಿತವನು ಬಂ ।
ದೋಲಗದೊಳೊಪ್ಪಿದನು ಮಣಿಮಯಸಿಂಹಪೀಠದಲಿ ॥
ಮೇಲೆಮೇಲೈತಪ್ಪ ಪುರಜನ ।
ಜಾಲವನು ಮನ್ನಿಸುತ ಧರ್ಮಕ ।
ಥಾಳಿಗಳನಾಲಿಸುತ ಪೂರ್ವಪುರಾಣಪದ್ಧತಿಯ ॥೧॥

ಹರೆದುದೋಲಗವನಿತಱೊಳು ಭಾ ।
ಸ್ಕರಕುಲೇಂದ್ರನ ವೈರಿ ವಿಜಯದ ।
ಪರಿಸಮಾಪ್ತಿಯೊಳೊಲಿದು ಗಗನಶ್ರೀ ನಿವಾಳಿಸುವ ॥
ಅರುಣದ ಸಸಮ್ಮಿಳಿತಮಣಿಬಂ ।
ಧುರದ ನೀರಾಜನದ ಪಾತ್ರದ ।
ಪರಿಯೆನಲು ರವಿ ಮುಳುಗಿದನಸ್ತಾಚಲಾಗ್ರದಲಿ ॥೨॥

ಕಾಲಧರ್ಮವನಱಿದು ನೃಪಕುಲ ।
ಮೌಳಿ ಸಂಧ್ಯಾಕರ್ಮವನು ತ ।
ತ್ಕಾಲಿಕವನಾಚರಿಸಿ ಲಕ್ಷ್ಮಣಭರತರೊಡಗೂಡಿ ॥
ಲೀಲೆ ಮಿಗೆ ನಡೆತಂದು ಮಂತಣ ।
ಸಾಲೆಯೊಳು ಮಣಿಖಚಿತಪೀಠದ ।
ಮೇಲೆ ಕುಳ್ಳಿರ್ದನುಜರೊಡನಿಂತೆಂದನುಚಿತದಲಿ ॥೩॥

ಉಱಿದನೆಮ್ಮಯ ಪುಣ್ಯದಲಿ ಮು ।
ನ್ನಱಿದ ಭೂಸುರಮತನು ಧರ್ಮವ ।
ನಱುಹುವುದೆ ಕರ್ತವ್ಯವೀಮಾನುಷಶರೀರವಿದು ॥
ಅಱಿವುದೆಂಬುದು ತಥ್ಯವಿದಱೊಳು ।
ಒಳಿಸ ಬೇಹುದು ಧರ್ಮಸೇತುವ ।
ನಿಱೆಕೆಗೆಯ್ಯುದಿರೆಮ್ಮ ವಚನವನೆಂದು ನೃಪ ನುಡಿದ ॥೪॥

ಧರೆಗೆ ಪೊಸತೆನೆ ರಾಜಸೂಯಾ ।
ಧ್ವರವನೆಸಗುವೆನೀಮಹಾಧ್ವರ ।
ವರವಲೇ ದ್ವಿಜರಾಜಪದವಿತ್ತುದು ಸುಧಾರುಚಿಗೆ ॥
ವರುಣನಾದನು ಮಿತ್ರನಿದನಾ ।
ಚರಿಸಿ ನಿಮ್ಮಯ ಬುದ್ಧಿಗಿದು ಸರಿ ।
ಬರೆ ನೆಗಳ್ಚುವೆನುಸಿರಿ ಸಂಶಯವಿದೋಡಿದಕೆಂದ ॥೫॥

ಎನಲು ನುಡಿದನು ಭರತನೆಲೆ ರಘು ।
ತನುಜ ಚಿತ್ತೈಸಖಿಲಪಾರ್ಥಿವ ।
ಜನಕೆ ಗುರು ನೀನೆನಿಸಿ ಸಲಹಿದೆ ಸಕಲಭೂತಲವ ॥
ಇನಿತು ದಿನವೀಯಾಗಕಾನೃಪ ।
ಹನನವಾಗದೆ ಮಾಣದಿದಱೊಳು ।
ಜನಪ ಮಾಡುವೊಡಶ್ವಮೇಧವನೆಸಗು ನೀನೆಂದ ॥೬॥

ಎಂದ ಭರತನ ನುಡಿಗೆ ನೃಪನಹು ।
ದೆಂದು ಕೊಂಡಾಡಿದನು ಲಕ್ಷ್ಮಣ ।
ನಂದು ಹೊಗಳ್ದನಗ್ರಜನ ಮೃದುಮಧುರಭಾಷಿತಕೆ ॥
ಹಿಂದೆ ವೃತ್ರಾಸುರನ ಕೊಂದು ಪು ।
ರಂದರನು ತದ್ಬ್ರಹ್ಮಹತಿಯೊಳು ।
ನೊಂದು ಮಾಡಿದನಶ್ವಮೇಧವನರಸ ಕೇಳೆಂದ ॥೭॥

ಏನನೆಂಬೆನು ರಘುಕುಲಾಂಬರ ।
ಭಾನು ಪೂರ್ವದೊಳೊರ್ವನಿರ್ದನು ।
ದಾನವೇಶ್ವರನತಿಪರಾಕ್ರಮಿವೃತ್ರನೆಂಬುವನು ॥
ಆನಿಶಾಟನ ಭುಜಪರಾಕ್ರಮ ।
ಕಾನುವವರಿಂದಿರಿಲ್ಲದಿರ್ದುದು ।
ಮಾನವಾಮರನಾಗಲೋಕದ ಸುಭಟರೊಳಗೆಂದ ॥೮॥

ನೂಱುಗಾವುದದಗಲವದು ಮು।
ನ್ನೂಱುಗಾವುದದುದ್ದಳತೆಗೆ।
ತೋಱುವುದು ದಾನವನ ತನುವನದೇನನುಸಿರುವೆನು ॥
ಮೂಱುಲೋಕದ ಜನಕೆ ಸುಖವನು।
ಬೀಱುವನು ಧರ್ಮದಲಿ ಮನ ಬೇ।
ರೂಱಿಹುದು ಭುವನೈಕಸಮ್ಮತನಸುರನಿಹನೆಂದ ॥೯॥

ಅನಿಶಾಟೋತ್ತಮನು ಧರ್ಮ।
ಧ್ಯಾನಮತಿ ಸುಖಕೆಳಸಿ ರಾಜ್ಯಾ।
ಧೀನವನು ನಿಜತನುಜನಹ ಮಘನೇಶ್ವರನೊಳಿರಿಸಿ ॥
ಕಾನನದೊಳೆಸಗಿದನು ಮುಕ್ತಿ।
ಧ್ಯಾನದಲಿ ತಪವನು ತಪೋವೈ।
ಶ್ವಾನರಜ್ವಾಲೆಯೊಳು ಕಾದುದು ಸಕಲಭುವನಚಯ ॥೧೦॥

ವಾಸವಾದಿ ಸಮಸ್ತಸುಮನಸ।
ರಾಸುರಾರಿಯು ತಪದ ಕೋಳ್ಗೆ ವಿ।
ಘಾಸಿಯಾಗಿ ವಿಷಾದಮನರೆಯ್ದಿದರು ಬೇಗದಲಿ।
ಶ್ರೀಸನಾಥನನಪ್ರಮೇಯನ।
ನಾಸುಪರ್ಣಸ್ಯಂದನನನಬ್ಜಾ।
ಸನಾರ್ಚಿತಪಾದಪಂಕೇರುಹನನಚ್ಯುತನ ॥೧೧॥

ಅಂದು ಜಯಯೆನುತೆಱಗಿದರು ಸಂ।
ಕ್ರಂದನಾದ್ಯನಿಮಿಷರು ದೇವ ಮು।
ಕುಂದ ರಕ್ಷಿಸು ನತಜನಾಂಬುಜಭಾನು ಸುರಧೇನು ॥
ಬೆಂದಪುದು ವೃತ್ರಾಸುರನ ತಪ।
ದೊಂದು ತೀವ್ರಾನಲನ ಸೆಗಳಿಕೆ।
ಯಿಂದ ಸುಮನಸಲೋಕವಚ್ಯುತ ಸಲಹಬೇಕೆಂದ ॥೧೨॥

ದೇವ ವೃತ್ರಾಸುರನ ತಪವದು।
ತೀವಿದೊಡೆ ಕಲ್ಪಾಂತಪರ್ಯಂ।
ತಾವಿಬುಧವಿದ್ವೇಷಿಗಪ್ಪುದು ಸಕಲಭುವನಚಯ ॥
ದೇವರಿಪುವಿನ ವಧೆಗೆ ಹರಿವನು।
ದೇವ ನೀನೇ ಬಲ್ಲೆಯೆನೆ ರಾ।
ಜೀವಲೋಚನನೆಂದನಮರರೊಳುಚಿತಭಾಷಿತವ ॥೧೩॥

ಇಂದು ವೃತ್ರಾಸುರನ ವಧೆ ಸರಿ ।
ಬಂದಿರದು ಸಮ್ಮುಖದೆಗವನೊಳು ।
ಸಂದಿಹುದು ಸದ್ವರ್ಗಗತಿಯುಪರಾಧವಿಸಿತಿರದು ॥
ಕೊಂದೊಡಾತನ ನೀವೆ ಕೊಲುವುದು ।
ನಿಂದೆಯೆನಗಾಕಾರ್ಯವೆನೆ ಸಂ ।
ಕ್ರಂದನಾದ್ಯಮರೌಘವಿರ್ದುದು ಬಹಳದುಗುಡದಲಿ ॥೧೪॥

ಆದೊಡೊಳ್ಳಿತು ದುಗುಡವಮರರೊ ।
ಳೈದುವೊಡೆ ಮಚ್ಛಕ್ತಿ ಮೂಡೆಱ ।
ನಾದವುದು ವಾಸವನೊಳೊಂದಶನಿಯೊಳು ಬೇಱೊಂದು ॥
ಮೇದಿನಿಯೊಳೊಂದಂಶವಿರಬೇ ।
ಕಾದೊಡಿರ್ದಪೆವೆಂದೆನಲು ಬಲ ।
ಸೂದನನದೇ ಸಾಕೆನುತ ಬೀಱ್ಕೊಂಡನಚ್ಯುತನ ॥೧೫॥



ಆಸುರನಿರ್ದ ತಪೋವನಕೆ ಸುಮ ।
ನಸರು ನಡೆತರೆ ದಾನವನ ತಪ ।
ದಸಮತೇಜಃಪುಂಜವಂಜಿಸಿತಮರರಾಲಿಗಳ ॥
ದೆಸೆದೆಸೆಗೆ ಸಿಡಿದೋಡಿದರು ನಿ ।
ಪ ಸರದಲಿ ಬಱಿಕಿಂದ್ರುಸ್ಸೈತಂ ।
ದಸವಸದೊಳಸುರೇಂದ್ರವಧೆಗುದ್ಯುಕ್ತಮನನಾದ ॥೧೬॥

ಕೂಡೆ ದೈತ್ಯನ ಮಸ್ತಕವ ಗಱಿ ।
ವಾಡಿ ಬಿಟ್ಟನು ಮುನಿ ದಧೀಚಿಯು ।
ಬೇಡಿ ಪಡೆದ ಮಹಾಶನಿಯುನನಿಮಿಷಕುಲೇಶ್ವರನು ॥
ಆಡಲೇನದು ಕುಲಗಿರಿಯು ಕುಡಿ ।
ಗೋಡನಱಿವಂತವನ ತಲೆಯುನು ।
ಕೂಡೆ ಕಡಿದಿಟ್ಟಿಹುದುದು ಮುಕ್ತಿಧ್ಯಾನದಾನವನ ॥೧೭॥

ಬಂದುದೈ ತದ್ಬ್ರಹ್ಮಹತಿ ಸಂ ।
ಕ್ರಂದನನ ಬೆಂಬಿಡದೆ ಮೆಯ್ಸೋಱ ।
ಲಂದದಲಿ ನಿಸ್ತೇಜನಿರ್ದಲ್ಲಿರದೆ ತಿರುಗಿದನು ॥
ಇಂದಿರಾಮಂದಿರವೆನಿಸುವರ ।
ವಿಂದದೊಳಗಿರೆ ಕೆಲದೊಳಿಹುದ ।
ಳಿಂದ ಕೆಲಕಡೆಗೈದಲೈದುವುದೊಡಲ ಬಱಿಸಂದು ॥೧೮॥

ಸುರಪನೀಪರಿ ಮುಗ್ಗುರೆಯೆ ಸುರ ।
ಪುರವನಾಯಕವಾದುದವನಿಗೆ ।
ಸುರಿಯದಂಬುದರಾಜಿ ಮಳೆಯನಸಾರವಾದುದಿಳೆ ॥
ತರುವನಾಳಿಗಳುರಿದುವಱತುವು ।
ಹರಿವ ನದಿಗಳ ನೀರು ಸಸಿಗಳು ।
ಕರಿಕುಪೋದುವು ಬ್ರಹ್ಮಹತ್ಯದ ಪಾತಕದ ಕೇಡ ॥೧೯॥

ಚಿಂತಿಸುತ ಸುಮನಸರು ನಡೆದರ ।
ನಂತಶಯನನ ಬಳಿಗೆ ಲಕ್ಷ್ಮೀ ।
ಕಾಂತ ಜಯಜಯೆನುತೆಱಗಿ ಬಿನ್ನೈಸಿದರು ಕೈಮುಗಿದು ॥
ಕಂತುಪಿತ ಚಿತ್ತೈಸು ನಿರ್ಜರ ।
ಕಾಂತನಾವೃತ್ರಾಸುರನ ಕೊಲ ।
ಲಂತರಿಸದಾಬ್ರಹ್ಮಹತಿ ಬಾಧಿಸುವುದೆಂದೆನುತ ॥೨೦॥

ದೇವ ಸುರಪತಿ ನೆಲಸಿಹನು ರಾ ।
ಜೀವವನದೊಳು ದೇವಲೋಕ ।
ಕ್ಕಾವುದೈ ಗತಿಯಿಂದ್ರನಿಲ್ಲದೆ ಸಕಲಭುವನತಯ ॥
ಜೀವಿಸುವ ಪರಿಯೆಂತಲಕ್ಷ್ಮಿಯ ।
ನಾವ ವಿಧದಲಿ ಪರಿಹರಿಪುದೆಲೆ ।
ದೇವ ಕರುಣಿಪುದೆನಲು ನಗುತಿಂತೆಂದನಸುರಾರಿ ॥೨೧॥

ಆದೊಡಾಲಿಪುದಪ್ಸರರು ಹಯ ।
ಮೇಧವನು ನೀವೆಸಗೆ ಒಳಿಕದು ।
ಪೋದಪುದು ತದ್ಬ್ರಹ್ಮಹತಿ ಜಿಸುಟಮುರವಲ್ಲಭನ ॥
ಆದಪುದು ನಿವ್ವಿಷ್ಟವೆನೆ, ಕಮ ।
ಲೋದರನ ಬೀಳ್ಕೊಂಡು ನಿರ್ಜರ ।
ರೈದಿ ಮಾಡಿದರಶ್ವಮೇಧವನರಸ ಕೇಳೆಂದ ॥೨೨॥

ಆದಿವೌಕಸರಾಜನಿರುತಿಹ ।
ಮೇದಿನಿಯೊಳಾಕ್ರತು ಸಮಾಪ್ತಿಯ ।
ನೈದಿದುದು, ಪಾವನತೆವೆತ್ತುದು ತನು ಸುರೇಶ್ವರನ, ॥
ಪೋದಪೆನು ಬೇಱೊಂದೆಡೆಯನೆನ ।
ಗೈದಿಪುದು ನೀವೆಂದು ಕೈಮುಗಿ ।
ಪಾದರಿಸೆ ತದ್ಬ್ರಹ್ಮಹತಿಗಿಂತೆಂದರಪ್ಸರರು ॥೨೩॥

ಅಹಹ! ಕೇಳೈ ಬ್ರಹ್ಮಹತ್ಯಾ ।
ಮಹಿಮೆ; ನಿನ್ನಯ ಮೂರ್ತಿಯಿದು ದು ।
ಸ್ಸಹವಲಾ ಧರಿಸುವೊಡೆ ಸುರನರನಾಗಸಂತತಿಗೆ ॥
ವಹಿಸುವೊಡೆ ನಾಲ್ಕಾಗಿ ತವವಿ ।
ಗ್ರಹವ ವಿಭಜಿಸೆ ವಹಿಸಬಹುದೆನ ।
ಲಹುದೆನುತ ನಾಲ್ಕಂಶದಲಿ ಮಾಡಿದುದು ನಿಜತನುವ ॥೨೪॥

ಒಂದು ಭಾಗವು ನದಿಸಮೂಹದೊ ।
ಳೊಂದಿಹುದು ವರ್ಷಾಗಮದ ದಿನ ।
ದಂದು ತಿಂಗಳು ನಾಲ್ಕು ಭಾಗವದೊಂದು ಧರಣಿಯಲಿ ॥
ಸಂದಿಹುದು ಒಱಿಕೊಂದು ಲಲನಾ ।
ವೃಂದದಲಿ ಋತುಕಾಲದೊಳಗೈ ।
ಸಂದಿಹುದಪ್ರೈ ಮಾಸಮಾಸಂಗಳಲಿ ಮೂಱುದಿನ ॥೨೫॥

ಒಱಿಕ ಪರನಿಂದಕ ಮಹೀಸುರ ।
ಕುಳವಿಘಾತಕರೆಂಬ ಖಳಸಂ ।
ಕುಳದೊಳಗೆ ನೆಲೆ ನಿಂದಿಹುದು ಮತ್ತೊಂದು ಭಾಗವದು; ॥
ಒಳವಿರೋಧಿಯನುಱಿದು ನಿಂದುದು ।
ಕೆಲದೊಳಗೆ ತದ್ಬ್ರಹ್ಮಹತಿ, ನಿ ।
ಷ್ಕಲುಷನಾದನು ವೃತ್ರರಿಪುವವನೀಶ ಕೇಳೆಂದ ॥೨೬॥

ಅರಸ ಚಿತ್ತೈಸಶ್ವಮೇಧಾ ।
ಧ್ವರದ ಮಹಿಮೆಯನೆಂದಿಸಂತ ।
ಸ್ಸುರಕುಲೇಶ್ವರನಿರ್ದನಮರಾವತಿಯ ಭೋಗದಲಿ ॥
ಹರಿಯ ಕಾರುಣ್ಯಪ್ರಸಾದದ ।
ದರುಶನವನಿರದಿತ್ತುದು ಮಹಾ ।
ಧ್ವರವೆಸಲು ಸೌಮಿತ್ರಿಯೊಡನಿಂತೆಂದನಾರಾಮ ॥೨೭॥

ಅದೊಡೆಲೆ ಸೌಮಿತ್ರಿ ಪೇಳ್ವಪೆ ।
ನಾದರಿಸು ಕತ್ಕ್ರತುವಿಶೇಷವ ।
ನಾದಿಯಲಿ ಕರ್ದಮಮರೀಚಿತನೂಜನಿಳನೆಂಬ ॥
ಮೇದಿನೀಶನು ಬಾಹ್ಲಿಪತಿ ಶೌ ।
ರ್ಯೋದಯಜಿತಸುರಾಸುರಾರ್ಜಿತ ।
ಮೇದಿನೀಸಮುದಾಯಸಿದ್ಧಸುದಾರತೇಜದಲಿ ॥೨೮॥

ಆಸರೇಶ್ವರನಿರ್ದನಪ್ರತಿ ।
ಮಾನಭುಜಬಲನಿರುತಿರುತ ಮೃಗ ।
ಯಾನಿಮಿತ್ತದೊಳೈದಿದನು ಚತುರಂಗಬಲಸಹಿತ ॥
ಕಾನನದೆ ಸಂಹರಿಸಿ ಮೃಗಸಂ ।
ತಾನವನು ನಿರ್ಮೃಗವೆನಿಸುತೆ ಷ ।
ಡಾನನೋದ್ಭವದೆಡೆಯನೆಯ್ದಿದನಂದು ಶರವಣವ ॥೨೯॥

ಆವನದ ಮಧ್ಯದಲಿ ನೀಲ ।
ಗ್ರೀವನಬಲಾಕೃತಿಯನಾತ್ಮ ।
ಶ್ರೀವಿಲಾಸದೊಳಾಂತನಗಜೆಯ ಚಿತ್ತದಿರವರಿದು ॥
ಆವನದ ತರುಖಗಮೃಗಾಳಿ ವ ।
ಧೂವಿಧದೊಳೆಸೆದುದು, ಗಣಂಗಳು ।
ಭಾವವಱಿದೀಶ್ವರನ ನಾರಿಯಂದದರೊಲವಿನಲಿ ॥೩೦॥

ಕ್ರೀಡಿಸಿದನಾವನದೊಳಗಸುತೆ ।
ಗೂಡಿ ಶಂಕರನಲ್ಲಿ ಭಾವಿಸಿ ।
ನೋಡೆ ಪೌರುಷಸಂಜ್ಞೆಯಿಲ್ಲವದೀಶನಾಜ್ಞೆಯಲಿ ॥
ಆಡಲೇನಿಱಿದುದು ಧರಿತ್ರಿಗೆ ।
ಕೂಡೆ ನಾರೀವೃಂದಮಯದೊಡ ।
ಗೂಡಿಯಪ್ಸರಲೋಕವೆನೆ ಶರವಣವದೊಪ್ಪಿದುದು ॥೩೧॥

ಬಂದು ಹೊಕ್ಕನು ಶರವಣವನಿಳ ।
ನಂದು ನಿಜಬಲದೊಡನೆ ಲಲನಾ ।
ವೃಂದವಾದುದು ಸೇನೆ ಗಜತುರಗಂಗಳೊಡಗೂಡಿ ॥
ಬಂದುದಬಲಾರೂಪ ಕರ್ದಮ ।
ನಂದನಂಗದನಿರದಱಿದು ಬಾ ।
ಲೇಂದುಶೇಖರಕೃತವೆನುತಲೈದಿದನು ಶಂಕರನ ॥೩೨॥

ಜಯ ಮಹೇಶ ಗಿರೀಶ ಮೃತ್ಯುಂ ।
ಜಯ ತ್ರಿಯಂಬಕ ನತಕುಟುಂಬಕ ।
ಜಯ ಮಹೋಜ ಮನೋಜಭಸಿತಲಲಾಟ ಶಶಿಜೂಟ ॥
ಭಯರಹಿತ ಭಾಳಾಕ್ಷ ಭಕ್ತ ।
ಪ್ರಿಯ ಭವಾಸೀಧವ ಮುನಿಪ್ರ ।
ತ್ಯಯ ಭವಾರ್ಣವಗತನನುಜುಹೆನುತೆಱಗಿದನು ಪದಕೆ ॥೩೩॥

ಏಟು ಕರ್ದಮಸೂನು ಮೆಚ್ಚಿದೆ ।
ನೇಟು ಭಯಬೇಡೇಟು ವರಗಳ ।
ಕೇಳು ಪೌರುಷವೊಂದುಳಿದು ನಿನ್ನಿಷ್ಟಗಳನೆನಲು ॥
ತಾಳಿದನು ಮೌನವನು ಚಿತ್ತ ।
ವ್ಯಾಳವಿಷಲಿಪ್ತಾಂಗನಾನತ ।
ಮೌಳಿ ಭಜಿಸಿದನಖಿಲಲೋಕಾಂಬಿಕೆಯನಂಬಿಕೆಯ ॥೩೪॥

ತಾಯೆ ಮನ್ನಿಸಿ ಕರುಣಿಸಖಿಲಾ ।
ಮ್ನಾಯತಂತ್ರವಿದೂರೆ ಶಾಂಭವಿ ।
ಮಾಯೆ ಮಾಯಾರಹಿತೆ ಮಾಯಾಮಯೆ ಮಹಾಮಾಯೆ ॥
ಜಾಯುಗುಣಸಮುದಾಯೆ ಶಂಕರ ।
ಜಾಯೆ ಭಕ್ತನಿಕಾಯವಿಗತಾ ।
ಪಾಯೆ ಪಾರ್ವತಿ ಪಾಲಿಸೆನುತೆಱಗಿದನು ಭಕ್ತಿಯಲಿ ॥೩೫॥

ಏಟೆನುತ ಕರುಣಾರಸಾಬ್ಧಿಯೊ ।
ಳಾಟಿಸಿದಳಗಜಾತೆ ವರಗಳ ।
ಕೇಳು ಕರ್ದಮಸೂನು ಕೊಟ್ಟಪೆನೀಶಸಮ್ಮತವ ॥
ಕೇಳು ಪುರುಷಸ್ತ್ರೀವಿಷಯದೊಳು ।
ಕೇಳಲರ್ಧವನೀವೆನೆನೆ ನರ ।
ಪಾಳನತಿಸಂದಿಗ್ಧಮನನಿಂತೆಂದನೀಶ್ವರಿಗೆ ॥೩೬॥

ಗೌರಿ ಕರುಣಿಪುದೊಂದು ತಿಂಗಳು ।
ನಾರಿಯಾಗಿಹೆನೊಂದುತಿಂಗಳು ।
ಪೌರುಷದೊಳಿಹೆನೆನಲು ಕೊಟ್ಟಳು ವರವನವನಿಪಗೆ ॥
ನಾರಿಯಾದಂದಱಿಯದಿರು ನೀಂ ।
ಪೌರುಷವನಾಪೌರುಷದೊಳಗೆ ।
ನಾರಿಯಾದುದನಱಿಯದಿರು ಹೋಗೆಂದು ಕರುಣದಲಿ ॥೩೭॥

ಹೋದುದಾಪೌರುಷದ ಮಾತು ವಿ ।
ನೋದಿಸಿದಳಬಲಾಸಮೂಹದೊ ।
ಳೈದೆ ಕೆಳದಿಯರಾಡೆ ತನ್ನೊಳಿಳಾಭಿಧಾನದಲಿ ॥
ಆದರಿಸು ಸೌಮಿತ್ರಿ ತದ್ವನ ।
ಪೈದದೆನೆ ನಾರೀಮಯಾವನಿ ।
ನಾದುದಂತದು ನನ್ನ ಸಂಜ್ಞರ ಪಿಧಿಯು ಕೇಳೆಂದ ॥೩೮॥

ಸಾರಫಲಗಳು ಕಂದ ಮೂಲಾ।
ಹಾರವಾದುದು, ತೋಟಲಿದರು ಕಾಂ।
ತಾರದೊಳಗಲ್ಲಲ್ಲಿ ರಮ್ಯೋದ್ಯಾನಗಳನಱಸಿ॥
ಸಾರಿದರು ಬಱಿಕೊಂದು ಕಡೆ ಕಾ।
ಸಾರದೇಶವನವರು ಕಂಡರು।
ಕೈರವಾಬ್ಜಪರಾಗಸಂಜರಿತಾಬ್ಜಶೋಭಿತವ ॥೩೯॥

ಕ್ರೀಡಿಸಿದರಾಸರಸಿಯೊಳು ತುಱು।
ಕಾಡಿದರು ಕಾಸಾರಸಲಿಲವ।
ನಾಡಲೇನವರೊರ್ವರೊರ್ವರ ಮೇಲೆ ಸಿಂಪಿಸುತ॥
ಪಾಡುಪಂತದ ಗೆಲ್ಲಸೋಲದ।
ಮೋಡಿಯೊಳಗುಱಿ ಪಚ್ಚುಗೊಂಡವ।
ರಾಡಿದರು ಪಂಕಾವಶೇಷವದಾಗೆ ತತ್ಸರಸಿ ॥೪೦॥

ಆಮಹಾಸರಸಿಯೊಳಗಿರ್ದನು।
ಸೋಮಸುತನಘಮರ್ಷಣದೊಳಾ।
ಕಾಮಿನೀಜನದೊಂದು ಕೋಳಾಹಳಕೆ ಮನ ಜರ್ಿ॥
ಹಾ ಮಹಾದೇವೆತ್ತಣದ್ಭುತ।
ವೀಮಹಾರವವೆನುತ ನಾರೀ।
ಸೋಮವನು ಕಂಡಡರಿದನು ತೀರವನು ತತ್ಸರದ ॥೪೧॥

ಆರಿವಳು ವನಲಕ್ಷ್ಮಿಯೋ ಸುರ।
ನಾರಿಯೋ ಕಿನ್ನರವಧುವೊ ನರ।
ನಾರಿಗಿನಿತೆತ್ತಣದು ಸೊಬಗೆಂದೆನುತ ಮನದೊಳಗೆ॥
ಈರಮಣಿ ಪರತಂತ್ರೆಯೋ ಮೇಣ್।
ಸ್ವೈರವೃತ್ತಿಯೊ ತಿಳಿವೆನೆನುತಾ।
ತೀರದೊಳಗಿಹ ಬುಧನೆಡೆಗೆ ಪರಿತಂದನಬಲೆಯುರು ॥೪೨॥

ಬಂದು ಬುಧನಡಿಗೆಱಗಿ ಕೆಲದೊಳು।
ನಿಂದಿರಲು, ತತ್ಸತಿಯರೊಲವಱಿ।
ದೆಂದನೀತೋಱುವಳದಾರಬಲೆಯುರ ಮಧ್ಯದಲಿ॥
ಇಂದಿವಳು ಪರತಂತ್ರೆಯೋ ಸ್ವ।
ಚಂದವೃತ್ತಿಯೊ ತಿಳುಹಬೇಕೆನ।
ಲಂದು ಕೈಮುಗಿದಱುಹಿದರು ಮಾನಿನಿಯ ಸಂಗತಿಯ ॥೪೩॥

ಅದೊಡೆಲೆ ಕಂದರ್ಪನಿಭನೀ ।
ನಾದರಿಪುದೆಳೆಯೆಂಬ ಪೆಸರೊಳು ।
ಮೇದಿನಿಯು ಜನವೆಲ್ಲ ಬಣ್ಣಿಪುದೀಮಹಾಸತಿಯು ॥
ಆದುದೀಲಲನಾಪ್ರಭುತ್ವವಿ ।
ನೋದವೀಸ್ವಾತಂತ್ರ್ಯಯೊಳು ಮೇ ।
ರಾದುದದು ನಿಮ್ಮತ್ತ್ರಯೊಂದಲು ಸಗುಣ ಧೂರ್ತೆಯುಂ ॥೪೪॥

ಏನಿದಚ್ಚರಿಯೆನುತ ವಿಮಲ ।
ಜ್ಞಾನನಿಧಿಯಾವರ್ತವಿದ್ಯಾ ।
ಧ್ಯಾನದಿಂದವರುಇದನವರಾದ್ಯಂತಕೃತ್ಯಗಳ ॥
ಮಾನಿನಿಯುರಾಲಿಪುದು ನೀವನು ।
ಮಾನಿಸದೆ ನಮ್ಮೊಡೆಗಳನೆನ ।
ಲೇನೆನುತ ಬೆಸಗೊಂಡರಾಸೋಮಜನನಬಲೆಯರು ॥೪೫॥

ಆದೊಡೀಗಿರಿವನದ ತಪ್ಪಲ ।
ನೈದುವುದು ನೀವಲ್ಲಿ ಕಿನ್ನರ ।
ರಾದರಿಪರತಿಕಾಮಿಗಳು ವರರಹರು ನಿಮಗೆನಲು ॥
ಆದೊಡೊಳ್ಳಿತ್ತೆನುತ ಲಲನೆಯು ।
ರೈದಿದರು ತತ್ಕಿನ್ನರರನಂ ।
ದಾದರವರಿಗೆ ವಧುಗಳೆಲೆ ಸೌಮಿತ್ರಿ ಕೇಳೆಂದ ॥೪೬॥

ಮತ್ತೆ ಕಿನ್ನರ ಕಿಂಪುರುಷರು ।
ತ್ಪತ್ತಿಗಾಸ್ಪದವಾದುದದು, ಬಳಿ ।
ಕಿತ್ತಲಿಳೆ ಕಾಮಾರ್ತೆ ಬುಧನೆಡೆಗೆಯ್ದೆ ಬೇಗದಲಿ ॥
ಎತ್ತಪೋದಪೆ ತರುಣಿ ನೀನುಸಿ।
ರುತ್ತರವನೆನಗಾನು ಬುಧನೆನ ।
ಲುತ್ತಮಮಬಾ ಕೇಳೆನುತ ನುಡಿಸಿದಳು ಸೋಮಜನ ॥೪೭॥

ಕೇಳು ಬುಧ ನಿನ್ನೊಳು ಮನೋಭವ ।
ಕೇಳಿಗೆಂದೈತಂದೆನೈಸಲೆ ।
ಪೇಳಿ ಪ್ರೇಸನುಭವಿಸು ತನ್ನ ಯಥೇಚ್ಛೆ ಯಿಂದೆನಲು ॥
ತಾಳಿದನು ಹರ್ಷವನು ರಮಿಸಿದ ।
ನಾಲತಾಂಗಿಯೊಳೊಂದು ತಿಂಗಳು ।
ಮೇಳೆ ಪೌರುಷವೆದಿರುದು ಕರ್ದಮತನೂಭವಗೆ ॥೪೮॥

ಮಱೆದೊಱಗಿದವರೇತೆಱದೊಳೆ ।
ಚ್ಚಱುವರಂತಾಭೂಮಿಪತಿ ಕ ।
ಣ್ದೆಱೆದು ನೋಡಿದನಾತ್ಮಸೈನ್ಯವ ಕಾಣದಿದಿರಿನಲಿ ॥
ಅಱಿಯಬೇಕಿದನೆನುತ ಬುಧನಡಿ ।
ಗೆಱಗಿ ನುಡಿಸಿದನೆಲೆ ಮಹಿಮ ನೀ ।
ವಱಿಯದಿಹುದಿಲ್ಲಿಳೆಯೊಳೆನ್ನನು ತಿಳುಹಬೇಕೆಂದ ॥೪೯॥

ಬಂದೆನೆಲೆ ಮುನಿನಾಥ ಸೇನಾ ।
ವೃಂದಸಹಿತೀವನಕೆ ಕಾಣೆನು ।
ಮಂದಿಯನು ತಾನೊರ್ವನುೞಿದಿಹೆನೇನು ಬಗೆಯಿದನು ॥
ಕಂದೆಱೆವವೊಲು ಪೇೞಬೇಕೆನ ।
ಗೆಂದೆನಲು ನಸುನಗುತ ಬುಧನಿಂ ।
ತೆಂದು ನುಡಿದನು ಕರ್ದಮದುಹಿತ್ರಾತ್ಮಭವನೊಡನೆ ॥೫೦॥

ಎಲೆ ಮಹೀಪತಿ ನಿನ್ನ ಸೈನಿಕ ।
ವುೞಿದುದೀಯೆಡೆಯಶ್ಮವರ್ಷದೊ ।
ಳುೞಿದೆ ನೀನೆಮ್ಮಾಶ್ರಮದೊಳೊಱಗಿರ್ದ ಕತದಿಂದ ॥
ಫಲಸಮನ್ವಿತಕಂದಮೂಲಗ ।
ಳೊಳವು ನಮ್ಮಾಶ್ರಮದೊಳೆಮ್ಮಯ ।
ಬೞಿಯೊಳಿಹೊಡಿರು ಪೋಪೊಡೈದುವುದಾತ್ಮಪುರವರಕೆ ॥೫೧॥

ಎನಲು ನೃಪನಿಂತೆಂದನೆಲೆ ಮುನಿ ।
ಜನಪ ಹೋಗುವೆನೆಂತು ಬಾಹ್ಲಿಕ ।
ಜನಪದವನೇಕಾಕಿ ನಗದಿಹುದೇ ಸ್ವಕೀಯಜನ ॥
ಮುನಿಪ ನಿಮ್ಮ ಪದಾರ್ಚನೆಯೊಳಿಹೆ ।
ನೆನುತ ವನಿತಾಪೌರುಷದ ದಿನ ।
ದಿನಗಳನು ಕಳೆದಿರ್ದನೈ ನವಮಾಸಪರ್ಯಂತ ॥೫೨॥

ವೀರ ಕೇಳುದಿಸಿದನು ಬಾಹ್ಲಿಕ ಪು ।
ರೂರವನು ಕರ್ದಮಿಯೊಳನಿತಕೆ ।
ಪೌರುಷದ ಬಗೆಯೊದವಿದುದು ಮಱೆದನು ವಧೂವಿಧವ ॥
ಮಾರಹರನರ್ಧಾಂಗಿ ನುಡಿದುದ ।
ನಾರು ಪರಿಹರಿಸುವರು ಮೂಢವಿ ।
ಚಾರನಿರ್ದನು ನಷ್ಟಸಂಜ್ಞನಯುಕ್ತಮನನೆಂದ ॥೫೩॥

ಹುಟ್ಟಿದಾಕ್ಷಣ ಶಿಶುವ ಕೈಯೆಡೆ ।
ಗೊಟ್ಟು ಬುಧನಿಗೆ ಪೌರುಷಾಂಗವ ।
ತೊಟ್ಟುಳಿಳೆ ಬಱಿಕಿಳನೆನಿಪ ನಿಜನಾಮದೇಹಿಕವ ॥
ಪುಟ್ಟಿದುತ್ಸವವೈದುತಿರೆ ಮನ ।
ಮುಟ್ಟಿ ರಕ್ಷಿಸಿ ನಾಮಕರಣವ ।
ನಿಟ್ಟನಾಕುವರಗೆ ಪುರೂರವನೆಂದು ಬುಧನಂದು ॥೫೪॥

ಆಮಹೀಶನ ದೈನ್ಯದಿರವನು ।
ಸೋಮಸುತನೀಕ್ಷಿಸಿ ಕೃಪಾರ್ದ್ರನಿ ।
ಕಾಮನಾದನು ಸಲಹಬೇಕೀನೃಪನನೆಂದೆನುತ ॥
ಪ್ರೇಮದಿಂದ ವಸಿಷ್ಠ ಗೌತಮ ।
ಜಾಮದಗ್ನಿ ಚ್ಯವನ ಭಾರ್ಗವ ।
ವಾಮದೇವಾದ್ಯಖಿಳಮುನಿಗಳ ಒರಿಸಿದನು ಮಖಕೆ ॥೫೫॥

ವರಿಸಿ ಸಂವರ್ತನ ಮಹಾಧ್ವರ ।
ವರದೊಳಧ್ವರಿಯಾಗೆನುತ ವಿ ।
ಸ್ತರಿಸಿ ಕರ್ದಮಕಮಲಭವನೊಳು ಬಾಹ್ಲಿಕಾಧಿಪಗೆ ॥
ಮರಳಿ ಪೌರುಷವಪ್ಪ ತೆಱದೊಳು ।
ತುರಗಮೇಧವನೆಸಗೆ ಶಂಕರ ।
ಕರುಣವಪುದು ತತ್ಸದೆನಲೆಸಗಿದರು ತನ್ಮಖವ ॥೫೬॥

ಆಮಹಾಕ್ರತು ಮುಗಿಯೆ ಬಂದನು ।
ಸೋಮಧರನಾಸ್ಥಳಕೆ ಕರ್ದಮ ।
ತಾಮರಸಸಂಭವನೊಳೆಂದನು ಬೇಡು ವರಗಳನು ॥
ಕಾಮಿತವನಿತ್ತಪೆನು ನಿನಗೆನೆ ।
ಕೈಮುಗಿದು ಶಂಕರನೊಳಾಡಿದ ।
ನೀಮಹೀಶಗೆ ಮರಳಿ ಕರುಣಿಸು ಪೌರುಷವನೆನುತ ॥೫೭॥

ಎಂದೊಡೊಳ್ಳಿತೆನುತ್ತ ಕರ್ದಮ ।
ನಂದನಗೆ ಪುರುಷತ್ವವನು ಶಿತಿ ।
ಕಂಧರನು ಕರುಣಿಸಿದೊಡಾದುದು ಮುನ್ನಿನಂದದಲಿ ॥
ಬಂದ ಭಾರ್ಗವಮುಖ್ಯ ಸನ್ಮುನಿ ।
ವೃಂದವನು ಬೀಳ್ಕೊಳಿಸಿದನು ಬುಧ ।
ನೆಂದಿಸಂತವರೈದಿದರು ನಿಜನಿಜತಪೋವನವ ॥೫೮॥

ಅಂದು ಬಾಹ್ಲಿಕದೇಶವದು ಶಶಿ ।
ಬಿಂದುವೆಂಬಾತ್ಮಜಗೆ ತನ್ನೃಪ ।
ನಿಂದ ಸಂದುದಲ್ಲೆ ಪ್ರತಿಷ್ಠಾನಾಖ್ಯಪುರವರವ ॥
ಚೆಂದದಲಿ ಮಾಡಿದನು ಕರ್ದಮ ।
ನಂದನನು ಬುಧನಾಜ್ಞೆಯಲಿ ಸುರ ।
ಸಿಂಧುತಟದುತ್ತರದೊಳೊಪ್ಪುವ ಮಧ್ಯದೇಶದಲಿ ॥೫೯॥

ಅಪ್ರತಿಷ್ಠಾನಾಖ್ಯಪುರದೊಳು ।
ಸುಪ್ರತಿಷ್ಠಿತನಾಗಿ ಶೌರ್ಯದೊ ।
ಳಪ್ರತಿಮನೆನೆಸಿರ್ದು ಸಲಹಿದನಖಿಲಭೂತಲವ ॥
ದೀಪ್ರತರನೆನಿಸುವ ಪುರೂರವ ।
ಸಪ್ರಯುಕ್ತನಿಳಾಧಿಪತಿ ಕಾ ।
ಲಪ್ರಚೋದಿತನಡರಿದನು ಚಿರಕಾಲದೊಳು ದಿವವ ॥೬೦॥

ಆಮಹೀಶ್ವರನಳಿಯೆ ಪುರವದು ।
ಸೋಮವಂಶಲಲಾಮನೆನಿಸುವ ।
ಭೂಮಿಪಾಲಪುರೂರವನ ವಶವಾದುದಿಳೆಯುಳಿಯೆ ॥
ಆಮಹೀಶಂಗರಸಿಯಾದಳು ।
ತಾಮರಸಮುಖಿಯೂರ್ವಶೀವಧು ।
ವೀಮಹಾಧ್ವರವರದ ಮಹಿಮೆಯಿದೆಂದನಾರಾಮ ॥೬೧॥

ಧರಣಿಪತಿಯಧ್ವರವಿಶೇಷವ ।
ನೊರೆದು ತನ್ನ ಸಹೋದರನೊಳಿದು ।
ಪರಮಗತಿ ಜೀವರಿಗೆ ಧರ್ಮದ್ವೈತಮಾರ್ಗವಿದು ॥
ಕರೆಸು ಬೇಗಧ್ವರಕೆ ಸನ್ಮುನಿ ।
ವರರನೊದವಿಸು ವಿವಿಧ ಮುಖಪರಿ ।
ಕರಗಳನು ಶತ್ರುಘ್ನನೈತರಲೆಂದು ನಿಯಮಿಸಿದ ॥೬೨॥

ಅಕ್ಷಯಾತ್ಮ ವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷ ಸುರಮುನಿರಕ್ಷ ಸುಜನಾ ।
ಪೇಕ್ಷ ನರಹರ್ಯಕ್ಷ ಪಾಲಸು ಮೋಕ್ಷಪದದಕ್ಷ ॥೬೩॥

ಇಂತು ಹದಿನೇಳನೆಯ ಸಂಧಿ.

## ಹದಿನೆಂಟನೆಯ ಸಂಧಿ

ಸೂಚನೆ॥ ಸುರನರೋರಗಭುವನತತಿ ವಿ।
ಸ್ತರಿಸೆ ಪಿತೃದೇವಾಳಿ ತಣಿದ।
ಬ್ಬರಿಸೆ ರಾಘವನಶ್ವಮೇಧಾಧ್ವರವ ಕೈಕೊಂಡ॥

ಪೇಳಿದನು ವಾಲ್ಮೀಕಿ ರಘುಭೂ।
ಪಾಲಚರಿತವನಶ್ವಮೇಧವಿ।
ಶಾಲಯಜ್ಞಕೆ ಬೆಸಸಿದನು ಸೋದರರೊಳಿಂತೆನುತ॥
ಕೇಳು ಲಕ್ಷ್ಮಣ ಮುಖಕೆ ಮುನಿ ಜಾ।
ಬಾಲಿ ಕಾಶ್ಯಪ ಭಾರ್ಗವಾಂಗಿರ।
ವಾಲಖಿಲ್ಯ ವಸಿಷ್ಠಮುಖ್ಯರ ಬರಿಸು ನೀನೆಂದ ॥೧॥

ಎಂದೊಡೊಳ್ಳಿತ್ತೆನುತ ಲಕ್ಷ್ಮಣ।
ನಂದು ಮುನಿಗಳ ಕರೆಸಿ ರಾಘವ।
ನಂದನನ ಕಾಣಿಸೆ ಮಹೀಪತಿಯಖಿಳಮುನಿಜನಕೆ॥
ವಂದಿಸಲು ಹರಸಿದರು ದಶರಥ।
ನಂದನಂಗಾಗಲಿ ಶುಭೋದಯ।
ವೆಂದು ಭೃಗುನಂದನ ವಸಿಷ್ಠಾದಿಗಳು ಹರ್ಷದಲಿ ॥೨॥

ಏನು ಕರೆಸಿದೆ ರಾಮ ! ಮುನಿಸಂ।
ತಾನವನು ನೀನೆನಲು ಕೈಮುಗಿ।
ದಾನತಾನನನಾಡಿದನು ಭಯಭರಿತಭಕ್ತಿಯಲಿ॥
ತಾನದಾವುದು ಬೇಡೆನಗೆ ಮತ।
ವೇನು ಹರಿಯಮೇಧಾಧ್ವರಕೆ ಸ।
ರ್ವಾನುಮತದೊಳನುಜ್ಞೆಯನು ಕರುಣಿಸಲುಬೇಕೆಂದ ॥೩॥

ಎನಲು ಸಂತೋಷದಲಿ ಮುನಿಗಳು।
ತನತನಗೆ ಕೊಂಡಾಡಿದರು ರಘು।
ತನುಜ ಮಾಡಧ್ವರವನೆನುತಾಗಳೆ ಮಹೀಶ್ವರನ॥
ಮುನಿಜನಪ್ರತ್ಯಯನನಧ್ವರ।
ಕೆನುತಲಾವಾಹಿಸಿದರಾದುದು।
ಜನಪತಿಗೆ ಪರಿತೋಷವಾರಂಭಿಸಿದರಧ್ವರವ ॥೪॥

ಭರತನೈದಲಿ ಗೋಮತಿಯು ಪರಿ।
ಸರದ ನೈಮಿಶವನಕೆ ತುರಗಾ।
ಧ್ವರದ ಪರಿಕರಸಹಿತ ಮಾಡಲಿ ಯಜ್ಞಮಂಟಪವ ॥
ಬರಲಿ ತಕ್ಷಕ ಭೃತ್ಯಜನರೊಡ।
ವೆರಸಿ ಸಾಂವತ್ಸರಿಕರೆಯ್ದಲಿ।
ಪರಿಪರಿಯು ವಸ್ತುಗಳೊಡನೆ ವೈಶ್ಯವ್ರಜಗಳೆನುತ ॥೫॥

ಭಂಡಿಗಳು ತಿಲಮುದ್ಗಬಹುವಿಧ।
ತಂಡುಲಂಗಳು ಸಹಿತ ನಡೆಯಲಿ।
ಖಂಡಗುಡ ಮಧುತೈಲ ಘೃತಲವಣಂಗಳೊಡಗೂಡಿ ॥
ತಂಡತಂಡದ ಗೋಮಹಿಷಿಗಳ।
ಹಿಂಡು ನಡೆಯಲಿ ಹೇಮರಜತದ।
ಭಾಂಡಗಳು ಬಹುವಿಧಗಳೈದಲಿ ಭರತನೊಡನೆಂದ ॥೬॥

ನಡೆಯಲಿನ್ನು ಸುಮಿತ್ರೆ ಕೈಕೆಯು।
ಗೊಡನೆ ಕೌಸಲೆ ಪೆಂಡವಾಸದ।
ಗಡಣ ನಡೆಯಲಿ ಹೇಮಮಯವೈದೇಹಿಯೊಡಗೂಡಿ ॥
ತಡೆಯದೇಕೆ ಕುಮಾರಕರ ವಂ।
ಗಡವದೈದಲಿ ಸತಿಸುತರು ಸಹ।
ಪೊಡವಿಯಮರರು ಪೋಗಲಧ್ವರಕೆಂದು ನೇಮಿಸಿದ ॥೭॥

ಬರಲಿ ಸುಗ್ರೀವಾದ್ಯಖಿಳಕಪಿ।
ವರರು ರಕ್ಷರು ಸಹಿತ ಯಾಗಕೆ।
ವರವಿಭೀಷಣನೈತರಲಿ ಪಾತಾಳವಾಸಿಗಳು ॥
ಪರಮಮುನಿಗಳು ಬರಲಿ ದೇಶಾಂ।
ತರದ ವಿಪ್ರಸಮೂಹವೈದಲಿ।
ಸುರಮುನೀಂದ್ರರು ನಾರದಾದ್ಯರು ಬರಲಿ ಮುಖಕೆಂದ ॥೮॥

ಬರಲಿ ನಿಜಬಲಸಹಿತ ಭೂಮಿಾ।
ಶ್ವರರು ಕೇಕೆಯಜನಕ ಧರಣೀ।
ಶ್ವರರು ಕರೆಸೆಂದೆನುತ ನೇಮವನಿತ್ತು ಲಕ್ಷ್ಮಣಗೆ ॥
ಭರತನನು ಬೀಳ್ಕೊಳಿಸಿ ನೈಮಿಶ।
ಪರಮಪಾವನ(ವನಕೆ) ರಾಘವ।
ಧರಣಿಪತಿ ತೆರಳಿದನು ಮುನಿಜನದೊಡನೆ ಹರುಷದಲಿ ॥೯॥

ಮೊದಲು ರಾಘವನೆಂದವೊಲು ಮಾ।
ಡಿದನು ಮಖಮಂಟಪವನತಿವಿಭ।
ವದಲಿ ವಾಸ್ತುವಿಶೇಷಲಕ್ಷಣವಿಧಿವಿಧಾನದಲಿ ॥
ಒದಗಿದರು ನಾನಾದಿಗಂತಾ।
ಸ್ಪದಮುನೀಶರು ನೈಮಿಶಾರ।
ಣ್ಯದಲಿ ನೆರೆದುದು ಸುರನರೋರಗಲೋಕದಖಿಳಜನ ॥೧೦॥

ಬಂದನನಿತಕೆ ಧರಣಿಪತಿ ಮುನಿ।
ವೃಂದದೊಡನಾಗೋಮತೀವರ।
ಸಿಂಧುತೀರದ ನೈಮಿಶಾರಣ್ಯಕೆ ಸರಾಗದಲಿ ॥
ಬಂದು ಕಂಡುದು ಸಕಲಪಾರ್ಥಿವ।
ವೃಂದವತಿವಿಭವದಲಿ ವಿಪ್ರರು।
ಮುಂದೆ ಸಂದಣಿಸಿದರು ರಘುಕುಲವಾರ್ಧಿಚಂದ್ರಮನ ॥೧೧॥

ಹನುಮ ಜಾಂಬವರೊಡನೆ ಭಾಸ್ಕರ।
ತನುಜನೆಯ್ದಿದನಸುರರೈತರೆ।
ದನುಜಪತಿ ಬಂದನು ವಿಭೀಷಣನಧಿಕಹರ್ಷದಲಿ ॥
ತನತನಗೆ ಯಾಚಕರು ನೆರೆದುದು।
ಜನಪನಿದಿರಲಿ ನೈಮಿಶಾಟವಿ।
ಜನಮಯಾಟವಿಯಾದುದೇನೆಂಬೆನು ಮಹಾದ್ಭುತವ ॥೧೨॥

ಬಿಟ್ಟರರ್ಚಿಸಿ ಹಯದ ಹಣೆಯಲಿ।
ಕಟ್ಟಿ ರಘುರಾಜಪ್ರತಾಪದ।
ಪಟ್ಟಿಯನು ತಪನೀಯಮಯಸತ್ಕೀರ್ತಿಶಾಸನದ ॥
ಕಟ್ಟಿದೊಡೆ ಬಿಡಿಸೆಂದು ಸೇನವ।
ಕೊಟ್ಟು ಸೌಮಿತ್ರಿಯನು ಜೀರ್ಣಕಡೆ।
ನೆಟ್ಟನೈದಿತು ಕೃಷ್ಣಸಾರೋಪಮಮಹಾವಾಜಿ ॥೧೩॥

ಧರಣಿಪತಿ ಹಯಮೇಧದೀಕ್ಷೆಯ।
ಧರಿಸಿದನು ಭೂಸುರರು ವೈಶ್ವಾ।
ನರನನರ್ಚಿಸಿ ತೊಡಗಿದರು ಸೂತ್ರೋಕ್ತದಲಿ ಮಖವ ॥
ಚರುಸಮಿತ್ಕ್ರಾಜ್ಯಮುಖ್ಯಾ।
ಧ್ವರವರೋಚಿತ ವಸ್ತುಗಳೊಳು।
[illegible] ಹವ್ಯವಾಹನನ ॥೧೪॥

ಸುರರು ತೃಪ್ತಿಯನೆಯ್ದಿದರು ಬಂ।
ಧುರಹವಿರ್ಭಾಗದಲಿ, ಧರಣೀ।
ಸುರರು ತಣಿದರು ಘನವಸನಬಹುಭಕ್ಷ್ಯಭೋಜ್ಯದಲಿ,॥
ಕರಿರಥಾಶ್ವಾಭರಣದಿವ್ಯಾಂ।
ಬರಗಳಲಿ ಸಂಪೂರ್ಣಮಾನಸ।
ರರಸುಗಳು, ಮೂಕಾಂಧದೀನಾನಾಥಜನಸಹಿತ ॥೧೫॥

'ದೇಹಿ' ಎಂಬುವರಿಲ್ಲ 'ನಪುನ।
ರ್ದೇಹಿ' ಎಂಬೀವಾಕ್ಯವಲ್ಲದೆ।
ದೇಹಿಗಳು ಧನಪತಿಗಳಾದರು ನಿಖಿಳಲೋಕಗಳ॥
ಆಹವಿರ್ಧೂಮದೊಳು ನಭವವ।
ಗಾಹಿಸಿತು ಮಖಮಂತ್ರನಾಮದೊ।
ಳಾಹರಿನ್ಮುಖವಿತತಿ ಶಬ್ದಾದ್ವೈತವಾಯ್ತೆಂದ ॥೧೬॥

ನಡೆಯುತಿರ್ದುದು ಯಾಗವೀಪರಿ।
ಪೊಡವಿಗಚ್ಚರಿಯಾಗಿ ಮುನಿಗಳ।
ಗಡಣವಿರ್ದುದು ನೈಮಿಶಾರಣ್ಯದಲಿ ಸಂದಣಿಸಿ॥
ಸಡಗರದೊಳಂದೈದಿ ತದ್ವನ।
ಪೆಡೆಗೆ ಮುನಿವಾಲ್ಮೀಕಿ ಕುಶಲವ।
ರೊಡನೆ ಗುಪ್ತದೊಳಿರ್ದನಭಿನವಪರ್ಣಶಾಲೆಯಲಿ ॥೧೭॥

ಕರೆದು ಕುಶಲವರೊಡನೆ ಮುನಿವರ।
ನೊರೆದನೆಲೆ ಮಕ್ಕಳಿರಾ! ನೀವಿ।
ನ್ನಿರದೆ ನಡೆದೋದುವುದು ರಾಮಾಯಣಲಸತ್ಕೃತಿಯ॥
ವರಮುನೀಂದ್ರರ ಮುಂದೆ ಧರಣೀ।
ಶ್ವರರ ಸಭೆಯಲಿ ನೆರವಿಯಲಿ ರಘು।
ವರನ ರಾಜದ್ವಾರದೆಡೆಯಲಿ ಕೇಳಿಸುವುದೆಂದ ॥೧೮॥

ಬಳಿಕ ಮುನಿವರನಾಕುಮಾರರ।
ಬಳಿಯೊಳೆಯ್ದುವುದೆಂದು ಶಿಷ್ಯರ।
ಕಳುಹಿದನು ಫಲಕಂದಮೂಲಾದಿಗಳನುಣಲಿತ್ತು॥
ತಳುವದೆಯ್ದಿದರವರು ಮುನಿಪದ।
ನಳಿನಕಾನತರಾಗಿ ಸನ್ಮಂ।
ಗಳಮುಹೂರ್ತದೊಳಖಿಳಮುನಿಗಳ ಪರ್ಣಮಂದಿರವ ॥೧೯॥

ಆರಿವರು ಗಂಧರ್ವರೋ ಮುನಿ ।
ದಾರಕರ ಪರಿಯಲ್ಲ ಸಾಕ್ಷಾತ್ ।
ಶಾರದೆಯ ಪೌರುಷವಿಲಾಸವೊ ಬಾಲಕದ್ವಯವೋ ॥
ನಾರದನ ವೀಣಾರವವಿವನೊ ।
ಯ್ಯಾರಗಿಡಿಸುವರೆಂದು ವಿನಯದೊ ।
ಳಾರು ನೀವೆಂದೆನುತ ನುಡಿಸಿದರಾಮುನೀಶ್ವರರು ॥೨೦॥

ಆಕುಮಾರಕರಾಡಿದರು ವಾ ।
ಲ್ಮೀಕಿಮುನಿಪನ ಶಿಷ್ಯರಾವು ವ ।
ನೌಕಸರು ತನ್ಮುನಿಪನಾಜ್ಞೆಯೊಳಿಲ್ಲಿಗೆಯ್ದಿದೆವು ॥
ಸಾಕದಂತಿರಲಾಲಿಪುದು ನೀ ।
ವೀಕುತೂಹಲಕಾವ್ಯವನು ಸುವಿ ।
ವೇಕಮಾನಸರಾಗಿ ಕರುಣದೊಳೆನುತ ತೊಡಗಿದರು ॥೨೧॥

ನೂಕಿ ಗವಸಣಿಗೆಯನು ತಂತಿಯ ।
ನೌಕಿ ಬೆರಳಲಿ ಮಿಡಿದು ತಾಳದ ।
ಜೋಕೆ ಮಿಗೆಯಾಲಪಿಸಿ ಮೆಱೆದರು ಮಧುರರಾಗಗಳ ॥
ಜೋಕೆಯಿಂ ಲಯದೊಳಗೆ ಮಿಗೆ ನಾ ।
ನಾಕಲಾಕೌಶಲದ ವೈಣಿಕ ।
ರಾಕುಮಾರಕರೋದಿದರು ರಾಮಾಯಣದ ಕೃತಿಯ ॥೨೨॥

ಕೇಳಿ ಕೌತುಕರಸದ ಕಡಲೊಳ ।
ಗಾಳಿದರು ಮುನಿಗಳು ಮಹೀಶರು ।
ಕೇಳಿ ತಲೆದೂಗಿದರು ಕಾವ್ಯಾಮೃತವ ಸವಿಸವಿದು ॥
ಪೇಳಿದರು ರಘುಪತಿಗೆ ಮುನಿಜನ ।
ಮೌಳಿವಾಲ್ಮೀಕಿಪ್ರಣೀತವಿ ।
ಶಾಳಕಾವ್ಯಕುತೂಹಲವನಾಖ್ಯಾನಕೌಶಲವ ॥೨೩॥

ಕೇಳಿ ವಿಸ್ಮಯಚಿತ್ತನೊಲೆದನು ।
ಮೌಳಿಯನು ರಘುನಾಥನಾದೊಡೆ ।
ಬಾಲಕರು ಬರಲೆನುತ ಕರೆಸಿದನಾಮಹಾಲಯಕೆ ॥
ಮೇಲೆ ಕರ್ಮಾಂತ್ಯದಲಿ ಕಾವ್ಯವ ।
ನಾಲಿಸುವೆನೆಂದೆನುತ ಹರ್ಷವ ।
ತಾಳಿ ಕರೆಸಿದನಖಿಳಶಾಸ್ತ್ರಜ್ಞರನು ಬೇಗದಲಿ ॥೨೪॥

ಕರೆಸಿ ಕಾವ್ಯಸಮಾಸಲಕ್ಷಣ ।
ಭರತಸಂಗೀತಾಗಮಪ್ರಾ ।
ಜ್ಞರ ಪುರಾಣಿಕ ಕಥಕ ಸಾಂವತ್ಸರಿಕ ತಾರ್ಕಿಕರ ॥
ಧರಣಿಪತಿಯುಪಚರಿಸಿಯುವರವ ।
ರಿರವಱಿದು ಕುಳ್ಳಿರಿಸೆ ಸಭೆಯು ।
ಚ್ಚರಿಯೊಳೀಕ್ಷಿಸುತಿರ್ದುದಾಕುಶಲವಕುಮಾರಕರ ॥೨೫॥

ನೀವಿ ತಂತಿಯುನೊತ್ತಿ ನವರಸ ।
ಭಾವದೊಳು ಸರಿಗಮಪಧನಿಗಳ ।
ತಾವಱಿತು ಮೂರ್ಛಿಸಿ ವಿಪಂಚಿಯುನಖಿಲರಾಗಗಳ ॥
ಕೋವಿದರು ತಲೆದೂಗುತಿರೆ ನಾ ।
ನಾವಿಧದ ರೀತಿಗಳೊಳೆಸಗಿ ಸ ।
ಭಾವಳಿಗೆ ಕೌತುಕವನಿತ್ತೋದಿದರು ಸತ್ಕೃತಿಯು ॥೨೬॥

ರೀತಿಸಂಧಿಸಮಾಸಲಕ್ಷಣ ।
ಧಾತುಪದವಿನ್ಯಾಸಛಂದೋ ।
ಜಾತಿಗುಣಗಣಭೇದಸದಲಂಕಾರದೊಡಗೂಡಿ ॥
ನೀತಿನಿಪುಣರ ಚಿತ್ತವೃತ್ತಿಗೆ ।
ಕೌತುಕವನೊದವಿಸುತ ಕಾವ್ಯರ ।
ಸಾತಿಶಯಪೀಯೂಷವಾರ್ಧಿಯೊಳದ್ದಿದರು ಸಭೆಯು ॥೨೭॥

ನೋಡಿ ವಿಸ್ಮಯರಸದ ಕಡಲೊಳು ।
ಮೂಡಿ ಮುಱುಗಿದುದಖಿಳಜನವ ।
ಲ್ಲಾಡಿದುದು ಮಸ್ತಕವನೀಮುನಿದಾರಕದ್ವಯದ ॥
ಗಾಡಿ ರಾಮನ ಹೋಲಿಕೆಗೆ ಬಹು ।
ದಾಡಲೇನಚ್ಚರಿಯೆನುತ ಕೊಂ ।
ಡಾಡಲಾಸಭೆ ಬಾಲಕರ ಸಂಗೀತಮಧುರತೆಗೆ ॥೨೮॥

ಓದಿದರು ಸತ್ಕೃತಿಯುನಿಪ್ಪ ।
ತ್ತಾದುದಲ್ಲಿಗೆ ಸರ್ಗವನಿತಱೊ ।
ಳೈದಿದನು ವರುಣಾಲಯುವನರವಿಂದಸಖನಿರದೆ ॥
ಆದಿಕಾವ್ಯವಿದೆನುತ ಹರ್ಷದೊ ।
ಳೈದಿತಾಸಭೆಯುವನಿಪಾಲಕ ।
ನಾದರಿಸಿ ಕೇಳಿದನು ನೀವಾರೆನುತ ಬಾಲಕರ ॥೨೯॥

ಆರು ನೀವೀಕಾವ್ಯಬಂಧವ ।
ನಾರು ಮಾಡಿದರದಕೆ ಕರ್ತುವ ।
ದಾರು ಮಿತಿಯೆನಿತದಕೆ ನೀವಿದನುಸಿರಬೇಕೆನಲು ॥
ಭೂರಮಣ ವಾಲ್ಮೀಕಿಮುನಿಪ್ಪಂ ।
ದಾರಕನ ಶಿಷ್ಯರುಗಳಾವು ವಿ ।
ಚಾರಿಗಳು ತವಚರಿತವೀಕೃತಿಯೆಂದರುಚಿತದಲಿ ॥೩೦॥

ಕ್ಷಿತಿಪ ಕೇಳೀಕೃತಿ ಚತುರ್ವಿಂ ।
ಶತಿಸಹಸ್ರಗಂಥದಲಿ ಪೂ ।
ರ್ಣತೆಯುನೆಯ್ದಿಹುದಾಲಿಸುವುದೈನೂಱುಸರ್ಗಗಳು ॥
ಕೃತಿಗೆ ನಿಲವಿಪ್ಪತ್ತು ಸರ್ಗವೆ ।
ಮಿತಿ ಸುಕವಿವಾಲ್ಮೀಕಿಮುನಿನಿ ।
ರ್ಮಿತವಿದೆಂದರು ಬಾಲಕರು ಮೃದುಮಧುರವಚನದಲಿ ॥೩೧॥

ಕೇಳಿ ಕಾವ್ಯಾಮೃತರಸಾಬ್ಧಿಯೊ ।
ಳಾಟಿ ರಘುಪತಿ ತರಿಸಿ ಧನವನು ।
ಬಾಲಕರಿಗುಚಿತವನು ಕೊಡೆ ಹದಿನೆಂಟುಸಾಸಿರವ ॥
ಕೇಳು ನೃಪ ಧನವೇಕೆಮಗೆ ಫಲ ।
ಮೂಲಪರ್ಣಾಶಿಗಳಿಗಪ್ಪುದೆ ।
ನಾಳೆ ಬಹೆವೆನುತೆಯ್ದಿದರು ನಿಜಪರ್ಣಮಂದಿರವ ॥೩೨॥

ಏನಿದಚ್ಚರಿಯೆನುತ ನೃಪನನು ।
ಮಾನಿಸಿದನಾಸಭೆ ಕುತೂಹಲ ।
ಮಾನಸದೊಳಿದ್ದುದು ವಿರಕ್ತತೆಗಾಗ ಕುಶಲವರ ॥
ಸಾನುರಾಗದೊಳಖಿಳಕವಿಸಂ ।
ತಾನವಭಿವರ್ಧಿಸಿತು ಕಾವ್ಯನಿ ।
ಧಾನವಿರೆ ಧನವೇಕೆನುತ ಕೊಂಡಾಡಿ ಮುನಿವರನ ॥೩೩॥

ಹೋದುದಂದಿನ ಮಾತು ಮಱುದಿನ ।
ದಾದಿಯಲಿ ಕವರ್ಮಾಂತ್ಯದಲಿ ನೃಪ ।
ನಾದರಿಸೆ ಬಂದರು ಕುಶೀಲವರಾಮಹಾಸಭೆಗೆ ॥
ಓದಿದರು ಸತ್ಕಾವ್ಯಬಂಧವ ।
ನಾದಿವಿಡಿದಾಕೃತಿ ಸಮಾಪ್ತಿಯು ।
ನೈದುವನ್ನೆಗಮೆಡೆಬಿಡದೆ ಬಹುದಿನಸಪರ್ಯಂತ ॥೩೪॥

ಮುನಿಪನುಪದೇಶದಲಿ ರಘುನಂ ।
ದನನ ಮುಖವರಕೈದಿ ಸೀತಾ ।
ತನುಜರೋದಿದರಮಳರಾಮಾಯಣಮಹಾಕೃತಿಯ ॥
ಎನಿಪ ಮುನಿವಾಕ್ಯದೊಳು ತನ್ನಯ ।
ತನಯರೆಂಬುದನಱಿದು ನೃಪನೆಂ ।
ದನು ಸಭಾಮಧ್ಯದಲಿ ಕುಶಲವರೊಳು ಮನೋಗತವ ॥೩೫॥

ಜನಕಜೆಯನಪವಾದಭಯಸಂ ।
ಜನಿತಕಂತರ್ವತ್ನಿಯಾಗಿಹ ।
ವನಿತೆಯೊಳು ವಾಲ್ಮೀಕಿ ಮುನಿಯಾಶ್ರಮದೊಳಿರಿಸಿದೆವು ॥
ಇನಿತುದಿನವಿನ್ನಾ ವಿದೇಹಜ ।
ತನುಜೆ ವಿಶ್ವಾಸದೊಳು ಪಾವನ ।
ತನುವೆನಿಸಿ ಬಱಿಕೆಮ್ಮ ಬಱಿಗೆಯ್ದುವುದು ನೀವೆಂದ ॥೩೬॥

ಆದೊಡೊಳ್ಳಿತೆನುತ್ತ ರಾಘವ ।
ಮೇದಿನೀಶನ ಬೀೞುಕೊಂಡವ ।
ರೈದಿದರು ವಾಲ್ಮೀಕಿಮುನಿವರನೆಡೆಗೆ ಬೇಗದಲಿ ॥
ಆದರಿಸು ಮುನಿ ರಘುತನುಜನಪ ।
ವಾದಭೀತಿಗೆ ಮಾಣ್ದ ಗಡ ದಿಟ ।
ಮೇದಿನೀತನುಭವೆಯನೆಮ್ಮೊಡನೆಂದನಿಂತೆಂದು ॥೩೭॥

ಈಸಭಾಸದರೀಕ್ಷಿಸಲು ವಿ ।
ಶ್ವಾಸವನು ವೈದೇಹಿ ಮಾಡೆ ಮ ।
ಹಾಸಭೆಯೊಳಂಗೀಕರಿಸುವೆವು ವಿಗತಕಿಲ್ಬಿಷೆಯ ॥
ಐಸಲಿಂ ಮೇಲ್ಪೈದುವುದು ನ ।
ವ್ಯಾಸವಿಾಪಕೆ ನೀವೆನುತ ವಸು ।
ಧೇಶನಾಡಿದನೆಂದರಾಕುಶಲವರು ಮುನಿಪತಿಗೆ ॥೩೮॥

ಎಂದೊಡೊಳ್ಳಿತೆನುತ್ತ ಮುನಿವರ ।
ನಂದು ಜನಕಾತ್ಮಜೆಯ ಕರೆದಿಂ ।
ತೆಂದನವನೀಶಂಗೆ ವಿಶ್ವಾಸವನು ಮಾಳ್ಪುದಿದು ॥
ಸಂದ ಪಾತಿವ್ರತ್ಯಧರ್ಮಕೆ ।
ಕುಂದುಕೊರತೆಗಳೈದವೆನೆಯಿಂ ।
ತೆಂದಳವನಿಜೆ ಮುನಿಪ ನಿಮ್ಮಯ ಮತವೆ ಮತವೆನುತ ॥೩೯॥

ಎನಲು ಸಂತೋಷದಲಿ ರಘುನಂ।
ದನನ ಮುಖಮಂಟಪಕೆ ಸೀತಾ।
ವನಿತೆ ತನ್ನೊಡನೆಯ್ದುತೈದಿದನಂದು ವಾಲ್ಮೀಕಿ ॥
ತನತನಗೆ ವಂದಿಸಿದರಲ್ಲಿಯು।
ಮುನಿಗಳವನಿಪನರ್ಘ್ಯಪಾದ್ಯಾ।
ಸನಗಳಲಿ ಸತ್ಕರಿಸಿ ಕುಳ್ಳಿರಿಸಿದನು ಮುನಿಪತಿಯು ॥೪೦॥

ಅಂದು ಮುನಿಪನ ಬೆಂಗಡೆಯೊಳೈ।
ತಂದಳವನಿಜೆ ಬಿಡದೆ ವಾಲ್ಮಿಕಿ।
ಸಂದ ಪತಿಭಕ್ತಿಪ್ರಯುಕ್ತಿಯ ಚಿತ್ತವಱಿದಱಿದು ॥
ಎಂದನಾವಾಲ್ಮೀಕಿ ದಶರಥ।
ನಂದನಂಗೆಲೆ ರಾಮ, ಧರಣೀ।
ನಂದನೆಗೆ ವಿಶ್ವಾಸವನು ತಾನೆಸಗಿದಪೆನೆಂದ ॥೪೧॥

ಜನಪ ಕೇಳವನಿಜೆಯುಕಲ್ಮಷೆ।
ಜನಕಸುತೆ ಪರಿಶುದ್ಧೆ ಸೀತಾ।
ವನಿತೆ ಪಾವನೆಯೆಂಬ ವಾಕ್ಯತ್ರಯವೆ ಸಿದ್ಧವಿದು ॥
ಅನೃತಮೊಗೆದಪುದೇ ಪ್ರಚೇತಸ।
ತನುಜನೆನಿಪೆನ್ನೊಳು ತಪಸ್ಸಂ।
ಜನಿತಸುಕೃತಮದೆಂತು ಫಲಿಸುವುದರಸ ಕೇಳೆಂದ ॥೪೨॥

ಅನುಡಿಗೆ ರಘುನಾಥನೆಂದನ।
ನೂನಮಾನಸನಾಗಿ ಸಭೆಯೊಳ।
ಗಾನತಾನನನಾಲಿಪುದು ಸುಜನರೆ ಮದುಕ್ತಿಗಳ ॥
ಜಾನಕಿಯುನಪವಾದಭೀತಿಗೆ।
ಕಾನನವನೆಯ್ದಿಸಿದೆನೀಮುನಿ।
ತಾನೆ ಬಂದಾಡಿದನು ಕಾರುಣ್ಯದಲಿ ಪರಹಿತವ ॥೪೩॥

ಹಿಂತೆ ದಶಕಂಧರವಧಾಸಮು।
ನಂತರದೊಳೀಸೀತೆ ಸುರಮುನಿ।
ಸಂತತಿಗಳೀಕ್ಷಿಸಲು ಮಾಡಿದಳೊಪ್ಪೆ ನಂಬುಗೆಯ ॥
ಸ್ವಾಂತಸಂಶಯಮಡಗಿತೀಮುನಿ।
ಕಾಂತನುಪದೇಶದಲಿ ಸತಿಸೀ।
ಮಂತಮಣಿ ವೈದೇಹಿ ನಿಶ್ಚಯವಾದುದೆನಗೆಂದ ॥೪೪॥

ರಾಯನಾಡಿದ ನುಡಿಗೆ ಸುಜನನಿ ।
ಕಾಯವಹುದೆಂದೊಪ್ಪಿದುದು ಕಾ ।
ಷಾಯವಸನೆ ವಿದೇಹಸುತೆ ಬಂದಳು ಜಟಾಭರಿತೆ ॥
ಆಯೆನುತೆ ಸಭೆಯುಬ್ಬಿದುದು ನಿ ।
ರ್ದಾಯದಲಿ ರಘುಪತಿಗೆ ಕಾರ್ಯ ।
ಶ್ರೀಯುವತಿ ಸೂಸಿದಳವಾಂಗವನೆನುತ ತಮತಮಗೆ ॥೪೫॥

ಅವನಿಸುತೆಯಿಂತೆಂದಳೀರಾ ।
ಘವನನಲ್ಲದೆ ಬೇಱೆ ಪುರುಷರ ।
ನೆವೆ ಮಿಡುಕಿ ಕಂಡಱಿದೆನಾದೊಡೆ ಮೇದಿನೀದೇವಿ ॥
ತವಜಠರದೇಶದೊಳಗಾನು ।
ದ್ಭವಿಸಿದವಳಲ್ಲೆಂದು ಪುನರಪಿ ।
ವಿವರಿಸಿದಳಿದು ಸತ್ಯವೆಂದಳು ಮೂಱುಕಣೆಯುದಲಿ ॥೪೬॥

ಏನನೆಂಬೆನು ಬಂದುದಲ್ಲಿಗ ।
ನೂನಸಿಂಹಾಸನವದೊಂದು ನ ।
ವೀನರತ್ನಸಮೃದ್ಧಿನಾಗಭಟಪ್ರಚೋದಿತದ ॥
ತಾನೆ ಬಂದಳು ಭೂವನಿತೆ ಸೀ ।
ತಾನಿತಂಬಿನಿಯೆಡೆಗೆ ಬರೆಸೆಳೆ ।
ದಾನತಾಸ್ಯೆಯನಪ್ಪಿದಳು ಬೆಱಗಾಗೆ ಸಕಲಜನ ॥೪೭॥

ಕಂಡುದಾಪೀಠದೊಳು ಜಾನಕಿ ।
ಮಂಡಿಸಿದ ಮಾತ್ರವನು ನಿಮಿಷಕೆ ।
ಕಂಡುದಿಲ್ಲ ಸಭಾವಿತತಿಯಡಗಿದಳು ಭೂಮಿಯಲಿ ॥
ಚಂಡರತ್ನಗಭಸ್ತಿಮಂಡಲ ।
ಮಂಡನದ ಹರಿಪೀಠವಮರರು ।
ತಂಡತಂಡದೊಳೊಗಿಸಿದರು ಬಿರಿಮುಗುಳ ಬಲುಸರಿಯ ॥೪೮॥

ಏನಿದದ್ಭುತವೆಂದು ಸಭೆ ಹಾ ।
ಹಾನಿನಾದದೊಳಿರ್ದುದನಿತಕೆ ।
ಭಾನುವಂಶಜನಂದು ರೋಷಾವೇಶಮನನಾಗಿ ॥
ದಾನವನ ಕೊಂದಂದು ತಂದವೊ ।
ಲೀನಿರರ್ಗಳೆಯಾದ ಧರಣೀ ।
ಮಾನಿನಿಯನೊದೆಬಗಿದು ಸೀತೆಯ ತಾರದಿರೆನೆಂದ ॥೪೯॥

ಎನುತ ರಾಘವನಂದು ತನ್ನಯ ।
ಧನುವನೇಱಿಸುತಿರೆ ಸರೋಜಜಾ ।
ಸನನಿಱಿದನಾಸಭೆಗೆ ಶಕ್ರಾದಿಗಳ ಗಡಣದಲಿ ॥
ಜನಪ ಸೈರಿಸು ತವಚರಿತ್ರವ ।
ನೆನೆ ತಪೋಬಲದಿಂದ ನಿನ್ನನು ।
ಜನಕಸುತೆಯೊಲಿಸಿದುದನಱಿಯಾಗ್ರಹವ ಮಾಣೆಂದ ॥೫೦॥

ಬೀಱಿಕೊಂಡುದು ರಾಮನನು ಸುರ ।
ಜಾಲವಬ್ಜಾಸನನೊಡನೆ ಭೂ ।
ಪಾಲನಿದ್ದನು ಸತಿವಿಯೋಗದ ಬಹಳ ದುಗುಡದಲಿ ॥
ಪೇೞಲೇನು ಪತಿವ್ರತಾಜನ ।
ಮೌಳಿ ವೈದೇಹನ ಸುತೆಯೆನು ।
ತ್ತಾೞಿದುದು ಕಂಬನಿಯು ಕಡಲೊಳಗಖಿಳಜನವಿತತಿ ॥೫೧॥

ಪೇೞಿದರು ಮುನಿವರರು ರಘುಭೂ ।
ಪಾಲಗೆಲೆ ರಾಜೇಂದ್ರ ದುಗುಡವ ।
ತಾಳದಿರು ಸತಿಯುಗಲಿಕೆಗೆ ಪರಿಹರಿಸಿತಪವಾದ ॥
ಪೇೞಲೇನು ಪತಿವ್ರತಾಜನ ।
ಜಾಲದೊಳು ಜಾನಕಿಯೆ ಪಾವನೆ ।
ಕೇಳು ನೀನುತ್ತರದ ಕಾರ್ಯವನಿನ್ನು ಮುಂದೆನುತ ॥೫೨॥

ಸಾಕದಂತಿರಲೆನುತ ಮುನಿವಾ ।
ಲ್ಮೀಕಿ ನುಡಿದನು ರಾಮ ನೀನಿ ।
ನ್ನೀಕುಮಾರರ ಕರೆದು ಮನ್ನಿಸು ಕುಲವಿವರ್ಧನರ ॥
ಶೋಕವನು ಮಾಣ್ದಾಲಿಸುತ್ತುೞಿ ।
ದೀಕುತೂಹಲಕಾವ್ಯಬಂಧವ ।
ನೇಕಮಾನಸನಾಗಿ ಮೂಡಧ್ವರವ ನೀನೆಂದ ॥೫೩॥

ಎಂದೊಡೊಳ್ಳಿತ್ತೆನುತ ಸೀತಾ ।
ನಂದನರನಾನಂದದಲಿ ರಘು ।
ನಂದನನು ಬಿಗಿಯಪ್ಪಿ ಕೊಂಡಾಡಿದನು ಸಭೆ ಹೊಗಲ್ ॥
ಮುಂದಣುತ್ತರಕಾವ್ಯವನು ಮುದ ।
ದಿಂದ ಕೇಳಿದನೊಲಿದು ಸಭೆಯಹು ।
ದೆಂದು ಕೊಂಡಾಡಿದುದು ಕವಿ ವಾಲ್ಮೀಕಿ ಮುನಿಯೆನುತ ॥೫೪॥

ಆಮಹಾಕ್ರತು ಪೂರ್ಣವಾದುದು ।
ನೈಮಿಶಾರಣ್ಯದೊಳಗಮರರು ।
ಭೂಮಿಯಮರರು ಸಹಿತ ತಣಿದರು ಯಾಗಪೂರ್ತಿಯಲಿ ॥
ಗೋಮಹಿಷಿ ಧನಕನಕಮಯರಥ ।
ಸಾಮಜಾದಿ ಸಮಸ್ತವಸ್ತು ।
ಸ್ತೋಮದಲಿ ಸಂತುಷ್ಟಮಾನಸರಾದರವನಿಪರು ॥೫೫॥

ಆದಿವಾಕರಕುಲಜನಾಕ್ಷಣ ।
ಮೇದಿನೀಶ ಕಪೀಶ ರಾಕ್ಷಸ ।
ರಾದಿಯಾದಖಿಲರನು ಬೀಳ್ಕೊಳಿಸಿದನು ಹರ್ಷದಲಿ ॥
ಸೋದರಾಂತಃಪುರಪುರಂಧ್ರಿಯು ।
ರೈದೆ ಕುಶಲವರೊಡನಯೋಧ್ಯೆಯ ।
ನೈದಿದನು ದಶವರ್ಷಸಾಹಸ್ರದ ಸಮಾಪ್ತಿಯಲಿ ॥೫೬॥

ಭೂಮಿಪತಿಗತಿರಾತ್ರಿಕಾಗ್ನಿ ।
ಷ್ಟೋಮ ವೈಷ್ಣವವಹ ಸುವರ್ಣಕ ।
ಕಾಮಿತಪ್ರದ ವಾಜಪೇಯ ತುರಂಗಮೇಧಗಳ ॥
ರಾಮಣೀಯಕವೆನಿಸಿ ಮಾಡಿದ ।
ನಾಮಹಾಕ್ರತುಶತಸಹಸ್ರವ ।
ದೀಮಹಿಗೆ ಪೊಸತೆನಲು ಸಾಸಿರ ಬರಿಸಪರ್ಯಂತ ॥೫೭॥

ಅಹಹಿದಾದ್ವಿಸಹಸ್ರಜಿಹ್ವೆಯೊ ।
ಳಹಿಪತಿಗೆ ವರ್ಣಿಸುವೊಡತಿ ದು ।
ಸ್ಸಹವೆನಲು ರಾಘವನ ರಾಜ್ಯಶ್ರೀಯ ಸಂಪದದ ॥
ಮಹಿಮೆಯದು ಕಾಲೋಚಿತಕೆ ಮಳೆ ।
ಮಹಿಗೆ ಕಱೆವುದು ಫಲಸಮೃದ್ಧಿಯ ।
ವಹಿಸುವುದು ಸಸ್ಯಾಳಿ ಹೊಗಳಲದಾರಿಗಳವೆಂದ ॥೫೮॥

ಪೇಳಲಚ್ಚರಿ ರಾಘವೇಶ್ವರ ।
ನಾಳುವಿಳೆಯೊಳು ರೋಗದುಃಖಮ ।
ಕಾಲಮರಣಗಳೆಂಬ ಬಾಧೆಗಳಿಲ್ಲ ಜೀವರಿಗೆ ॥
ಕಾಲನಟ್ಟುಳಿಯಿಲ್ಲ ದುರ್ಜನ ।
ಜಾಲದುಪಟಳವಿಲ್ಲ ದೀನಜ ।
ನಾಳಿಯೆಂಬುವುದಿಲ್ಲ ಪಾಪಿಗಳಿಲ್ಲ ಪರಿಕಿಸಲು ॥೫೯॥

ಈತೆಱದೊಳವನೀಶನಖಿಳೋ ।
ರ್ವೀತಳವನತಿಧರ್ಮದಲಿ ವಿ ।
ಖ್ಯಾತಿಯಿಂ ಪಾಲಿಸುತಿರಲು ಚಿರಕಾಲಕವನಿಪನ ॥
ಮಾತೆ ಕೌಸಲೆಯುರು ಸುಮಿತ್ರಾ ।
ಖ್ಯಾತೆ ಕೈಕೆಯಿರೊಡನೆ ದಶರಥ ।
ಭೂತಲಾಧಿಪನಿರ್ದೆಡೆಯನೆಯ್ದಿದರು ಸುರಪದವ ॥೬೦॥

ವಸುಮತೀಪತಿ ಮಾತೃವರ್ಗಕೆ ।
ಹೊಸತೆನಿಸಿ ತತ್ಕ್ರೌತಕರ್ಮವ ।
ನೆಸಗಿ ಪಿತೃಯಜ್ಞಾದಿವರಕರ್ಮಗಳನಾಚರಿಸಿ ॥
ವಸುಮತೀಶ ಕಪೀಶರಾಕ್ಷಸ ।
ವಿಸರವನು ಪಾಲಿಸುತ ಧರ್ಮ ।
ಪ್ರಸರವೆನಿತೊಳವನಿತನೆಸಗುತಲಿರ್ದನೊಲವಿನಲಿ ॥೬೧॥

ಅಕ್ಷಯಾತ್ಮ ವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷ ಸುರಮುನಿರಕ್ಷ ಸುಜನಾ ।
ಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥೬೨॥

ಇಂತು ಹದಿನೆಂಟನೆಯ ಸಂಧಿ.



## ಹತ್ತೊಂಬತ್ತನೆಯ ಸಂಧಿ.

ಸೂಚನೆ:—ದೋರ್ವಲರ ಗೆಲಿದಾಜಿಯಲಿ ಗಂ।
ಧರ್ವಪತಿಗಳ ಭರತನಂದು ತ।
ದುರ್ವಿಯನು ಕೈಕೊಳಿಸಿದನು ತನ್ನಯ ತನೂಜರಿಗೆ॥

ಪೇಳಿದನು ವಾಲ್ಮೀಕಿಮುನಿಶಾ।
ರ್ದೂಲನಿನಕುಲಸಾರ್ವಭೌಮನ।
ಲೀಲೆಯನು ಸಾಮ್ರಾಜ್ಯಸುಖದೊಳು ರಾಮನಿರುತಿರಲು॥
ಪೇಳಿದರು ಕೇಕಯಧರಿತ್ರೀ।
ಪಾಳನಟ್ಟಿದ ಗಾರ್ಗ್ಯಮುನಿಜನ।
ಪಾಲನೆಯ್ದಿದನೆಂದು ದೂತರು ರಾಘವೇಶ್ವರಗೆ ॥೧॥

ಕೇಳಿ ಪರಿತೋಷದಲಿ ರಘುಭೂ।
ಪಾಲನೆಯ್ದಿದನಾಂಗಿರಸಮುನಿ।
ಪಾಲತನುಭವಗಾರ್ಗ್ಯಮುನಿಗಿದಿರಾಗಿ ಬೇಗದಲಿ॥
ಕಾಲಿಗೆಱಗಲು ಹರಸಿದನು ನರ।
ಪಾಲನನು ತಂದಖಿಳದಿವ್ಯಾಹ।
ಯಾಳಿಗಳನೊಪ್ಪಿಸಿದನುಡುಗೊರೆಸಹಿತ ವಿನಯದಲಿ ॥೨॥

ಅರಸನೊಡಗೊಂಡುಯ್ದು ಗಾರ್ಗ್ಯನ।
ನರಮನೆಯೊಳರ್ಘ್ಯಾಸನಂಗಳ।
ನಿರದೆಸಗಿ ಬಳಿಕೇನು ಬಂದಿರೆನುತ್ತ ಬೆಸಗೊಳಲು॥
ಧರಣಿಪತಿ ಕೇಕಯಧರಿತ್ರೀ।
ವರನು ತವಮಾತುಲನು ನಿನ್ನೆಡೆ।
ಗಿರದೆ ಕಳುಹಿದನೆನ್ನನತಿಗುಪ್ತದಲಿ ಕೇಳೆಂದ ॥೩॥

ಉರ್ವಿಪತಿ ಕೇಳಿಹರು ಗಡ ಗಾಂ।
ಧರ್ವಪತಿ ಶೈಲೂಷತನಯರು।
ದೋರ್ವಲರು ಗಾಂಧಾರದೇಶದೊಳಧಿಕದುರ್ಜನರು॥
ಗರ್ವಿತರ ಗೆಲಿದಾಜಿಯೊಳಗವ।
ರುರ್ವರೆಗೆ ನೀನರಸೆನಿಸುವುದು।
ಸರ್ವಸುಖವೆಂದೆನ್ನ ಕಳುಹಿದನಶ್ವಪತಿಯೆಂದ ॥೪॥

ಎಂದೊಡೊಳ್ಳಿತ್ತೆನುತ ಭರತನಿ ।
ಗೆಂದನೀನಿವರೊಡನೆ ತಾವಕ ।
ನಂದನರು ಸಹಿತೆಯ್ದುವುದು ನೀನೆಂದು ವಿಸ್ತರಿಸಿ ॥
ಮಂದಿಯನು ಕಳುಹಿದನು ಗಜರಥ ।
ವೃಂದ ಹಯದೊಡಗೂಡಿ ಸಂಭ್ರಮ ।
ದಿಂದ ನಡೆದುದು ಸೇನೆ ದಿನ ಹದಿನೈದು ಪರಿಯಂತ ॥೫॥

ಬರಲು ಕೇಕಯನಹ ಯುಧಾಜಿ ।
ದ್ಧರಣಿಪತಿ ಕೇಳ್ದಿದಿರುವಂದಾ ।
ಭರತನನು ನಿಜಪುರದೊಳಗೆ ಮನ್ನಿಸಿದನುಚಿತದಲಿ ॥
ಹರಿಸದೊಳು ನಿಜಬಲಸಹಿತ ಸಂ ।
ಗರಕೆ ತೆರಳಿದನಾಮಹೀಪತಿ ।
ಭರತನೊಡನತಿವೇಗದಲಿ ಗಾಂಧಾರಪುರವರಕೆ ॥೬॥

ಕೇಳಿದರು ಗಂಧರ್ವತನುಜರು ।
ಕಾಳೆಗಕೆ ಬಂದವನಿಪಾಲನ ।
ದಾಳಿಯನು ಲೇಸಾದುದೆನುತೆಯ್ದಿದರು ಸಂಗರಕೆ ॥
ಪೇಳಲೇನನ್ಯೋನ್ಯಸೇನಾ ।
ಜಾಳವತಿ ಮುಳಿಸಿಂದ ತಾಗಿದು ।
ದಾಳುತನದಭಟುಳ್ಳವರು ಮುಮ್ಮೊನೆಯೊಳೊದಗಿದರು ॥೭॥

ಸರ್ವರಣಸನ್ನಾಹದಲಿ ಗಂ ।
ಧರ್ವತನುಜರು ಮೂಱುಕೋಟಿ ರ ।
ಣೋರ್ವಿಯೊಳು ಮುಕ್ಕುರುಕಿದರು ಶಸ್ತ್ರಾಸ್ತ್ರಸಾರದಲಿ ॥
ನಿರ್ವಹಿಸಲಾರಳವು ಮುರಿದುದು ।
ಸರ್ವಬಲವವನಿಪನ ಕೋಪವು ।
ಪೌರ್ವಶಿಖಿ ಕುಡಿವರಿದುದೀಕ್ಷಿಸಿಯವರ ಸೈನಿಕವ ॥೮॥

ಕಾಲಪಾಶವನೊಡನೆ ಮಂತ್ರಿಸಿ ।
ಕಾಲಮಂತ್ರದೊಳೆಚ್ಚನವನೀ ।
ಪಾಲನಂತದು ಬೆಸಸಿದನು ಗಂಧರ್ವಸೇನೆಯಲಿ ॥
ಪೇಳಲೇನರೆ ನಿಮಿಷದಲಿ ತಾಂ ।
ಕಾಲನಿಲಯವನೆಯ್ದಿಸಿತು ಬಲ ।
ಜಾಲವನು ಸಂವರ್ತಶರವೇನೆಂಬೆನದ್ಭುತವ ॥೯॥

ಏಟುದಿನಪರಿಯಂತದಲಿ ಬಲು ।
ಗಾಳಿಗವನಿತ್ತವಸಿಪಾಲನ ।
ಕಾಲಪಾಶದೊಳಸುವನಱದುದು ಮೂಱುಕೋಟಿಯದು ॥
ಮೇಲೆ ತದ್ಗಾಂಧರ್ವವಿಷಯು ।
ಶ್ರೀಲತಾಂಗಿಯಪಾಂಗಮಂಜುಳ ।
ಮಾಲೆಯನು ಸೂಸಿದಳು ಭರತನ ಮೇಲೆ ಮನವೊಲಿದು ॥೧೦॥

ಎಂಬುದೇನಚ್ಚರಿ ಕುಮಾರರ ।
ನಿಂಬುಗೊಳಿಸಿದನಲ್ಲಿ ಪುಷ್ಕರ ।
ವೆಂಬ ಪುರದೊಳು ಪುಷ್ಕರನನಾ ತಕ್ಷಶಿಲೆಯೆಂಬ ॥
ಕುಂಭಿಣಿಗೆ ಹೆಸರಾದ ಬಹುಳಾ ।
ಡಂಬರದೊಳಮರಾವತೀಪ್ರತಿ ।
ಬಿಂಬವೆನಿಸುವ ಪುರದೊಳಗೆ ತಕ್ಷಕನ ನಿಲಿಸಿದನು ॥೧೧॥

ಧಾರಿಣೀಪತಿಭರತನಾಗಾಂ ।
ಧಾರದೇಶದೊಳೈದುವರುಷ ಕು ।
ಮಾರರೊಡನಿರ್ದವರನಾವಿಷಯದೊಳು ನೆಲೆಗೊಳಿಸಿ ॥
ವೀರರಾಘವದರ್ಶನೋತ್ಸುಕ ।
ಸಾರಹೃದಯನು ತೆರಳಿದನು ಗಾಂ ।
ಧಾರದೇಶವನುಱದು ಜೀಮೂತಾಂಡಾತ್ಮಸಂಭವನ ॥೧೨॥

ಬಂದು ರಾಮನ ಪಾದಪದ್ಮದೊ ।
ಳಂದು ಮೈಯಿಕ್ಕಿದನು ರಿಪುಗಳ ।
ಕೊಂದು ತದ್ವಿಷಯದೊಳು ಪುಷ್ಕರತಕ್ಷಕರ ನಿಲಿಸಿ ॥
ಕುಂದುಕೊರತೆಗಳಿಲ್ಲದಂತೈ ।
ತಂದು ದೇವರ ಪಾದಪದ್ಮವ ।
ನಿಂದು ಕಂಡು ಕೃತಾರ್ಥನಾದೆನೆನುತ್ತ ಕೈಮುಗಿದ॥ ॥೧೩॥

ಆದೊಡೊಳ್ಳಿತ್ತೆನುತ ಭರತನ ।
ನಾದರಿಸಿ ವಿನಯದಲಿ ರಾಘವ ।
ಮೇದಿನೀಪತಿ ಸೋದರನೊಳಿಂತೆಂದ ವಿನಯದಲಿ ॥
ಆದೊಡಂಗದ ಚಂದ್ರಕೇತುಗ ।
ಳಾದ ಲಕ್ಷ್ಮಣತನುಜರಿರುವೊಡೆ ।
ಮೇದಿನಿಯದಾವೆಡೆ ಸುಜೇತವದಾಗಬೇಕೆಂದ ॥೧೪॥

ಎನೆ ಭರತನಿಂತೆಂದನಾರಘು ।
ತನುಜರೊಳಗೆಲೆ ರಾಮ ಲಕ್ಷ್ಮಣ ।
ತನುಜರಿಗೆ ತಾರಾಪಥೋರ್ವಿಯೆನಿಪ್ಪ ಪೆಸರೆಸೆವ ॥
ಜನಪದವದಿರ್ದಪುದು ನಾನಾ ।
ಜನಸಮೃದ್ಧಿಯೊಳೆನಲು ರಾಘವ ।
ತನುಜರಿಂಗಭಿಷೇಕವನು ಮಾಡಿದರು ಕುವರರಿಗೆ ॥೧೫॥

ಅಂಗದೀಯವೆನಿಪ್ಪ ಪುರದೊಳ ।
ಗಂಗದನನಾ ಚಂದ್ರಕಾಂತಪು ।
ರಾಂಗಣದೊಳಾಚಂದ್ರಕೇತುವನಿರಿಸಿ ಬಹುದೆನುತ ॥
ಅಂಗದನನಾಪಶ್ಚಿಮಕೆ ಚತು ।
ರಂಗಬಲದೊಡಗೂಡಿ ಕಳುಹಿದ ।
ನಂಗದೀಯಪುರಕ್ಕೆ ಲಕ್ಷ್ಮಣನೊಡನೆ ಬೇಗದಲಿ ॥೧೬॥

ಭರತನೊಡನಾಭದ್ರಕೇತುವ ।
ನಿರದೆ ಕಳುಹಿದನುತ್ತರಾಶಾ ।
ಧರಣಿಯೊಳಗಿಹ ಭದ್ರಕಾಂತಾಖ್ಯಾತಪುರವರಕೆ ॥
ಧರಣಿಪತಿ ಬಱಿಕವರು ತತ್ಪುರ ।
ವರಗಳೊಳು ತತ್ತನಯರನು ಸು ।
ಸ್ಥಿರಗಳಲಿ ನಿಲಿಸಿದರು ಸಮ್ಮತವೆನಿಸಿ ಪುರಜನವ ॥೧೭॥

ಭರತಲಕ್ಷ್ಮಣರಿರ್ದರೊಂದೇ ।
ವರುಷವಾಪುರಗಳಲಿ ರಾಮನ ।
ದರುಶನಕೆ ಬಱಿಕೈದಿದರು ಸಾಕೇತಪುರವರವ ॥
ತರಣಿವಂಶಜನಂಘ್ರಿಕಮಲಕೆ ।
ಶಿರವ ಮಣಿದರು ತತ್ಕುಮಾರರ ।
ನಿರಿಸಿ ಬಂದುದನಱುಹಿದರು ರಾಘವಮಹೀಪತಿಗೆ ॥೧೮॥

ಕೇಳಿ ತತ್ಕಾರ್ಯವನು ರಘುಭೂ ।
ಪಾಲ ಸಂತಸದಿಂದಲಿರುತಿರೆ ।
ಕಾಲನೆಯ್ದಿದನಂದು ತಾಪಸರೂಪವನು ಧರಿಸಿ ॥
ಪೇಟಲೇನಾಕ್ಷಣಕೆ ರಘುಭೂ ।
ಪಾಲನಿಲಯದ್ವಾರದೇಶಕೆ ।
ತಾಳೆ ಮನದೊಳಗೊಂದು ಕಾರ್ಯವನಱಿಯಬೇಕೆಂದ ॥೧೯॥

ಕರೆದು ಲಕ್ಷ್ಮಣನೊಡನೆ ಪಿತೃಪತಿ।
ಯೊರೆದನತಿಗುಪ್ತದಲಿ ರಾಮನ।
ದರುತನವನೆಯ್ದುಸು ಕುತೂಹಲಕಾರ್ಯವಿಹುದೆನಲು ॥
ಇರದೆ ಬಂದವನಿಪತಿಗೆ ಮಣಿದೆಲೆ।
ಧರಣಿಪತಿ ಬಾಗಿಲೊಳು ನಿಮ್ಮಯ।
ದರುಶನಕೆ ಬಂದಿಹನದೊರ್ವನಪೂರ್ವಮುನಿಯೆಂದ ॥೨೦॥

ಎಂದಡೊಳ್ಳಿತ್ತೆನುತ ರಾಘವ।
ನಂದು ಕಾಣಿಸಿಕೊಂಡು ಮುನಿಪಗೆ।
ವಂದಿಸಿದನೊಡನರ್ಘ್ಯಪಾದ್ಯಾಸನವನೊಲಿದಿತ್ತು॥
ಇಂದು ತವಚರಣಾಬ್ಜದರ್ಶನ।
ದಿಂದು ಸುದಿವಸವಾದುದಾವುದು।
ಬಂದ ಕಾರ್ಯವೆನುತ್ತ ಬೆಸಗೊಂಡನು ಮುನೀಶ್ವರನ ॥೨೧॥

ಆದೊಡೆಲೆ ಕಾಕುತ್ಸ್ಥ ಪೇಳ್ವಪೆ।
ನಾದರಿಸು ನಿನಗತಿರಹಸ್ಯವ।
ನೈದಿಪೆನು ನಾವೀರ್ವರಿದ್ದೆಡೆಗಾವನೈತರಲು ॥
ಹೋದೊಡಲ್ಲದೆ ಮಾಣದಸು ಸವಿ।
ಪಾದ ನಿನಗಹುದಾಪ್ತರನು ಮ।
ರ್ಯಾದೆದಪ್ಪದೆ ನಿಲಿಸು ಬಾಗಿಲೊಳೆಂದನಾಮುನಿಪ ॥೨೨॥

ಅನುಡಿಗೆ ರಘುಪತಿ ಸುಮಿತ್ರಾ।
ಸೂನುವಿಂಗೆಂದನು ಮದಾಜ್ಞೆಗೆ।
ಹಾನಿಹೊದ್ದದ ತೆಱದೆ ಬಾಗಿಲೊಳಿಹುದು ನೀನೆನುತ॥
ಸಾನುರಾಗದೊಳಿರಿಸಿ ಭಾಸ್ಕರ।
ಸೂನುಸಹಿತೇಕಾಂತಭವನ।
ಸ್ಥಾನದೊಳು ತತ್ಕಾರ್ಯವಾವುದೆನುತ್ತ ಬೆಸಗೊಂಡ ॥೨೩॥

ಆದೊಡೆಲೆ ರಾಜೇಂದ್ರ ಪೇಳ್ವಪೆ।
ನಾದರಿಪುದಂತಕನು, ಬರವೆನ।
ಗಾದುದಬ್ಜಾಸನನ ದೆಸೆಯಿಂದಿಂದು ನಿಮ್ಮೆಡೆಗೆ, ॥
ಆದಶಾನನ ಮುಖ್ಯರಾಕ್ಷಸ।
ರೈದಿದರು ಮರಣವನು ಭುವನವಿ।
ಪಾದವಡಗಿದುದೆಂಬುದನು ನಿಮಗಱುಹಬೇಕೆಂದ ॥೨೪॥

ಎಲೆ ನೃಪಾಲಕ ಕೇಳು ಸಾಕ್ಷಾ ।
ಜ್ಜಲಧಿಶಯನನು ನೀನೆ ಗಡ, ತವ ।
ಲಲಿತನಾಭ್ಯಂಬುರುಹದೊಳು ಸಂಜನಿಸಿ ತಾನು ಗಡ ॥
ಬಳಿಕ ಲೋಕೋತ್ಪತ್ತಿ ಕೃತಿಕಾ ।
ಕಲಕರಾಂಬುಜನಾದ ಗಡ ತ ।
ಜ್ಜಲಜಭವನೀಜಗವಿಹುದು ಗಡ ನಿನ್ನ ಜಠರದಲಿ ॥೨೫॥

ಹಿಂದೆ ಜಗಮೇಕಾರ್ಣವದೊಳ ।
ಧ್ದಿಂದು ಮಧುಕೈಟಭರೆನಿಪ ದಿತಿ ।
ನಂದನರ ನೀನಿರದೆ ಸೀಳಿದೆ ಗಡ ವಿನೋದದಲಿ ॥
ಅಂದಿನಿಂದೀಧರೆಗೆ ಮೇದಿನಿ ।
ಯೆಂದು ಪೆಸರವರವರ ಮೇದೋ ।
ವೃಂದದಿಂದಾವುದು ಗಡೆನಗಿದನುಸಿರಲಹುದೆಂದ ॥೨೬॥

ಪೊಡವಿಪತಿ ನೀನಿರುವೆ ಗಡ ಪಾ।
ಲ್ಗಡಲೊಳಗೆ ಶೇಷಾಹಿಶಯನದೊ ।
ಳೆಡೆವಿಡದೆ ಸನಕಾದಿಸುರಮುನಿವರರ ಗಡಣದಲಿ ॥
ಎಡಬಲದೊಳೋಲಗಿಸುತಿರ್ಪರು ।
ಗಡ ವಿಯಚ್ಚರ ಗರುಡ ಕಿನ್ನರ ।
ರೊಡನೆ ತುಂಬುರನಾರದರ ಸಂಗೀತಸೌಖ್ಯದಲಿ ॥೨೭॥

ಕ್ಷಿತಿಪ ಯುಷ್ಮತ್ಸ್ರಕೃತಿಪುರುಷ ।
ಸ್ಥಿತಿಯೆನಿಪ ಕೂಟದಲಿ ಲೀಲಾ ।
ಗತಿಯೊಳಗೆ ಮಾಯಾನಿತಂಬಿನಿ ಪುಟ್ಟಿ ಬಳಿಕ ಗಡ ॥
ವಿತತಸರ್ಗಸ್ಥಿತಿಲಯಂಗಳೆ ।
ಗತಿಶಯದೊಳಜಹರಿಹರರನು ।
ಸ್ನತವೆನಿಸಿ ರಚಿಸಿದಳು ಗಡ ತಾನಾಡಲರಿದೆಂದ ॥೨೮॥

ಇಹುದು ಗಡ ತವ ರೋಮಕೂಪದ ।
ಕುಹರದಲಿ ಶತಕೋಟಿ ಪಂಕೇ ।
ರುಹಭವಾಂಡಗಳವರಿಗಾತ್ಮಕರು ನೀನೆ ಗಡ ॥
ದ್ರುಹಿಣನಿಂತಿದನಾಡಿ ನಿನ್ನಯ ।
ಮಹಿಮೆಯನು ವೈಕುಂತಕೈದುವೊ ।
ದಹಿಶಯನ ನಿನಗರುಹಲೆಂದಟ್ಟಿದನು ಕೇಳೆಂದ ॥೨೯॥

ಉಗ್ರರಿಪುವಧೆಗೆಂದು ಮಾನುಷ ।
ವಿಗ್ರಹವ ತಾಳ್ದಿ ಗಡ ಪೂರ್ಣ್ಕೆ ಸ ।
ಮಗ್ರವಾದುದು ಗಡ ತವಾಜ್ಞಾಬಲಕಿದಲ್ಪ ಗಡ ॥
ನಿಗ್ರಹಾನುಗ್ರಹ ಸಮಗ್ರೋ ।
ದಗ್ರಮಹಿಮೆಗೆ ನಿನಗೆ ಮಾನುಷ ।
ವಿಗ್ರಹವಿದೇನಿರದು ನೀನೆ ವಿಚಾರಿಸಿದನೆಂದ ॥೩೦॥

ಬೇಹುದೆನೆ ನೃಪ ಮತ್ಸ್ಯಕೂರ್ಮವ ।
ರಾಹ ನರಹರ್ಯಕ್ಷ ವಾಮನ ।
ಸಾಹಸೋನ್ನತಪರಶುರಾಮಾಕೃತಿಯು ತಾಳ್ದಿ ಗಡ ॥
ಆಹರಿಹಯಾದ್ಯಖಿಳದೇವಸ ।
ಮೂಹರಕ್ಷಣೆಗೆಂದು ಮಾನವ ।
ದೇಹವಿದನದಱಂತೆ ಕಾಣ್ಬುದೆ ಕಾರ್ಯಗತಿಯೆಂದ ॥೩೧॥

ಸುರರೊಡನೆ ಹನ್ನೊಂದು ಸಾಸಿರ ।
ಚರಿಸದಂತದೊಳೈದುವೆನು ವರ ।
ಪರಮಪದವೆಂದೆನಿಸುತಿಹ ವೈಕುಂತಪುರವರವ ॥
ನಿರುತವೆಂದಿಡನಾಡಿ ಮತ್ತವ ।
ತರಿಸಿ ಮಾನವಲೀಲೆಗಳನಾ ।
ಚರಿಸಿದಂದ ಗಡಿನ್ನು ಪೇೞುವುದೇಕೆ ನಿನಗೆಂದ ॥೩೨॥

ಎಂದ ಭಾಸ್ಕರನಂದನನೊಳಿಂ ।
ತೆಂದನವನೆಲೆಲೇ ಕೃತಾಂತ ಪು ।
ರಂದರಾದಿಸಮಸ್ತದಿವಿಜರು ಸಹ ವಿಮಾನಗಳ ॥
ವೃಂದದೊಡನೆಯ್ದುವುದು ಸರಯೂ ।
ಸಿಂಧುತೀರವನೆಂದು ನೀನರ ।
ವಿಂದಸುತಗಱುಹೆಂಬನಿತಕ್ಕೈದಿದನು ದುರ್ವಾಸ ॥೩೩॥

ಅಂದು ರಾಜದ್ವಾರದೊಳು ಮುನಿ ।
ನಿಂದು ಲಕ್ಷ್ಮಣನೊಡನೆ ಕರೆದಿಂ ।
ತೆಂದು ನುಡಿದನು ರಾಮನಾವೆಡೆ ಬೇಗ ತೋಱೆನಲು ॥
ವಂದಿಸುತಲಾಮುನಿಗೆ ರಾಘವ ।
ನಂದನಂಗೇಕಾಂತಸಮಯವಿ ।
ದೊಂದು ನಿಮಿಷ ಮುನೀಂದ್ರ ಸೈರಿಪುದೆನಲು ಖತಿಗೊಂಡ ॥೩೪॥

ಹಾಱಿದುದು ತವೆ ಕೋಪಶಿಖಿ ಕುಡಿ।
ಯೇಱಿದುದು ಕಣ್ಣಾಲಿ ಕೆಂಡವ।
ಕಾಱಿದುದು ಹಿಡಿ ಶಾಪವನು ನಿಮ್ಮಗ್ರಜಾನುಜರ॥
ಬೇಱೆ ಮಾತೇನೆನಗೆ ರಾಮನ।
ತೋಱದಿಹ ನಿನ್ನೊಡನೆ ಸುಡುವೆನು।
ಮೀಱುವುದು ಕೋಪಾಗ್ನಿ ಕೇಳೆನುತೆತ್ತಿದನು ಕರವ ॥೩೫॥

ಆದೊಡೆಲೆ ಮುನಿನಾಥ ರಾಘವ।
ಮೇದಿನೀಶನನೆಯ್ದಿ ನಿಮ್ಮಯ।
ಪಾದದರ್ಶನಕೈದಿಪೆನು ಬೇಗೆನುತ ಸೌಮಿತ್ರಿ॥
ಹೋದನಾರಘುಪತಿಯ ಹೊರೆಗತಿ॥
ಖೇದದಲಿ ತನ್ನೃಪನನೆಯ್ದಿದೊ।
ಡೈದುವುದು ಮೃತಿಯೆಂದ ಕೃತಸಂಕೇತವಱಿದಱಿದು ॥೩೬॥

ಧರಣಿಪತಿಯುರಮನೆಯ ಬಾಗಿಲೊ।
ಳಿರುತಿಹನು ದುರ್ವಾಸಮುನಿ ತವ।
ದರುಶನೋದ್ಯಮನತಿಕುಪಿತಮನನೆಂದು ಬಿನ್ನವಿಸೆ॥
ಬರಲೆನುತಲಿದಿರೆದ್ದು ಮುನಿಪದ।
ಸರಸಿರುಹಕಭಿನಮಿಸಿ ನಿಮ್ಮಯ।
ಬರವಿದೆಮ್ಮಯ ಪುಣ್ಯವೆಂದರಮನೆಗೆ ಕರೆದುಯ್ದು ॥೩೭॥

ಮತ್ತೆ ಮುನಿವರನರ್ಘ್ಯಪಾದ್ಯವ।
ನಿತ್ತುತನ್ಮುನಿವರನ ಹರಕೆಯ।
ನುತ್ತಮಾಂಗದೊಳಾಂತು ದೇವರ ಬರವಿದೇನೆನಲು॥
ಉತ್ತಮವಲಾ ರಾಮ ನಿನ್ನಯ।
ಚಿತ್ತವೃತ್ತಿ ಮಹಾ ಕ್ಷುಧಾರ್ಥಂ।
ಗಿತ್ತಸಗೆ ಭೋಜನವ ಬೞಿಕುಪಚರಿಸು ನೀನೆಂದ ॥೩೮॥

ಎಂದೊಡೊಳ್ಳಿತೆನುತ್ತ ರಾಘವ।
ನೆಂದು ಮುನಿಶಾರ್ದೂಲಗತ್ಯಾ।
ನಂದದಿಂದುಣಬಡಿಸಲಾರೋಗಿಸಿ ವಿನೋದದಲಿ॥
ಹಿಂದೆ ಸಾಸಿರವರುಷ ತಪವಿ।
ರ್ದಂದು ಭುಜಿಸಿದೆನ್ನೈ ಮಹೀಪತಿ।
ಯೆಂದು ಬೇಳ್ಕೊಂಡೆಬ್ಬಿಸಿದನು ಮುನಿ ಹರಸಿ ರಾಘವನ ॥೩೯॥

ಧರಣಿಪತಿ ಪಿತೃಪತಿಯನಾಸರ ।
ಸಿರುಹಸಂಭವನೆಡೆಗೆ ಬೀಳ್ಕೊ ।
ಟ್ಟರದೆ ಬಂದು ವಿಷಾದಮನನೋಲಗದ ಶಾಲೆಯಲಿ ॥
ಹಿರಿದು ಚಿಂತಿಸುತಿರೆ ವಸಿಷ್ಠಾ ।
ದ್ಯರುಗಳೈತಂದವನಿಪನ ಮುಖ ।
ಸರಸಿಜಕೆ ಹಿಮವಾವಸಿಂದಾಯ್ತೆನುತ ಮಱುಗಿದರು ॥೪೦॥

ಅನಿತಱೊಳು ಸೌಮಿತ್ರಿ ನೃಪಪದ ।
ವನಜಕಾನತನಾಗಿ ನುಡಿದನು ।
ಜನಪ ಚಿಂತಿಸದಿರು ತವಾಜ್ಞೆಗೆ ಹಾನಿ ಹುಗದಂತೆ ॥
ದಿನದಿನಕೆ ಪಾಲಿಪುದು ಕೀರ್ತಿಯೆ ।
ಘನವಲಾ ಲೋಕದೊಳು ತನ್ನಯ ।
ನೆನಹನುಱೆ ಸದ್ಗತಿಗೆ ಪೋದಪೆನೆನುತ ಪೇಳ್ಕೊಂಡ ॥೪೧॥

ಎತ್ತಣದ್ಭುತವೆನುತ ಸಭೆ ಮಱು ।
ಗಿತ್ತು ರಘುಭೂಪಾಲನೊಲೆದೊಲೆ ।
ದುತ್ತಮಾಂಗವನಾಡಿದನು (ಕುಲಗುರು) ವಸಿಷ್ಠನೊಳು ॥
ಚಿತ್ತವಿಸು ಮುನಿ ಬಂದು ಕಾರ್ಯ್ಯನಿ ।
ಮಿತ್ತವಿನ್ನೆಡೆಗೈದಿದನು ಮುನಿ ।
ಪೋತ್ತಮನು ಬಱಕೋರ್ವನದ್ಭುತರೂಪಯುತನೆಂದ ॥೪೨॥

ಆತನೊಡನೇಕಾಂತದೊಳು ಸಂ ।
ಪ್ರೀತಿಯಿಂದಾನಿರುವ ಬಱಗಾ ।
ವಾತನೆಯ್ದಿದೊಡಾತಗಪ್ಪುದು ಮರಣವೆಂದೆನುತ ॥
ಮಾತ ನುಡಿದನು ತತ್ಥಲಕ್ಕನು ।
ಜಾತನೆಯ್ದಿದನಿದಕೆ ಮುನಿವರ ।
ನೀತಿದಪ್ಪದೆ ಸತ್ಯವನು ತನಗುಸಿರಬೇಕೆಂದ ॥೪೩॥

ಅರಸ ಕೇಳೈ ಜಗಕೆ ಕೀರ್ತಿಯೆ ।
ಪರಮಸಾಧನವೈಸೆ ಪೂರ್ವದ ।
ಧರಣಿಪಾಲರ ನಳಹರಿಶ್ಚಂದ್ರಾದಿಭೂಭುಜರ ॥
ಚರಿತೆಗಳನೀಲೋಕವೆಂಬುದು ।
ಕರತಲಾಮಲಕಂಗಳೆನೆ ನೃಪ ।
ವರ ತವಾಜ್ಞೆಗೆ ಹಾನಿ ಹೊದ್ದದ ತೆಱದೊಳೆಸಗೆಂದ ॥೪೪॥

ಅದೊಡೊಳ್ಳಿತ್ತೆನುತ ನೃಪನತಿ ।
ಖೇದದಿಂದಿರುತಿರಲು ಲಕ್ಷ್ಮಣ ।
ನೈದಿ ತನ್ನರಮನೆಯುನಾಪ್ತರಿಗಱುಹಿ ನಿಜಮತವ ॥
ಐದಿ ಸರಯೂನದಿಯುನಾದಿ ।
ವ್ಯೋದಕದೊಳಡಿದೊಳೆದು ಪರಮಾ ।
ಹ್ಲಾದಮುನನೀಕ್ಷಿಸಿದನಮಲಜ್ಞಾನದರ್ಪಣವ ॥೪೫॥

ಯಮ ನಿಯಮ ಮೊದಲಾದ ಯೋಗ ।
ಕ್ರಮುವಱಿತು ಪಂಚೇಂದ್ರಿಯಂಗಳ ।
ನೆಮೆ ಮಿಡುಕದಂತೊತ್ತಿ ಚಿತ್ತದ ನೆಲೆಯೊಳೊಡಗಲಿಸಿ ॥
ಶಮೆಯುಡುಗದಾಪ್ರಾಣಮರುತನ ।
ನಮಲಪರಮಾತ್ಮನೊಳು ಬಂಧಿಸಿ ।
ಯಮೃತನಾಡಿ ಸುಷುಮ್ನೆಯೊಳು ಲಂಬಿಸುವ ಸಮುಯದೊಳು ॥೪೬॥

ಬಂದುದೊಡನೆ ವಿಮಾನವಂದರ ।
ವಿಂದತನಯುನ ಕರದೊಳಗೆ ತ ।
ತ್ಸಿಂಧುತೀರಕೆ ಜೀಯ ಜಯುಯೆಂದುಲಿವ ಸುರರೊಡನೆ ॥
ನಿಂದು ಕೈಗುಡಲಬ್ಜಭವಸಂ ।
ಕ್ರಂದನರು ಸೌಮಿತ್ರಿಯಡರಿದ ।
ನಂದು ದಿವ್ಯವಿಮಾನವನು ಸಶರೀರನೊಲವಿನಲಿ ॥೪೭॥

ಸಂಶಯುವೆ ಸಾಕ್ಷಾತ್ಪರಮಪುರು ।
ಷಾಂಶವೈದಿತು ನಾಲ್ಕಱೊಳಗೊಂ ।
ದಂಶನೆಂದತಿಹರ್ಷದೊಳು ಸುರರಂದು ನೋಡುತಿರೆ ॥
ಕಿಂಶುಕಾರುಣಕಾಂತಿಯುತಪೀ ।
ತಾಂಶುಕದೊಳೊಪ್ಪಿದುದು ತನು ಚಂ ।
ಡಾಂಶುಹಿಮುಕರರಂತೆ ಚಕ್ರಾಂಬುಜಗಳೊಪ್ಪಿದುವು ॥೪೮॥

ಸುರರು ಹರ್ಷವನೊಂದಿದರು ಸರ ।
ಸಿರುಹಭವನಾನಂದಿಸಿದನ ।
ಚ ರಿಯುರೊಲಿದಾಡಿದರು ನಾಟ್ಯವ ಗಗನದಗಲದಲಿ ॥
ಪರಮುಪದವೆಂದೆನಿಸಿದುದು ಸುರ ।
ಪುರವದೇನೆಂದಪೆನು ರಾಮಾ ।
ವರಜನೈತರೆ ಬಹಳವೈಷ್ಣವತೇಜದೆಸಕದಲಿ ॥೪೯॥

ನೊಂದು ಸೌಮಿತ್ರಿಯ ವಿಯೋಗದೊ ।
ಳೆಂದು ರಘುಪತಿ ಭರತನೊಡನಿಂ ।
ತೆಂದು ನುಡಿದನು ತಮ್ಮ ರಾಜ್ಯಾಂಗನೆಗೆ ಪತಿಯೆನಿಸಿ ॥
ತಂದೆ ನೀನಿರ್ಪುದು ಸುಮಿತ್ರಾ ।
ನಂದನನ ಸನ್ಮಾರ್ಗವನು ಬಳಿ ।
ಸಂದು ಸುರಪುರಿಗರಸನಪ್ಪುದೆ ಕಾರ್ಯವೆನಗೆಂದ ॥೫೦॥

ದೇವರಂಘ್ರಿಯನುಳಿದು ರಾಜ್ಯ ।
ಶ್ರೀವಧುವನಪ್ಪುವೆನೆ ದೇಹಿಯು ।
ನೋವದಸ್ಥಿರವೆನಿಪ ದೇಹವನೋವ ನರನಂತೆ ॥
ಜೀವಿಪೆನೆ ತಾನಕಟ ನಿಮ್ಮಡಿ ।
ದಾವರೆಯನಿನಿಸುಳಿದು ದೇವರ ।
ದಾವೆಡೆಯನೆಯ್ದುವಿರದೇ ಗತಿ ತನಗೆ ನಿಜವೆಂದ ॥೫೧॥

ಎಂದೊಡೊಳ್ಳಿತ್ತೆನುತ ಕೋಸಲ ।
ವೆಂದೆನಿಪ ಧರಣೀಸತಿಯು ಮೊಗ ।
ದಂದದೆಸೆವ ಕುಶಾವತಿಯೊಳಗೆ ಕುಶನನೊಲಿದಿರಿಸಿ ॥
ಕುಂದೆನಿಸುವುತ್ತರಧರಿತ್ರೀ ।
ಸುಂದರಿಯ ಸೀಮಂತರತ್ನವಿ ।
ದೆಂದೆನಿಪ ಶರಾವತೀಪುರದಿರಿಸಿದನು ಲವನ ॥೫೨॥

ಕರೆಸು ಶತ್ರುಘ್ನನನು ಮಧುರಾ ।
ಪುರಿಗೆ ದೂತರ ಕಳುಹು ಬೇಗೆನೆ ।
ಭರತನಾಕ್ಷಣವೋಡಿಸಿದನತಿತೀವ್ರತರಚರರ ॥
ಭರದೊಳವರೈತಂದು ಲಕ್ಷ್ಮಣ ।
ನುರುಗತಿಗೆ ಪೋದುದನು ಭೂವಿಶ ।
ಶ್ವರನ ಗಮನೋದ್ಯೋಗವನು ಶತ್ರುಘ್ನಗುಸುಹಿದರು ॥೫೩॥

ಬಂದನಾಪುರವರದೊಳಗೆ ನಿಜ ।
ನಂದನರನೊಲಿದಿರಿಸಿ ರಾಘವ ।
ನಂದನನ ಪದದರ್ಶನಕೆ ಶತ್ರುಘ್ನನೊಲವಿನಲಿ ॥
ನಿಂದೆಡೆಯೊಳಿನಿಸಿರದೆ ಹಾದಿಯ ।
ದಂದುಗವನೀಕ್ಷಿಸದಯೋಧ್ಯೆಯ ।
ನೊಂದೆರಡು ದಿನಕ್ಕೈದಿ ಕಂಡನು ರಾಘವೇಶ್ವರನ ॥೫೪॥

ಚರಣಕೆಱಗಿದ ಸೋದರರನಾ ।
ಧರಣಿಪತಿ ಸೆಳೆದಪ್ಪಿ ಲಕ್ಷ್ಮಣ ।
ನಿರವ ಕಂಡೈ ತಮ್ಮ ನೀನೀರಾಜ್ಯದೊಡೆತನವ ॥
ಧರಿಸಬೇಕೆನೆ ದೇವರಡಿದಾ ।
ವರೆಯೆನಗೆ ಸಾಮ್ರಾಜ್ಯವೆನೆ ನೃಪ ।
ಪರಮಪದವಿಯನೆಯ್ದುವಂದವನೆಸಗಬೇಕೆಂದ ॥೫೫॥

ಅದೊಡೊಳ್ಳಿತ್ತೆನುತ ಸುಗ್ರೀ ।
ವಾದಿ ಕಪಿವೀರರನು ರಾಘವ ।
ಮೇದಿನೀಪತಿ ವರವಿಭೀಷಣನೊಡನೆ ಕರೆಸಿದನು ॥
ಪಾದಕೆಱಗಿದೊಡವರನುರುಕರು ।
ಣೋದಕದೊಳದ್ದಿದನು ಪರಪದ ।
ಕೈದುವುದನಱುಹಿದನು ಪರಿಷದ್ವಲಯಮಧ್ಯದಲಿ ॥೫೬॥

ಅಕ್ಷಯಾತ್ಮ ವಿಪಕ್ಷದಾಸವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷ ಸುರಮುನಿರಕ್ಷ ಸುಜನಾ ।
ಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥೫೭॥

ಇಂತು ಹತ್ತೊಂಭತ್ತನೆಯ ಸಂಧಿ

---

## ಇಪ್ಪತ್ತನೆಯ ಸಂಧಿ.

---

ಸೂಚನೆ॥ ಸರಸಿಜಾಸನ ಶಕ್ರಮುಖ್ಯಾ ।
ಮರರು ಜಯಜಯವೆನಲು ರಘುಪತಿ ।
ಪರಮಪದವಿಯನೈದಿದನು ನಿಜಸೋದರರು ಸಹಿತ॥

ಪೇಳಿದನು ವಾಲ್ಮೀಕಿ ಸಾಕ್ಷಾ ।
ಚ್ಚೈಲಲನೆಯಧಿನಾಥನೆಸಗಿದ ।
ಲೀಲೆಯನು ಮೋಕ್ಷಾಂಗನೆಯ ಕಿವಿಯೊಲವಿನೋಲೆಯನು॥
ಕೇಳಿ ರೋಮಾಂಚದ ಮರುನ್ಮಣಿ ।
ಮಾಲೆಯನು ಕರ್ಣಾಮೃತದ ಸುಖ ।
ಶಾಲೆಯನು ರಘುರಾಮಚರಿತಾಂಭೋಧಿಮಾಲೆಯನು ॥೧॥

ರಾಮನಾಡಿದ ನುಡಿಗೆ ಶೀರ್ಷ ।
ಸ್ತೋಮವನು ತೂಗಿದರು ಮುನಿಗಳು ।
ಹಾ ಮಹಾದೇವೆನುತ ಸಭೆ ಮೆಱುಗಿದುದು ಬೆಱಗಿನಲಿ ॥
ಪ್ರೇಮಪೂರ್ವಕದಿಂದ ರಾಘವ ।
ಭೂಮಿಪಾಲನ ಮೃದುಪದಾರುಣ ।
ತಾಮರಸಕಭಿನಮಿಸಿ ನುಡಿದನು ಬೞಿಕ ಸುಗ್ರೀವ ॥೨॥

ದೇವರೈದಿದ ಮೇಲೆ ಬೇಱೆಮು ।
ಗಾವ ಗತಿಯುದಱಿಂದ ನಿಮ್ಮಡಿ ।
ದಾವರೆಯನೋಲಗಿಸಿ ಬಪ್ಪುದೆ ಗತಿಯು ತಮಗೆನುತ ॥
ಆವಿವಸ್ವತ್ಸೂನು ನಿಜಸ ।
ದ್ಭಾವದಿಂದಂಗದಗೆ ರಾಜ್ಯ ।
ಶ್ರೀವಧೂದ್ವಾಹವನು ಮಾಡಿದನಧಿಕವಿಭವದಲಿ ॥೩॥

ರಾವಣಾಂತಕನೊಡನೆ ಪಯಣವ ।
ನಾವಿವಸ್ವತ್ಸೂನುವಂತ ।
ಭಾರ್ಗವದಲಿ ಒಲಿದಿರ್ಪಸಮಯದೊಳಖಿಲಜನವಿತತಿ ॥
ಜೀವಿಸಿದೆವೈ ರಾಮ ನಿನ್ನ ಕೃ ।
ಪಾವಲೋಕನದಿಂದ[ಪದರಾ ।
ಜೀವದೆಡೆಯೊಳಗಿಹುದೆ ಗತಿಯೆಮಗೆಂದ]ರೊಲವಿನಲಿ ॥೪॥

ರಾಮ ನಿನ್ನ ವಿಯೋಗದೊಳಗೀ ।
ಭೂಮಿಯೊಳಗಿಹ ಮಾತು ಬೂದಿಯು ।
ಹೋಮವೈಸಲೆ ಸದ್ಗತಿಯನೊಂದುವೆವು ನಿನ್ನೊಡನೆ ॥
ಈಮುನಿಸ್ತೋಮವನು ಕೈವಿಡಿ ।
ದಾಮಹಾಗತಿಗೈದಿಸಲು ಸು ।
ಕ್ಷೇಮ ನಿನಗಹುದೆಂದು ಮುನಿಗಳು ಹರಸಿದರು ನೃಪನ ॥೫॥

ಪೊಡವಿಪತಿ ಬೞಿಕಾವಿಭೀಷಣ ।
ನೊಡನೆ ನೆರೆದಿಂತೆಂದನೆಮ್ಮಯ !
ನುಡಿಗೆ ಮಾಱುತ್ತರವ ನುಡಿಯದಿರೆಂದನೊಲವಿನಲಿ ॥
ನಡೆವುದೆಮ್ಮಯ ಚರಿತವೀಜಗ ।
ದೆಡೆಯೊಳೆನಿತುದಿನಂಗಳನಿತಱೊ ।
ಳಡಿಯಿಡುವುದಿದು ತಥ್ಯ ನೀನೆಂದೆನುತ ಜೀಟ್ಕೊಟ್ಟ ॥೬॥

ಕರೆದು ಬಳಿಕ ಸವಿಾರತನಯನ ।
ನರಸರಾಘವನೆಂದನೆಲೆ ಕಪಿ ।
ವರ ಮದುಕ್ತಿಯ ವಿಾಱದಿರು ನಿನಗಂದು ಜಗವಱಿಯೆ ॥
ವಿರಚಿಸಿದೆವಿದನೊಮ್ಮೆ ನಾವೀ ।
ಧರೆಯೊಳಪರಬ್ರಹ್ಮಪದವಹ ।
ಪರಮಪದವಿಯನೆನುತ ನೆಲೆಗೊಳಿಸಿದನು ಮಾರುತಿಯ ॥೭॥

ಬಳಿಕ ಜಾಂಬವನೊಡನೆ ರಘುಕುಲ ।
ತಿಲಕನಿಂತೆಂದಾಡಿದನು ಬಾ ।
ರೆಲೆ ಪಿತಾಮಹತನಯ ಕಲಿಯುಗವೈದುವನ್ನೆವರ ॥
ಇಳೆಯೊಳಿರ್ಪುದು ನೀನು ಕಾರ್ಯಗ ।
ಳೊಳವು ತಾನದನಾಡಿದೊಡೆ ನಿ ।
ಷ್ಫಲವೆನುತ ಸಂತೈಸಿ ಬೀೞ್ಕೊಳಿಸಿದನು ಜಾಂಬವನ ॥೮॥

ಹಿರಿದು ನುಡಿಯುವುದೇನಯೋಧ್ಯಾ ।
ಪುರದ ನಾನಾಜನವಿತತಿ ರಘು ।
ವರನೊಡನೆ ಪಯಣವನು ನಿಶ್ಚಯಿಸಿದುದು ತನತನಗೆ ॥
ಧರಣಿಯಮರರು ಬಾಹುಜರು ವೈ ।
ಶ್ಯರು ಜಘನ್ಯಜರಾದಿಯಾಗಿಹ ।
ಪರಿಪರಿಯ ವರ್ಣಾಶ್ರಮದ ಜನವಧಿಕಹರ್ಷದಲಿ ॥೯॥

ಬಳಿಕ ಪೌರೋಹಿತನೊಡನೆ ನೃಪ ।
ತಿಳಕನಿಂತೆಂದನು ಸದಾಜ್ಯ ।
ಜ್ವಲಿತ ಹುತವಹನಗ್ನಿಹೋತ್ರವನೆಯ್ದುಲೆಮ್ಮೊಡನೆ ॥
ತಳುವಿದೇಕೆನೆ ತನ್ನೃಪಾಲನ ।
ಬಳಸಿ ನಾನಾಯಾಗತತಿ ಹೊಳೆ ।
ಹೊಳೆವ ಮೂರ್ತಿಯನಾಂತು ನಡೆದುವು ಮುಂದೆ ಸಂದಣಿಸಿ ॥೧೦॥

ಮೇದಿನೀಪತಿ ಧೌತವಸನಾ ।
ಚ್ಛಾದದೇಹನತೀವ ಪರಮಾ ।
ಹ್ಲಾದಮನನಳವಡಿಸಿ ದರ್ಭಾಗ್ರಗಳನಂಗುಲಿಗೆ ॥
ಸೋದರಾನ್ವಿತನುೞಿದಯೋಧ್ಯೆಯ ।
ನೈದಿದನು ಸುಬ್ರಹ್ಮತೇಜದೊ ।
ಳೈದೆ ತನ್ನನನೇಕಮುನಿವರರಂದು ಹರ್ಷದಲಿ ॥೧೧॥

ರಾಮನೊಡನೈದಿದರು ಮುದದಲಿ ।
ಭೂಮಿಯುಮರಪ್ರಭೃತಿವರ್ಣ ।
ಸ್ತೋಮವಾಪುರವರದ ಪಶುಮೃಗಪಕ್ಷಿಗಣಸಹಿತ ॥
ಹಾ ಮಹಾದೇವೇನನೆಂದಪೆ ।
ನಾಮಹಾತ್ಮನ ಮಹಿಮೆಯುನು ಮಾ ।
ಯಾಮನುಜಲೀಲಾಪ್ರಕೃತಿ ತಾನೈಸಲೇ ಎಂದ ॥೧೨॥

ಭೂರಮಣನಿರದೈದಿ ಸರಯೂ ।
ತೀರವನು ಕರಚರಣಮುಖಸರ ।
ಸೀರುಹಂಗಳ ತೊಳೆದು ಗಗನವನೊಯ್ಯನೀಕ್ಷಿಸುತ ॥
ವಾರಿಜಾಸನ ಮುಖ್ಯದಿವಿಜರು ।
ಚಾರುಕರಕಮಲಗಳ ಮುಗಿದರು ।
ಸೇರುವೆಯೊಳೆನೆ ರಾಮಚಂದ್ರಂಗರಿದದೇನೆಂದ ॥೧೩॥

ಮಾನವಾಂಗದ ಜವನಿಕೆಯು ಲ ।
ಕ್ಷ್ಮೀನಿವಾಸನ ಹೊರೆಗೆ ದಿವ್ಯವಿ ।
ಮಾನಸಹಿತಿಳಿದನು ಸುರೋರುಹಗರ್ಭನೊಲವಿನಲಿ ॥
ತಾನೆ ರಾಮನ ಕೋಮಲಾಂಘ್ರಿನ ।
ವೀನಕಮಲಂಗಳನು ರತ್ನವಿ ।
ಮಾನದೊಳು ನೆಲೆಗೊಳಿಸಿದನು ಭಯಭರಿತಭಕ್ತಿಯಲಿ ॥೧೪॥

ದೇವ ದಿವ್ಯಶರೀರವಿದೆ ರಾ ।
ಜೀವಲೋಚನ ಚಿತ್ತವಿಪುದೆನ ।
ಲಾವಿಮಲವೈಷ್ಣವಶರೀರವನೆಯ್ದಿತಾಕ್ಷಣಕೆ ॥
ಭೂವರನ ತನು ನೆರೆದು ನೋಡುವ ।
ದೇವತತಿ ಬೆಱಗಾಗೆ ದೇವರ ।
ದೇವನಿದ್ದನು ವಿಷ್ಣು ಸಾಕ್ಷಾತ್ಪ್ರಕೃತಿಮಯನೆನಿಸಿ ॥೧೫॥

ಭರತಶತ್ರುಘ್ನರುಗಳಾಶ್ರೀ ।
ವರನ ದಿವ್ಯಶರೀರದೊಳು ವೈ ।
ಗಱೆದರೆನೆ ಸಶರೀರರೇನೆಂಬೆನು ಮಹೀಧರನ ॥
ಪರಮಲೀಲಾಚರಿತವನು ವಿ ।
ಸ್ತರಿಸಲಜಪುರುಹೂತಮುಖ್ಯಾ ।
ಮರರ ಮತಿಗಳಿಗರಿದು ಬಣ್ಣಿಪನಾವನಿದನೆಂದ ॥೧೬॥

ಆದಿಪುರುಷನನೈದಿದುದು ಮು।
ನ್ನಾದಿಯಲಿ ವೈಷ್ಣವಶರೀರದೊ।
ಳೈದಿ ಭಿನ್ನಾಕೃತಿಯೊಳಿಹ ಲಕ್ಷ್ಮಣಶರೀರವದು ॥
ಆದಿತೇಯಪ್ರತತಿ ಹರ್ಷವು।
ಹೋದಧಿಯೊಳಾಱಿದುದು ಪರಮಾ।
ಹ್ಲಾದಮತಿ ಭಜಿಸಿದನು ನೀರಜಗರ್ಭನಚ್ಯುತನ ॥೧೭॥

ದೇವ ದೇವ ಮುಕುಂದ ಲಕ್ಷ್ಮೀ।
ಜೀವಿತೇಶ ಸುರೇಶ ದಾನವ।
ದಾವಶಿಖಿ ಸುಯಮೀಂದ್ರಹೃದಯಾವಾಸ ಪರಮೇಶ ॥
ದೇವ ನಂದಕಶಂಖಚಕ್ರಗ।
ದಾವಿರಾಜಿತಭುಜಚತುಷ್ಟಯ।
ದೇವ ಜಯಜಯಯೆನುತ ಸೈಗೆಡೆದಿರ್ದನಿದಿರಿನಲಿ ॥೧೮॥

ಕರೆದು ಕಮಲಾಸನನೊಡನೆಯಂ।
ಬುರುಹಲೋಚನನೆಂದನೆಲೆ ಸರ।
ಸಿರುಹಭವ ನಮ್ಮೊಡನೆ ಬಂದೀಸಕಲಜೀವರಿಗೆ॥
ಇರುವುದೊಂದು ನಿವಾಸದೇಶವ।
ಸುರುತರದ ಲೋಕಾಂತರವ ನೀ।
ನಿರದೆ ಮಾಳ್ಪುದು ಬೇಗವೆನಗೆಂದೆನುತ ನಿಯಮಿಸಿದ ॥೧೯॥

ಎಂದೊಡೊಳ್ಳಿತೆನುತ್ತ ಪರಮಾ।
ನಂದದಲಿ ಸಾಂತನಿಕನಾಮದೊ।
ಳೊಂದಿ ಮೆಱೆವಿಹ ಲೋಕದೊಳಗಿರಲಖಿಳಜನನೆನುತ॥
ಸಂದಣಿಪ ನಾನಾವಿಮಾನವ।
ನಂದು ತರಿಸಿದನಲ್ಲಿಗಂದರ।
ವಿಂದಸುತನತಿಹರ್ಷವನು ತಾಳಿದುದು ನಿಖಿಳಜನ ॥೨೦॥

ಬಂದು ಸರಯೂನದಿಯ ಜಲದೊಳು।
ಮಿಂದು ಪೂರ್ವಶರೀರವನು ಬಿ।
ಟ್ಟೊಂದಿದುದು ಜನವಿತತಿ ದಿವ್ಯಶರೀರಸಂಗತಿಯ ॥
ನಿಂದುದಾಸಾಂತನಿಕಲೋಕದೊ।
ಳೊಂದುಱಿಯದಂತಖಿಳಜನವಾ।
ನಂದದಲಿ ವೈಕುಂಠಪುರಿಗೈದಿದನು ಹರಿ ಬೞಿಕ ॥೨೧॥

ಆಮಹಾಸಾಕೇತಪುರವದು ।
ರಾಮನೈದಿದ ಬಳಿಕ ವಿಜನ ।
ಸ್ತೋಮವಾಗಿಯನೇಕದಿನವಿರುತಿರೆ ತದನ್ವಯದ ॥
ಭೂಮಿಪಾಲರೊಳುದಿಸಿ ತತ್ಪುರ ।
ಕಾಮಿನಿಗೆ ಪತಿಯೆನಿಸಿ ಶೌರ್ಯೋ ।
ದ್ದಾಮನಿದ್ದನು ವೃಷಭನೆನೆ ಮಂಗಲವಿದೀಕೃತಿಗೆ ॥೨೨॥
ಕಾಲಕಾಲಕೆ ಕೊಳ್ಗೆ ಮಳೆ ಭುವ ।
ನಾಳಿಗೊದವುಗೆ ಸಸ್ಯಕುಲ ಸುಫ ।
ಲಾಳಿಯಾನಂದದಲಿ ಜೀವಿಸುಗಖಿಲಭುವನಜಯಃ ॥
ಪೇಳಲೇನಾಚಂದ್ರತಾರಕ ।
ವೀಲಸತ್ಕಾವ್ಯಾಮೃತವನೊಲಿ ।
ದಾಲಿಸುಗೆ ಸುಜನಾಳಿ ಬೆಳಗುಗೆ ಕೀರ್ತಿ ಕೃತಿಪತಿಗೆ ॥೨೩॥
ದಾಟುವರೆ ರಾಮಾಯಣಾಬ್ಧಿ ನೃ ।
ಕೀಟದೂಷಣಮತಿಗಹುದೆ ಶತ ।
ಕೋಟಿವಿಸ್ತರವೆನಲು ಚಂದ್ರಾದ್ಯರಿಗಲಂಘ್ಯವಲಾ ! ॥
ಕೋಟಿದುರಿತಕುಲಾಚಲಕೆ ಶತ ।
ಕೋಟಿ ಮುಕ್ತ್ಯಂಗನೆಯ ಕೂಟದ ।
ಕೋಟಿ ರಾಮಚರಿತ್ರವೆನೆ ವಿಸ್ತರಿಪರಾರೆಂದ ॥೨೪॥
ಅಕ್ಷಯಾತ್ಮವಿಪಕ್ಷದಾನವ ।
ಶಿಕ್ಷ ದುಷ್ಕೃತರೂಕ್ಷ ಸುಮನಸ ।
ಪಕ್ಷ ಲೋಕಾಧ್ಯಕ್ಷ ಕೌಸ್ತುಭಲಕ್ಷ ಘನವಕ್ಷ ॥
ಪಕ್ಷಿರಥ ಕಮಲಾಕ್ಷ ಕಿನ್ನರ ।
ಯಕ್ಷಸುರಮುನಿರಕ್ಷ ಸುಜನಾ ।
ಪೇಕ್ಷ ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ ॥೨೫॥

ಇಂತು ಇಪ್ಪತ್ತನೆಯ ಸಂಧಿ.

ತಿರುಮಲೆ ವೈದ್ಯವಿರಚಿತಂ

# ಉತ್ತರರಾಮಾಯಣಂ

ಸಮಾಪ್ತಂ.

॥ ಮಂಗಳಂ ಮಹತ್ ಶ್ರೀ ಶ್ರೀ ॥

ಕರ್ಣಾಟಕ ಕಾವ್ಯಕಲಾನಿಧಿ. ಸಂ. ೧೩

# ಭಾಸ್ಕರ ಕವಿ

ರಚಿತ

# ಜೀವಂಧರ ಚರಿತೆ

॥ ಭಾಮಿನೀ ಷಟ್ಪದಿ ॥

---

ಎಂ. ಎ. ರಾಮಾನುಜಯ್ಯಂಗಾರ್ಯರಿಂದ
ಪರಿಶೋಧಿಸಲ್ಪಟ್ಟಿತು,

ಕವಿಚರಿತೆ ವಿಷಯಸೂಚಿ ಪಾಠಾಂತರಗಳೊಡನೆ

---

ಮೈಸೂರು
ವೆಸ್ಲಿಯನ್ ಮಿಷನ್ ಪ್ರೆಸ್ಸಿನಲ್ಲಿ ಮುದ್ರಿತವಾಯಿತು.
1908.

# ವಿಷಯಸೂಚಿ

---

# ಜೀವಂಧರ ಚರಿತೆ.

——:o:——

## ಪೀಠಿಕೆ

ಈ ಕವಿಯ ವಿಷಯವಾಗಿ ಈ ಗ್ರಂಥದಿಂದ ಕೆಳಗೆ ವಿವರಿಸುವ ಅಂಶಗಳು ತಿಳಿದುಬರುತ್ತವೆ:—

ಈ ಗ್ರಂಥಕರ್ತನು "ವಿತತವಿಶ್ವಾಮಿತ್ರಗೋತ್ರಾನ್ವಿತ ಬಸವಾಂಕಸುತವಿಶ್ರುತನು" ಎಂದರೆ ವಿಶ್ವಾಮಿತ್ರಗೋತ್ರದ ಬಸವಾಂಕನ ಮಗನಾದ ಭಾಸ್ಕರನು. ಈತನ ತಂದೆಗೆ ಬಸವಾಂಕನೆಂಬ ಹೆಸರಿದ್ದರೂ, ಈತನು ಗ್ರಂಥಾದಿಯಲ್ಲಿ ಜೈನಕವಿಗಳ ಪದ್ಧತಿಯಪ್ರಕಾರ ಜಿನ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧುಗಳು ಇವರನ್ನು ಕ್ರಮವಾಗಿ ಸ್ಮರಿಸಿ, ಆಮೇಲೆ ಅನುಭದ್ಧ ಕೇವಲಿಗಳು ಮೊದಲುಗೊಂಡು "ಸಚ್ಚಾರಿತ್ರಭೂಷಣ" ರವರೆಗೆ ಆಚಾರ್ಯಪರಂಪರೆಯನ್ನು ಸ್ತುತಿಸಿದ್ದಾನಾದುದರಿಂದಲೂ, ತನ್ನ ಗುರುವಿಗೆ "ಉರುರತ್ನತ್ರಯಾ ಭರಣಾಂಕ" ಎಂಬ ವಿಶೇಷಣವನ್ನು ಕೊಟ್ಟಿರುವುದರಿಂದಲೂ, ಮತ್ತು ತಾನು ಶಾಂತೀಶ್ವರಜಿನವಾಸದಲ್ಲಿ ವಾಸವಿದ್ದಂತೆ ಹೇಳಿಕೊಂಡಿರುವುದರಿಂದಲೂ, ಜೈನಬ್ರಾಹ್ಮಣನೇ ಹೊರತು ಆರಾಧ್ಯಬ್ರಾಹ್ಮಣನಲ್ಲ. ಬಸವಾಂಕ ಎಂಬ ಹೆಸರು ಆದಿತೀರ್ಥಂಕರನಾದ ವೃಷಭತೀರ್ಥನ ನಾಮದ ತದ್ಭವರೂಪವಾಗಿರುವುದರಿಂದ, ಆ ಹೆಸರು ಜೈನರಲ್ಲಿ ವಾಡಿಕೆಯಾಗಿರಬಹುದು.

" ಶರಗತಿತ್ರಯಚಂದ್ರಸಂಖ್ಯೆಯ |
ವರಶಕಾಬ್ದಕ್ರೋಧಿಸಂವ |
ತ್ಸರದ ಫಾಲ್ಗುಣಶುದ್ಧದಶಮಿದಿನೇಶವಾರದಲಿ ||
ಪೆನುಗೊಂಡೆಯ ಸುಶಾಂತೀ |
ಶ್ವರನ ಜಿನವಾಸದಲಿ ಜೀವಂ
ಧರನ ಚರಿತೆಯ ರಚಿಸಿದನು ಜಾಣ್ಮೆಯಲಿ ಭಾಸ್ಕರನು |"

ಎಂಬ ಪದ್ಯದಿಂದ ಈತನ ಊರು ಪೆನುಗೊಂಡೆಯಾಗಿಯೂ, ಈತನ ವೃತ್ತಿಯು ಅಲ್ಲಿನ ಶಾಂತೀಶ್ವರಜೀನಾಲಯದಲ್ಲಿ ಒಂದು ಊಳಿಗವಾಗಿಯೂ, ಮತ್ತು ಈ ಗ್ರಂಥವನ್ನು ಶಾಲಿವಾಹಶಕೆ 1335. (ಕ್ರಿ. ಶ. 1413) ಕ್ರೋಧಿಸಂವತ್ಸರದ ಫಾಲ್ಗುಣಮಾಸದ ಶುಕ್ಲಪಕ್ಷದ ದಶಮಿತಿಥಿ ಶನಿವಾರದಲ್ಲಿ ಮುಗಿಸಿದ್ದಾಗಿಯೂ ತಿಳಿಯಬರುತ್ತದೆ. ಇದರಿಂದ ಈತನು ಕ್ರಿ. ಶ. 14 ನೆಯ ಶತಮಾನಕ್ಕೆ ಹಿಂದೆಯೇ ಇದ್ದಿರಬೇಕೆಂದು ಗೊತ್ತಾಗುತ್ತದೆ. ಈತನು ಪೂರ್ವಕವಿಗಳಲ್ಲಿ ನೇಮಿ, ಗುಣವರ್ಮ, ನಾಗವರ್ಮ, ಹೊನ್ನ ವಿಜಯ, ಅಗ್ಗಳ, ಗಜಾಂಕುಶರನ್ನು ಸ್ಮರಿಸಿರುತ್ತಾನೆ. ತನ್ನ ಕವಿತಾಸಾಮರ್ಥ್ಯವನ್ನು ಪ್ರಥಮಸಂಧಿಯ ೩೧ ನೆಯ "ತೊಡಗಿದಮಲಪ್ರಾಸ" ಎಂಬ ಪದ್ಯದಲ್ಲಿ ಆರಂಭಿಸಿ ೩೩ ನೆಯ "ಕೃತಿಗೆ ನಾಮ" ಎಂಬ ಪದ್ಯದವರೆಗೆ ಹೊಗಳಿಕೊಂಡಿದ್ದಾನೆ. ಈತನು ಇನ್ನಾವ ಗ್ರಂಥಗಳನ್ನು ರಚಿಸಿದ್ದಾನೆಯೋ ತಿಳಿಯದು.

ಈ ಗ್ರಂಥವು ಭಾಮಿನಿಯಷಟ್ಪದಿಯಲ್ಲಿ ಬರೆಯಲ್ಪಟ್ಟದೆ. ಇದರಲ್ಲಿ 18 ಸಂಧಿಗಳಿವೆ. ಗ್ರಂಥಾಂತದಲ್ಲಿ 1000 ಪದ್ಯಗಳಿವೆಯೆಂದು ಮಾತ್ರಕೆಗಳಲ್ಲಿ ಹೇಳಿದ್ದರೂ, ಈಗ 934 ಪದ್ಯಗಳು ಮಾತ್ರ ಇವೆ. ಗ್ರಂಥಮಧ್ಯದಲ್ಲಿ ಒಂದುಕಡೆ ಗ್ರಂಥಪಾತವಾದಂತೆ ತೋರಿಬರುತ್ತದೆ. ಈ ಗ್ರಂಥವು ಸ್ವತಂತ್ರ ಗ್ರಂಥವಲ್ಲ.

"ವಾದಿಮದಗಜಸಿಂಹಸೂರಿಗ |
ಳಾದಿಯಲಿ ಸವಸಂಸ್ಕೃತದೆ ಸಂ |
ಪಾದಿಸಿದ ಭೂವಿನುತಜೀವಂಧರನ ಚರಿತವನು ||
ವೇದಿಸುವೆನುರುಭಾಮಿನಿಯ ಷ |
ಟ್ಪಾದದಿಂ ಕನ್ನಡದೊಳೊಲಿದಿದ |
ನಾದರಿಸಿ ಕೇಳುವುದು ಭವ್ಯಸಮೂಹವೊಲವಿನಲಿ ||"

ಎಂದು ಕವಿಯೇ ಹೇಳುತ್ತಾನೆ. ಈ ಗ್ರಂಥದಲ್ಲಿ ಜಿನಮತಪ್ರವಿಷ್ಟನಾದ ಜೀವಂಧರನ ಚರಿತ್ರೆಯು ಸರಸವಾಗಿ ಬರೆಯಲ್ಪಟ್ಟದೆ. ಈ ಗ್ರಂಥದ ಕಥೆಯನ್ನು ನೋಡುವಲ್ಲಿ ಆ ಕಾಲದ ರಾಜರುಗಳೆಲ್ಲರೂ ವಾಣಿಜಾಗಿದ್ದಂತೆ ತೋರುತ್ತದೆ; ಇದೊಂದು ವಿಚಾರಾರ್ಹವಾದ ವಿಷಯವಾ

ಗಿದೆ. ಗ್ರಂಥಕರ್ತನು ಸಂಸ್ಕೃತಕವಿಗಳ ಹೆಸರನ್ನು ಹೇಳದಿದ್ದರೂ ಅವರ ಗ್ರಂಥಗಳಿಂದ ಅನೇಕ ಪದ್ಯಗಳನ್ನು ಪರಿವರ್ತಿಸಿ ಈ ಗ್ರಂಥದಲ್ಲಿ ಉಚಿತ ಸ್ಥಳಗಳಲ್ಲಿ ಸೇರಿಸಿರುತ್ತಾನೆ. ಗಂಧರ್ವದತ್ತೆಯ ಸ್ವಯಂವರವರ್ಣನೆಯು ರಘುವಂಶದ ಇಂದುಮತಿಯ ಸ್ವಯಂವರ ವರ್ಣನೆಯ ಛಾಯೆಯಾಗಿದೆ. ಯಂತ್ರಭೇದಗೋಗ್ರಹಣವರ್ಣನೆಗಳು ಮಹಾಭಾರತದ ಆಯಾ ಭಾಗಗಳನ್ನು ಜ್ಞಾಪಿಸುತ್ತವೆ. ಈ ಗ್ರಂಥದಲ್ಲಿ ಅನೇಕ ಪದ್ಯಗಳು ಅಗ್ಗಳನ ಚಂದ್ರಪ್ರಭಪುರಾಣ, ರುದ್ರಭಟ್ಟನ ಜಗನ್ನಾಥವಿಜಯ, ನೇಮಿಚಂದ್ರನ ಲೀಲಾವತಿ, ನಾಗಚಂದ್ರನ ಪಂಪರಾಮಾಯಣ, ಮಲ್ಲಿನಾಥಪುರಾಣ, ರಾಘವಾಂಕನ ಹರಿಶ್ಚಂದ್ರಕಾವ್ಯ ಇನ್ನೂ ಅನೇಕ ಪ್ರಸಿದ್ಧವಾದ ಕರ್ಣಾಟಗ್ರಂಥಗಳಲ್ಲಿನ ಅತಿಸರಸವಾದ ಪದ್ಯಗಳ ಷಟ್ಪದೀರೂಪವಾದ ಪರಿವರ್ತನದಂತೆ ಕಂಡುಬರುತ್ತವೆ. ದಿಕ್ಪ್ರದರ್ಶನಾರ್ಥವಾಗಿ ಇಲ್ಲಿ ಕೆಲವನ್ನು ಸೂಚಿಸುತ್ತೇನೆ.

ಸಂಧಿ ೧. ೨೬ ನೆಯ ಪದ್ಯ--" ಕವಿತಾಪ್ರೌಢನೆ ಸೋಲ್ವ ವ್ರೋಲ್ "

" ೨. ೮ ನೆಯ ಪದ್ಯ—" ಎಳನೀರಂ ನಾರಿಕೇಳಂ "

ಜಗನ್ನಾಥವಿಜಯ. ಆ. ೧.

" ೨. ೧೫ ನೆಯ ಪದ್ಯ—" ಭೂತಲವರ್ತಿಯಪ್ಪ ವಿಷಯಾಳ "

ಚಂದ್ರಪ್ರಭಪುರಾಣ. ಆ ೧. ೯೦.

" ೨. ೨೦ ನೆಯ ಪದ್ಯ—" ಧರಣಿೊಳಮರಾವತಿಯ "

" ೨. ೩೦ ನೆಯ ಪದ್ಯ—" ತನುರುಚಿಯ ಮುಂದೆ " ಸಂಧಿ ೧. ೪೧.

" ೨. ೪೪ ನೆಯ ಪದ್ಯ—" ಧರೆಯೊಳು ಹರಿಶ್ಚಂದ್ರ " ಸಂಧಿ ೧. ೪೨.

" ೨. ೩೫ ನೆಯ ಪದ್ಯ—" ತ್ಯಾಗಕ್ಕೆ ಬುಧರವಧಿತಣಿವು " ೧. ೪೮.

" ೨. ೩೬ ನೆಯ ಪದ್ಯ—" ಮುನಿವರ್ಗೆ " ಸಂಧಿ ೨. ೧೩.

ಹರಿಶ್ಚಂದ್ರಕಾವ್ಯ ಸಂಧಿ ೧. ೩೯.

" ೬. ೨೫--೨೮ ಪದ್ಯಗಳು ಕವಿಕುಂಜರಲೀಲಾವತಿ ೬ ನೆಯಅಧ್ಯಾಯ ತುರುವರ್ಣನೆ.

,, ೮. ೪೩ ನೆಯ ಪದ್ಯ—"ಗಂಡಸನೊರ್ವಳೂರ್ವಶಿಗೆ ಗಂಗೆಗೆ"
ಮಲ್ಲಿನಾಥಪುರಾಣ. ಆ ೨. ೫೫.

,, ೧೦. ೩೮ ನೆಯ ಪದ್ಯ—"ಸುರಿವುವು ಕಣ್ಬನಿಗಳ್"
ಲೀಲಾವತಿ. ಆ. ೯. ೧೩೩.

ಈ ಕವಿಯು ಹೆಸರನ್ನು ಆಧುನಿಕರಾದ ಕವಿಗಳುಯಾರೂ ಕಂಠೋಕ್ತವಾಗಿ ಹೇಳಿಲ್ಲ. ಆದರೂ ಈ ಗ್ರಂಥದ ಅನೇಕ ಪದ್ಯಗಳ ಛಾಯಾನುವಾದವು ಪ್ರಸಿದ್ಧರಾದ ಕುಮಾರವ್ಯಾಸ, ಕುಮಾರವಾಲ್ಮೀಕಿ, ಲಕ್ಷ್ಮೀಶ, ಗುರುಲಿಂಗ ಮೊದಲಾದ ಕವಿಗಳ ಗ್ರಂಥಗಳಲ್ಲಿ ಅಲ್ಲಲ್ಲಿ ಕಂಡುಬರುತ್ತದೆ. ಆದರೂ ಈ ಕವಿಗಳು ಈತನ ಈ ಗ್ರಂಥವನ್ನು ನೋಡಿಯೇ ಬರೆದರೆಂದು ಖಂಡಿತವಾಗಿ ಹೇಳಲಾಗುವುದಿಲ್ಲ. ಉದಾಹರಣೆಗಾಗಿ ಕುಮಾರವ್ಯಾಸನ ಕನ್ನಡಭಾರತದ ಆದಿಪರ್ವದ ಕೆಲವು ಪದ್ಯಗಳನ್ನು ಮಾತ್ರ ಈ ಗ್ರಂಥದ ಕೆಲವು ಪದ್ಯಗಳೊಡನೆ ಹೋಲಿಸಿ ತೋರಿಸುತ್ತೇನೆ:—

ಪುಟ. ೯೫. ಪದ್ಯ ೧೧—"ಮೊಲೆಗಳಲಿ ಸಿಲುಕಿದೊಡೆ." ಸಂಧಿ ೧೩. ೧೧.
,, ೯೯. ,, ೨೮—"ಆರು ನಿಲುವರು ಸಮ್ಮುಖಕೆ" ಸಂ ೧೩. ೧೬.
,, ೧೧೨. ,, ೪೪—"ಈಕೆಯುಂದುದಿಸಿದರೆ" ಸಂ. ೧೩. ೧೮.
,, ೧೧೩. ,, ೫೩—"ಮಡಿಸಿದೆಲೆ ಬೆರಳೊಳಗೆ" ಸಂಧಿ ೧೩. ೬೩.
,, ೧೧೬. ,, ೬೮—"ಕೆಲರು ಮಧುರಾಪಾಂಗದಲಿ" ಸಂ ೧೩. ೬೫.
,, ೧೧೯. ,, ೧೦—"ತಿರುಗಿ ಕಂಡರುಸಕಲಪೃಥ್ವೀ" ಸಂ. ೧೫. ೧೬.
,, ೧೧೮. ,, ೬—"ವಚನಶೂರರು" "ಸಾಂಗವೇದ" "ಭರತದಲಿ"
ಸಂ. ೧೫. ೪. ೫. ೬.

---

ನಮಗೆ ದೊರೆತಿರುವ ಭಾಮಿನೀಷಟ್ಪದಿ ಗ್ರಂಥಗಳಲ್ಲಿ ಇದೊಂದು ಪ್ರಾಚೀನಗ್ರಂಥ. ಇದರ ಬಂಧವು ಸರಳವಾಗಿದೆ. ಅನೇಕಕಡೆ ಸಂಸ್ಕೃತಭಾಷೆಯ ಉದ್ದಾಮಗ್ರಂಥಗಳ ಅನುವಾದವಾಗಿರುವುದರಿಂದ ಮೊದಲು ಈ ಗ್ರಂಥವನ್ನು ಓದುವವರಿಗೆ ವರ್ಣನೆಗಳು ಬಹಳ ರಮಣೀಯವಾಗಿ ಕಂಡುಬರುತ್ತವೆ. ಈ ಗ್ರಂಥದಲ್ಲಿ ಶಬ್ದಾನುಶಾಸನ ಶಬ್ದಮಣಿದರ್ಪಣ ಮೊ

ದಲಾದ ವ್ಯಾಕರಣಗಳಿಗೆ ವಿರುದ್ಧವಾದ ಪ್ರಯೋಗಗಳು ಅಲ್ಲಲ್ಲಿ ದೊರೆಯುತ್ತವೆ. ಅಂಥ ವಿರುದ್ಧವೆಂಬದಾಗಿ ತೋರಿಬರುವ ಪ್ರಯೋಗಗಳು ಇತರ ಷಟ್ಪದಿಗಳಲ್ಲಿಯೂ ಬಹುವಾಗಿ ಸಿಕ್ಕುವುದರಿಂದ ಅವುಗಳು ವ್ಯವಹಾರದಿಂದ ಸಾಧುವಾದ ಪ್ರಯೋಗಗಳೆಂದು ತಿಳಿಯಬೇಕು.

ಜೈನರಲ್ಲಿ ಪ್ರಚಾರದಲ್ಲಿರುವ ಷಟ್ಪದಿತ್ರಯಗಳಲ್ಲಿ ಇದೊಂದು.

ಈ ಗ್ರಂಥವನ್ನು ಎರಡು ಪ್ರತಿಗಳ ಸಹಾಯದಿಂದ ಮುದ್ರಿಸಿರುತ್ತೇನೆ. ಅವುಗಳಲ್ಲಿ ಒಂದು ಮೈಸೂರ್ ಗೌರ್ನಮೆಂಟ್ ಓರಿಯಂಟಲ್ ಲೈಬ್ರೆರಿಗೆ ಸೇರಿದುದು ; ಮತ್ತೊಂದು ಮೈಸೂರು ಕತ್ತವಾಡಿಪುರಾಗ್ರಹಾರದಲ್ಲಿರುವ ಮ|| ರಾ|| ಜೊಮ್ಮರಸಪಂಡಿತರವರದು. ಪ್ರತಿಗಳನ್ನು ದಯವಿಟ್ಟು ಕೊಟ್ಟು ಸಹಾಯಮಾಡಿದುದಕ್ಕಾಗಿ ಮ|| ರಾ|| ಕ್ಯೂರೇಟರ್ ಮಹದೇವಶಾಸ್ತ್ರಿಗಳವರಿಗೂ, ಮ|| ರಾ|| ಜೊಮ್ಮರಸಪಂಡಿತರವರಿಗೂ ಬಹಳ ಕೃತಜ್ಞನಾಗಿರುತ್ತೇನೆ.

10—1—1909<br>ಮೈಸೂರು

ಪ್ರವರ್ತಕ.



# ಭಾಸ್ಕರಕವಿ ವಿರಚಿತ ಜೀವಂಧರ ಚರಿತ್ರೆಯಲ್ಲಿ ಲುಪ್ತವಾದ ಭಾಗಗಳು.

---

ಪುಟ, ೯---೪೦, ೪೩ ನೆಯ ಪದ್ಯಗಳ ಮಧ್ಯದಲ್ಲಿ

ಪರಮಹತ್ವ ಪರೇಶ್ವರ ಪರಾ ।
ಪರ ಪರಂಜ್ಯೋತಿಸ್ವರೂಪಕ ।
ಪರಮತತ್ವಾಧಾರ ಪರಮಬ್ರಹ್ಮ ಪಾಪಹರ ॥
ಪರತರ ಪರಾನಂದ ಪಾವನ ।
ಪರಮಪುರುಷ ಪರಾತ್ಮ ಪರಮೇ ।
ಶ್ವರ ಪರೋತ್ತಮ ಪಾಲಿತಾಮರ ಕರುಣಿಸೆನಗೆಂದ ॥೪೨. ಅ

ಪರಿಣತಾಂತಃಕರಣ ಸುಗುಣಾ ।
ಭರಣ ಸುರಮಣಿಮುಕುಟಶೋಭಿತ ।
ಚರಣ ಧರ್ಮೋದ್ಧರಣ ಭಯಸಂಹರಣ ಸಾಕಾರ ॥
ಶರಣಜನಶತಪತ್ರದಶಶತ ।
ಕಿರಣಮರಣವಿದೂರ ಕರುಣಾ ।
ಕರ ಪರಾತ್ಮಕ ಭವನಿವಾರಣ ಕರುಣಿಸೆನಗೆಂದ ॥೪೨. ಆ

ಎಂಬ ಎರಡು ಪದ್ಯಗಳೂ,

ಪುಟ ೧೪೫ ರಲ್ಲಿ ೧೫ ನೆಯ ಪದ್ಯದ ಮುಂದೆ

ಒಂದು ದಿನವೇಕಾಂತದಲಿ ಜೀ ।
ವಂಧರಗೆ ಸುಕುಮಾರಕರು ನಲ ।
ವಿಂದ ನುಡಿದರು ದಂಡಕಾರಣ್ಯದಲಿ ನಾವಿರಲು ॥
ಒಂದು ಠಾವಿನಲೆಸೆವ ತಾಪಸ ।
ವೃಂದದೊಳಗಿರ್ದೊರ್ವ ಸತಿಯಿಂ ।
ತೆಂದಳೆಮ್ಮನು ಕಂಡು ಮನದಲಿ ಕಾಂತೆ ಬಿಸುಸುಯ್ದು ॥೧೬॥

ಎಂಬ ಒಂದು ಪದ್ಯವೂ ಪಾತವಾಗಿವೆ.

ಮಹಾರಾಜಶ್ರೀ ಮೈಸೂರು ಕತ್ತಿಮಾಡಿಪುರಾಗ್ರಹಾರದಲ್ಲಿರುವ ಬೊಮ್ಮರಸ ಪಂಡಿತರವರು ನಮ್ಮಿಂದ ಮುದ್ರಿತವಾದ ಗ್ರಂಥವನ್ನು ಸಂಪೂರ್ಣವಾಗಿ ಮತ್ತೊಂದು ಓಲೆಯ ಪ್ರತಿಯೊಡನೆ ಹೋಲಿಸಿ ಮೇಲಣ ಮೂರು ಪದ್ಯಗಳನ್ನು ದಯೆಯಿಂದ ಬರೆದುಕಳುಹಿಸಿಕೊಟ್ಟದುದಕ್ಕಾಗಿ ಅವರನ್ನು ಬಹಳವಾಗಿ ವಂದಿಸುತ್ತೇವೆ. ಪಾಠಕರು ಈ ಪತ್ರವನ್ನು ಜೀವಂಧರ ಚರಿತ್ರೆಯಲ್ಲಿ ಸೇರಿಸುವಿರೆಂದು ನಮ್ಮ ಪ್ರಾರ್ಥನೆ.

# ಜೀವಂಧರ ಚರಿತೆ.

## ಪಾಠಾಂತರಗಳು.

ಕೆಳಗೆ ಕೊಟ್ಟಿರುವ ಪಟ್ಟಿಯಲ್ಲಿ ಮೊದಲನೆಯ ಸಂಖ್ಯೆಯು ಪದ್ಯ ಸಂಖ್ಯೆಯನ್ನು ಎರಡನೆಯ ಸಂಖ್ಯೆಯು ಆ ಪದ್ಯದ ಪಾದಸಂಖ್ಯೆಯನ್ನು ತೋರಿಸುತ್ತದೆ.

ಸಂಧಿ ೧.—ಪದ್ಯ ೧೫, ೬ ಪಙ್ತಿ. ಬಲಿದೀಗೆ ಸುಖಪದವ. ೨೨, ೪ ಬಾಣೋ ೨೯, ೬ ಜರತಿ. ೩೧, ೬ ನೆಗಳ್ದ ಪಾದಗಳ.

,, ೨.—೨೧, ೩, ಕೋಟಿಗ ೩೧,೧ ಸ್ತಂಭಜನತಾ. ೩೪, ೬ ತೀದೆಸೆವರಲ್ಲಿಯ.

,, ೩.—೪, ೫ ಚೆಂಡು ಢಗೆ ಹೊಯ್ವ. ೮, ೬ ಸಂಹರಿಸುತಿರ್ದನು. ೧೭, ೧ ರತ್ನದೋವರಿ.

,, ೪.—೯, ೪ ವಿಮಳ ಧರ್ಮಾರ್ಥವನು. ೧೫, ೪ ವರರಥಾಂಗೌಘಧ್ವನಿಯೊತಾ. ೨೧, ೬ ತೆದ್ದುಕೆಲೆದುವು...ರ್ದೆಯೊಡೆಯ. ೨೪, ೬ ಸುಖಾನುಭವದಿಂದಿರ್ದ. ೬೨, ೨ ವೃದ್ಧಿಪೆತ್ತಿಹ. ೬೬, ೨ ಧರವನದಯು ದಲರಿವ. ೭೨, ೨ ವಾಡಿಕೊಟ್ಟವ. ೮೯, ೩ ನಿರದೆಗಗನಾ.

,, ೫.—೧೭, ೫ ಮುಳಿಸಿದೇಕೆ. ೨೦, ೪ ನಿಟ್ಟುಗೊಂಡ. ೩೭, ೩ ಮಣಿಯು ಕಂಡಂತೆ. ೫೪, ೩ ಬೆಳ್ಗೊಡೆಯು ಹಿಡಿದು. ೬೪, ೧ ದಯೆಮುದದ.

,, ೭.—೨೩, ೫ ಚ್ಚಳಿಪಮುತ್ತಿನ ಹರ್ಮ್ಯಗಳ ಹೊ. ೩೫, ೧ ಚಿತ್ರವಿರಾಗಗಳಲು. ೩೮, ೧ ಸಾರಬಾಪನ್ನಾಮು; ೫ ಬಲ್ಲಾಳದಟ್ಟಿಗ. ೪೧, ೨ ಬದ್ದಳಗವಾಮುಖ. ೫೬, ೬ ಚರಿವರೆಯ್ದಿಯೆಬಂದುಮುತ್ತಿತು. ೫೯, ೩ ಭರತನಪಟಹಾರವಕೆ.

,, ೮.—೪, ೩ ತೆರನೆ ಪೀಣೆಗೊಳಿರದೆ. ೨೪, ೬ ಸತಿಯುಸುವಾದಳೊಲವಿನಲಿ. ೩೯, ೩ ಪಿಕಮೋಹಿದುವು. ೪೬, ೭ ಮೋಹಿದುದು ನೃಪರ.

,, ೧೨.—೨, ೪ ಸಹುದು ಮಾವ್ರಿ; ಮುಳ್ಳರಿ. ೯, ೪ ವೀತರಾಗನನಿಂತು ಸುತಿಸಿ. ೨೦, ೧ ಮಹಾತ್ಮಕನಲ್ಲದಿರೆ. ೨೬, ೫ ಪಾಣಿಯೊಳಿಲ್ಲ. ೪೭, ೩ ತತ್ತ್ವಾನಿಸಿಯು ನನವರತ ನೆರೆಯುತಾ.

ಸಂಧಿ ೧೩.——೮, ೯ ಬಿನಿಸೊ; ೬ ಮುಂದಾಡಲಾತ. ೨೦, ೫, ೬ ತಿರಸದುಹೆ
ವೃತ್ತಾಂತವೆಲ್ಲವ ಸಿರದೆ ಕೇಳಿದು ಬೇಗದಿಂ ಒಸವಳಿದಳಾರಮಣಿ.
೨೨, ೩ ನಡೆವುದು ನೀತಿಯೋ.

,, ೧೫.—೨, ೩ ಕಾಪಾತ್ರಾಂಗಾರಕಗೆ ಕನಲಿ. ೨೫, ೩ ಕಳಿಂಗ ಖಂಡಿತಸು.
೪೨, ೩ ಭೂಪರಿದೇಕೆ ಸೇನೆಯುದು.

,, ೧೬.—೪೮, ೬ ಬರವಸುಳಿದುದಿನಲ್ಲಿ. ೫೧, ೯ ತೊರೆದು ಸುರುಚಿರ.

,, ೧೭.—೭, ೩ ತುರುಗಿದನು ಲೇಪಸದ. ೩೧, ೩ ಲಾಲಿತದ.

,, ೧೮ —೫, ೪ ಉಭಯುಪಾರ್ಶ್ವದ. ೭, ೪ ದುರ್ಗಂಧವಾಪಾ



## ಶೋಧಿತ ಭಾಗ.

---

ಸಂಧಿ ೧—೧೫, ೧ ಶಾರದಮೀತಾಸಮಕ; ೩, ಕರುಣಾನುಭಾವ.
೨೬,೪ ಸೇಂದ್ರಿಕೆಯೊಳಮೆ. ೪೩,೩ ಧರ್ಮೋದ್ವಾವು.

ಸಂಧಿ ೨—೧೬, ೧ ಪರಿಪೇಜ. ೨೦,೧ ಗಿರಿಗಳಂ. ೩೬,೬ ರೆಸೆದಿಹ.
೪೦,೩ ಮಂದುರಗಳಿಂದ. ೪೯,೬ ತ್ರ್ಯರದ. ೬೩,೫ ಮಸ್ತಾಂಗಿ

ಸಂಧಿ ೩— ೫,೪ ಕ್ಷೇತ್ರಯೊಳಿಪಸಂತಿಲ್ಲ. ೧೫,೧ ಕರ್ಪ್ಪುರದ; ೨ ದಕವಗಿಲಹೊಗೆ.

ಸಂಧಿ ೪—೨,೩ ಪ್ರೋಸನಸ್ತ್ರದು. ೯,೪ ಧ್ಯಮವಟಿಟ್ಟು. ೨೨,೩ ಕರಕರುಹ.
೨೮,೧ ದರದೊಳಕೆಯು. ೫೦,೩ ಮಿಗೇಂದ್ರತ್ವ. ೭೭,೧ ವೃತವ
ಸವಿದೆ ಅಥವಾ ವೃತವತಿಂದೆಡೆ. ೮೧,೫ ಫಲಕದು.
೮೩,೩ ಲಜ್ಜಿಜರೆ. ೯೦,೪ ಸರಸಿ. ೯೯,೧ ಸನವನನು.

ಸಂಧಿ ೫—೧೮,೫ ಹೇಬಕಟಕಟ. ೨೦,೨ ಸ್ಥೈರಿಫರಟ್ಟ. ೩೭,೪ ಕಾವೆಂದಳುತ.
೪೮,೩ ಗುಜುಗುಜಿನ. ೭೧,೪ ವೃತ್ತವೇ.

ಸಂಧಿ ೬—೨೭,೩ ಲಾಖಳರ.

ಸಂಧಿ ೭—೫,೫ ಸದ್ಯ್ರವ, ಅಥವಾ ಸತ್ವವ. ೮,೫ ಗುರ್ಡಿಸದುದರಿಂ.
೨೭,೪ ತಳಿತ, ಅಥವಾ ತಳಿರೊ. ೪೮,೪ ನೂತನಾಂಗೋ.

ಸಂಧಿ ೮—೩೯,೨ ತೀರ್ಥಗಳಸುರಿದುದು; ೫ ಘನಸದಾರಡಿಗೆ. ೫೪,೩ ಪ್ರೊಡವಿ
ನಡುವನುಸಿಂಹ. ೫೯,೨ ಲಕ್ಕೆಯು. ೬೪,೫ ಕೊಸಲ.
೬೭,೫ ಜೀವಂಧರಗೆ.

ಸಂಧಿ ೯—೨೬,೨ ಭೀರೋಧಿ. ೩೨,೫ ಮಾರುತಿಯು. ೩೫,೬ ಹರಳೊಳ.
೪೦,೪ ಕಲಾವಿದನು.

ಸಂಧಿ ೧೦—೧,೧ ಘಾಟಿದೇ. ೩,೪ ಚಕ್ರದಿವ. ೧೨,೫ ಬಡದೆ—ಹೆಸ್ತು ಬಿದ್ದಿದೆ.
೨೬,೩ ಬಾಣಗಳೆಂದು.

ಸಂಧಿ ೧೨—೭,೪ ಶ್ರೀಯು. ೩೬,೨ ನೀನಾರಜುಹು.

ಸಂಧಿ ೧೩—೩,೬ ಪರಿಯೆ. ೪,೨ ಮಲಿನದ.

ಸಂಧಿ ೧೫—೧,೪ ರಾಜನವ. ೧೪,೩ ಕೈದಬಹುದೆ.

ಸಂಧಿ ೧೬—೯,೬ ತೋಱುಸಿದ.



ಭಾಸ್ಕರ ಕವಿರಚಿತ

# ಜೀವಂಧರ ಚರಿತೆ

|| ಭಾಮಿನಿಷಟ್ಪದಿ ||

ಸೂಚನೆ|| ರಾಯಮಗಧನೃಪೇಂದ್ರಚಂದ್ರನ |
ಜೀಯನೆನಿಪ ಸುಧರ್ಮಮುನಿಪನು |
ವಾಯಿಯಿಂದಱುಹಿದನು ಜೀವಂಧರನ ಸುಚರಿತೆಯ ||

ಶ್ರೀಮದಖಿಳೇಂದ್ರೋತ್ತಮಾಂಗ |
ಸ್ತೋಮಮಣಿಮಕುಟಾಂಶುಚಂಚ |
ತ್ಕೋಮಲಾಂಘ್ರಿದ್ವಯನಚಿಂತ್ಯನಜಾತನದ್ವಿತಯ ||
ಕಾಮಮದಹರನಮಳಮುಕ್ತಿ |
ಶ್ರೀಮುಖಾಬ್ಜದಿನೇಶನರ್ಹ |
ತ್ಸ್ವಾಮಿ ಮುದದಿಂದೀಗೆಮಗೆ ಕೈವಲ್ಯಸಂಪದವ || ೧

ದುರಿತಸಂತಾನಾಷ್ಟಕವನಪ |
ಹರಿಸಿ ನಿಜಗುಣಮೆಂಟು ಮೆಯ್ದೋ |
ಱಿರಲು ಲೋಕಾಗ್ರದಲಿ ನಿತ್ಯಾನಂದಚಿದ್ರೂಪ ||
ಸ್ಥಿರದಲಿರೆ ಸುಜ್ಞಾನ ಪಸರಿಸಿ |
ಪರಮಮುಕ್ತಿಶ್ರೀಗೆ ಪತಿಯಾ |
ದುರುತರಶ್ರೀಸಿದ್ಧರೆಮಗೀಗೊಲಿದು ಸುಖಪದವ || ೨

ಮನಮನಮಳಗುಣಾವಳಿಗಳಿಂ |
ದನುವರದೊಳೊಡೆಬಿಗಿದು ಹೃಜ್ಜಾ |
ತನ ಘುಜೋನ್ನತಿಫಲವ ಪಂಚಾಚಾರದಿಂ ತುಱಿದು ||
ಜಿನಮತವ ಭವ್ಯಾಳಿಗೊಲವಿಂ |
ದನುಕರಿಸಿದಾಚಾರ್ಯರಚಲಿತ |
ರನಘರಕ್ಷುಯರೀಗೆ ವಿಮಳಾಚಾರಸಂಪದವ || ೩

ಪರಮಭವ್ಯಾವಳಿಗೆ ಸಮ್ಯ |
ಗ್ದರುಶನ ಜ್ಞಾನ ಪ್ರವಿಮಳಾ |
ಚರಿತ್ರಗಳು ಸುಖಪದವನುರಾಗಾದಿಗಳು ಜನನ ||
ಮರಣಭಯಗಳನೀವುವೆಂದುರು |
ತರದಿ ಸದ್ಭೇದಗಳ ಮಿಗೆ ವಿ |
ಸ್ತರದಿ ಪೇಳುವುಪಾಧ್ಯರೀಗೆಮಗಮಳಸುಖಪದವ || ೪
ಶಮತಪಶ್ಶೀಲಾದಿಗಳ ತಾ |
ಳ್ದಮಿತಕರಣಗ್ರಾಮಗಳನಾ |
ಕ್ರಮಿಸಿ ಕರುಣಾರಸವನಾತಿಥಿಮಾಡಿ ಹೃತ್ಪದಕೆ ||
ವಿಮಳತತ್ವಜ್ಞಾನವನು ಪಡೆ |
ದಮಳಗುಣಯುತರಪ್ಪ ಸಾಧುಗ |
ಳೆನಗೆ ಮುದದಿಂ ಸಾಧುಪದಗಳನೀವುದೊಲವಿನಲಿ || ೫
ನುತಜನಾಂತರ್ದೃಷ್ಟಿ ಕವಿತೋ |
ಸ್ನತಲತಾಮೃತಸೃಷ್ಟಿ ಸರಸೋ |
ದಿತವಿನೂತನಸೃಷ್ಟಿ ಪರಮಬ್ರಹ್ಮತನುಪುಷ್ಟಿ ||
ಚತುರವಿಬುಧೋತ್ಕೃಷ್ಟಿ ರತ್ನ |
ತ್ರಿತಯಮಾಲಾಯಷ್ಟಿ ಪರಿಶೋ |
ಧಿತಸರಸ್ವತಿ ಸಾರ್ವಿರೆನ್ನಯ ಹೃದಯಕಮಲದಲಿ || ೬
ಅನಘರಜರನುಬದ್ಧಕೇವಲಿ |
ಯೆನಿಸಿದಮಳಸುಧರ್ಮಗೌತಮ |
ವಿನುತಜಂಬೂಗಣಧರರು ಸಾಧನವಿದೆಂದೆನಿಪ ||
ಅನುಪಮಶ್ರುತಪೂಜೆಯನು ಭವ |
ಘನತಮವನೊಟ್ಟೈಸಿ ಬೆಳಗುವ |
ನನುನಯದ ರತ್ನತ್ರಯವನೆಮಗೀವುದೊಲವಿನಲಿ || ೭
ನುತನವಶ್ರುತಕೇವಲಿಗಳೆಂ |
ಬತುಳವಿಷ್ಣುವ್ರತಿಪನಪರಾ |
ಜಿತಮುನೀಶ್ವರನಂದಿಯತಿಪತಿಭದ್ರಬಾಹುಮುನಿ ||
ವಿತತಗೋವರ್ಧನಮುನೀಶ್ವರ |
ರತಿಶಯಾನಂದದಲಿ ನಿರ್ಮಳ |
ಶ್ರುತಸಮಾರಾಧನೆಯನೆಮಗೊಲಿದೀವುದೊಲವಿನಲಿ || ೮

ಭೂತಬಲಿಮುನಿ ಪುಷ್ಪದಂತ |
ಖ್ಯಾತರುಜ್ವಲವೀರಜಿನಸೇ |
ನಾತಿಶಯರಕಳಂಕಕವಿಪರಮೇಷ್ಠಿ ಸೂರಿಗಳು ||
ಪೂತಚರಿತಸಮಂತಭದ್ರರ |
ಜಾತರೆನಿಸುವ ಕುಂಡಕುಂದಾ |
ದ್ಯಾತಿಶಯದಾಚಾರ್ಯರೀಗೆಮಗಮಳಸುಖಪದವ || ೯
ಘೋರಭವವಾರಾಶಿತೀರರೋ |
ತ್ತಾರರಕ್ಷಯರಚಲಘನಕಾಂ |
ತಾರವಿಪಿನಕುಠಾರರನುಪಮರಮಳ[ಗುಣ]ಯುತರು ||
ಮಾರಹರರುರುವಾದಿಗಜಕಂ |
ಠೀರವರು ತಾವೆನಿಪ ಪೂರ್ವಾ |
ಚಾರಿಯರು ಕಾರುಣ್ಯದಿಂದೆಮಗೀಗೆ ಸನ್ಮತಿಯ || ೧೦
ನೆಟ್ಟುಗೊಂಡಘಕಾಷ್ಟಮದಗಳ |
ಕಟ್ಟಿ ಪರವಾದಿಗಳ ಗೆಲಿದೆ |
ಜಿಟ್ಟಿ ಜಿನಧರ್ಮವನು ಸಂಸ್ಥಾಪಿಸಿ ಭವಾಟವಿಯ ||
ಸುಟ್ಟಘವನೊಡನೆಟ್ಟಿ ಕಾಮನ |
ಸಿಟ್ಟೆಲುವ ಮುರಿದಚಳಿತನ ಮನ |
ಮುಟ್ಟಿ ನೆನೆನೆಸು ವಿಮಳಪಂಡಿತದೇವಮುನಿವರನ || ೧೧
ಸಾರಜೈನಾಚಾರಪಾರಾ |
ವಾರವರ್ಧನಚಂದ್ರನಘಮದ |
ವಾರಣೇಂದ್ರಮೃಗೇಂದ್ರಸುರುಭವ್ಯಾಬ್ಜದಿವಸೇಂದ್ರ ||
ಮಾರಮಾಘನಮೀರ ಘನಸಂ ||
ಸಾರವಿಪಿನಕುಠಾರ ಧೀರ ಕು |
ಮಾರಸೇನಮುನೀಂದ್ರನೆಮಗೊಲಿದೀಗೆ ಸುಚರಿತವ || ೧೨
ದುರಿತಗಳನೊಡೆಮೆಟ್ಟಿ ಗುಣಗಳ |
ಧರಿಸಿ ಕಾಮನ ಕಾರ್ಮುಕವ ಕ |
ತ್ತರಿಸಿ ಪ್ರಸ್ತಕಕೆಸೆವ ಕಂಪಿಯ ರಚಿಸಿ ಸದ್ಗುಣವ ||
ಭರದಿ ದಾರವ ಮಾಡಿ ಧರಿಸಿದ |
ವರರತಿಯ ಜಯಿಸಿದಚಳಿತನ ಸು |
ಸ್ಥಿರದಿ ನೆನೆನೆಸು ವರ್ಧಮಾನಮುನೀಂದ್ರಚಂದ್ರಮನ || ೧೩

ಕರ್ಮಗಳನೊಡೆದುಱಿದು ಮಿಥ್ಯಾ |
ದುರ್ಮತಂಗಳನುಱಿದು ನಿರುಪಮ |
ನಿರ್ಮಳತ್ವವ ತಳೆದು ಭವಗಳನುಱಿದು ಸ್ಯಾದ್ವಾದ ||
ಧರ್ಮಶಾಸ್ತ್ರಜಿನಾಗಮುವಸತಿ |
ಕೂರ್ಮೆಯಲಿ ಭವ್ಯಾಳಿಗಱುಹುವ |
ಧರ್ಮಭೂಷಣಮುನಿಪನೊಲವಿಂದೀಗೆ ಸದ್ಗುಣವ || ೧೪
ಶಾರದೆಯು ತಾಯಮುಳಪುರುಷಾ |
ಕಾರವನು ತಾಳ್ದಂತೆ ಸೇರಕು |
ಮಾರಸೇನಯತೀಶ್ವರನ ಕರುಣಾವಭಾವದಲಿ ||
ಚಾರುವಿದ್ಯಾವಳಿಯು ಪಡೆದಾ |
ಚಾರವನು ಭವ್ಯಾಳಿಗಱುಹುವ |
ವೀರಸೇನಮುನೀಂದ್ರನೆಮಗೊಲಿದೀಗೆ ಸುಚರಿತವ || ೧೫
ಗೋತ್ರಧೈರ್ಯನಕಾಂಕ್ಷನಮಳಪ |
ವಿತ್ರನನುಪಮಭವ್ಯಜನಶತ |
ಪತ್ರಮಿತ್ರನೆ ಸಾರಸಂಸಾರಾರ್ಣವೋತ್ತಾರ ||
ಛೈತ್ರನುಜ್ಜ್ವಲಗಾತ್ರನುರುರ |
ತ್ನತ್ರಯಾಭರಣಾಂಕ ಸಚ್ಚಾ |
ರಿತ್ರಭೂಷಣ ಮುನಿಪನೊಲವಿಂದೀಗೆ ಸತ್ಪಥವ || ೧೬
ಯುಕ್ತಿಯಿಲ್ಲದ ಭೂವರನು ಪತಿ |
ಭಕ್ತಿಯಿಲ್ಲದ ಕಾಂತೆ ಸರ್ವವಿ |
ಮುಕ್ತನಲ್ಲದ ಮುನಿಪನೋದದ ಪಾರ್ವ ಸನ್ಮಂತ್ರ ||
ಶಕ್ತಿಯಿಲ್ಲದ ಸಚಿವ ಸದ್ಗುಣ |
ಯುಕ್ತನಲ್ಲದ ಮಿತ್ರ ನವಚತು |
ರೋಕ್ತಿಯಿಲ್ಲದ ಕಾವ್ಯರಚನೆ ನಿರರ್ಥವವನಿಯಲಿ || ೧೭
ಪ್ರಸವಕಾಲದ ವೇದನೆಯು ಸಾ |
ಹಸವ ಬಲ್ಲಳೆ ಬಂಜೆ ವಿಗೆ ರಂ |
ಜಿಸುವ ರತ್ನ ಪರೀಕ್ಷೆ ಯುಱಿವುದೆ ಕಪಿ ನಿರಂಜನನ ||
ದೆಸೆಯನಱಿವನೆ ಪಾಪಿ ಸತ್ಕವಿ |
ಯೆಸಗಿದನುಪಮಕಾವ್ಯವನು ನವ |
ರಸಿಕನಲ್ಲದೆ ತಿಳಿವರೇ ಮೂಢರು ಧರಿತ್ರಿಯಲಿ || ೧೮

ಜಲವುಱಿದು ಹಾಲುಂಬ ಹಂಸನ |
ವೊಲು ಮಹಾತ್ಮರು ಕಾವ್ಯದೋಷವ |
ನುಱಿದು ತತ್ಸಾರವನೆ ಸವಿವರು ದಿವ್ಯಪರಿಮಳಕೆ ||
ತೊಲಗಿ ನೊಳ ದುರ್ಗಂಧಗಳಿಗ |
ವ್ವಳಿಸುವಂದದಿ ಖಳರು ಗುಣಗಳ |
ನುಱಿದು ದೋಷವ ಪಿಡಿವರಂತದು ಸಹಜವವನಿಯಲಿ || ೧೯
ಖರ ಸುಗಂಧವ ಹೇಱಲದಱಂ |
ತರವ ಬಲ್ಲದೆ ಸೆಟ್ಟು ಪಾಕದ |
ಪರಿಯನಱಿವುದೆ ತಾಳಪತ್ರಗಳಱಿವುವೇ ಲಿಪಿಯ ||
ಧರೆಯೊಳಜ್ಞ ಸುಶಾಸ್ತ್ರಗಳನು |
ಚ್ಚರಿಸಿದೊಡೆ ಸಾಹಿತ್ಯವಾತಗೆ |
ದೊರಕುವುದೆ ಗಿಣಿಯೋದಿದಂತೆ ನಿರರ್ಥವವನಿಯಲಿ || ೨೦
ಬಿಸಜಸಂಭವ ಷಡ್ರಸವ ನಿ |
ರ್ಮಿಸೆ ಕವೀಶ್ವರ ಧಾತ್ರಿಯೊಳು ನವ |
ರಸವ ಸೃಜಿಸಿದೊಡಾಚತುರ್ಮುಖನಿಂದ ಕವಿವರಗು ||
ವಸುಧೆಯೊಳು ಸರಿಮಿಗಿಲೆನಿಸಿ ಪಸ |
ರಿಸಲು ಲೋಕತ್ರಯವು ಸತ್ಕವಿ |
ಯಸಗಿದಂದದೊಳೊಪ್ಪಿಹುದು ತಿಳಿವರೆ ಧರಿತ್ರಿಯಲಿ || ೨೧
ಇಷ್ಟವಾಗೆ ಪದಾರ್ಥಶಬ್ದ |
ಸ್ಪಷ್ಟ ಪೊಸಬಗೆಗೂಡಿ ಕೃತಿಯ ಪ್ರ |
ತಿಷ್ಠಿಸದೆ ಪರರೂಹೆಯಿಂದೋದಿಸಿದ ಕಾವ್ಯವದು ||
ಸೃಷ್ಟಿಯೊಳಗದು ಹೀನ ಜೈನೋ |
ತ್ಕೃಷ್ಠವೀಜಗವೆಂದುದೊಂದೇ |
ಕಷ್ಟ ಸಾಲದೆ ಕವಿಯೆನಿಸಿಕೊಂಡವರಿಗವನಿಯಲಿ || ೨೨
ಮುಂದೆ ನಿನ್ನಯ ಕವಿತೆಗೆಣೆಯಿ |
ಲ್ಲೆಂದು ನಾನಾ ತೆಱದೆ ಬಣ್ಣಿಸಿ |
ಹಿಂದೆ ತಾಳ್ದುದಬದ್ಧವೆಂದಜ್ಞರೊಳು ತಾವೆಸಗಿ ||
ಸಂಧಿಸಿದ ಕೃತಿಯನ್ನು ಮನೆಗಳ |
ಸಂದಿಗೊಂದಿಯೊಳೊದಱಿ ಸರಕದೊ |
ಳೊಂದುತಿಹ ದುರ್ಜನರ ಜಯಿಸುವರಾರು ಲೋಕದಲಿ || ೨೩

ಲಲಿತದೇವಾನ್ನವನು ನೊಣನೆಂ |
ಜಲಿಸೆ ತೊಱೆವರೆ ಶೈವಲಕೆ ಸೀ |
ರುಱೆವರೇ ಜಲನಿಧಿಯು ಮಣಿಗಳ ನೆಗಳಿ ಭಯಕಂಜಿ ||
ತಳೆಯದಿಹರೆ ನಿಕೇತನವಸಿಲಿ |
ಗಳುಕಿ ಬಿಡುವರೆ ಖಳರು ಮೆಚ್ಚದೆ |
ಹಱಿಯೆ ಸತ್ಕವಿ ಮಾಣ್ಬನೇ ರಚಿಸಲು ಮಹಾಕೃತಿಯ || ೨೪
ವಿನುತಕವಿತಾಂಗನೆಗೆ ಸತ್ಕವಿ |
ಜನಕನನುಪಮಪಾಠಕರು ತ |
ಜ್ಜನನಿ ವಿಮಳರಸಜ್ಞ ಪತಿ ಮೂಢಾವಿವೇಕಿಗಳು ||
ಅನುಜರಗ್ರಜರಂತು ಕಾರಣ |
ಸನುನಯದೊಳೀಕೃತಿಯ ಕೋವಿದ |
ಜನರು ತಿದ್ದುವುದೊಲಿದು ಘನತೆಯ ಮಾಱ್ಪುದವನಿಯಲಿ || ೨೫
ಪರಿಮಳವನಳಿ ಪೇರ್ವವೊಲು ಮ |
ಕ್ಕಳಕ ಬಲ್ಲದೆ ಚೈತ್ರದಲಿ ಮಾ |
ಮರನಲರ್ವಂತೊಣಮರನು ಚಿಗುರುವುದೆ ಶಶಿಕಾಂತ ||
ಕರಗುವಂದದೆ ಚಂದ್ರಿಕೆಯೊಳಗಱಿ |
ಯುರುತರದಿನೊಸರುವುದೆ ಸತ್ಕವಿ |
ವರನು ಸೋಲ್ವಂತಜ್ಞ ಸೋಲುವನೇ ಧರಿತ್ರಿಯಲಿ || ೨೬
ಮಾನಿತಾರ್ಥಪ್ರಾಸಪದಸಂ |
ಧಾನರಚನೆ ವಿಚಿತ್ರರಸಭಾ |
ವಾನುರಕ್ತಿದಿ ಸುಕವಿ ರಚಿಸಿದ ಕಾವ್ಯಮೊಪ್ಪುವುದು ||
ಏನು ವಿಸ್ಮಯವಿಲ್ಲದರ್ಥವಿ |
ಹೀನನಾಗಿ ಯಥಾಸ್ಥಿತಿಯೊಳ |
ಜ್ಞಾನಿ ರಚಿಸಿದ ಕಾವ್ಯ ತಾನೊಪ್ಪುವುದೆ ಧರಣಿಯಲಿ || ೨೭
ನಡೆವನೆಡಹುವನಲ್ಲದುಱಿದವ |
ರೆಡಹುವರೆ ಕೃತಿನಡೆಸುವರೊಳೊಂ |
ದೆಡೆಯೊಳನು ತಪ್ಪಿದರೆ ತಪ್ಪಲ್ಲಿಕ್ಕು ಸಾರದಲಿ ||
ತೊಡರ್ದ ದೋಷವನುಱಿಯಲದು ತಾ |
ಕಡೆಗೆ ಶರ್ಕರೆಯಹುದು ತಪ್ಪ |
ನೊಡೆಯ ತಿದ್ದಿ ವಿದಗ್ಧರಧಿಕವ ಮಾಱ್ಪುದವನಿಯಲಿ || ೨೮

ಸರಸಭಾವ ವಿಚಿತ್ರದರ್ಥೋ |
ತ್ಕರ ಚಮತ್ಕೃತಿಯುಮಕ ಪದ ನಯ |
ಸರಸ ಜಾಣ್ನುಡಿ ಪುಗದೆ ಬಱಿಯ ಸುಲಕ್ಷಣೋಕ್ತಿಯಲಿ ||
ವಿರಚಿಸಿದ ಕೃತಿ ಸರ್ವರ ಮನೋ |
ಹರಮದಾಗದು ಶಾಸ್ತ್ರಯುತವಹ |
ಜರಠ ಸರ್ತಿಸಿದಂತೆ ಕಣ್ಗಿಂಬಾಗದವನಿಯಲಿ || ೯
ವಿನುತನೇಮಿಯ ರೀತಿ ಗುಣವ |
ರ್ಮನ ಚಮತ್ಕೃತಿ ನಾಗವರ್ಮನ |
ನೆನಹು ಹೊನ್ನನ ದೇಸೆ ವಿಜಯನ ಭಾವವಗ್ಗಳನ ||
ಸನುನಯೋಕ್ತಿ ಗಜಾಂಕುಶನ ಬಿ |
ನ್ನಣ ಯಶಶ್ಚಂದ್ರನ ಬಹುಜ್ಞತೆ |
ಯನುಕರಿಸಲೀಕಾವ್ಯದೊಳಗೆನಗವರ ಕರುಣದಲಿ || ೧೦
ತೊಡಗಿದಮಲಪ್ರಾಸ ಕಡೆಗದು |
ನಡೆಯದಿರೆ ಬೇಸತ್ತು ಮೋನವ |
ಹಿಡಿದು ಕಾಣದೆ ನೋಡಿ ಪರಿಕಿಸಿ ನೆಗಳ್ದ ಪದಗಳನು ||
ತೊಡೆದು ಮರಳಿ ಪರೋಕ್ತಿಗಳನಳ |
ವಡಿಸಿ ಕೊಂಡಕ್ರಮದಿ ಸದರದ |
ನುಡಿಯನೊಂದಿಸಿ ಪೇಳ್ದವನು ಕವಿಯೋ ಧರಿತ್ರಿಯಲಿ || ೧೧
ಗರುಡನಭ್ರವನಡರೆ ಪಿಕವಾ |
ಪರಿಯ ನೆಗೆವಂತನಿಲಸುತ ಸಾ |
ಗರವ ದಾಂಟಲು ನವಿಲು ಲಂಘಿಪ ತೆಱದಿ ಗಣಧರರು ||
ವಿರಚಿಸಿದ ಸತ್ಕೃತಿಯನಿದ ವಿ |
ಸ್ತರಿಸಲಾನೆಸಿತಱಿವ ಕರುಣದಿ |
ಪರಮಭಕ್ತ್ಯಂಗನೆಯ ವಶದಿಂ ಪೇೞ್ವೆನೀಕೃತಿಯ || ೧೨
ಕೃತಿಗೆ ನಾಮ ವಿಶುದ್ಧಗುಣನ |
ಪ್ರತಿಮಜೀವಂಧರನ ಕಥೆ ತ |
ತ್ಕೃತಿಯಧಿಪ ಸರ್ವಜ್ಞನೀಕೃತಿರಚಿತಕವಿವರನು ||
ವಿತತವಿಶ್ವಾಮಿತ್ರಗೋತ್ರಾ |
ನ್ವಿತ ಸರಸಬಸವಾಂಕಸುತ ವಿ |
ಶ್ರುತನು ಭಾಸ್ಕರನೆಂದೊಡೊಪ್ಪುವುದಿದೆ ಧರಣಿಯಲಿ || ೧೩

ವಾದಿಮದಗಜಸಿಂಹಸೂರಿಗ |
ಳಾದಿಯಲಿ ನವಸಂಸ್ಕೃತದೆ ಸಂ |
ಪಾದಿಸಿದ ಭೂವಿನುತಜೀವಂಧರನ ಚರಿತವನು ||
ವೇದಿಸುವೆಸುರುಭಾಮಿನಿಯು ಷ |
ಟ್ಪಾದದಿಂ ಕನ್ನಡದೊಳೊಲಿದಿದ |
ನಾದರಿಸಿ ಕೇಳುವುದು ಭವ್ಯಸಮೂಹವೊಲವಿನಲಿ || ೩೪
ಶ್ರೀಮದನುಪಮವೀರ ಜಿನಪದ |
ತಾಮರಸಮಧುಕರನು ಸದ್ಧ |
ರ್ಮಾಮೃತಾಂಭೋರಾಶಿವರ್ಧನಚಂದ್ರನೆಂದೆನಿಪ ||
ಭೂಮಿಪಾಲಲಲಾಮನಭಿನವ |
ಕಾಮನಮಳಗುಣಾಭಿರಾಮ ಮ |
ಹಾಮಹಿಮ ಮಗಧೇಂದ್ರ ಪಾಲಿಸುತಿರ್ದನೊಲವಿನಲಿ || ೩೫
ಲೀಲೆಯಿಂದೀಪರಿಯಲವನಿಯ |
ಪಾಲಿಸುತ್ತಿರಲೊಂದು ದಿನ ವನ |
ಪಾಲನೆಯ್ತಂದೆಱಗಿ ವಿಪುಳಾದ್ರಿಯಲಿ ಸನ್ಮತಿಯ ||
ಲಾಲಿತಶ್ರೀಸಮವಸರಣ ಸು |
ಲೀಲೆಯಿಂ ನೆಲಸಿರ್ದುದೆನೆ ಭೂ |
ಪಾಲ ಪೀಠವನಿಳಿದು ಭಯಭಕ್ತಿಯಲಿ ವಂದಿಸಿದ || ೩೬
ಒಸಗೆದಂದಂಗಂಗಚಿತ್ತವ |
ನೆಸಗಿ ವಿಮಳಾನಂದಭೇರಿಯ |
ನೊಸೆದು ಪೊಯ್ಸಿಯೆ ಸಮವಸರಣಕೆ ಭವ್ಯಜನಸಹಿತ ||
ವಸುಮತೀಶ್ವರ ಬಂದು ಘನಸಂ |
ತಸದಿ ಬಲಗೊಂಡಕ್ಷಯಗೆ ವಂ |
ದಿಸಿ ಕರಾಗ್ರವ ಮುಗಿದು ಸಂಸ್ತುತಿಸಿದನು ಜಿನಪತಿಯ || ೩೭
ಜಯಜಯ ಮಹಾಮಹಿಮ ಮುಕ್ತಾ |
ಶ್ರಯ ಗುಣಾನ್ವಿತ ಭಕ್ತವತ್ಸಲ |
ಲಯವಿಹೀನ ಮಹೇಶ ಮಾಯಾತೀತ ಮದನಹರ ||
ಭಯರಹಿತ ಸರ್ವಜ್ಞ ಲೋಕ |
ತ್ರಯನಮಿತಪದಕಮಲ ತತ್ವಾ |
ಲಯ ವಿಶುದ್ಧಜ್ಞಾನಮೂರ್ತಿಯೆ ಕರುಣಿಸೆನಗೆಂದ || ೩೮

ದೇವದೇವ ಸುರೇಂದ್ರನುತ ಭ |
ವ್ಯಾವಲೋಕನ ವಿಮಳಮುಕ್ತಿ |
ಶ್ರೀವರ ಜಗನ್ನಾಥ ಜನನವಿದೂರ ಸಾಕಾರ ||
ಪಾವನ ಪರಂಜ್ಯೋತಿ ಶಾಶ್ವತ |
ಜೀವರೂಪ ಕೃಪಾಂಬುನಿಧಿ ರಾ |
ಜೀವಲೋಚನ ಸದ್ಗುಣಾತ್ಮಕ ಕರುಣಿಸೆನಗೆಂದ || ೩೯

ನಿರುಪಮ ನಿರಾಪೇಕ್ಷ ನಿರ್ಭಯ |
ನಿರತಿಶಯ ನಿರ್ವಾಯ ನಿಸ್ಪೃಹ |
ನಿರಜ ನಿರಹಂಕಾರ ನಿರ್ಮಲ ನಿತ್ಯ ನಿರ್ಲೇಪ ||
ನಿರತ ನಿತ್ಯಾನಂದ ನಿರ್ಮದ |
ನಿರಘ ನಿಷ್ಕಳ ನಿರ್ಮಲಾತ್ಮಕ |
ನಿರಜ ನಿಜ ನಿಷ್ಕಾಮ ನಿಶ್ಚಲ ಕರುಣಿಸೆನಗೆಂದ || ೪೦

ಸರ್ವಗತ ಸರ್ವಜ್ಞ ಸದಮಲ |
ಸರ್ವಮಯ ಸರ್ವಾಮರಾರ್ಚಿತ |
ಸರ್ವಲೋಕೇಶ್ವರ ಸಮಾಹಿತಸರ್ವಗುಣನಿಲಯ ||
ಸರ್ವಭೂತಾತ್ಮಕ ಭವಾಂತಕ |
ಸರ್ವಸಂಗವಿಮುಕ್ತ ಸನ್ನುತ |
ಸರ್ವದುರಿತವಿದೂರ ಸನ್ಮತಿ ಕರುಣಿಸೆನಗೆಂದ || ೪೧

ವಿಶ್ವಮಯ ವಿಶ್ವೇಶ ವಿಶ್ವಗ |
ವಿಶ್ವತೋಮುಖ ವಿಶ್ವಪೂಜಿತ |
ವಿಶ್ವಲೋಚನ ವಿಶ್ವಪೂರಿತ ವಿಶ್ವದಾತಾರ ||
ವಿಶ್ವರೂಪ ಮಹೇಶ್ವರೇಶ್ವರ |
ವಿಶ್ವಗತ ವಿಶ್ವಾತ್ಮ ವಿಶ್ರುತ |
ವಿಶ್ವಮೂರ್ತಿ ವಿಶುದ್ಧ ಸನ್ಮತಿ ಕರುಣಿಸೆನಗೆಂದ || ೪೨

ಶ್ರೀಮದಪವರ್ಗಾಂಗನಾಸು |
ಪ್ರೇಮ ನಿರ್ಜಿತಕಾಮ ಸುಗುಣಾ |
ರಾಮ ಧರ್ಮೋದ್ದಾಮ ನುತಸುತ್ರಾಮ ನಿಸ್ಸೀಮ ||
ಸೋಮರವಿಶತಕೋಟಿತೇಜಸ |
ನಾಮ ವಿಮಲಗುಣಾಭಿರಾಮ ಮ |
ಹಾಮಹಿಮ ಭವಭೀಮ ಶಂಕರ ಕರುಣಿಸೆನಗೆಂದ || ೪೩

ಧರಣಿಪತಿ ಜಿನಪತಿಯನಿಂತೀ |
ಪರಿಯ ಸನ್ನುತಿಗೈದು ಬಳಿಕಿ |
ತ್ರೈಜಗದೊಳಿರ್ದ ಸುಧರ್ಮಜಂಬೂಗೌತಮಪ್ರಮುಖ ||
ಪರಮಗಣಧರಸಂಕುಲಕೆ ಭಯ |
ಭರಿತಭಕ್ತಿಯೊಳೆಱಗಿ ಹರುಷದೊ |
ಳಿರಸಿರ್ದನು ಧರ್ಮಪಾರಾಯಣಪ್ರಸಂಗದಲಿ || ೪೪
ಅರುಹನನು ಹೃತ್ಪದ್ಮದಲಿ ತಂ |
ದಿರಿಸಿ ರವಿಮಂಡಲಕೆ ದೃಷ್ಟಿಯ |
ಹರಿಸಿ ಬಹಿರಿಂದ್ರಿಯದ ಬಳಿಕೆಯನುೞಿದು ಸಾಕ್ಷಾತ ||
ನಿರುಪಮಾನಂದೈಕತೇಜ |
ಸ್ಫುರಿತಮಯ ತಾನಾಗಿ ತಪವಮಾ |
ಚರಿಪ ಮುನಿಪನ ಕಂಡು ಗೌತಮಗರಸನಿಂತೆಂದ || ೪೫
ಧರಣಿಯೊಳು ಮನುಜರಿಗೆ ತಪವಮಾ |
ಚರಿಸುವುದು ಕರ್ತವ್ಯಮಮರೋ |
ತ್ಕರಕೆ ಸಲ್ಲದಿದೇನು ವಿಸ್ಮಯಮೀಗಳೀದೇವ ||
ಸುರುಚಿರದೊಳುಗ್ರೋಗ್ರತಪವನು |
ವಿರಚಿಸುತ ಚಿದ್ರೂಪನಾದೀ |
ಪರಿಯಿದೇನೆನೆ ಭೂಮಿಪತಿಗೆ ಸುಧರ್ಮನಿಂತೆಂದ || ೪೬
ಈತ ಮರ್ತ್ಯನು ದೇವನಲ್ಲ ಮ |
ಹಾತಿಶಯದ ತಪೋಗ್ನಿಯಿಂದಿದಿ |
ರಾತ ಕರ್ಮಾರಣ್ಯವನು ಖಂಡಿಸಿ ಭವಾಟವಿಗೆ ||
ಜ್ಯೋತಿಮಯ ತಾನಾಗಿ ಭುವನ |
ಖ್ಯಾತಿವೆತ್ತನು ತಪದ ಮಹಿಮೆಗೆ |
ಗೀತಱತಿಶಯವೆಂದು ಭೂಮಿಪಗಱುಹಿದನು ಮುನಿಪ || ೪೭
ಎನಲು ಭೂಮಿಪನೀತ ಮುನ್ನಾ |
ರನುಪಮದ್ವಿಜನೋ ಮಹೀಪಾ |
ಲನೊ ವಣಿಗ್ವಂಶಜನೊ ರೌಪ್ಯಾಚಲದ ಖೇಚರನೊ ||
ಎನಗೆ ಪೇಳೀತನ ಲಸದ್ವ |
ರ್ತನೆಯನನಿತುಮನೆನಲು ಕೇಳೆಲೆ |
ಜನಪ ಎಂದು ಸುಧರ್ಮಮುನಿಪತಿ ಪೇೞಲನುಗೆಯ್ದ || ೪೮

ಇದು ವಿನಮುದವಮರೇಂದ್ರಶ್ರೀಜಿನ |
ಪದಕಮಲಷಟ್ಚರಣವಾಣೀ |
ವದನದರ್ಪಣ ಭೂಸುರೋತ್ತಮ ಬಸವಣಾಂಕಸುತ ||
ಚದುರಭಾಸ್ಕರರಚಿತ ಧರ್ಮ |
ಪ್ರದನ ಜೀವಂಧರನ ಚರಿತೆಯೊ |
ಳಿದುವೆ ಪೂರ್ವಪ್ರಸಂಗವವನೀಪಾಲ ಕೇಳೆಂದ || ೪೯

ಮೊದಲನೆಯ ಸಂಧಿ ಮುಗಿದುದು.

---

## ಎರಡನೆಯ ಸಂಧಿ

ಸೂಚನೆ| ರಾಜರಾಜನ ಪುರವ ನಗುತಿಹ |
ರಾಜಪುರಿಯಲಿ ಸಕಲವುಹಿಯನು |
ರಾಜಮುಖಿ ಸತ್ಯಂಧರನು ಪಾಲಿಸಿದನೊಲವಿನಲಿ ||

ಅರಸ ಕೇಳ್ ಧರಿಮಕರಮೀನೋ |
ತ್ಕರದಿ ಗಗನವನೊದೆವ ಪೆರ್ದೆರೆ |
ನೊರೆ ಘನಾವರ್ತಂಗಳಿಂ ಘುಮುಘುಮುಘಿನಾದದಲಿ ||
ಸ್ಫುರಿತಮಣಿಮೌಕ್ತಿಕದಿ ವಸುಧಾ |
ತರುಣಿ ನಿಱಿವಿಡಿದುಟ್ಟ ಪಟ್ಟಾರ |
ಬರಸಿದೆನೆ ಲವಣಾಬ್ಧಿ ಮಿಗೆ ರಂಜಿಸುವುದವನಿಯುಳಿ || ೧

ಇಳೆಯ ಪತಿ ಕೇಳಾ ಮಹಾಂಬುಧಿ |
ಯೊಳಗೆ ಮಧ್ಯಮಲೋಕಲಕ್ಷ್ಮಿಯ |
ಲಲಿತನಾಭಿಯಿದೆನಲು ಜಂಬೂದ್ವೀಪವಾಸಡುವೆ ||
ಹೊಳೆವ ಮಣಿವಸುಚಂದ್ರಕಾಂತೋ |
ಪಲವನಾವಳಿಯಿಂದ ಮಂದರ |
ವಿಳೆಗೆ ಮೂಲಸ್ತಂಭವೆನೆ ಸುಟ್ಟಿದುದು ಘನಪಪ || ೨

ಆಮಹಾಮೇರುವಿನ ದಕ್ಷಿಣ |
ಸೀಮೆಯಲಿ ಸಿರಿಕಂಡದವೊಲಭಿ |
ರಾಮವಾದುದು ಲೋಕನೋತ್ಸವಸಂಪದವ ಪಡೆದು ||
ಭೂಮಿಯಖಿಳಕ್ಷೇತ್ರಗಳಿಗು |
ದ್ದಾಮವೆಂದೆನಿಪಾರ್ಯಖಂಡ ಮ |
ಹಾಮಹಿಮೆಯಿಂದೆಸೆವುದವನೀಮುಕುರದಂದದಲಿ || ೩

ಮುದದೊಳಂಬುಜಭವನು ಮೂಲೋ |
ಕದ ಲಸತ್ಸಾರಾಯವನು ತೆಗೆ |
ದೊದವಿ ರಚಿಸಿದನೆನಲಖಿಳ ಸೌಭಾಗ್ಯಸಂಯುತದ ||
ಸದಮಳಗ್ರಾಮಗಳ ನೆರೆ ತೀ |
ವಿದ ತಟಾಕಗಳಿಂದ ಹೇಮಾಂ |
ಗದ ವಿಷಯ ರಂಜಿಸುವುದವನೀಪಾಲ ಕೇಳೆಂದ || ೪

ಪರಮಸತ್ಯದ ಸೀಮೆ ಗುಣದಾ |
ಗರ ಸುಧರ್ಮದ ಪೇಟೆ ಪಾವನ |
ದಿರವನಂಗನ ಬೀಡು ತಣ್ಣೆಲರಿಕ್ಕೆ ರತಿಯ ಮನೆ ||
ಸಿರಿಯ ನೆಲೆ ಸುಖದೆಡೆ ಲಸತ್ಸಿಂ |
ಗರದ ತಾಣ ವಸಂತನೃಪನೋ |
ವರಿಯಿದೆನೆ ತದ್ವಿಷಯವತಿ ರಂಜಿಸುವುದವನಿಯಲಿ || ೫

ಅರಸ ಕೇಳಾವಿಷಯದನುಪಮ |
ಪುರಗಳಮರಾವತಿಯನಬ್ಜಾ |
ಕರಗಳಬ್ಧಿಯನುಪವನಗಳಾಚೈತ್ರರಥವನಿಭ ||
ಸುರಕರಿಯನಶ್ವಾಳಿ ಸೂರ್ಯನ |
ತುರಗವನು ಗೋಸಂಕುಲಗಳುರು |
ತರದ ಸುರಭಿಯ ನಗುವುವೆನೆ ವರ್ಣಿಸುವನಾರೆಂದ || ೬

ಹಸ್ತಿ ಹಯ ಜನ್ಮಿಸದ ಮಲೆ ಬಿಲ |
ನರ್ತನದಿನುಚ್ಚೈಸದಿಳೆ ಜಲ |
ಮುತ್ತುಮಣಿ ಜನಿಯಿಸದ ರೋಹಾಚಳ ಮರಾಳಹರಿ ||
ಪೆತ್ತಿರದ ಕೊಳನಟವಿಕಾಯದೊ |
ಳೊತ್ತಿರದ ಮರಬಳ್ಳಿ ಮದವೊಸ |
ವೃತ್ತೊಗೆಯದಳಿನಿವಹ ವನವಿಲ್ಲಾಪ್ರದೇಶದಲಿ || ೭

ನಾರಿಕೇಳಫಲೋದಕವು ಸಹ |
ಕಾರಕಿೞಿಯಲು ಚೂತಫಲದಾ |
ಸಾರ ದಾಡಿಮುಕಡರೆ ತದ್ರಸ ಕದಳಿಗಳ ಮೇಲೆ ||
ದಾರಿಡಲು ತತ್ಸಾರವಿಕ್ಷುವ |
ಪೇೞೆ ತದ್ರಸದಿಂದ ಬೆಳೆವುವು |
ಚಾರುಧಾನ್ಯಾವಳಿಗಳೊಲವಿಂದಾಪ್ರದೇಶದಲಿ || ೮

ಲಲನೆಯರನುರುನಗರ ತತ್ಪುರ |
ಗಳಲಿ ಮಣಿಮಯಕೋಟೆ ಕೋಟಾ |
ವಳಯುವನು ಪರಿಖೆಗಳು ಪರಿಖೆಯನೊದವಿ ಬನ ಬನವ ||
ಬಳಸಿ ಕೇೞಿಯಾಕೇೞಿಯು ಪೇಷ್ಟಿಸಿ |
ಬೆಳೆವ ಹೊಲನಾಹೊಲನ ಸುತ್ತಿಯೆ |
ತೊೞಲುತಿರ್ಪುದು ಪಾಮರೀಜನವರಸ ಕೇಳೆಂದ || ೯

ಶಾಲಿಗೆೞಗಿದ ಗಿಳಿಯನಬಲೆಯು |
ರಾಲಿವರಲಿಂದಿಡಲು ತಪ್ಪಿ ವಿ |
ಶಾಲಪುಂಡ್ರೇಕ್ಷುಗಳ ಕೊಳೆ ಗಂಟೊಡೆದು ರಸವಿೞಿಯೆ ||
ಮೇಳವದಿ ಪಥಿಕರ್ಕಳಿೞಟೆ ವಿ |
ಲೋಲಪಾಮರಿಯರ ಕಟಾಕ್ಷದ |
ಜಾಲದಲಿ ಸಿಲುಕಿರ್ಪರಿಂದಿಂದಾಪ್ರದೇಶದಲಿ || ೧೦

ಕುಂದು ಹೆಚ್ಚುಂಟೆಂಬುದಬ್ಧಿಯೊ |
ಳಿಂದುವಿನೊಳೞಿಯೂಸೆ ನವಮುಕ |
ರಂದದಲಿ ಕೌಟಿಲ್ಯ ಕಠಿನತೆ ಮುಳಿಸತಿಕ್ಷಾಮ ||
ಮಾಂದ್ಯವಬಲೆಯರಳಕ ಘನಕುಚ |
ಬಂಧುರಭ್ರೂಮಧ್ಯಯಾನಗ |
ಳಿಂದಲಲ್ಲದೆ ನಾಡೊಳಿಲ್ಲವನೀಶ ಕೇಳೆಂದ || ೧೧

ಭಂಗ ವೀಚಿಯೊಳುನ್ಮದವು ಮಾ |
ತಂಗದೊಳು ಧರ್ಮಚ್ಯುತವು ಬಾ |
ಣಂಗಳೊಳಗಹಿತತ್ವ ಗಾರುಡದಲ್ಲಿ ವಿಭ್ರಾಂತಿ ||
ಭೃಂಗನಿವಹದಿ ವಕ್ರಗತಿ ಭಗ |
ಣಂಗಳೊಳಗೆ ಮಹಾಲಯವು ಗೇ |
ಹಂಗಳೊಳಗಲ್ಲದೆ ಮುಗುೞ್ದಾ ನಾಡೊಳಿಲ್ಲೆಂದ || ೧೨

ಓಡಿತ ಚಮರಚ್ಛತ್ರದಲಿ ಸಂ |
ಗಡಿತ ಕುಚಗಳ ಮಧ್ಯದಲಿ ಪಿಗೆ |
ಬಿಡವಿಷಣ ಸಕ್ಷದಲಿ ಗೋತ್ರವಿರೋಧವಿಂದ್ರನಲಿ ||
ಜಡತೆ ವಾರಿಯೊಳುಗ್ರವೇಶನೊ |
ಳುಡಿತ ರಂಭಾವನದಿ ಸಂತತ |
ಹೊಡೆಹು ವಾದ್ಯದ ರವದೊಳಲ್ಲದೆ ನಾಡೊಳಿಲ್ಲೆಂದ || ೧೩
ಭುವನಕಂಟಕವಬ್ಜನಾಳದೊ |
ಳವನಿಕಂಟಕ ಕೇತಕಿಯೊಳ |
ಧ್ರುವಮುಘದಿ ಸಂಚಳ ಸಮೀರಣನಲ್ಲಿ ಮಧುವಿಕೃತಿ ||
ನವರಸಾಲದಿ ನಿಗಳ ಮದಗಜ |
ನಿವಹದೊಳು ವಂಶಕ್ಷಯವು ಸಂ |
ಭವಿಸುವುದು ಮೇದರೊಳಗಲ್ಲದೆ ನಾಡೊಳಿಲ್ಲೆಂದ || ೧೪
ಆವಿಷಯದವನಿಯೊಳು ಸಂತತ |
ದೇವನದಿಮಾತೃಕದಲಿಕ್ಷು ರ |
ಸಾವಳಿಯ ಮಾತೃಕಗಳಲಿ ರಂಭಾಮ್ರಫಳರಸವು ||
ತೀವಿದನುಪಮಮಾತೃಕದಿ ವಿ |
ದ್ರಾವಿಸುವ ಶಶಿಕಾಂತಮಾತೃಕ |
ದಾವಿಳಾಸದಿ ಬೆಳೆಯಲಭಿರಾಜಿಸುವುದೊಲವಿನಲಿ || ೧೫
ಹೃದಯದಲಿ ರತಿಭೀಜವನು ತಳಿ |
ದುದಕವೆಱೆದಪರೆನಲು ಕುಚಕ |
ಕ್ಷದ ಹೊಗರು ತೋರ್ಪಂತೆ ಕಳಸವನೆತ್ತಿ ನೀರೆಱೆಯೆ ||
ಇದುವೆ ಬಟೆಗಿರಿಕೆಗೆನೆ ತಾ ಕುಡಿ |
ದೊದವಿ ಲಾವಣ್ಯಾಂಬುವನು ನೇ |
ತ್ರವಲಿ ಕುಡಿವರ್ ಪಥಿಕರಾವಿಷಯಪ್ರಪಾಳಿಯಲಿ || ೧೬
ಚಂದ್ರಕಾಂತದ ಘಟದೊಳಧ್ವಗ |
ವೃಂದಕುದಕವನಬಲೆಯರು ನಲ |
ವಿಂದೆಱೆಯೆ ತದ್ವಾರಿ ತೀರಲು ತಂದು ಮುಖಶಶಿಯು ||
ಚಂದ್ರಿಕೆಯುಲಾಕಲಶವನು ಸಾ |
ನಂದದಿಂದವೆ ತೀವಿ ಪಥಿಕರಿ |
ಗೊಂದಿ ನೀರೆಱೆದೆಸೆವರಾವಿಷಯಪ್ರಪಾಳಿಯಲಿ || ೧೭

ಇಂತೆಸೆವ ವಿಷಯದೊಳು ಶೋಭಿಸ |
ನಂತಪುರಮಾಲಾನ್ವಿತದಿ ಚೆ |
ಲ್ವಿಂ ತಳೆದು ನಡುವೆಸೆವ ನಾಯಕರತ್ನದಂದದಲಿ ||
ಸಂತತಮಹಾಲಕ್ಷ್ಮಿಗಿರಲು ನಿ |
ಶಾಂತವಾಗಿಯೆ ಭೂಸತಿಯ ಮುಖ |
ದಂತೆ ಮೆಱೆದಿರ್ಪುದು ರಾಜಪುರಿ ಮಧ್ಯಪ್ರದೇಶದಲಿ || ೧೮
ವಿನುತಪುರಲಕ್ಷ್ಮಿಯನು ದಿಕ್ಕಾ |
ಮಿನಿಯರೀಕ್ಷಿಸೆ ದೃಷ್ಟಿಯಹುದೆಂ |
ದೆನುತ ಭೂಸತಿ ಸುತ್ತ ಪಚ್ಚೆಯ ಜವನಿಕೆಯನೊಸೆದು ||
ಅನವರತ ಪಿಡಿದಿರ್ದಳೆನಲುಪ |
ವನಸಹಸ್ರದ ಶೋಭೆಗಿದೆ ತಾ |
ಯ್ವನೆಯೆನಿಸಿ ತತ್ಪುರ ವಿರಾಜಿಸಿತರಸ ಕೇಳೆಂದ || ೧೯
ಕುಲಗಿರಿಗಳಂ ತಂದು ಸುತ್ತಲು |
ನಿಲಿಸಿ ಹೊಂದಗಡುಗಳ ಮೇಲಳ |
ವಳಿಸಿದಂತೆ ಸುವರ್ಣಕೋಟೆ ನಭಸ್ಥಳವನಡರೆ ||
ಹೊಳೆವ ಕನಕಾಗ್ರದಲಿ ಮಿಗೆ ಬೆಳೆ |
ದೆಳಲತೆಯವೊಲು ಪದ್ಮರಾಗಾ |
ವಳಿಯ ತೆನೆಯಟ್ಟಳೆಗಳಿಂದೆಸೆದಿರ್ದುದೊಲವಿನಲಿ || ೨೦
ಅನವರತ ಪಾತಾಳದಹಿಕಾ |
ಮಿನಿಯರಾಪರಿಖೆಯಲಿ ಪೊಱಮ |
ಟ್ಟನುನಯದಿ ತತ್ಪುರದ ಮಣಿಮಯಕೋಡುಗಳನೀಱೆ ||
ಮನವೊಲಿದು ಸುರನದಿಯೊಳಾಡುವ |
ರೆನಲು ಪರಿಖೆಯ ಖಾತವನು ತ |
ತ್ಕನಕಕೋಟೆಯ ಘನತೆಯನು ವರ್ಣಿಸುವರಾರೆಂದ || ೨೧
ಸುರಪುರದ ಸಡಗರವನಳಕಾ |
ಪುರದ ಸೊಬಗನನಂತಪುರದೈ |
ಶ್ವರಿಯವನು ಲಂಕಾಪುರದ ವಿಭವವನು ಕೈಲಾಸ ||
ಪುರದ ವಿಸ್ತಾರವನಯೋಧ್ಯಾ |
ಪುರದ ಸೊಂಪ ರಮಾವರನ ಪುರ |
ಸಿರಿಯನೊಳಕೊಂಡಿರ್ಪುದಾಪುರವರಸ ಕೇಳೆಂದ || ೨೨

ಲಲಿತಕೂಪೋದ್ಯಾನಹರ್ಮ್ಯ |
ವಳಿಗಳಿಲ್ಲದ ವಾಸ ಮಣಿಮಯ |
ಕಳಶವೆತ್ತದ ವಿಪಣೆ ನಿರ್ಜನದೆಡೆ ಕುರೂಪಾದ ||
ಲಲನೆ ಪೂವಲಿಗೊಡದ ಮಾರ್ಗ |
ಸ್ಥಳದ ಕೋವಿದಮನುಜರಿಲ್ಲನೆ |
ಹೊಲಿಲ ಮಹದೈಶ್ವರ್ಯವನು ವರ್ಣಿಸುವರಾರೆಂದ || ೨೩
ಧರೆಗೆ ಪುರವಿದನಂತಪಾವನ |
ತರವೆನುತೆ ಚೌವೀಸತೀರ್ಥಂ |
ಕರರು ತಮ್ಮಯ ಸಮವಸರಣಸಮೇತ ಬಂದೊಲಿದು ||
ಸುರುಚಿರದೊಳೆಸೆದಿರ್ದರೆನಲಂ |
ಬರವ ಮುಟ್ಟಿಹ ರತ್ನಮಯಗೋ |
ಪುರಗಳಿಂ ಚೈತ್ಯಾಲಯಗಳೊಪ್ಪಿರ್ದುವೊಗ್ಗಿನಲಿ || ೨೪
ಪರಮಧರ್ಮ ಪುರಾಣದರ್ಥೋ |
ತ್ಕರವ ತಿಳಿಪುದೆ ಕಮಲಭವನಾ |
ಪುರದ ಭೂಸುರರೆಡೆಗೆ ಬಂದದನರಿದನಾದ್ವಿಜರ ||
ಹೊರೆಯುಲನುಪಮನೀತಿಶಾಸ್ತ್ರೋ |
ತ್ಕರವನಭ್ಯಾಸಿಸುವನಾಸುರ |
ಗುರುವೆನಲು ತತ್ಪುರದ ವಿಬುಧರ ಪೊಗಳ್ವನಾರೆಂಪ || ೨೫
ಘನರಜೋಮಯ ಬಿಸಜ ಮಧುಭಾ |
ಜನ ಸಕಂಟಕವಾಂಡಿಯ ತಾ |
ಯ್ವನೆ ಜಡಾಶ್ರಯ ಕುವಲಯದ್ರೋಹಾನುರಕ್ತವದು ||
ವಿನುತರಾಜಾರಾತಿಯೆಂದಾ |
ವನಜವನು ಸಿರಿಯುಳಿದು ವಣಿಜರ |
ಕನಕಹರ್ಮ್ಯದೊಳಿರ್ದಳೆನೆ ವರ್ಣಿಸುವರಾರೆಂದ || ೨೬
ಧನಕನಕ ವೊದಲಾದಪೂರ್ವದ |
ಘನತರದ ವಸ್ತುಗಳಿಗೋಸುಗ |
ಧನದ ತಾನಾಪುರದ ವಣಿಜಾಪಣಕೆ ಬಂದೊಸೆದು ||
ವಿನುತವಸ್ತೂತ್ಕರಗಳನು ಕೊಂ |
ಡನವರತ ಪುರಿಗುಯ್ವುತಿಪನೆಂ |
ದೆನಲು ವಣಿಜರ ಮಹಿಮೆಯನು ತಾ ಹೊಗಳ್ವನಾರೆಂದ || ೨೭

ಒರೆಯುದಷ್ಟಾಪದದ ವರ್ಣಾರ್ಘಂ |
ತರವನೀಕ್ಷಿಸಿ ಪೇಳ್ವ ಘಟ್ಟಿಯು |
ಭರವ ಕೈತೂಕದಲಿ ತಪ್ಪದೆ ಪೇಳ್ವ ಗಣಿಯಿಸದೆ ||
ಭರದಿ ಲೀಲಾಮಾತ್ರದಿಂದುರು |
ತರದ ಮಚ್ಚವ ಕಟ್ಟುವತಿಚಾ |
ತುರಿಯರಿಪ್ಪರು ಚಿನ್ನವರದರು ತತ್ಪುರಾಂತದಲಿ || ೨೮
ಲಲಿತಯಮುನೆಯೊಳುಡುನಿಕರ ಮಾ |
ರ್ಪೊಳೆವವೊಲು ನೀಲಾಂಬರದಿ ಮಣಿ |
ಒಳಸಿರಲು ಮಣಿವಾಳರಂಗಡಿಯೆಸೆದುವಬ್ಜಸಖ ||
ಹೊಳಲ ನೋಡುವೆನೆಂದು ಗ್ರಹಸಂ |
ಕುಳಸಹಿತ ಬಂದಿರ್ದನೆನೆ ಕ |
ಣ್ಗೊಳಿಸಿ ಮೆಱೆದುವು ಕಂಚುಗಾಱರ ಪಸರವೊಗ್ಗಿನಲಿ || ೨೯
ಮಕರಕೇತನನಂಕಮಾಲಾ |
ಪ್ರಕಟಿತಧ್ವಜವೆತ್ತಿದುರುಮಾ |
ರ್ತಿಕದ ಹರ್ಮ್ಯಾವಳಿಯ ಶುಕಶಾರಿಕಪಿಕಾರವದ ||
ಸಕಲರಾಜಭುಜಂಗತಾಟಿತ |
ವಿಕಟಘಂಟಾರವದ ಸೈದೂ |
ಪಿಕಪಿಟಾಪ್ಸಿತಸೂಳೆಗೇರಿಗಳೆಸೆದುವೊಗ್ಗಿನಲಿ || ೩೦
ಆಕೃತಿಗೆತಿಸ್ತಂಭಸಹಿತಾ |
ಲೋಕನವೆ ಜನವಶ್ಯವಾದವೊ |
ಶ್ರಾಕರುಷರತಿ ಮುಸ್ಯಸುರತೋಚ್ಚಾಟನ ತ್ಯಜಿತ ||
ಪ್ರಾಕಟದ ಮಾರಣದ ಕೃತ್ಯ ವ |
ಚಾಕುಶಲ ಮೋಹನದ ಮಂತ್ರಾ |
ನೀಕನೆಸಿಸುವ ಗಣಿಕೆಯರು ಮೆಱೆದಿರ್ದರೊಗ್ಗಿನಲಿ || ೩೧
ಹೊಳೆವ ನಯನೋಪಾಂಶುಗಳಲು |
ತ್ಪಳದೆಸೆಲು ರಕ್ತಾಂಬುರುಹಸಂ |
ದಳಸಿ ಕೊಂಡೆಯ್ದಲ್ಕೆ ಮಲಿಗೆಯಾಗೆ ಮುಗುಳ್ನಗರ ||
ಮುಳಿದು ಸಲುವುದೆ ಕೌಳಿಕದ ಮಾ |
ಱಿಳಿಯೊಳೆನೆ ಕೈವೊಯ್ದು ನಗುತು |
ಚ್ಛಳಿಸುತಿರ್ಪರು ಸೂಳೆಗಾತಿಯರಾಪುರಾಂತದಲಿ || ೩೨

ಬಳಸಿದಳಿ ನೀಲಾಭ್ರಪಕ್ಷಿಯು |
ಹೊಳಹು ಮಿಂಚು ವಿಭೂಷಣಾರವ |
ನೊಲಿಗು ಮಣಿಮೇಖಲೆಯು ಸುರಧನು ಘರ್ಮಜಲ ಕರಕ ||
ಚಳಿತಕಚ ನವಿಲಾಟ ಕುಸುಮಾ |
ವಳಿಯು ರಸ ಮಱೆಯಾಗೆ ಮೆಱೆದಿಹ |
ರೊಲಿದು ಘನ ಕಾಗಾಲದಂದದಿ ಮಾಲೆಗಾರ್ತಿಯರು || ೩೩
ಚಾರುಚಂದ್ರಿಕೆಯೊಳು ಕಳಂಕವ |
ಸೇರಿಸುವವೊಲು ಕಪ್ಪುರದಿ ಕ |
ಸ್ತೂರಿಯನು ಮೇಳೈಸಿ ತನುಸೌರಭವನಳವಡಿಸಿ ||
ಹಾರಕುಚ ಕುಣಿದಾಡಲಳಿಝುಂ |
ಕಾರಕಗಿಯುತ ಗಂಧವನು ವಿ |
ಸ್ತಾರದಿಂ ತೆಗೆದೆಸೆವರಲ್ಲಿಯು ಘಟ್ಟಿವಳ್ತಿಯರು || ೩೪
ಪದನಖಾಂಶುಗಳಿಂದ ಶಶಿಕಾಂ |
ತದವೊಲಿರಲಳಕದಲಿ ಹರಿನೀ |
ಲದವೊಲಿರಲಂಗಪ್ರಭೆಯೊಳದು ಗೌರದಂತಿರಲು ||
ಅಧರದೀಪ್ತಿಯೊಳಬ್ಜರಾಗದ |
ವಿಧದೊಳಿರೆ ಕಂಡಗಿದು ಮಾಯಾ |
ಸ್ಪದದಿ ಚೆಂಡೆಂದುಱೆವರತಿಮುಗ್ಧೆಯರು ನಗರದಲಿ || ೩೫
ವಿನುತವಸ್ತ್ರಾಭರಣವನುಲೇ |
ಪನಕುಸುಮಸಂಕುಳದಿ ಕೈಗೆ |
ಯ್ದುನುನಯದಿ ಗಿಳಿಗೋದಿಸುತ ಮೃದುಗದ್ಯಪದ್ಯಗಳ ||
ಮನುಮಥನ ಪರದೇವತೆಯರೆಂ |
ದೆನಲಖಿಳ ಸೊಬಗಿಂದ ಪುರದಂ |
ಗನೆಯರೆಸದಿಹರೆತ್ತ ನೋಡಿದೊಡರಸ ಕೇಳೆಂದ || ೩೬
ಧರಣಿಯಮರರ ಶಾಸ್ತ್ರಘೋಷೋ |
ತ್ಕರ ವಿಜೃಂಭಿತಪಂಚವಾದ್ಯ |
ಸ್ವರವು ಹಯಹೇಷಾರವವು ಗಜಬೃಂಹಿತಧ್ವಾನ ||
ಸರಸಗಾನನಿನಾದ ಪಿಕಮಧು |
ಕರಗಳಾರವವಬಲೆಯರ ನೂ |
ಪುರದ ರವವಲ್ಲದೆ ಪುರದೊಳಪಶಬ್ದವಿಲ್ಲೆಂದ || ೩೭

ದಾನಿಗಳನಚಲಿತರ ವಿಮಲ |
ಜ್ಞಾನಿಗಳನುತ್ತಮರ ನಯಸ |
ನ್ಮಾನಿಗಳ ಮದನಾನುರೂಪರ ಸರಸಕೋವಿದರ ||
ಭೂನುತರನುಜ್ಜ್ವಲರನಮಲಗು |
ಣಾನುರಕ್ತರ ಧಾರ್ಮಿಕರನವ |
ಧಾನಿಗಳನಲ್ಲದೆ ಪುರಾಂತದಿ ಕಾಣೆ ನಾನೆಂದ || ೩೮
ವರಸಮುದ್ರದ ನಡುವೆ ಮೆಱೆವುರು |
ತರದ ವಜ್ರದ ವೇದಿಕೆಯವೊಲು |
ಪುರದ ಮಧ್ಯದ ಮಣಿಮಯದ ಹೊಂಗೋಂಟೆ ರಂಜಿಸಲು ||
ಸುರಗಿರಿಯ ಮೇಲತುಳಗಿರಿಗಳ |
ನಿರಿಸಿದಂದದಿ ಕನಕಮಯದು |
ಪ್ಪರಿಗೆಗಳು ರಂಜಿಸಿತು ಗೋಪುರವರಸ ಕೇಳೆಂದ || ೩೯
ಕನಕದಲಿ ಸಮೆದಖಿಳಸಚಿವರ |
ಮನೆಗಳಿರೆ ಶಸ್ತ್ರೇಭಶಾಲಾ |
ಏನುತಹಯಮಂದಿರಗಳಿಂದರಸಿಯರ ಮಣಿಮಯದ ||
ಘನವೆನಿಪ ಹರ್ಮ್ಯಾಳಿ ದೇವಾ |
ರ್ಚನೆಯ ಗೃಹ ಮಣಿಮಂಟಪೋದ್ಯ |
ದ್ವನಗಳಿಂದರಮನೆ ವಿರಾಜಿಸಿತಖಿಳವಿಭವದಲಿ || ೪೦
ಆಮಹಾಮಂದಿರದೊಳವನೀ |
ಭಾಮಿನೀಸುಪ್ರೇಮ ರಾಜಲ |
ಲಾಮ ವಿದ್ಯಾಸೀಮ ವರವಿತರಣಗುಣಾರಾಮ ||
ಕಾಮರೂಪ ಕಳಾಭಿರಾಮ ಮ |
ಹಾಮಹಿಮ ಗುಣಧಾಮ ಜಯಸಂ |
ಗ್ರಾಮನೊಲವಿಂದಿರ್ದ ಸತ್ಯಂಧರಮಹೀಪಾಲ || ೪೧
ತನುರುಚಿಯ ಮುಂದಿನನ ರುಚಿ ಕ |
ಪ್ಪನುಪಮಾಕಾರದಲಿ ಹೃಜ್ಜಾ |
ತನು ಕುರೂಪನು ಶಾಂತದಲಿ ಶಶಿ ಬಿಸಿ ಗಭೀರದಲಿ ||
ವನಧಿ ತೆಳ್ಳನೆ ಸತ್ಯದಲಿ ಧ |
ರ್ಮನು ಹುಸಿಕನತಿರೋಷದಲಿ ತ |
ಣ್ಣನೆ ದವಾನಲನೆಂದೊಡರಸನ ಪೊಗಳ್ವನಾರೆಂದ || ೪೨

ಸ್ಮರನನಂಗ ಮೃಗಾಂಕ ದೋಷಾ |
ಕರ ದಿನಾಧಿಪನುಷ್ಣಕರ ಶಂ |
ಕರ ಕಪಾಲಿ ರಮೇಶ ಪುಣ್ಯಜನಾರಿ ಧಾತ ವಿಧಿ ||
ಸುರಪಪಾರದ್ವಾರ ನಳಕೂ |
ಬರ ಹಯಾಸ್ಯನು ಗಂಧವಹನತಿ |
ತರಳನಿನ್ನಾರೆಣೆ ನೃಪಾಲಂಗರಸ ಕೇಳೆಂದ || ೪೩

ಅರಸನಾಶ್ರಿತಜನವ ತನ್ನಯ |
ಪರಿಯ ಮಾಡಲು ನಾಚಿ ಮಲಯಜ |
ವಿರದೆ ಮರನಾಗಿರ್ದುದಾಸುರಧೇನು ಮೌನಪನು ||
ಧರಿಸಿತಮರದ್ರುಮವು ಸ್ವರ್ಗಾಂ |
ತರಕೆ ಸರಿದುದು ಸಿದ್ಧರಸ ನೆಲಕಿ |
ಕರಗಿತೆನಲಾಭೂಮಿಪನ ವರ್ಣಿಸುವನಾರೆಂದ || ೪೪

ಧರೆಗೆ ವನನಿಧಿ ಜಸಕೆ ದೆಸೆಯೈ |
ಶ್ವರಿಯಕಿಂದ್ರನುದಾರತೆಗೆ ಭೂ |
ಸುರರ ದಣಿಸುವುದರ್ಹಭಕ್ತಿಗೆ ಮುಕ್ತಿ ಜೆಲ್ವಿಕೆಗೆ ||
ಸ್ಮರಜಯವು ಭುಜಬಲಕೆ ರಿಪುಸಂ |
ಹರತೆ ವಿದ್ಯದಲಖಿಳಕಳೆಗಳ |
ಪರಿಣತತ್ವವದವಧಿಯಾನೃಪಗರಸ ಕೇಳೆಂದ || ೪೫

ಅರುಹಭಕ್ತಿಯೊಳಾ[ಪ್ತ]ವಿಬುಧೋ |
ತ್ಕರರ ಕಾಂಕ್ಷೆಯ ಹತಿಸುವಲಿ ನಿ |
ಷ್ಠುರನು ಪಾಪದಿ ಹೇಡಿ ನಿಂದ್ಯಾಳಾಪದಲಿ ಬಧಿರ ||
ಪರಸತಿಯರೆಡೆಗಂಧನತಿದು |
ಶ್ಚರಿತದೆಡೆಯಲಿ ಮಂದನಾಗಿಹ |
ನರಸನೆಸಲಾಭೂಮಿಪಾಲನ ಪೊಗಳ್ವನಾರೆಂದ || ೪೬

ಸದಮಳನ ಪೂರ್ಣೇಂದುಸನ್ನಿಭ |
ವದನನನು ಕೀರ್ತ್ಯಂಗನಾನಿಜ |
ಸದನನನು ಮುಕ್ತಾಳಿರದನನ ನವ್ಯರೂಪಜಿತ ||
ಮದನನನು ಪೌರಾಣನಯಕೋ |
ವಿದನ ರತ್ನಚ್ಛದನನನು ಜಯ |
ಕದನನನು ವರ್ಣಿಸುವನಾರವನೀಶ ಕೇಳೆಂದ || ೪೭

ಲಲಿತಧರ್ಮೋತ್ಸಾಹಪತರಣ |
ಗಳಲಿ ರವಿನಂದನನ ತೇಜೋ |
ಬಲಮನೋಜಯದಲ್ಲಿ ಮರುತಾತ್ಮಜರ ಸಾಕಾರ ||
ಬಲಪರಾಕ್ರಮಚಾಪಕುಶಲತೆ |
ಗಳಲಿ ಶಕ್ರನ ತನಯರನು ಗೆಲಿ |
ದಿಳೆಯೊಳೆಣೆಯಿಲ್ಲೆನಿಸಿ ಮಿಗೆ ರಂಜಿಸಿದನವನಿಯಲಿ || ೪೮
ಧರೆಯು ಪಾತಾಳಕ್ಕೊಗೆದು ಕುಲ |
ಗಿರಿಯು ಕಿತ್ತೀಡಾಡಿ ಘನದಿ |
ಕ್ಕರಿಯು ಶಿರಗಳ ಮೆಟ್ಟಿ ಕುಡುದಾಡೆಗಳ ನೆರೆ ಕೀಲ್ವ ||
ಶರನಿಧಿಯ ಪೀರ್ವತುಳಮೃತ್ಯುವ |
ನುರುತರದೊಳಱಿಯಟ್ಟುವ ಭಟೋ |
ಕ್ಕರದ ಸಂಖ್ಯೆಯನಾರು ಬಲ್ಲರು ಭೂಪ ಕೇಳೆಂದ || ೪೯
ಓಲಗದ ದಂತಿಗಳ ಮದಧಾ |
ರಾಳಿಯಲಿ ನದಿಯಾಗೆ ಬಹುಭೂ |
ಪಾಳಕರ ಭೂಷಾಳಿರುಕ್ಕೀಡಿತದಿ ಕಾಂಚನದ ||
ಧೂಳಿಯುದಿರಲು ತನ್ಮಹಾನದಿ |
ಹೂಳಿದಪುದೆನಲೆಸೆವ ಕರಿಗಳ |
ಜಾಲವನು ಭೂಮಿಪರ ಸಂಖ್ಯೆಯನಱಿವನಾರೆಂದ || ೫೦
ಭರದೊಳೋಡಿ ಸಮೀರಣನ ವಿ |
ಸ್ತರದಿ ಝಳಕಿಸಿ ತಿರುಗುತಿಹ ಬಂ |
ಧುರದ ಬೀಸಣಿಗೆಯನು ಭಂಜಣಿಗೆಯಲಿ ಮೆಲ್ನಡೆಯ ||
ವರಮರಾಳನ ಪೋಲ್ತುದಾಯೆನೆ |
ಚರಿಸಿ ಹೋಯೆನೆ ನಿಂದು ಸಿಂಹೋ |
ತ್ಕರಗಳೆಸೆ ಜಾತ್ಯಶ್ವಸಂಕುಳವೆಸೆದುವೊಗ್ಗಿನಲಿ || ೫೧
ಹುಸಿ ಕಳವು ಮುಷ್ಕೃತ ಪರಸ್ತ್ರೀ |
ವ್ಯಸನವಾರಡಿ ಬಂದಿ ದಳದುಳ |
ನುಸುಳು ಹಿಂಸೆ ವಿವಾದ ಕಲುಷೋನ್ಮಾದವಜ್ಞಾನ ||
ಪಿಸುಣತನ ಕೊಲೆ ಕೊಂಕು ಮದ ಕ |
ರ್ಕಶವಚನ ವಾಸೋದದೋಷ |
ಪ್ರಸರವಿಲ್ಲಾ ನೃಪನ ಕಾಲದೊಳರಸ ಕೇಳೆಂದ || ೫೨

ಕ್ಷೋಣಿಪತಿ ಕೇಳಾಮಹೀಶನ |
ರಾಣಿಯನು ಪ್ರೋತ್ತುಂಗಪುಳಿನ |
ಶ್ರೋಣಿಯನು ರಕ್ತಾಬ್ಜಪಲ್ಲವಪಾಣಿಯನು ಬರ್ಹಿ ||
ವೇಣಿಯನು ಜಾಣೆಯನು ವೀಣಾ |
ವಾಣಿಯನು ಸೌಭಾಗ್ಯವಿಜಿತೇಂ |
ದ್ರಾಣಿಯನು ವರ್ಣಿಸುವನಾರವನೀಶ ಕೇಳೆಂದ || ೫೩

ನುತ ಸೊಬಗು ಸುಪತಿವ್ರತಾಗುಣ |
ದತಿಶಯದಲಾಕಾರದಲಿ ಸು |
ವ್ರತದಿ ಸೌಭಾಗ್ಯದ ಸುಲಕ್ಷಣದಲಿ ಸುಶೀಲದಲಿ ||
ಚತುರತೆಯೊಳನುನಯದಿ ಲೋಕದ |
ಸತಿಯರನು ಗೆಲಿದುದರಿವಿಜಯಾ |
ವತಿಯೆನಿಪ ಪೆಸರಾದುದಾಸತಿಗರಸ ಕೇಳೆಂದ || ೫೪

ಗುಣಿಯನಬಲಾಮಣಿಯ ಮುನಿಪ |
ಸೃಣಿಯನಂಗಜ ಕುಣಿಸುತಿರ್ಪರ |
ಗಿಣಿಯ ಕುಮುದೇಕ್ಷಣೆಯ ಶುಭಲಕ್ಷಣೆಯ ರೂಪಕದ ||
ಕಣಿಯ ಸಕಲಜನರ ಮನೋಹಾ |
ರಿಣಿಯ ಪಲ್ಲವಪಾಣಿಯ ವಿಚಾ |
ರಿಣಿಯ ಚಿಂತಾಮಣಿಯ ರೂಪನು ಪೊಗಳ್ವನಾರೆಂದ || ೫೫

ಬಾಲೆಯನು ಮನಸಿಜನ ಶಸ್ತ್ರದ |
ಶಾಲೆಯನು ಚಾರಿತ್ರಗುಣಮಣಿ |
ಮಾಲೆಯನು ಶೃಂಗಾರರಸಪೂರಿತಮಹಾಂಬುಧಿಯ ||
ವೇಲೆಯನು ರತಿಪತಿಯ ಮಂಗಳ |
ಲೀಲೆಯನು ಖಂಡೇಂದುಸನ್ನಿಭ |
ಭಾಳೆಯನು ನುತಶೀಲೆಯನು ವರ್ಣಿಸುವನಾರೆಂದ || ೫೬

ನಾರಿಯನು ಸತ್ಯಂಧರಮನೋ |
ಹಾರಿಯನು ನಾಕಪ್ರಸುಖಸಾ |
ಕಾರೆಯನು ಧೀರೆಯನು ನವಲಾವಣ್ಯವಾರಿಧಿಯ ||
ಏಱಿಯನು ಮುನಿನಿಕರಧೀರಪ |
ಹಾರಿಯನುಬಾರೆಯನು ವಿಗತವಿ |
ಕಾರೆಯನು ವರ್ಣಿಸುವನಾರವನೀಶ ಕೇಳೆಂದ || ೫೭

ಕುಶಲತೆಯೊಳಂಭೋಜಭವ ಚಿ |
ತ್ರಿಸಿ ಸಜೀವವ ಪಡೆದನೋ ಮೋ |
ಹಿಸುವ ವಸ್ತುಸಮೂಹಗಳ ರೂಪಾಗಿ ಮಾಡಿದನೋ ||
ಕುಸುಮಶರನು ಜಗಜ್ಜಯಕೆ ಮಾ |
ಡಿಸಿದ ನಿಶಿತಾಯುಧವೊ ತಾನೆನ |
ಲಸಿತಕುಂತಳೆಯೆಸೆದಳವನೀಪಾಲ ಕೇಳೆಂದ || ೫೮
ಸರಸಿಜಾಕ್ಷಿಯ ರೂಪ ನೋಡಲು |
ಸುರಪ ಸಾಸಿರ ಕಣ್ಗಳನು ವಿ |
ಸ್ತರದಿ ಪಡೆದನೊ ತನ್ಮೃಗಾಕ್ಷಿಯ ವಿಪ್ರಲಂಭದಲಿ ||
ಸ್ಮರನು ದೇಹವನುೞಿದನೊ ಹಿಮ |
ಕರನು ನೆರೆ ಕುಂದಿದನೆನಲ್ಕಾ |
ತರುಣಿಯನು ವರ್ಣಿಸುವನಾರವನೀಶ ಕೇಳೆಂದ || ೫೯
ಅರಳ ಸರಳ್ಗೈದೊಂದು ಬಿಲ್ಲಿಂ |
ದೞಿದು ಲೋಕವ ಜಯಿಸಲೆನಗೀ |
ತರುಣಿಯಕ್ಷಿಯುಗಾಸ್ತ್ರದಿಂದೇೞಿಂಬು ಭ್ರೂಚಾಪ ||
ಬೆರಸಿದನು ಮೂಱಾದುವೆನಗೆಂ |
ದರಸಿಯೊಳು ಕೈವೊಯ್ದು ಸಗುತು |
ಬ್ಬರಿಸುತಿರ್ದನು ಕಂತುವೆಸೆ ವರ್ಣಿಸುವನಾರೆಂದ || ೬೦
ಹರನದೊರ್ವ ತನೂಭವನ ಮುನಿ |
ದುರುಹಿದುದಕತಿಮುಳಿದವೊಲು ಸಾ |
ಸಿರ ಮನೋಜರನಬಲೆ ಜನಸಂಕುಲಕೆ ಪುಟ್ಟಿಸುತ ||
ಸ್ಮರನ ಮಂತ್ರದ ದೇವತೆಯವೊಲು |
ತರುಣಿಯರಿಗೆ ಲಲಾಮವಾಗಿಯೆ |
ಸರಸಿಜಾಂಬಕಿಯೆಸೆದಳವನೀಪಾಲ ಕೇಳೆಂದ || ೬೧
ಸುದತಿಯಾನನಕಂಘ್ರಿ ಮೇಲ್ಮಡಿ |
ಗಧರ ಸೋಮರ್ಮುಡಿಗುನ್ನತಸ್ತನ |
ಮೃದುತನುಚ್ಛವಿಗಳಕ ನಡುವಿಗೆ ಯಾನ ಭುಜಕಕ್ಷಿ ||
ರದನಗಳಿಗುತ್ತುಂಗ ಕಟಿ ನೆರೆ |
ಹೆದಱಿದಪ್ಪವೆಂದೆನೆ ವಿಚಿತ್ರಾಂ |
ಗದ ಸತಿಯ ರೂಪಾತಿಶಯವನು ಹೊಗಳ್ವನಾರೆಂದ || ೬೨

ಕುಮುದಕೇಸರಿನೇತ್ರಗಂಧಿಯ |
ನಮಳಶಶಿಬಿಂಬಾನನೋಷ್ಠೆಯ |
ಸಮದವಾರಣಕುಂಭಯಾಸಸ್ತನೆಯ ಹರಿಸೀಲ ||
ವಿಮಲಮಧ್ಯಾಳಕೆಯ ವರಪ |
ದ್ರುಮಲತಾಹಸ್ತಾಂಗೆಯನು ಮೃದು |
ಕಮಲನಾಳನವಾಂಘ್ರಿ ಬಾಸೆಯ ಪೊಗಳ್ವನಾರೆಂದ || ೬೩

ಕ್ಷಿತಿಪ ಕೇಳಿಂತೆಸೆವ ವಿಜಯಾ |
ವತಿಯನಾಸತ್ಯಂಧರನು ನವ |
ಚತುರಶೆಯೊಳಭಿನವಮನೋಜನ ವಿಧದೊಳನವರತ ||
ಕೃತಕಶೈಲಾರಾಮ ಪುಳಿನ |
ಪ್ರತತಿಯಲಿ ಶಶಿಕಾಂತಗೃಹದೊಳ |
ಗತಿಶಯಾನಂದದಲಿ ರಮಿಯಿಸುತಿರ್ದನೊಲವಿನಲಿ || ೬೪

ತಳಿತ ಘರ್ಮಜಲಾಂಬು ಭಾಳದ |
ತಿಲಕ ಗಂಧ ಸುದಂತದಕ್ಷತೆ |
ಸುಲಲಿತಾನನಕಮಳಸೌರಭ ಧೂಪ ದೃಗ್ದೀಪ ||
ಹೊಳೆವಧರ ನೈವೇದ್ಯ ರತಿ ಸ |
ತ್ಫಲಗಳಾಗೆ ನೃಪಂಗೆ ಮಾಡಿದ |
ಳಿಳೆಯೊಳಷ್ಟವಿಧಾರ್ಚನೆಯ ತನ್ನಂಗಶೋಭೆಯಲಿ || ೬೫

ಕೀರ ಮೃದುಫಲರಸವನಮಲ ಚ |
ಕೋರ ಚಂದ್ರಿಕೆಯನು ಮಯೂರವ |
ಕಾರ ನವಷಟ್ಪದ ಸುಗಂಧವ ಚಕ್ರವಾವಿವವ ||
ಸಾರಸಾಧಿಪ ಕೋಕನ ಪಿಕ ವಿ |
ಸ್ತಾರವನವನು ಮೆಚ್ಚಿದಂದದೆ |
ಧಾರಿಣೀಪತಿ ಸತಿಗೆ ಮನವೆಳಸಿರ್ದನೊಲವಿನಲಿ || ೬೬

ತನುವನಾಕೆಯ ದೇಹದಾಲಿಂ |
ಗನದಿ ಕಂಗಳನಾಪತಿಯ ರೂ |
ಪಿನಲಿ ಕರ್ಣವನಬಲೆಯಾಳಾಪದಲಿ ನಾಸಿಕವ ||
ತನುವಿನಾಕಘ್ರಾಣದದಲಿ ಜಿಹ್ವೆಯ |
ನಿನಿಯಳಧರಾಮೃತದಿ ತೃಪ್ತಿಯ |
ಜನಪ ಮಾಡುತ್ತಿರ್ದನಿಂತವನೀಶ ಕೇಳೆಂದ || ೬೭

ಇದು ಏನಮುದಮರೇಂದ್ರ ಶ್ರೀಜಿನ |
ಪದಕಮಲಷಟ್ಚರಣವಾಣೀ |
ವದನದರ್ಪಣ ಭೂಸುರೋತ್ತಮ ಬಸವಣಾಂಕಸುತ ||
ಚದುರ ಭಾಸ್ಕರರಚಿತ ಧರ್ಮ |
ಪ್ರದನ ಜೇವಂಧರನ ಚರಿತೆಯೊ |
ಳಿದುವೆ ತಾನಧಿರಾಜವರ್ಣನವರಸ ಕೇಳೆಂದ || ೬೮

ಎರಡನೆಯ ಸಂಧಿ ಮುಗಿದುದು.

---

## ಮೂಱನೆಯ ಸಂಧಿ.

ಸೂಚನೆ|| ದುರುಳಕಾಷ್ಠಾಂಗಾರಕನ ಹವ |
ಣಱಿದು ಸತ್ಯಂಧರನು ಮಂತ್ರೀ |
ಶ್ವರನ ಮಾಡಿದ ತೆಱನ ವಿವರಿಸಿದನು ಮುನೀಶ್ವರನು ||

ಧರಣಿಪತಿ ಕೇಳೀಪ್ರಕಾರದಿ |
ವರನೃಪಾಗ್ರಣಿಯೆನಿಪ ಸತ್ಯಂ |
ಧರನಕಾರಣದಿಂದ ಪೂರ್ವದ ಮಂತ್ರಿವರ್ಗಗಳ ||
ತೊಱಿದು ಕಾಷ್ಠಾಂಗಾರಕನ ವಿ |
ಸ್ತರದಿ ಸಚಿವನ ಮಾಡಿ ತಾ ಸುರ |
ಪುರಕೆ ಸರಿದನು ಕುಜನಸಂಗದೊಳುಂಟೆ ಸುಖವೆಂದ || ೧

ಎನಲು ಮಗಧನೃಪಾಲ ಗೌತನು |
ಮುನಿಗೆ ತಾನಿಂತೆಂದ ಪರಿಣತ |
ನೆನಿಪ ಸತ್ಯಂಧರನು ಕಾಷ್ಠಾಂಗಾರನೆಂಬವಗೆ ||
ಅನುಚಿತದಿ ಮಂತ್ರೀಶಪಟ್ಟವ |
ನನುಕರಿಸಿ ಪಾಲಿಸಿದನೇಕಾ |
ತನ ಸುವೃತ್ತಾಂತವನು ತಿಳುಹಿಸೆ ಮುನಿಪನಿಂತೆಂದ || ೨

ಅರಸ ಕೇಳಾತೆಱದಿ ಸತ್ಯಂ |
ಧರನು ರಾಜ್ಯಾಂಗನೆಯ ಭೋಗಿಸು |
ತಿರಲು ನಗರಾಂತರದಿ ಕಾಷ್ಠಾಂಗಾರನಿವ ತಾನು ||
ನಿರುತದಿಂದಡುಗಬ್ಬ ತಂದಾ |
ಪುರದೊಳಗೆ ವಿಕ್ರಯಿಸಿ ತನ್ನನು |
ಹೊರೆದು ಕೊಳುತಿಹನೀಪರಿಯೊಳತಿಕಷ್ಟವೃತ್ತಿಯಲಿ || ೩

ಒಂದು ದಿನ ಘನಕಾಷ್ಠಭಾರವ |
ನೊಂದಿ ಕಾಷ್ಠಾಂಗಾರ ಹಱುವದಿ |
ತಂದು ವೇಶ್ಯಾರತ್ನಪದ್ಮಾವತಿಯ ಮಂದಿರದ ||
ಮುಂದಿಱುಹಿ ಬೇಸಗೆಯ ಬಿಸಿಲೊಳು |
ಬೆಂದುಡುಗೆ ಹೊಯ್ವಳ್ಳೆಯಲಿ ಕರಿ |
ಗಂದಿ ತಾಳಿಗೆಯೊಣಗಿ ಕುಸಿದಿರ್ದನು ಕುಚೇಷ್ಟೆಯಲಿ || ೪

ಚತುರವಿಟನ ಸಮೇತ ಪದ್ಮಾ |
ವತಿ ಸುಹರ್ಮ್ಯದೊಳಿರ್ದು ನೆರೆ ದಾ |
ವತಿಬಡುತ್ತಳವಱಿಪ ಕಾಷ್ಠಾಂಗಾರಕನ ಕಂಡು ||
ಕ್ಷತಿಯೊಳಿವನೀತಿಲ್ಲ ಬಿಡದ |
ಧೃತಿ ಬಡುವ ನರನೆಂದು ವಿಟಗ |
ದ್ಭುತದಿ ತೋಱಿಸಲಣಕದಿಂ ಸತಿಗೆಂದನವ ನಗುತ || ೫

ಇಂದುಮುಖಿ ಕೇಳ್ ನಿನ್ನ ವರಿಸಲು |
ಬಂದನಿವನೆನೆ ಛಿ ! ಪೊಯೆ ಥೂ ಥೂ |
ಎಂದು ಮಸದಲಿ ಹೇಸಿ ಕಾಂತನ ಜಱಿದು ತಾನಿವನ ||
ಹೊಂದುವುದಱಿಂದುರಿಯೊಳೊಂದುವು |
ದೆಂದವನನಣಕಿಸುತ ಸತಿ ಹಲ |
ವಂದದಲಿ ಜಱಿದವನ ಮೇಲುಗುಳಿದಳು ನಸು ನಗುತ || ೬

ತರುಣಿ ಜಱಿದೀಪರಿಯೊಳಿನಿಯನ |
ಕರತಳವ ಹೊಯ್ದಣಕದಲಿ ನಗು |
ತಿರಲು ಕಾಷ್ಠಾಂಗಾರ ಕೇಳಿದು ನಾಚಿ ಮನನೊಂದು ||
ಮಱುಗಿ ವಾಸಿಯೊಳಿವಳ ನಾನಾ |
ತೆಱದಿ ಭೋಗಿಸಬೇಕೆನುತ ಕಾ |
ತರಿಸಿ ತನ್ನಯ ಮನದೊಳಾಳೋಚಿಸಿದನಾವಿಧವ || ೭

ವನಿತೆಗೊತ್ತೆ ಸಹಸ್ರಕಾಂಚನ |
ವನಿತನಾರ್ಜಿಸಲರಿದು ತಾನೊಂ |
ದನುವಿನಲಿ ಕೂಡುವೆನೆನುತ ನಿಶ್ಚೈಸಿ ಕಾಷ್ಠಗಳ ||
ದಿನಕೆ ನಾಲ್ಕೈದಾ [ಅಟವಿಪ ಸಹ |
ಚರಿಸಲಿ] ತಂದವ ಮಾರಿ ಪೊಂಗಳ |
ನನುನಯದಿ ಸಂವರಿಸುತಿರ್ದನು ಹಲವು ಕಾಲದಲಿ || ೮
ಧರಣಿಪತಿ ಕೇಳೊಂದು ದಿನವಾ |
ಪುರದ ಚೈತ್ಯಾಲಯದಿ ಗುರುಗಳ |
ಹೊರೆಯೊಳುರುಭವ್ಯಾಳಿ ಬಹುವಿಧದಿಂದಣುವ್ರತವ ||
ಸುರುಚಿರದಿ ಕೈಕೊಳಲು ವಿಸ್ಮಯ |
ತರದಿ ಕಾಷ್ಠಾಂಗಾರನಲ್ಲಿಗೆ |
ಭರದಿ ಬಂದಾಮುನಿಗಳಡಿಗಳಿಗೆರಗಿ ತಾ ನುಡಿದ || ೯
ಮುನಿಪ ಕೇಳ್ ತನಗೊಂದು ಸುವ್ರತ |
ವನು ನಿರೂಪಿಸಿ ಕಾಯಬೇಕೆಂ |
ದೆನಲು ನಗುತಾಮುನಿಗಳೀವ್ರತವಾರು ಸೀನಾರು ||
ಅನುಕರಿಸದದು ಬೇಡ ಹೋಗೆಂ |
ದೆನಲು ಮುನಿಗಳು ನೆನೆದು ನುಡಿದರ |
ನುನಯದಲಿ ಸತ್ಕೃಪೆಯೊಳಾತಗೆ ತಕ್ಕ ಸುವ್ರತವ || ೧೦
ಸುತನೆ ನೀ ಪೌರ್ಣಮಿಯ ದಿನದಲ್ |
ಸತಿಯ ಹೊದ್ದಲು ಬೇಡವಿದು ಸು |
ವ್ರತವನುಲ್ಲಂಘಿಸದೆ ನಡೆಸುವುದೆಂದು ಕರುಣದಲಿ ||
ಯತಿಗಳರುಹೆ ಹಸಾದವೆಂದಾ |
ಶ್ರುತಮುನೀಶರಿಗೆರಗಿ ಬೀಳ್ಕೊಂ |
ಡತಿಮುದದಿ ಮರಳಿದನು ಕಾಷ್ಠಾಂಗಾರನಾಲಯಕೆ || ೧೧
ಕೆಲವು ಕಾಲಕೆ ಕಟ್ಟಳೆಯ ಪೊಂ |
ಗಳನು ನಿಖಿಲೋಪಾಯದಿಂದವೆ |
ಗಳಿಸಿ ಬಧರಿಂ ಸಕಲಕಲೆಗಳನರಿದು ವಿಟಮತವ ||
ತಿಳಿದು ವಿವಿ ಸುಗಂಧಸಹಿತ |
ಗ್ಗಳನು ಪದ್ಮಾವತಿಯ ಮನೆಗೆಂ |
ದೆಳಸಿ ಬರಲನುಗೈದು ಕೈಗಯ್ದು ವಿಳಾಸದಲಿ || ೧೨

ಧರಿಸಿದನು ಚೀನಾಂಬರವನಾ |
ಭರಣಗಳ ತಾಳ್ದಿಸೆವ ಪೂಗಳ |
ತುಱುಬಿ ಸಾದು ಜವಾಜಿಗಂಧವ ಲೇಪನಂಗೆಯ್ದು ||
ಬೆರಸಿ ಹಡಪದ ಬಾಲನೆಯ್ತರು |
ತಿರಲು ಕಾಷ್ಠಾಂಗಾರ ಸುರಗಿಯು |
ತಿರುಹುತಲಿ ನಟನೆಯಲಿ ಗಣಿಕೆಯ ಮನೆಗೆ ನಡೆತಂದ || ೧೩
ಬಂದು ಕಾಷ್ಠಾಂಗಾರ ದೋರದಿ |
ಹೊಂದಿಸಿಹ ಹೊಂಗಂಟೆಯನು ಸಾ |
ನಂದದಲಿ ದನಿಗೆಯ್ಯೆ ಚೇಟಿಯರಾಗಳೆಯ್ತಂದು ||
ಇಂದುಮುಖಿಗೊತ್ತೆಯನು ಕೊಂಡೊಲ |
ವಿಂದಲಾತನ ಕರೆಸಲವನಾ |
ಮಂದಿರದ ರಚನೆಯ ವಿಳಾಸವ ಹೊಕ್ಕನಱ್ತಿಯಲಿ || ೧೪
ಲಲನೆ ಕಳೆ ಕಪ್ಪುರದ ಕಸವನು |
ತಳಿ ಸುಗಂಧೋದಕವನಗಿಲ ಹೊಗೆ |
ಗೊಳಿಸು ನಗದೊಲಿದಿಕ್ಕು ಮುತ್ತಿನ ರಂಗವಲ್ಲಿಯನು ||
ಬೆಳಗು ಮಣಿದೀಪವನು ತೊಡಿಗೆಯ |
ನಳವಡಿಸಿಕೊಳ್ಳೆಂಬ ಚೇಟಿಯ |
ರುಲುಹನಾಲಿಸುತೋವರಿಗೆ ಬರುತಿರ್ದನೊಲಪಿನಲಿ || ೧೫
ಗಿರಿಶನಟ್ಟಿದನೊತ್ತೆಗೆಂದೇ |
ಪೆಱತಿಯನೋಹಿಗೆ ಕೊಟ್ಟ ವಜ್ರವ |
ಸುರಪ ಬಿಡಿಸಲು ಬಂದನಜ ಕುಂಡಲವ ಹರಿಮಣಿಯ ||
ವರುಣ ಹಾರವ ತಂದನೊತ್ತೆಗೆ |
ಕರೆವೆನಾರುವನಕ್ಕ ಬೆಸಸೆಂ |
ದಱುಹುತಿಹ ದೂತಿಯ ನುಡಿಯನಾಲಿಸುತ ಬರುತಿರ್ದ || ೧೬
ಲಲಿತಚಿತ್ರದ ರಂಗದೋವರಿ |
ಯೊಳಗೆ ಕುಸುಮದ ಹರಹಿನಲಿ ಮೆಱತಿ |
ವಲಘುಮಣಿಮಂಚವನು ಕಾಷ್ಠಾಂಗಾರ ಸಾರ್ದಿರಲು ||
ಲಲನೆಯರ ಮೃದುಗೀತ ಶುಕಕೋ |
ಕಿಲಮರಾಳಾಲಾಪಗಳ [ಮನ] |
ವೊಲಿದು ಕೇಳುತ್ತಿರಲು ರವಿಯಸ್ತಾದ್ರಿಗೆಯ್ತಂದ || ೧೭

ಜಳಜ ಮುಕುಳಿತವಾಗೆ ಚಕ್ರಂ |
ಗಳು ವಿಶೋಕಮನೆಯ್ದೆ ನೀಲೋ |
ತ್ಪಳ ವಿಕಾಸಮನೆಯ್ದೆ ತಾರೆಗಳಂಬರದೊಳೊಗೆಯೆ ||
ಅಲರ ಬಾಣನ ಚಕ್ರವೋ ಸ |
ಲ್ಲಲಿತಪೂರ್ವದಿಶಾಂಗನಾಕುಂ |
ಡಲವೊ ತಾನೆನಲುದಯಿಸಿದ ಶಶಿ ಮೂಡಣಾದ್ರಿಯಲಿ || ೧೮
ಆಮಹಾಚಂದ್ರೋದಯದೊಳಾ |
ಕಾಮಿನಿಯೊಳೊಡಗೂಡಲೆಂದಿರೆ |
ಭಾಮೆಯೊರ್ವಳು ಬರಲು ನಿಮ್ಮಯ ಮನೆಯೊಳಿಂದೀಗ ||
ಈಮಹೋತ್ಸವವೇನೆನಲ್ಕಭಿ |
ರಾಮಪೌರ್ಣಮಿಪರ್ವವಿಂದೆಂ |
ದಾಮೃಗಾಕ್ಷಿಗೆ ತಿಳುಹಿದರು ಚೇಟಿಯರು ನಲಸಿನಲಿ || ೧೯
ವನಿತೆಯರು ಪೌರ್ಣಮಿಯ ದಿನವೆಂ |
ದೆನಲು ಕಾಷ್ಠಾಂಗಾರನಂತಾ |
ಧ್ವನಿಯ ಕೇಳಿದು ಮನದೊಳತಿಸಂತೋಷಬಟ್ಟಂದು ||
ಮುನಿಗಳಿತ್ತಾವ್ರತವು ಕೆಡದಂ |
ತನುಕರಿಸಿತಿದು ದೈವವುಂಟೆನ |
ಗೆನುತಲಾತನು ಮನದೊಳಾಲೋಚಿಸಿದ ಹರುಷದಲಿ || ೨೦
ಲಲನೆಗರ್ಘವ ತಂದು ಕೊಟ್ಟಾ |
ಗಳೆ ಲತಾಂಗಿಯು ನೆರೆದೆನೆನ್ನ ಯ |
ಚಲವು ಸಂದುದು ಮನದೊಳಲ್ಪಸುಖಕ್ಕೆ ಗುರುವಿತ್ತ ||
ಸುಲಲಿತವ್ರತವಳಿಯೆ ನರಕದೊ |
ಳಿಳಿಸನೆಂದಂಗಜನ ಗೆಲಿದಾ |
ಲಲನೆಗೀಜಗದ ಮುದದಿ ನೋಣದೊಳಿರ್ದು ಪವಡಿಸಿದ || ೨೧
ಎಂದು ವೇಸಿಯನುಳಿದು ಪರಮಾ |
ನಂದದಲಿ ಮುಸುಕಿಟ್ಟು ಮಲಗಿರ |
ಲಂದು ಪದ್ಮಾವತಿ ಲಸಚ್ಛೃಂಗಾರಶೋಭೆಯಲಿ ||
ಬಂದೊಡನೆ ಸೆಳೆಮಂಚವೇಱಿರೆ |
ಹಿಂದುಮುಂದವನಾಗೆ ವಿಸ್ಮಯ |
ವೆಂದಿದೇನೆಂದವನಸೊಕ್ಕಿಸುತಿರ್ದಳಾಕಾಂತೆ || ೨೨

ನೆಟ್ಟನೆನಗೆ ಸಹಸ್ರ ಪೊಂಗಳ |
ಕೊಟ್ಟ ನರಶಿವ ಮರುಳನೋ ಮೇಣ್ |
ದುಷ್ಟನೊ ನಪುಂಸಕನೊ................... ||
ಭ್ರಷ್ಟನೋ ತಾನಾಗಿ ಪುರುಷರ |
ಮುಟ್ಟುವುದು ಸತಿಯರಿಗೆ ಹೀನವ |
ನಿಷ್ಟನೆನಗಾಯ್ತೆಂದು ಬೆಱಗಾದಳು ಸರೋಜಾಕ್ಷಿ || ೨೩
ನಿದ್ದೆಗೆಯ್ದನೊ ಸಟೆಯೊಳೇ ಒಱ |
ಗಿದ್ದಪನೊ ತಾ ನೆರೆಯದಿದ್ದರೆ |
ಹೊದ್ದುವುದು ಪಾತಕವು ಕೊಟ್ಟ ಸುವರ್ಣ ಋಣವಹುದು ||
ಮುಗ್ಧೆಯರೊಳತಿಹೀನವಹುದೆಂ |
ದೆದ್ದುನೋಡುವ ಮಱೆದು ಮಲಗಿರೆ |
ಮಧ್ಯರಾತ್ರಿಯೊಳೆದ್ದು ಕಾಷ್ಠಾಂಗಾರ ನೃಪನಿದ || ೨೪
ತರುಣಿ ಬೞಿಕೆೞ್ಚತ್ತು ನಲ್ಲನ |
ನಿರವ ಕಾಣದೆ ಕೆಟ್ಟೆನಕಟೆಂ |
ದರಸ ಸತ್ಯಂಧರನೆಡೆಗೆ ಬಂದೆಱಗಿ ವಿಟನೆನ್ನ ||
ಇರುಳು ತಂದೆನಗೊತ್ತೆಯನು ವಿ |
ಸ್ತರದಿ ಕೊಟ್ಟೆನ್ನನು ನೆರೆಯದೆ |
ಮರಳಿ ಹೋದಸಿದೇನು ವಿಸ್ಮಯವೆಂದಳಿಂದುಮುಖಿ || ೨೫
ಸ್ಮರಜಯಂತಾದ್ಯರುಗಳೆನ್ನಯ |
ಹೊರೆಗೆ ಬಂದೆನ್ನನು ನೆರೆಯದೆ |
ಮರಳರಿವನು ಮುಗುೞ್ದುದಚ್ಚರಿಯೆನಲು ನೃಪ ನಗುತ ||
ಪುರದ ಹೆಬ್ಬಾಗಿಲುಗಳೆಲ್ಲವ |
ಭರದಿ ಮುಚ್ಚಿಸಿ ಬಾಗಿಲೊಂದನು |
ತೆರೆಸಿ ತತ್ಕಾಮಿನಿಗೆ ಭೂಮೀಪಾಲನಿಂತೆಂದ || ೨೬
ತರುಣಿ ನೀನಿಂದಿರುಳು ಬಂದನ |
ಕುಱುಹ ಬಲ್ಲೊಡೆ ಸೆಱಗ ಹಿಡಿಯೆಂ |
ದರಸನಾದ್ವಾರದೊಳಗಾಕೆಯನಿರಿಸಿ ಹೊಱಲೊಳಗೆ ||
ಪುರುಷರಿರ್ದೊಡೆ ದಂಡಿಸುವೆನೆಂ |
ದಿರದೆ ಸಾರಿಸೆ ಜನವು ಹೊಱವಡು |
ತಿರಲು ಪದ್ಮಾವತಿ ನಿರೀಕ್ಷಿಸುತಿರ್ದಳಾವಿಟನ || ೨೭

ಪುರದ ಜನವಂದೆಯ್ದೆ ಪೊಱಮಡು |
ತಿರಲು ಕಾಷ್ಠಾಂಗಾರ ಹೆಗಲಲಿ |
ಪರಶು ಕೈಯಲಿ ನೇಣ್ಗಳನು ಶಿರದಲ್ಲಿ ಕಂಬಳಿಯು ||
ಧರಿಸಿ ಮುನ್ನಿನ ತೆಱದಿ ಪೋಗಲು |
ತರುಣಿ ಸಿಕ್ಕಿದ ತುಂಟನೆಂದೊಡ |
ನೆರಸಿ ತಂದಿಕ್ಕಿದಳು ಭೂಪಾಲಸಿದಿರಿನಲಿ || ೨೮
ಇರುಳು ಬಂದವನಿವ ವಿಚಾರಿಸು |
ಧರಣಿಪತಿ ಎಂದಬಲೆಯೆನಲಾ |
ನೆರವಿ ನಗುತಿವನಾರು ಸಾಸಿರ ಹೊನ್ನು ಇವಗೆಂತು ||
ದೊರಕುವುದು ನಾವಱಿಯೆ ಕಾಷ್ಠವ |
ಪುರದೊಳಗೆ ಮಾಱುವನು ಮೂರ್ಖೆಯೊ |
ಮರುಳೆಯೋ ನೀನೆಂದು ಜಱಿದು ನೃಪಾಲನಿಂತೆಂದ || ೨೯
ಎಲವೊ ನೀನಿರುಳೀಸತಿಯುನೇ |
ಕುಱಿದೆ ರೂಪೈಶ್ವರ್ಯದಲಿ ಕೌಶಲ |
ಗಳಲಿ ತನಗಿಂತಿವೞಿತೊಳೊಂದಿಲ್ಲಿವಳ ನಾನೆಂತು ||
ಎಳಸುವೆನು ತಾನಿವಳ ನೆರೆಯುದೆ |
ಹೞಿವೆ ತಾನಲ್ಲಿರುಳು ಬಂದವ |
ನೆಲೆ ಮಹೀಪತಿ ಎನಲು ಬೆಱಗಿನೊಳಿದ್ದನಾಭೂಪ || ೩೦
ಬೆಱಗಿದೇಕವನೀಶ ಕೇಳಿವ |
ನಿರುಳು ಬಂದವನಲ್ಲದಿರೆ ಸತಿ |
ಯರಿಗೆ ಹೊಱುವೆನು ನೀರನೆನೆ ನೃಪನವನ ಹತ್ತಿರಕೆ ||
ಕರೆದು ತಪ್ಪದೆ ಹೇೞು ನಿನ್ನೊಳು |
ಕೊಱತೆಯಿಲ್ಲೆನಲಹುದು ತಾನಾ |
ತೆಱನ ಹೇೞುವೆನೆನುತ ಕಾಷ್ಠಾಂಗಾರನೃಪಗೆಂದ || ೩೧
ಜನಪ ಕೇಳಾನೊಂದುದಿನವಿಂ |
ಧನವ ತರುತಿರಲೆನ್ನ ಕಂಡೀ |
ವನಿತೆ ತನ್ನನಿಯನ ಸಮೀಪದಿ ಹೞಿಯೆ ತಾನಿವಳ ||
ಅನುಭವಿಸಿ ಲಜ್ಜಿಸುವನೆಂದಾ |
ಧನವ ಕಾಷ್ಠವ ಮಾಱಿ ಗಳಿಯಿಸು |
ತಿನಿಯಳನು ಪೌರ್ಣಮಿಯ ದಿನನೆಂದುೞಿದೆ ತಾನೆಂದ || ೩೨

ಎನಲರಸ ಪೌರ್ಣಮಿಯ ದಿನವಂ |
ಗನೆಯ ನೆರೆಯದುದೇನು ಕಾರಣ |
ವೆನಲೆನಗೆ ಗುರುವಿತ್ತ ಸುವ್ರತಭಂಗವಹುದೆಂದು ||
ವನಜವದನೆಯನುಳಿದೆನೆನಲಾ |
ತನ ಛಲೋಪಾಯಾಂತರಂಗದ |
ನೆನಹು ಗುರುಭಾವನೆಗೆ ಬೆಱಗಾದನು ಮಹೀಪಾಲ || ೩೩
ತರುಣಿ ನೀಮುನ್ನಿವನ ಹಱಿದುದು |
ನಿರುತವೇ ಹೇಳೆಂದು ಭೂಮೀ |
ಶ್ವರನು ಬೆಸಗೊಳೆ ನಾಚಿ ಸತಿಯುಂಟೆಂದು ತಲೆವಾಗೆ ||
ಧರಣಿಯೊಳು ಬೆಲೆವೆಣ್ಣ ಗರ್ಥೋ |
ತ್ಕರವದಲ್ಲದೆ ರೂಪುಗುಣಚಾ |
ತುರಿಯುವೇಕೆಂದವಳ ಕಾಪಾತ್ಮಂಗಾರ ಲಜ್ಜಿಸಿದ || ೩೪
ದೇಶಜನದುಚ್ಚಿಷ್ಟ ದೋಷನಿ |
ವಾಸದನಿಬರುಮುಗುಳ್ವ ತಂಬುಲ |
ದೋಷದೆಡೆ ಹದಿನೆಂಟು ಜಾತಿಗಳುಂಬ ಭಾಜನವು ||
ಹೇಸಿಕೆಯ ರಕ್ತೇಂದ್ರಿಯಾಸ್ಪದ |
ವೈಶಿಕಾಶ್ರಯ ಕುಟಿಲಕಾಗರ |
ವೇಸಿ ಸುಡು ಛೀವೋಯೆ ಥೂಥೂ ಎಂದು ವಿಟ ಜಱಿದ || ೩೫
ಹೊನ್ನಿನಾಸೆಗೆ ಬಧಿರನಂಧಕ |
ತೊನ್ನ ಚೋರ ಕೃತಘ್ನ ಖಲರಿಗೆ |
ತನ್ನ ಸಿತ್ತೆದೆಗೊಯ್ಯು ಕೊಂಡನುಭವಿಸಿ ನಾಸ್ಯೊಱಿದು ||
ನನ್ನಿಗೆಟ್ಟೊಗಡಿಸದೆ ನಾನಾ |
ವರ್ಣದೆಂಜಲ ತಿಂದು ಬಾಱುವ |
ಗನ್ನಗತಕದ ವೇಶ್ಯೆಯರ ಸುಡಲೆಂದು ವಿಟ ಜಱಿದ || ೩೬
ಇತ್ತ ಧನ ಋಣವಹುದು ಪಾತಕ |
ಹೊತ್ತಪುದು ದಿಟವೆಂದಿವಳು ತಾ |
ನುತ್ತಮಳು ಎಂದರಸ ನಿಮಗಱುಪಿದಳು ಲೋಕದಲಿ ||
ಕತ್ತೆ ಗಜವನು ಪಿಕ ಮರಾಳನ |
ನೆತ್ತು ಸುರಭಿಯನೀವೊಡದುವೆ ಸು |
ವೃತ್ತ ವೇಸಿಯೊಳುಂಟೆ ಸುಪ್ರಿಯವೆಂದು ಭಂಗಿಸಿದ || ೩೭

ಇಳೆಯ ಪತಿ ಕೇಳೆನ್ನ ಹೞಿದೊಡೆ |
ಚಲನಿಮಿತ್ತದಿನಿವಳ ನೆರೆದೆನು |
ಮುಳಿವೆನೆಂದುದ್ಯೋಗಿಸದೆ ಕುವೇಶ್ಯರಿಗೆ ||
ನಿಲುಕಿದವ ಸರ್ವಜ್ಞನಾಗಲಿ |
ಕುಲಸುಶೀಲವು ಧರ್ಮಸುಗುಣಾ |
ವಳಿಗಳಿನಿತುೞಕೆ ಹಾನಿಯಹುದವನೀಶ ಕೇಳೆಂದ || ೩೮

ಕುಟಿಲದೆಡೆ ವೈಶಿಕದ ಮನೆಯಟ |
ವಟದ ಬೀಡನ್ಯಾಯದಾಗರ |
ಸಟೆಯ ನೆಲೆ ಸಂವಾದದಿಕ್ಕೆ ಕುಮಂತ್ರಕುಹಕಗಳ ||
ಮಟ ದುರಾಸೆಯ ಪೇಟೆ ಘನದು |
ರ್ಘಟಭಯಾಸ್ಪದವತುಳರೋಷೋ |
ತ್ಕಟನಿಜಾಶ್ರಯರಪ್ಪ ವೇಶ್ಯರೊಳೇನು ಫಲವೆಂದ || ೩೯

ಎಂದು ಕಾಷ್ಠಾಂಗಾರಕನು ಹಲ |
ವಂದದಿಂ ವೇಶ್ಯೆಯರ ಹೞಿಯೆ ನೃ |
ಪೇಂದ್ರ ಸತ್ಯಂಧರನವನ ಧೈರ್ಯಚ್ಛಲಕೆ ಮೆಚ್ಚಿ ||
ಅಂದವಗೆ ಮಂತ್ರೀಶಪಟ್ಟವ |
ಮುಂದೆ ಪರಿಕಿಸದೊಲಿದು ಕಟ್ಟಿದ |
ನೆಂದು ಮಗಧನೃಪಂಗೆ ಮುನಿ ವಿವರಿಸಿದನಾತೆಱನ || ೪೦

ಇದು ವಿನಮದಮರೇಂದ್ರ ಶ್ರೀಜಿನ |
ಪದಕಮಲಷಟ್ಚರಣವಾಣೀ |
ಪದನದರ್ಪಣ ಭೂಸುರೋತ್ತಮ ಬಸವಣಾಂಕಸುತ ||
ಚದುರ ಭಾಸ್ಕರರಚಿತ ಧರ್ಮ |
ಪ್ರದನ ಜೀವಂಧರನ ಚರಿತೆಯೊ |
ಳಿದುವೆ ಕಾಷ್ಠಾಂಗಾರಕನ ತೆಱನರಸ ಕೇಳೆಂದ || ೪೧

ಮೂಱನೆಯ ಸಂಧಿ ಮುಗಿದುದು.

# ನಾಲ್ಕನೆಯ ಸಂಧಿ.

---

ಸೂಚನೆ|| ಧರಣಿಯನು ಮಂತ್ರಿಗಳು ಬೇಡೆನ |
ಲಿರದೆ ಕಾಷ್ಠಾಂಗಾರಗಿತ್ತಾ |
ದುರುಳನಿಂದೈದಿದನು ಸತ್ಯಂಧರನು ಸುರಪುರವ ||

ಧರಣಿಪತಿ ಕೇಳಿಂತು ಸತ್ಯಂ |
ಧರನೃಪತಿ ರಾಜ್ಯಾಂಗನೆಯನಪ |
ಹರಿಸಿ ಸತಿಯ ಕುಚಂಗಳನು ಗಿರಿದುರ್ಗವೆಂದೆನಿಪ ||
ಕುರುಳುಗಳ ವನದುರ್ಗವೆಂದುರು |
ತರದ ಲಾವಣ್ಯಾಂಬು ಜಲಸಂ |
ಸ್ಫುರಿತದುರ್ಗವಿದೆಂದು ಪಾಲಿಸುತಿರ್ದನೊಲವಿನಲಿ || ೧

ಧರಣಿಯೊಳಗತ್ಯಂತವಿಷಯಾ |
ತುರರಿಗಾಯುರ್ನಷ್ಟವಹುದೈ |
ಶ್ವರಿಯವೋಸರಿಪುದು ಕೀರ್ತ್ಯಂಗನೆಗೆ ಕೇಡಹುದು ||
ಗರುವತನ ಹಿಂಗುವುದು ಧೈರ್ಯದ |
ಶರಧಿ ನೆಱೆ ಬತ್ತುವುದು ಕುಲ ಪೈ |
ಸರಿಸುವುದು ಸಂದೇಹವಿಲ್ಲದಕರಸ ಕೇಳೆಂದ || ೨

ಸತತವಿಷಯಾಸಕ್ತನವ ಸು |
ವ್ರತವನುಲ್ಲಂಘಿಸುವ ಮಾನ |
ಚ್ಯುತಿಗಳುಕ ಪರಧನಕೆ ಹೇಸನಭಿಜ್ಞತೆಯ ಬಿಡುವ ||
ವಿತತಧರ್ಮಾಚಾರವುಳಿದು |
ದ್ಧತಿಬಡುವ ಮುಂಗಾಣನವನೀ |
ಕ್ಷಿತಿಯೊಳಗೆ ಹಗೆಯಾಗಿಹನು ಭೂಪಾಲ ಕೇಳೆಂದ || ೩

ಭೂವರನೆ ಕೇಳ್ ವಿಷಯವಶದಿಂ |
ರಾವಣನು ಹತವಾದನಶ್ವ |
ಗ್ರೀವನಪಗತನಾದನಾಕೀಚಕನು ಮೃತನಾದ ||
ದೇವಪತಿ ನಿಂದ್ಯಾತ್ಮನಾದುದ |
ಕೋವಿ ಕಂಡೀವಿಷಯದೊಳಗಹು |
ದೋವದನುನಯವೀನೃಪಗೆ ಭೂಪಾಲ ಕೇಳೆಂದ || ೪

ಅರಸ ಕೇಳ್ ವಿಷಯಾತುರನು ಕಿಂ |
ಕರತೆಗಳುಕನು ತಸ್ಕರತೆಗೋ |
ಸರಿಸ ನಿಂದೆಗೆ ತೊಲಗನವಮಾನಕ್ಕೆ ನೊಗದಿರುಹ ||
ಪರಿಭವಕೆ ಹೇಸಾರ ಮುಂದಿ |
ರ್ದರನು ಕಾಣನು ಮರಣಭಂಯಕೆದೆ |
ಜರಿಯನಾರೆಂದರಿಯನಾಕಾಮುಕನು ಧರಣಿಯಲಿ || ೫

ಮನವನಂಗವಿಕಾರದಲಿ ಮುನಿ |
ಮುನಿಸಿನಿಂದವಮಾನ ಮಾನದಿ |
ವನಿತೆ ತನ್ನಿಚ್ಛೆಯಲಿ ಧರಣೀಶ್ವರನಶಾಸ್ತ್ರದಲಿ ||
ಧನಿಕನಪನೀತಿಯಲಿ ಕುಲವ |
ರ್ತನೆಯನಾಚಾರದಲಿ ವಿಷಯದಿ |
ಜನಕೆ ತಪ್ಪದು ಕೇಡು ಭೂಮಿಪಾಲ ಕೇಳೆಂದ || ೬

ಅರಸ ಕೇಳೀಪರಿಯ ವಿಷಯಾ |
ತುರಿತನಾದುದರಿಂದೆ ಸತ್ಯಂ |
ಧರನು ವಿಧಿವಶದಿಂದೆ ಕಾಷ್ಠಾಂಗಾರನೆಂಬವಗೆ ||
ಪರಿಣತೆಯನುಳಿದಿಳೆಯನವಗನು |
ಕರಿಸಿ ಮುದದೊಳಮಾತ್ಯಪಟ್ಟವ |
ಭರದಿ ಕಟ್ಟುವೆನೆಂದು ನಿಶ್ಚೈಸಿದನು ಮನದೊಳಗೆ || ೭

ಎಂದು ನೃಪನೀಮತವ ನೆನೆದೊಲ |
ವಿಂದೆ ಕಾಷ್ಠಾಂಗಾರಕಗೆ ಸಚಿ |
ವೇಂದ್ರಪಟ್ಟವ ಕಟ್ಟಲುದ್ಯೋಗಿಸಲು ಮಂತ್ರಿಗಳು ||
ಒಂದೆಡಗಿ ಕೈಮುಗಿದಿದೇನು ನ |
ರೇಂದ್ರ ತಾನಿವನಾರು ನಿಮಗೀ |
ಮುಂದಬುದ್ಧಿಯದೇನೆನುತ ಬಿನ್ನೈಸಿದರು ನೃಪಗೆ || ೮

ಸಮತೆಯಿಂದೆ ತ್ರಿವರ್ಗವನು ಸ |
ತ್ಕ್ರಮದಿ ಸೇವಿಸೆ ಮೋಕ್ಷವಾತಗೆ |
ಸಮನಿಸುವುದಂತವರೊಳೊಂದನೆ ಪಿಡಿಯೆ ಸರ್ವಹತ ||
ವಿಮಳ ಧರ್ಮೋದ್ಯಮವನು ಬಿಟ್ಟ |
ಕ್ರಮದಿ ಕಾಮವನೊಂದಿ ಭೂಮಿಾ |
ರಮಣ ಸೇವಿಪದ ನೆನೆದರೆಂದುಸಿರಿದನು ಮಂತ್ರೀಶ || ೯

ಮೊದಲು ಧನಹಾನಿಯನು ಬಳಿಕಾ |
ತುದಿಯ ಫಲದುನ್ನತಿಯನಾಪ್ತರೊ |
ಳೊದವಿ ಪರಿಕಿಸಿ ಕಾರ್ಯವನು ತೊಡಗುವುದು ನೀವಿವನ ||
ವಿದಿತ ಕುಲಶೀಲಾದಿಗಳನಱ |
ಯದೆ ಸುನಿಶ್ಚೈಸಿದಿರಿ ತನ್ನಯ |
ಹೃದಯವನು ತಾ ನಂಬ ಬಹುದೇ ನೃಪರಿಗವನಿಯಲಿ || ೧೦

ಅತಿಕುಲೀನನನುಜ್ಜ್ವಲನ ವಿ |
ಶ್ರುತನ ಚತುರೋಪಾಯರೂಪಾ |
ಸ್ವಿತನ ಧೀರೋದಾರಗುಣಯುತನನು [ಕಳಾ]ವಿದನ ||
ವ್ರತಸುಶೀಲಾಚಾರಬಲಸಂ |
ಯುತನ ಸಚಿವನ ಮಾಡುವುದು ಸ |
ನ್ಮತವು ಭೂಪರಿಗೆಂದು ಬಿನ್ನೈಸಿದನು ಮಂತ್ರೀಶ || ೧೧

ಕ್ಷೀರ ರೋಗಾನ್ವಿತಗೆ ಚಂದ್ರಿಕೆ |
ಚೋರಗೋವದ ತೆಱದೆ ವಿವಿಧವಿ |
ಚಾರದಿಂ ಮಂತ್ರಿಗಳು ಪೇಳುತ್ತಿರಲು ಕೈಕೊಳದೆ ||
ಧಾರಿಣೀಶ್ವರ ಧರೆಯ ಕಾಷ್ಠಾಂ |
ಗಾರಗೊಂದಿಸೆ ಮಗುೞ್ದು ತಮ್ಮಾ |
ಗಾರಗಳಿಗೈದಿದರು ಮಂತ್ರಿಗಳಧಿಕ ದುಗುಡದಲಿ || ೧೨

ಸುರಪನನ್ಯಸ್ತ್ರೀಯ ಗಮನವು |
ಪರಮಪಾತಕವೆಂದು ತಾನೇ |
ನಱಿಯನೇ ನಳ ಜೂಜು ನಾಶನವೆಂದು ಪರಿಕಿಸನೆ ||
ಧರಣಿಯೊಳು ರಾಘವನು ಹೊಮ್ಮಿಗ |
ವುರುಕಪಟವೆಂದಱಿಯನೇ ಪರಿ |
ಹರಿಸ ಬಾರದು ಕರ್ಮವಶವನು ಭೂಪ ಕೇಳೆಂದ || ೧೩

ನೆರೆದೆ ಪುಷ್ಪಿತಪದ್ಮಿನಿಯ ಮೆ |
ಯ್ವೆರಸಿದೆನು ವಾರುಣಿಯ ಗೋತ್ರೋ |
ತ್ಕರಕೆ ನೀಡಿನೆ ಮಂಡಲಾಗ್ರವ ಕರಪ ಕುವಲಯಕೆ ||
ತೆರಳಿಸಿದೆ ತನಗಿಂದಧೋಗತಿ |
ನಿರುತವೆಂದು ವಿರಕ್ತದಿಂದಂ |
ಬರವನುೞಿದುರುೞಿದನು ಭಾಸ್ಕರನಪರವಾರ್ಧಿಯಲಿ || ೧೪

ವರುಣದಿಕ್ಸತಿಯುಟ್ಟ ರಕ್ತಾಂ |
ಬರರುಚಿಯೊ ಭಾಸ್ಕರನ ರಥಹಯ |
ಖುರಹತಿಯೊಳುದ್ಭವಿಸಿದಪರಾಚಳದ ಕೆಂದೂಳೊ ||
ವರರಥಾಂಗೌಘದ ನಿಯೋಗಾ |
ವಿರಹದಾವಿಗೆಗಿಚ್ಚೊ ಎನಲಾ |
ವರಿಸಿದುದು ಸಂಧ್ಯಾರುಣವು ಧರಣೀದಿಗಂತರವ || ೧೫
ನುಡಿಸಿ ತುಂಬಿಯುನೆಲರ ದಟ್ಟಡಿ |
ಯಿಡಿಸಿ ಗೂಡಿನ ತೊಟ್ಟಿಲೊಳು ಖಗ |
ವಿಡಿದು ನಗಿಸಿಯೆ ಕುಮುದಿನಿಯು ತೂಕಡಿಸಿ ಕಮಲಿನಿಯು ||
ಕಡುತಮವನಬುಬೆಂದು ಕೋಕನ |
ಬೆಡಗನಂಜಿಸಿ ಹಲವು ಮಕ್ಕಳ |
ಪಡೆದ ತಾಯಂದದಲಿ ಸಂಧ್ಯಾಸುಡದಿಯೊಪ್ಪಿದಳು || ೧೬
ಧರೆಗಗನದಶದಿಕ್ಕುಗಳ ಸಾ |
ಗರಗಳನು ನಿಶ್ಛಿದ್ರಮಪ್ಪಂ |
ತಿರೆ ಪಿತಾಮಹಸಿಂದ್ರನೀಲದ ಮಣಿಯ ಕಟ್ಟೆಸಗಿ ||
ಭರಿತವಾಗಿಯೆ ಕಜ್ಜಲವ ವಿ |
ಸ್ತರದೊಳೂಡಿದನೆಂದೆನಲು ಕಾ |
ರಿರುಳು ತುಂಬಿತು ಜಗವನವನೀಪಾಲ ಕೇಳೆಂದ || ೧೭
ಜಲಜಸಖನಪರಾಬ್ಧಿಯೊಳು ಬೀ |
ಳಲು ನೆಗೆದ ನೀರ್ವನಿಗಳೋ ನಭ |
ಲಲನೆಯುರ ದಂತಾವಳಿಯೊ ವಿಧುವೆಂಬ ಮೃಗರಾಜ ||
ಮುಳಿದು ತಿಮಿರೇಭೇಂದ್ರಕುಂಭ |
ಸ್ಥಲವ ಸೀಳಲು ಸಿಡಿದ ಮುಕ್ತಾ |
ವಳಿಗಳೆನೆ ನಕ್ಷತ್ರಪಙ್ಕ್ತಿಗಳೆಸೆದುವಭ್ರದಲಿ || ೧೮
ಸುರಪನೀಕ್ಷಿಸೆ ಪೂರ್ವದಿಗ್ವಧು |
ಧರಿಸಿದಮಲಸುವರ್ಣಮುಕುರವೊ |
ಸ್ಮರನ ಶಸ್ತ್ರನ ಮಸೆವ ರತ್ನದ ಸಾಣೆಯೋ ನಭದ ||
ವರಸಿತಾಂಭೋಜವೊ ಚಕೋರಗ |
ಳುರುತರದಿ ನೆರೆದುಂಬ ರತ್ನದ |
ಪರಿಪೂರ್ಣವೊ ತಾನೆನಲು ಶಶಿಯುದಯಾದ್ರಿಯಲಿ ಮೆಱೆದ || ೧೯

ಜನಪ ಕೇಳಾಭೂವಿಪತಿ ಸ|
ದ್ವಿನುತಸಂಧ್ಯಾವಂದನಾದಿಯ |
ನನುಕರಿಸಿ ದೇವಾರ್ಚನೆಯನಾನಂದದಲಿ ಮಾಡಿ ||
ಅನುನಯದಿ ಶಯ್ಯಾಗೃಹಕೆ ಬಂ |
ದಿನಿಯಳೊಡಗೂಡಿರ್ದು ನಿದ್ರಾಂ |
ಗನೆಯೊಳೊಂದಿದನಾರಮಣಿ ಸಹಿತರಸನೊಲವಿನಲಿ || ೨೦

ನಿದ್ರೆ ತಿಳಿಯಲು ಕುಸಿದ ಗೋಣ ನಿ |
ವಿರ್ದು ನೆಗಹಿಯೆ ಕೇಸರಂಗಳನ |
ಮರ್ದು ಮೇಲೋಗರ್ದುಡಿಸಿ ಜೋಡಿಸಿ ಪಕ್ಕಗಳ ಬಡಿದು ||
ಸಾರ್ದು ಹೋಗೆಲೆ ರಜನಿ ರವಿಯುದ |
ಯಾದ್ರಿಗಡರಿದನೆಂದು ಸಾರ್ವಂ |
ತೆದ್ದು ಕರೆದುವು ಕುಕ್ಕುಟಗಳೆರ್ದೆ ಬಿರಿಯೆ ಕಾಮುಕರ || ೨೧

ಹರಿಕರಾಶ್ರಯನಮಳಶುಚಿಸಾ |
ಗರಜನಿತ ಸದ್ದೇವಪೂಜಾ |
ಕರಕರ್ಹನೆನಿಪನ್ನ ಸಿಷ್ಕಾರಣದೊಳೆಂಜಲನು ||
ಗೊರವನೂಡಿದನೆಂದು ವಾಣೀ |
ವರಗೆ ಮೊರೆಯಿಡುವಂತೆ ಸುರಮಂ |
ದಿರದ ಶಂಖಧ್ವನಿಗಳೆಸೆದುವು ಸುಪ್ರಭಾತದಲಿ || ೨೨

ತರಣಿಯುಪರಾಚಲವನಡರು |
ತ್ತಿರೆ ನಿಶಾಸುರೆ ವಿತಳದಿಂ ಪಾ |
ಯ್ದುರರೆ ನಿಲ್ಲೆಂದಡಸಿ ಪಿಡಿದು ತದಂಶುಜಾಲದಲಿ ||
ಭರದಿ ಲೋಕನ ಜಿಗಿದು ತಾ ಬಱಿ |
ಕರುಣದಲಿ ಬಂದುದಯಗಿರಿವಿ |
ಷ್ಟರದಿ ಕುಳ್ಳಿರ್ದುಗುಳ್ದಳಾಸತಿಯೆನಲು ರವಿ ಮೆಱೆದ || ೨೩

ಇನನುದಯವಾಗಲ್ಕೆ ನಿದ್ರಾಂ |
ಗನೆಯು ಬೀಱ್ಕೊಟ್ಟೆಸೆವ ಮಂಗಳ |
ನಿಸದದಿಂದವನೀಶನುಪ್ಪವಡಿಸುವ ಕೃತ್ಯಗಳ ||
ವಿನುತಸಂಧ್ಯಾವಂದನಾದಿಯ |
ನನುಕರಿಸಿ ದೇವಾರ್ಚನೆಯನಾ |
ಜನಪನೆಸಗಿ ಸುಖಾನುಭಾವದೊಳಿರ್ದನೊಲವಿನಲಿ || ೨೪

ಅರಸ ಕೇಳ್ ಮಣಿಖಚಿತಹರಿವಿ |
ಷ್ಟರದೊಳವನೀಪಾಲನಿರೆ ಪಂ |
ಕರುಹಮುಖಿ ಬಂದಿನಿಯನರ್ಧಾಸನದಿ ಕುಳ್ಳಿರ್ದು ||
ಕರವ ಮುಗಿದವನೀಶ ನಾನಿಂ |
ದಿರುಳು ಸ್ವಪ್ನತ್ರಯಗಳನು ವಿ |
ಸ್ತರದಿ ಕಂಡೆನೆನುತ್ತ ಬಿನ್ನೈಸಿದಳು ಕಮಲಾಕ್ಷಿ || ೨೫
ಜನಪ ಕೇಳಂದೆಸೆವಶೋಕಾ ||
ವನತರು ದ್ರುಮ ಮೊದಲಿಗುಡಿದುಂ |
ಕೊನರಿಸಿತು ತದ್ವಳಯದಲಿ [ಬಳಸಿರ್ದ] ಕುಸುಮಗಳ ||
ವಿನುತಮಾಲೆಗಳೆದ್ದು ವೆಂಟದ |
ಅನುವ ಹೇಳಿನೆ ಮನದೊಳಳವೆಱ |
ದಿನಿಯಳಿಗೆ ತತ್ಸ್ವಪ್ನ ಫಲವಱಿದರಸನಿಂತೆಂದ || ೨೬
ತರುಣಿ ಕೇಳ್ ನೀ ಕಂಡಶೋಕೆಯು |
ಮರದ ಕೆಲದೊಳ್ ತಳಿರು ತಾನಂ |
ಕುರಿಸಿದುದಱಿಂ ನಿನಗೆ ಸುತನುದಯಿಸುವ ಬಳಸಿರ್ದ ||
ಅರಲ ಮಾಲೆಗಳಿಂದಲಷ್ಟಮ |
ತರುಣಿಯರು ಸುಕುಮಾರಗಹರೆಂ |
ದರಸಿಗಱುಹಲು ದುಗುಡದಿಂದೀತೆಂದಳಿಂದುಮುಖಿ || ೨೭
ಇಳೆಯೊಳುಡಿದೊಱಗಿರ್ದಶೋಕಾ |
ಫಲವ ಹೇಳಿನಲರಸಿಯೆನಗದು |
ತಿಳಿಯದೊಂದಾನೊಂಡ ಹೇಳುನೆನೆನುತ ದುಗುಡವನು ||
ತಳೆಯುತಿರಲಾತತ್ಪತಿಯ ಮೊಗ |
ದೊಳು ಸುಳಿವ ಖೇದಾಂಗನೆಯ ಕಂ |
ಡಲಘುಕುಚೆ ಪತಿಗಾಯ್ತು ಹಮನೆಂದಿಳೆಯೊಳೊಱಗಿದಳು || ೨೮
ತರುಣಿ ಮೂರ್ಛೆಯೊಳವನಿಯಲಿ ಕೆಡೆ |
ದಿರಲು ಕಂಡವನೀಶನೆದೆಯಲಿ |
ಸುರಗಿ ಮುರಿದಂಡದಲಿ ಹಾಯ್ದಂಗನೆಯ ಮೇಲೆ ||
ಹೊರಳಿ ವಿಗೆ ಮುಂಡಾಡಿ ಶೋಕಾ |
ತುರದಿ ಪರವಶನಾಗಿ ಬಳಿಕೊಂ |
ದರೆಗಳಿಗೆಗೆಚ್ಚತ್ತು ಧೈರ್ಯವ ಬಿಡದವಾಸ್ಯಸತಿ || ೨೯

ಬೞಿಕ ನೃಪನಬಲೆಯನು ತೊಡೆಗಳೊ |
ಳಿರಿಸಿಕೊಂಡು ಜಿನೇಶ್ವರನ ನೆನೆ|
ದೊಲಿದು ಗಂಧೋದಕವ ಕಣ್ಗಳೊಳೊತ್ತಿ ಮೂರ್ಛೆಯನು ||
ಕಳೆದು ದೇಹದ ಧೂಳಿಗಳ ಕರ |
ತಳದೊಳವನಿಪ ಕೊಡಹಿ ಮುದದಿಂ |
ದಲಿ ಕುರುಳ ನೇವರಿಸಿ ಸಂತೈಸಿದನು ಕೋಮಲೆಯ || ೩೦
ತರುಣಿ ಕೇಳುಚ್ಛಿಷ್ಟದೋಷೋ |
ತ್ಕರದಿ ಧಾತುಪ್ರಕೃತಿಗಳೊಳಾ |
ತುರದಿ ದುಸ್ವಪ್ನಂಗಳಹವಿದಕೇನು ಭೂಮಿಯಲಿ ||
ನಿರುತವೆಂಬರು ಕನಸ ಕಂಡಾ|
ಪರಿಯಲಾದರೆ ಲೇಸು ಹುಸಿಯಿದ |
ಕರಸಿ ಚಿಂತಿಸಲೇನು ಕಾರಣವೆಂದನಾಭೂಪ || ೩೧
ಧರಣಿಯೊಳು ವಿಧಿವಶದಿ ಹರಿ ಸೂ |
ಕರಝುಷಾದಿ ಭವಂಗಳಿಂದವ |
ತರಿಸಿದನು ಹರ ತಿರಿದನಬ್ಜಜ ನೀಗಿದನು ಶಿರವ ||
ಸುರಪ ನಿಂದಿತನಾದ ಶಶಿಸೂ |
ರ್ಯರನು ತೊಟ್ಟನೆ ತೊಳಲಿಸಿತು ನಾ |
ವಱಿತು ಕರ್ಮಾಧೀನಕೆಸಿತೆಂದನು ಮಹೀಪಾಲ || ೩೨
ಬಿಸಿಲ ತಾಪಕ್ಕಗಿದು ಶಿಖಿಯಲಿ |
ನುಸುಳುವವೊಲಾಪತ್ತಿಗುರೆ ಚಿಂ |
ತಿಸಲು ಘನವಹುದಿವಕೆ ಸ್ಥೈರ್ಯವ ತಳೆದು ಧರ್ಮವನು ||
ಎಸಗಿದರೆ ತಮದೊಳಗೆ ಶಶಿ ದೀ |
ಪ್ತಿಸುವ ವಿಧದಿ ವಿಪತ್ತಿಸಂಬುಧಿ |
ಯೊಸರಿ ನಿರ್ಮಳರಪ್ಪರಂಬುಜನೇತ್ರೆ ಕೇಳೆಂದ || ೩೩
ಸರಸಿಜಾಕ್ಷಿಯನಿಂತು ನಾನಾ |
ಪರಿಯ ನಯದಿಂ ತಿಳುಹಿ ಮುನ್ನಿನ |
ಪರಿಯಲವನಿಪನಾಸತಿಯುಸಾನಂದಲೀಲೆಯಲಿ ||
ನೆರೆಯುತಿರೆ ತತ್ಸ್ವಪ್ನಫಲ ಭೂ |
ವರಗೆ ಮರಣವ ಸೂಚಿಸುವವೊಲು |
ತರುಣಿಗಾದುದು ಗರ್ಭವವನೀಪಾಲ ಕೇಳೆಂದ || ೩೪

ದುರುಳ ಕಾಷ್ಠಾಂಗಾರನಾಸ್ರವ |
ನುಱುಹಲೋಸುಗ ಗರ್ಭರೋಮೋ |
ತ್ಕರದ ಶಿಖಿಧೂಮಾಳಿಯೆನೆ ಕರ್ಪೂರಕುಚಾಗ್ರದಲಿ ||
ಬೆರಸಿ ಕುವರನ ಕೀರ್ತಿ ಹೊಱಗಾ |
ವರಿಸಿ ತೆನಲಾನನದಿ ಬೆಳ್ಪಿಂ |
ದಿರದೆ ಕುಂತಳ ನಿವಿರಲೆಸೆದುದು ಗರ್ಭವಂಗನೆಯ || ೩೫
ಇಳೆಯೊಳೀಸುತನಿಂದೆ ಬಡತನ |
ತೊಲಗಿದವುದೆಂದಱುಹುವಂತ |
ಗ್ಗಳಿಸಿದುದು ನಡುವೀತನಿಂ ವೈರಿಗಳ ವಂಶಾಳಿ ||
ಅಱಿವುವೆಂಬವೊಲಾಸತಿಯ ವಳಿ |
ಯಱಿಯೆ ನವಶೈವಾಳಲತೆಯಂ |
ತಲಘುಕುಚೆಯ ಸುಬಾಸೆಯೆಸೆದುದು ಗರ್ಭದೇಱಿಗ್ಗಯಲಿ || ೩೬
ಧರಣಿಯುಂಗಾರಕನ ದೇವಕಿ |
ಹರಿಯನದಿತಿ ಸುರೇಶ್ವರನನಿಂ |
ದಿರೆ ಮನೋಜನ ಕುಂತಿ ಯಮನಂದನನನಾಕೈಕೆ ||
ಭರತನನು ಸೌಮಿತ್ರಿ ಲಕ್ಷ್ಮೀ |
ಧರನ ಗರ್ಭದಿ ಧರಸಿದಂದದಿ |
ತರುಣಿ ಕುವರನ ಗರ್ಭದಲಿ ತಾಳ್ದೆಸೆದಳೊಗ್ಗಿನಲಿ || ೩೭
ಉದರದರ್ಭಕನಖಿಳಭೂತಳ |
ಕಧಿಪನೆಂದಱುಹುವವೊಲಾಸತಿ |
ಮುದದಿ ಮೃತ್ಸೇವನೆಯು ಮಾಡುತಲೆಸೆವ ಮೇರುವಿನ ||
ತುದಿಯಡರಿ ಜಲಕೇಳಿಯನು ಸುರ |
ನದಿಯೊಳೊಂದಿಸಿ ಲೋಕಗಳ ಹರು |
ಷದಿ ಸೋಂಪುವ ಬಯಕೆ ಸತಿಗಾಯ್ತರಸ ಕೇಳೆಂದ || ೩೮
ವಿತತಗರ್ಭದ ಚಿಹ್ನ ವಿಜಯಾ |
ಸತಿಯೊಳೊಂದಿರೆ ನೋಡಿ ಭೂಮಿಪಾ |
ಪತಿ ಮೃಗಾಕ್ಷಿಯು ಕಂಡ ಕನಸಿಗೆ ದೃಷ್ಟವಾಯ್ತೆನಗೆ ||
ಹತವೆನುತ ನಿಶ್ಚೈಸಿ ಚಿಂತಾ |
ಸತಿಗೆ ಕೈಬಸವಾಗಿ ಕಾರ್ಯ |
ಸ್ಥಿತಿಯು ತನ್ನಯ ಮನದೊಳಾಲೋಚಿಸಿದನವನಿಪ || ೩೯

ನಾರಿಯುದರದಿ ಜನಿಸುವೀಸುತು |
ಪೂರನವನಿಯನಾಳ್ವೆನೆಂಬನೆ |
ಕ್ರೂರಕಾಷ್ಠಾಂಗಾರಕನ ವಶವಾಯ್ತು ಸಕಲಧರೆ ||
ಚಾರುಮಂತ್ರಿಗಳಂದು ಪೇಳ್ದ ವಿ |
ಚಾರವನು ಗರ್ಭದಲಿ ಕೇಳದ |
ಕಾರಣವು ತನಗಾಯ್ತು ವಿಧಿಯೆಂದರಸ ಬಿಸುಸುಯ್ದ || ೪೦
ಕುಸುಮಕಾಲದೊಳರಲ ಕೊಯ್ದಂ |
ದಿಸದೆ ಫಲಕಾಲದಲಿ ಪುಷ್ಪ |
ಪ್ರಸರವಱಿಯಲ್ಕುಂಟೆ ಮಾಡುವ ಕೆಲವು ಕಾರ್ಯಗಳ ||
ಎಸಗಿ ತತ್ಕಾಲದಲಿ ನಿರ್ವ |
ರ್ತಿಸದೆ ಬಱಿಕೊಂದಿಸುವೆನೆನಲದು |
ಒಸವಹುದೆ ತನಗೆಂದು ಮನದೊಳಗಱಲಿದನು ಭೂಪ || ೪೧
ಅಱಲಿದೊಡೆ ಫಲವೇನು ವಂಶವ |
ನುೞುಹ ಬೇಕೆಂದೆನುತಲತಿ ಕೌ |
ಶಳದಿ ಕೇಕೀಯಂತ್ರದಲಿ ನಗಸಸ್ಥಳಕೆ ನೆಗೆದು ||
ಸುಳಳಿತಾರಾಮದಲಿ ನಿಂದಾ |
ಹೊೞಲಿಗೊಡನೆ ಮಗುೞ್ದು ಬರ್ಪಂ |
ತಿಳಿಯು ಪತಿ ಮಾಡಿಸಿದನವನೀಪಾಲ ಕೇಳೆಂದ || ೪೨
ಆಮಯೂರದ ಯಂತ್ರದಲಿ ಕಾಂ |
ತಾಮಣಿಯನೇಱಿಸಲದೆದ್ದಾ |
ರಾಮಕಂಬರಗತಿಯೊಳುಯ್ಗೆ ಗಜಾಶ್ವಯಾನದಲಿ ||
ಕಾಮಿನೀಜನಸಹಿತ ಭೂಪಲ |
ಲಾಮನೈತಂದಲ್ಲಿ ಸತಿಗಭಿ |
ರಾಮಪುಂಸವನಾದಿ ಶೋಭನಗಳನು ಮಾಡಿಸಿದ || ೪೩
ಸತಿಯನಿಂತು ದಿನಂಪ್ರತಿಯೊಳಾ |
ಕ್ಷಿತಿಪನಾರಾಮಕ್ಕೆ ಕೇಕೀ |
ವಿತತಯಂತ್ರನೊಳುಯ್ದು ವನಜಲಕೇಳಿಯಲಿ ಸತಿಯ ||
ಅತಿಶಯದ ದುಃಖಾತುರವ ನೆರೆ |
ಹತಿಸಿ ಪರಮೋತ್ಸಾಹದಲಿ ಭೂ |
ಸತಿಯು ಕಾಷ್ಠಾಂಗಾರಗಿತ್ತಿರ್ದನು ಮಹೀಪಾಲ || ೪೪

ಧರೆಯೊಳುತ್ತಮರಿಂಗಿತದೊಳುರು |
ತರದೊಳಱಿವರು ಮಧ್ಯಮರು ಕೇ |
ಳ್ದಱಿವರಧಮರು ಕಂಡಱಿವರತ್ಯಧಮರಾದವರು ||
ದರುಶನಶ್ರವಣೇಂಗಿತದೊಳಱಿ |
ಯರು ಸುನಿಶ್ಚಯವಖಿಳಕಳೆಯಲಿ |
ಪರಿಣತನು ನೃಪನಱಿಯದಿಹುದಿದು ಕರ್ಮವಶವೆಂದ || ೪೫
ಧಾರಿಣೀಪತಿ ಕೇಳು ಕಾಷ್ಠಾಂ |
ಗಾರನಾವಿಷಯದ ಸಮಸ್ತವ |
ಹೀರಮಣರಸು ಮಕುಟವರ್ಧನಮಂಡಳೀಕರನು ||
ಶೂರಸುಭಟಾಮಾತ್ಯಕುಲಪರಿ |
ಚಾರಮನ್ನೆಯನಾಯಕರ ಸುವಿ |
ಚಾರದಿಂದೊಳಹೊಯ್ದುಕೊಂಡನುಪಾಯಕುಶಲದಲಿ || ೪೬
ದುರುಳಕಾಷ್ಠಾಂಗಾರನೊಂದಿನ |
ದಿರುಳು ರಾಜದ್ರೋಹವನು ನೆನೆ |
ದುರುತರದೊಳಿಂತೆಂದನನ್ಯಾಧೀನವಾಗಿರ್ದ ||
ಧರಣಿಯೊಡೆತನವೇಕೆ ಸಕಲೈ |
ಶ್ವರಿಯವೇಕದಱಿಂದಲಾತಗೆ |
ಮರಣ ಲೇಸೆಂದೆನುತ ಚಿಂತಿಸುತಿರ್ದನಾತ್ಮದಲಿ || ೪೭
ಮೌನವಿಲ್ಲದ ಬ್ರಹ್ಮಚರ್ಯ ಸು |
ದಾನವಿಲ್ಲದ ವಸ್ತುಚಯವಭಿ |
ಮಾನವಿಲ್ಲದ ನಾರಿ ಸಜ್ಜನರಿಲ್ಲದಾಸ್ಥಾನ ||
ಮಾನಿತಪ್ರಿಯವಿಲ್ಲದೋಲಗ |
ಗಾನವಿಲ್ಲದ ನೃತ್ಯ ತನ್ನಾ |
ಧೀನವಿಲ್ಲದ ಸಂಪದವ ಸುಡಲೆಂದು ಬಿಸುಸುಯ್ದ || ೪೮
ಧರೆಯೊಳನ್ಯಾಧೀನವಾಗಿಹ |
ನರಗೆ ತನ್ನಯ ಬಂಧುಬಳಗವ |
ಹೊರೆಯಲಿಲ್ಲಭಿಮತವ ವಿಬುಧರಿಗೀಯಲಿಲ್ಲೆಸೆವ ||
ಕರಿತುರಗ ಮಹಿಳಾಜನವ ವಿ|
ಸ್ತರದಿ ಜೋಡಿಸಲಿಲ್ಲವನು ಪಾ|
ಮರನು ಸೇವಾಪರನ ಬಾಳು ನಿರರ್ಥವವನಿಯಲಿ || ೪೯

ಉರಗನಾಥಗಹಿತ್ವವನು ಕೇ |
ಸರಿಗೆ ಮೃಗರಾಜತ್ವವನು ಖಗೆ |
ಗರುಡಗೆ ಖಗೇಂದ್ರತ್ವವಿತ್ತವರಾರು ತಮತಮ್ಮ ||
ಉರುಭುಜದ ಬಲದಿಂದಲಂತವ |
ಕರಸುತನವಾಯ್ತಂತೆ ಸತ್ಯಂ |
ಧರಣಿ ತಳದೀರಾಜ್ಯಕಧಿಪತಿಯಹೆನು ತಾನೆಂದ || ೫೦
ಎಂದು ರಾಜಘ್ನವನು ನೆನೆದದ |
ಕೊಂದು ಕಪಟೋಪಾಯವನು ಕಂ |
ಡೊಂದಿ ಮಂತ್ರಿ ಪಸಾಯಿತರ ತಾ ಕರೆಸಿ ಸಭೆಯೊಳಗೆ ||
ಬಂದು ರಾಜದ್ರೋಹದೇವತೆ |
ಬಂದಿರುಳು ತನ್ನೆದೆಯ ಮೆಟ್ಟಿಯೆ |
ಬಂದಿಸುವಳದನೇನ ಹೇಳುವೆನೆಂದು ಖಳ ನುಡಿದ || ೫೧
ನುಡಿವುದನುಚಿತ ನುಡಿದೆನಾದೊಡೆ |
ತೊಡರುವುದು ಪಾತಕವು ಮೇಣದ |
ನುಡಿದೆನಾದೊಡೆ ಜಗಕೆ ಹುಸಿಯಾಗಿಪ್ಪುದದರಿಂದೆ ||
ನುಡಿಯದಿರೆ ತಾ ಹಿತವ ರಾಷ್ಟ್ರವು |
ಕೆಡುವುದದು ಸಿದ್ಧಾಂತವದರಿಂ |
ನುಡಿಯ ಬೇಕೆಂದಾದುರಾತ್ಮನು ನುಡಿದನೊಲಿಸಲಿ || ೫೨
ಜನಪ ಕೇಳ್ ಲೋಕದಲಿ ದುಷ್ಟರ |
ನೆನಹದೊಂದಾಗಿಹುದವರ ಮಾ |
ತಿನಲಿ ಬೇರೊಂದವರು ಮಾಡುವ ಕೃತ್ಯ ತಾನೊಂದು ||
ಇನಿಸು ಗುಣ ದುರ್ಜನರಿಗದು ಮಂ |
ಡನವದಾಗಿಹುದಾಗಿ ಕಪಟದ |
ನೆನಹಿಸಿಂದಾಖಳನು ನುಡಿದನು ಸಭೆಯೊಳಾಪದನ || ೫೩
ಅನುದಿನವು ಬಂದಾಕುದೇವತೆ |
ಜನಪನನು ನೀ ವಧಿಸದಿರೆ ನಿ |
ನ್ನನುಪಮಾನ್ವಯ ಸಹಿತ ಸವರುವೆನೆಂದೊಡೀಸುದಿನ ||
ನೆನೆವುದನುಚಿತವೆಂದು ತಾನೇ |
ಮುನಿಸಿನಿಂದಿರುಳೆದೆಯ ಮೆಟ್ಟಿದ |
ಳೆನಗುಪಾಯವನಿದಕೆ ಪೇಳುವುದೆಂದು ಖಳ ನುಡಿದ || ೫೪

ಮುನಿಪ ಹಿಂಸೆಯು ಹಂಸೆ ಮೋಘ |
ಧ್ವನಿಯುನಹಿ ತಾರ್ಕ್ಷ್ಯಗವುವ ನಿ |
ಘ್ನಸಿಕ ದುರ್ಭಿಕ್ಷವನು ಗಜಪತಿ ಕೇಸರಿಯು ಬರವ ||
ಜನನಿ ತನಯುನ ಮರಣವನು ಧವ |
ನಿನಿಯಳೊಲ್ಲದ ವಾರ್ತೆಯನು ಕೇ |
ಳ್ದನಿತು ಮನದಲಿ ಹೆದರಿತಾಸಭೆ ಖಳನ ವಚನದಲಿ || ೫೫
ಖಳ ನುಡಿಯಲಾಸ್ಥಾನ ಶೋಕದ |
ಜಲಧಿಯೊಳಗದ್ದಂತೆ ಭೀತಿಯೊ |
ಳಲುಗದಿರೆ ಪರಧರ್ಮದತ್ತಾಮಾತ್ಯನೊಡಲೊಳಗೆ ||
ಅಲಗು ಮುರಿದಂತೀಗಳಸು ಹೋ |
ಗಲಿ ನೃಪಾಲನಿಮಿತ್ತವೆಂದತಿ |
ಮುಳಿದು ಮನದಲಿ ನೆನೆಯುತಿರ್ದನು ಭೂಪ ಕೇಳೆಂದ || ೫೬
ನಾಡೊಳತಿಪಾತಕರು ಹಿಂಸೆಯು |
ಮಾಡೆ ಬೇಡೆನ್ನದಿರೆ ಕಂಡುದ |
ನಾಡದಿರ್ದರೆ ಧರ್ಮವನುಪೇಕ್ಷಿಸಿ ರಣಾಗ್ರದಲಿ ||
ಓಡಿದರೆ ಗುರುಜನಕೆ ವಿನಯುವ |
ಮಾಡದಿರಲವಗಹುದಧೋಗತಿ |
ರೂಢಿಯೊಳಗೆಂದಾತ್ಮದಲಿ ನೆನೆದೆಂದನಾಖಳಗೆ || ೫೭
ಗುರುವಿಗಾಚಾರ್ಯನಿಗೆ ತನ್ನನು |
ಹೊರೆದ ದಾತಾರಂಗೆ ಧರ್ಮವ |
ನೊರೆದವಗೆ ದುರ್ಭಿಕ್ಷದಲಿ ಸಲಹಿದ ಕೃಪಾಳುವಿಗೆ ||
ಉರಗಜಲಶಿಖಿಶಸ್ತ್ರಭಯುವನು |
ಪರಿಹರಿಸಿದವರಿಗೆ ಮಹಾತ್ಮರಿ |
ಗೆರಡ ನೆನೆದ ದುರಾತ್ಮನಿಳಿವ ಮಹಾಂಧನರಕದಲಿ || ೫೮
ಲಲಿತದೇವವ್ರಾತದೊಳು ಸ |
ಲ್ಲಲಿತಗುಣಸರ್ವಜ್ಞನದ್ರಿಗ |
ಳೊಳು ಸುರಾಚಲನಿಭದೊಳಿರುತಿಹಂತ ಚೌಷಷ್ಟಿ ||
ಕಲೆಗಳೊಳು ಸಾಹಿತ್ಯವಬ್ಧಿಗ |
ಳೊಳಗೆ ದುಗ್ಧಸಮುದ್ರ ಪಾತಕ |
ದೊಳಗೆ ರಾಜದ್ರೋಹಕಿಂತತ್ಯಧಿಕವಿಲ್ಲೆಂದ || ೫೯

